

ಕೆ.ವಿ.ಎನ್. ಈವರೆಗಿನ ಬರೆಹಗಳು

ಕಂತೆ ಆರು

# ತೊಂಡು ಮೇವು



## ಡಾ. ಕೆ.ವಿ. ನಾರಾಯಣ

ಹುಟ್ಟಿದ್ದು 1948ರಲ್ಲಿ. ಮೈಸೂರು ಜಿಲ್ಲೆ, ಪಿರಿಯಾಪಟ್ಟಣ ತಾಲ್ಲೂಕು ಕಂಪಲಾಪುರದಲ್ಲಿ. ಅಮ್ಮ-ಅಪ್ಪನ ಕೆಂಚಮ್ಮ ಮತ್ತು ವೀರಣ್ಣ. ಮೊದಲ ಹಂತದ ಓದು ಹುಟ್ಟೂರು ಮತ್ತು ತಾಲೂಕು ಕೇಂದ್ರ ಪಿರಿಯಾಪಟ್ಟಣದಲ್ಲಿ. ಬೆಂಗಳೂರಿನ ನ್ಯಾಷನಲ್ ಕಾಲೇಜಿನಲ್ಲಿ ವಿಜ್ಞಾನವನ್ನು ತೆಗೆದುಕೊಂಡು ಪಿ.ಯು.ಸಿ. ಓದಿದರು. ಇಂಜಿನಿಯರಿಂಗ್ ಮಾಡಲು ಅವಕಾಶವಿದ್ದರೂ ಇಂಜಿನಿಯರ್ ಆಗಕೂಡದೆಂದು ತೀರ್ಮಾನಿಸಿದ ಕೆ.ವಿ.ಎನ್ ಮತ್ತೆ ಮೈಸೂರಿನ ಯುವರಾಜಾಸ್ ಕಾಲೇಜಿನಲ್ಲಿ ವಿಜ್ಞಾನದ ಅಭ್ಯಾಸವನ್ನು ಮುಗಿಸಿದರು. ಆನಂತರದಲ್ಲಿ ಬಿಎಡ್ ಮುಗಿಸಿ ಆರಂಭಿಸಿದ್ದು ಹೈಸ್ಕೂಲಿನಲ್ಲಿ ಅಧ್ಯಾಪನ. ಮುಂದಿನ ಓದಿಗಾಗಿ ಮತ್ತೆ ಬೆಂಗಳೂರಿನತ್ತ ಪಯಣ. ಆ ಹೊತ್ತಿಗೇನೆ ಸಾಹಿತ್ಯದ ಓದಿಗೂ ಬಿದ್ದು, ಬರವಣಿಗೆಯಲ್ಲೂ ತೊಡಗಿಸಿಕೊಂಡಿದ್ದ ಕೆ.ವಿ.ಎನ್ ಮುಂದಿನ ಓದಿಗೆ ಆರಿಸಿಕೊಂಡಿದ್ದು ಸಾಹಿತ್ಯವನ್ನು. ಬೆಂಗಳೂರು ವಿಶ್ವವಿದ್ಯಾಲಯದ ಸೆಂಟ್ರಲ್ ಕಾಲೇಜಿನಲ್ಲಿ ಕನ್ನಡ ಎಂ.ಎ. ತಮ್ಮ ಜೊತೆ ಓದುಗರಾಗಿದ್ದ, ಕನ್ನಡದಲ್ಲಿ ಮಹತ್ವದ ಸ್ತ್ರೀವಾದಿ ಚಿಂತಕಿಯಾಗಿರುವ ಶ್ರೀಮತಿಯವರೊಡನೆ ಒಲುಮೆ ಸಂಭವಿಸಿದ್ದು ಇಲ್ಲೇ. ಗೆಳೆಯರ ಸಮ್ಮುಖದಲ್ಲಿ ಮದುವೆ. ಅಧ್ಯಾಪನ ಕೆಲಸ ಆರಂಭಿಸಿದ್ದು ಬೆಂಗಳೂರಿನ ನ್ಯಾಷನಲ್ ಕಾಲೇಜಿನಲ್ಲಿ. ಬೆಂಗಳೂರು ವಿಶ್ವವಿದ್ಯಾಲಯದ ಜಿ.ಎಸ್.ಎಸ್ ನೇತೃತ್ವದಲ್ಲಿದ್ದ ಕನ್ನಡ ಅಧ್ಯಯನ ಕೇಂದ್ರಕ್ಕೆ ಆಗಮನ. ಜಿ.ಎಸ್.ಎಸ್ ಮಾರ್ಗದರ್ಶನದಲ್ಲಿ ಆನಂದವರ್ಧನನ 'ಧ್ವನ್ಯಾಲೋಕ'ವನ್ನು ಅಧ್ಯಯನ ಮಾಡಿ ಪಿಎಚ್‌ಡಿ ಪದವಿ ಪಡೆದರು. ಬೋಧಿಸಿದ್ದು ಸಾಹಿತ್ಯ, ಸಾಹಿತ್ಯ ಮೀಮಾಂಸೆ ಮತ್ತು ಭಾಷಾವಿಜ್ಞಾನವನ್ನು. ವಿಜ್ಞಾನದ ತಾತ್ವಿಕತೆಯನ್ನರಿಸಿಕೊಂಡೇ ಕೆ.ವಿ.ಎನ್ ಬೆಳೆದದ್ದು ಸಾಹಿತ್ಯ ವಿಮರ್ಶಕರಾಗಿ, ಭಾಷಾವಿಜ್ಞಾನಿಯಾಗಿ, ಕನ್ನಡ ಸಂಸ್ಕೃತಿ ಚಿಂತಕರಾಗಿ.

ತಿಳುವಳಿಕೆ ಮತ್ತು ನಡುವಳಿಕೆ ಎರಡರಲ್ಲೂ ಸರಳವಾಗಿರುವ ಕೆ.ವಿ.ಎನ್ 1993ರಲ್ಲಿ, ಕನ್ನಡಿಗರ ಕನಸಿನ ಸಂಸ್ಥೆಯಾಗಿದ್ದ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಬಂದ ಶುರುವಿನಲ್ಲೇ ರಿಜಿಸ್ಟ್ರಾರ್ ಆಗಿ ಅಲ್ಲಿನ ಆಡಳಿತ ನಿರ್ವಹಣೆಯೊಳಗೂ ಪ್ರವೇಶ ಪಡೆದರು. ಅಲ್ಲಿಂದ ನಿವೃತ್ತಿಯಾಗಿ ಹೊರಗೆ ಬರುವವರೆಗೆ ಹಲವುಜನ ಕುಲಪತಿಗಳ ಅವಧಿಯಲ್ಲಿ ಆಡಳಿತ ಮತ್ತು ಅಧ್ಯಯನಗಳ ಮೂಲಕ ಕನ್ನಡ ವಿಶ್ವವಿದ್ಯಾಲಯವನ್ನು ಕಟ್ಟುವಲ್ಲಿ ಪ್ರಮುಖ ಪಾತ್ರವನ್ನು ನಿರ್ವಹಿಸಿದರು. ಬೆಂಗಳೂರು ವಿಶ್ವವಿದ್ಯಾಲಯದ ತಮ್ಮ ಅಧ್ಯಾಪನ ಸಂದರ್ಭದಲ್ಲೇ ಶುರುಮಾಡಿದ್ದ ಕನ್ನಡಭಾಷೆ ಮತ್ತು ಕನ್ನಡಸಂಸ್ಕೃತಿಯ ಚಿಂತನೆಗಳನ್ನು ಕನ್ನಡಸಮಾಜದ ಬೇರುಗಳ ಮೂಲಕ ಅರಸುವ ಕೆಲಸವನ್ನು ಮತ್ತಷ್ಟು ಸ್ಪಷ್ಟವಾಗಿ ಮಂಡಿಸುತ್ತಾ ಬಂದರು. ಈಗಲೂ, ಭಾಷೆ, ಸಾಹಿತ್ಯ, ಶಿಕ್ಷಣ ಮತ್ತು ವಿಜ್ಞಾನ ಮೊದಲಾಗಿ ಕನ್ನಡಸಮಾಜಕ್ಕೆ ಸಂಬಂಧಿಸಿದ ಯಾವುದರಲ್ಲೂ ಜರೂರಾಗಿ ನಡೆಯಬೇಕಿರುವ ಕೆಲಸ ಇದೇ ಎಂದು ತೊಡಗಿಸಿಕೊಂಡು ಈ ಕಾಲದ ಕನ್ನಡದ ಮಹತ್ವದ ಚಿಂತಕರಾಗಿದ್ದಾರೆ.

ಪ್ರಗತಿ ಪುಸ್ತಕಮಾಲೆ–180

ಕೆ.ವಿ.ಎನ್ ಈವರೆಗಿನ ಬರೆಹಗಳು

# ತೊಂಡು ಮೇವು

ಕಂತೆ ಆರು

ಡಾ. ಕೆ.ವಿ. ನಾರಾಯಣ



ಪ್ರಗತಿ ಗ್ರಾಫಿಕ್ಸ್ ಬೆಂಗಳೂರು

**KVN** eevaregina barahagalu-**TONDUMEVU - Kante Aaru** by **K.V. NARAYANA,** 329, `Gouri', Duo Marvel Colony, Ananthapura Road, Yelahanka, Bangalore-560064 e-mail:narayana48@gmail.com

Publisher: **M. Byregowda** for **PRAGATI GRAPHICS**, Bengaluru, # 119a, 3red cross, 8th main, Hampi nagara(RPC Layout-Vijayanagara), Bengaluru-560104, Ph: 080-2340 9512.

e-mail: byregowda.m1@gmail.com

| | | |
|---|---|---|
| ISBN | : | 978-93-81441-92-3 |
| pages | : | 24+320 |
| First Impression | : | 2010 |
| Revised Impression | : | 2020 |
| paper | : | NS Maplitho 80 GSM |
| price | : | Rs. 350/- |
| size | : | 1/8 Demy |
| ಪುಟಗಳು | : | 24+320 |
| ಮೊದಲ ಆವೃತ್ತಿ | : | 2010 |
| ಪರಿಷ್ಕೃತ ಆವೃತ್ತಿ | : | 2020 |
| ಕಾಗದ | : | ಎನ್.ಎಸ್. ಮ್ಯಾಪ್ಲಿಥೊ 80 ಜಿಎಸ್ಎಂ |
| ಬೆಲೆ | : | ರೂ 350/- |
| © | : | **ಡಾ. ಕೆ.ವಿ. ನಾರಾಯಣ** |
| ಸೈಜ್ | : | **1/8 ಡೆಮಿ** |
| ಪ್ರತಿಗಳು | : | **1000** |
| ರಕ್ಷಾಪುಟ ವಿನ್ಯಾಸ | : | ಸುಧಾಕರ ದರ್ಬೆ |
| ಪ್ರಕಾಶಕರು | : | **ಎಂ. ಬೈರೇಗೌಡ, ಪ್ರಗತಿ ಗ್ರಾಫಿಕ್ಸ್ – ಬೆಂಗಳೂರು**<br>ನಂ. 119, 3ನೇ ತಿರುವು, 8ನೇ ಮುಖ್ಯ ರಸ್ತೆ, ಹಂಪಿನಗರ<br>ಬೆಂಗಳೂರು–104. ದೂರವಾಣಿ: 080–23409512 |

## ಅರ್ಪಣೆ

ಮಾತಾಡುತ್ತ ಕಲಿತು, ಕಲಿಸುತ್ತ
ನಾಳಿನ ಕನಸುಗಳನ್ನು ಕಟ್ಟುತ್ತಿರುವ
ನನ್ನ ಎಲ್ಲ ಕಿರಿಯ ಗೆಳೆಯರಿಗೆ

# ಮನ್ನಿಸಲು ಕೋರುತ್ತ ಈ ಹಿನ್ನೋಟದ ಮಾತುಗಳು

ಬರೆಯುವುದೇಕೇ? ಇನ್ನೊಬ್ಬರೊಡನೆ ಮಾತನಾಡುವ ಒಂದು ದಾರಿಯಾಗಿ ಬರಹವನ್ನು ಹುಡುಕಿಕೊಳ್ಳುತ್ತೇವೆಂದು ತೋರುತ್ತದೆ. ಆದರೆ ಅದು ನಮ್ಮನ್ನೇ ನಮಗೆ ತೋರಿಸುವ ದಾರಿಯೂ ಆಗಿರುತ್ತದೆ ಎಂಬುದು ಗೊತ್ತಾಗಬೇಕು. ದೀಪವೆಂದರೆ ಬೆಳಕೂ ಹೌದು ದಾರಿಯೂ ಹೌದು ಅಲ್ಲವೇ? ಹೀಗೆ ಬರೆದದ್ದೆಲ್ಲಾ ಬರೆದವರ ಅಪರಾಧ ಖಾತೆಗಳಲ್ಲಿ ಜಮೆಯಾಗತೊಡಗುತ್ತದೆ ಎನ್ನುವುದು ನನಗೆ ಗೊತ್ತಾದದ್ದು ತೀರಾ ಈಚೆಗೆ. ಬರೆದದ್ದನ್ನೆಲ್ಲಾ ಒಂದು ಕಡೆ ಕೂಡಿಸಿ ಅಚ್ಚು ಮಾಡುವ ಇರಾದೆಯನ್ನು ನನ್ನೆದುರಿಗಿಟ್ಟು ನನ್ನ ಒಪ್ಪಿಗೆಯನ್ನು ಗೆಳೆಯರು ಪಡೆದುಕೊಂಡಮೇಲೆ ಈ ದಿಟ ನನಗೆ ತಿಳಿಯಿತು. ಬರೆದಾದ ಮೇಲೆ ಬರಹದ ಮೇಲೆ ನನ್ನ ಹಕ್ಕುಗಳು ಇಲ್ಲ ಎಂದು ತಿಳಿದ ನನಗೆ ಈ ಬರಹಗಳನ್ನು ಒಗ್ಗೂಡಿಸಿ ಅಚ್ಚುಮಾಡಿಸುವ ಕೆಲಸಕ್ಕೆ ಅಡ್ಡಿತರಲು ಯಾವ ಹಕ್ಕುಗಳೂ ಇರಲಿಲ್ಲ. ಆದರೆ ಒಂದೊಂದಾಗಿ ಹಳೆಯ ಬರಹಗಳನ್ನು ಒಗ್ಗೂಡಿಸುತ್ತಿರುವಾಗ ಅನಿಸಿದ್ದೇ ಬೇರೆ.

ಬರೆಯುವುದು ಒಂದು ಅಪರಾಧವಿರಬೇಕು. ಬರೆದು ಮೊದಲು ಅಚ್ಚು ಮಾಡಿಸಿದ ಮೇಲೆ ಆ ಅಪರಾಧಕ್ಕೆ ಬಿ ರಿಪೋರ್ಟ್ ಸಿಕ್ಕಿಬಿಟ್ಟಿರುತ್ತದೆ. ಎಷ್ಟೋ ವರುಷಗಳಾದ ಮೇಲೆ ಅದೇ ಬರಹವನ್ನು ಮರಳಿ ಅಚ್ಚು ಮಾಡಲು ನೋಡಿದರೆ ಯಾರೋ ಹಳೆಯ ಕೇಸಿಗೆ ನೀಡಿದ್ದ ಬಿ ರಿಪೋರ್ಟ್‌ನ್ನು ಹಿಂದಕ್ಕೆ ಪಡೆದು ಕೇಸನ್ನು ಮರಳಿ ತೆರೆದು ಕೂರಿಸಿದಂತೆ ತೋರುತ್ತದೆ. ನನಗಂತೂ ಹಾಗೇ ಅನ್ನಿಸಿದೆ. ಆದರೂ ಇದೊಂದು ತಪ್ಪೊಪ್ಪಿಗೆಯ ಗಳಿಗೆ. ಬರೆದು ಏನು ಮಾಡಿದ್ದೇನೋ ಗೊತ್ತಿಲ್ಲ. ಹೀಗೆ ಬರೆಯುವುದು ಅಗತ್ಯವಾಗಿತ್ತೇ? ಅದೂ ಗೊತ್ತಿಲ್ಲ. ಬರೆಯುವುದು ಕಷ್ಟವಲ್ಲ; ಬರೆಯದಿರುವುದೇ ಕಷ್ಟ ಎಂಬ ಮಾತನ್ನು ನಂಬಿ ಈ ಹಾದಿ ಹಿಡಿದಿದ್ದರೂ ಅಚ್ಚರಿಯಿಲ್ಲ.

ಇದೆಲ್ಲ ಹೇಗೆ ಮೊದಲಾಯಿತು? ಆಗ ಬರೆಯುವುದು ಒಂದು ಹೊಸ ಹೊಣೆ ಎಂಬ ನಂಬಿಕೆ ಗಟ್ಟಿಯಾಗಿತ್ತು. ಅದನ್ನು ಹೊರುವವರಿಗೆ ಹೆಚ್ಚಿನ ಸಿದ್ಧತೆ ಬೇಕೆಂದು ನಂಬಿದ್ದೆವು. ಹಾಗೆಯೇ ಸುಮ್ಮನೆ ಬೇಕಾದ್ದಕ್ಕಿಂತ ಹೆಚ್ಚನ್ನು ಬರೆಯುವ ಬಗೆಯನ್ನೂ ನಗೆಗೀಡು ಮಾಡುತ್ತಿದ್ದೆವು. ನನ್ನ ಎಷ್ಟೋ ಒಡನಾಡಿಗಳು ಇದಕ್ಕಿಂತ ಹೆಚ್ಚು ಬರೆಯಬಹುದಾಗಿದ್ದರೂ ಹಾಗೆ ಬರೆಯದೇ ಈಗಲೂ ನನ್ನಂತಹವರನ್ನು ನೋಡಿ ನಗುತ್ತಿದ್ದಾರೆ. ಇದು ನನಗೂ ಗೊತ್ತಿದೆ.

ಮೊದಮೊದಲು ಮಾತಿನ ಮುಂದುವರಿಕೆಯಾಗಿ ಈ ಬರಹಗಳು ಮೈತಳೆದವೆಂದು ತೋರುತ್ತದೆ. ಮಾತಿನ ಹರಹನ್ನು ಕಡಿಮೆ ಮಾಡಿಕೊಂಡು, ನುಡಿದದ್ದಕ್ಕೆ ಹೊಣೆಗಾರರಾಗುವ ಬಯಕೆಯಿಂದಾಗಿ ಈ ಬರಹಗಳು ಹುಟ್ಟಿಕೊಂಡವು. ಅಂದಂದಿನ ದಂದುಗಕ್ಕೆ ಹೆಣೆದ, ಹೊಸೆದ ಬರಹಗಳೆಂದು ತೋರಿದರೂ ಎಲ್ಲರೊಡನೆ ಆಡುತ್ತಿದ್ದ ಮಾತುಗಳ ಜಾಲದಲ್ಲಿ ಇದ್ದ ನಂಟು ಈ ಬರಹಗಳಲ್ಲೂ ಸೇರಿಕೊಂಡಿದೆ. ಇದು ಸ್ಪಷ್ಟತೆಯೂ ಆಗಿರಬಹುದು; ಕೆಲವೊಮ್ಮೆ ಗೊಂದಲವೂ ಆಗಿದ್ದಿರಬಹುದು. ಆದರೆ ಸುಳ್ಳು ಆಗಿಲಾರದು. ಸಾಹಿತ್ಯದ ಓದುಗರೂ ಮೇಸ್ಟ್ರೂ ಆಗಿದ್ದ ನನ್ನಂತಹವರಿಗೆ ಏಳು ಎಂಟನೆಯ ದಶಕಗಳು ಹೊಸ ಸವಾಲನ್ನು ಎಸೆದಿದ್ದವು. ಸರ್ವರ ಸಮ್ಮತಿಯ ಸಂತೆಯ ದಾರಿಯನ್ನು ಹಿಡಿಯಬಾರದೆಂಬ ಹಟವಿದ್ದರೂ ಆ ಸಮ್ಮತಿಯ ದಾರಿಗೆ ಇದ್ದ ಮನ್ನಣೆಯ ಸೆಳೆತದಿಂದ ತಪ್ಪಿಸಿಕೊಳ್ಳುವುದು ಕಡುಕಷ್ಟವಾಗಿತ್ತು. ಇದು ಎಲ್ಲದರಲ್ಲೂ ಸ್ವಂತಿಕೆ ಇರಬೇಕೆಂಬ ಅಹಂಕಾರದ ಮಾತಲ್ಲ. ಆದರೆ ನಮ್ಮ ಹುಡುಕಾಟದಿಂದ ಹೊಸ ದಾರಿ ಸಿಗಬೇಕು. ಕೊನೆಯ ಪಕ್ಷ ನಮ್ಮ ದಾರಿಯನ್ನು ನಾವೇ ಕಂಡುಕೊಂಡೆವೆಂಬ ಸಂತಸವಾದರೂ ಸಿಗಬೇಕಿತ್ತು. ಅವರೆಗೆ ಕೈಹಿಡಿದು ನಡೆಸುತ್ತಿದ್ದ ಮಾದರಿಗಳು ದಾರಿ ತಪ್ಪಿಸುತ್ತಿರಲಿಲ್ಲವಾದರೂ ಕರೆದುಕೊಂಡು ಹೋಗುತ್ತಿದ್ದ ಹಾದಿಯಲ್ಲಿ ನಮ್ಮತನಕ್ಕೆ ಎರವಾಗಬೇಕೆಂಬ ಅನಿಸಿಕೆ ಮಾತ್ರ ಗಟ್ಟಿಗೊಳ್ಳುತ್ತಿತ್ತು. ಈಗಲೂ ಅದು ಹುಚ್ಚಾಟವಾಗಿರಲಿಲ್ಲ ಎನ್ನುವ ನಂಬಿಕೆ ಇದೆ.

ನೆನಪಿದೆ. 1971ರಲ್ಲಿ ನಡೆದ ಹೊಸಗನ್ನಡ ಕಾವ್ಯದ ಎರಡು ಮಾರ್ಗಗಳು ಎಂಬ ವಿಷಯದ ವಿಚಾರ ಸಂಕಿರಣವೊಂದರಲ್ಲಿ ಬೇಂದ್ರೆ, ಶಂಕರ ಮೊಕಾಶಿ ಪುಣೇಕರ್ ಮತ್ತು ಲಂಕೇಶ್ ಅವರ ನಡುವೆ ನಡೆದ ಮಾತಿನ ಮಾರಾಮಾರಿಯನ್ನು ಕಂಡು, ಕೇಳಿ ನಾವೆಲ್ಲ ಹುಡುಗರು ದಿಕ್ಕುತಪ್ಪಿದಂತಾಗಿದ್ದ ಗಳಿಗೆ ಈಗಲೂ ನೆನಪಿದೆ. ದಿಕ್ಕುತಪ್ಪಿದಂತೆ ಅನಿಸಿದ್ದಕ್ಕೆ ಆ ಜಗಳ ಮತ್ತು ಅದರ ತಿರುಳು ಮಾತ್ರ ಕಾರಣವಾಗಿರಲಿಲ್ಲ. ಮೊದಲ ಬಾರಿಗೆ ನಾವು ಕಟ್ಟಿಕೊಂಡಿದ್ದ ಗೌರವದ ವಿಗ್ರಹಗಳು ಪುಡಿಪುಡಿಯಾಗುತ್ತಿದ್ದನ್ನು ಕಾಣುತ್ತಿದ್ದ ಅನುಭವವೂ ಕಾರಣವಾಗಿದ್ದಿರಬೇಕು. ಮಾತಿಗೆ ಇರುವ ಬಲವನ್ನು ನಂಬಿದ್ದವರು ಬೇಂದ್ರೆ. ವಾಕ್ ಸ್ವಾತಂತ್ರ್ಯದ ಹೆಚ್ಚಳವನ್ನು ಜವಾಹರ್ ಲಾಲ್ ನೆಹರೂ ಅವರಿಗೆ ತಾವು ಮನವರಿಕೆ ಮಾಡಿಕೊಟ್ಟದ್ದನ್ನು ಹೇಳುತ್ತಿದ್ದರು. ಆದರೆ ನಾಡಿನ ಚರಿತ್ರೆಯ ಆ ಹಂತವನ್ನು ಬಲ್ಲವರಿಗೆ ಅಂದಿನ ಪರಿಸ್ಥಿತಿಯ ಅರಿವಿತ್ತು. ಎಲ್ಲರಿಗೂ ಮಾತಾಡಲು ಅವಕಾಶವಿದ್ದರೂ ಆ ಮಾತನ್ನು ಕೇಳಿಸಿಕೊಳ್ಳುವವರೇ ಇಲ್ಲದಂತಾದರೆ ಆಗ ಮಾತಿಗೇನು ಬಲವೆಂಬುದು ಲಂಕೇಶರ ಪ್ರಶ್ನೆಯಾಗಿತ್ತು. ಇದೆಲ್ಲ ಮುಂದಿನ ನಾಲ್ಕೈದು ವರ್ಷಗಳಲ್ಲಿ ಹರಳುಗಟ್ಟುತ್ತ ನಾಡಿನಲ್ಲಿ ಅನುಶಾಸನ ಪರ್ವ ಮೊದಲಾದಾಗ ಲಂಕೇಶ್ ಹೇಳಿದ್ದರ ತಿರುಳು ಮನವರಿಕೆಯಾಗತೊಡಗಿತ್ತು. ಮಾತುಗಳನ್ನು ಗೋಡೆಯ ಎದುರು ಆಡಬೇಕಾಗಿ ಬಂದರೆ ಏನಾಗುವುದೆಂಬ ಅಂಜಿಕೆಯೇ ಬರಹಕ್ಕೆ ಕೋಡು ಮೂಡಿಸಿದ್ದಿರಲೂಬಹುದು. ಬರಹಕ್ಕೆ ಈಗ ಮತ್ತು ಇಲ್ಲಿ ಎಂಬ ಕಟ್ಟು ಇರುವುದಿಲ್ಲ. ಹಾಗಾಗಿ ಎಲ್ಲಿಯೋ ಯಾರೋ ಅದನ್ನು ಓದಬಹುದಾಗಿದೆ. ಹಾಗಾಗಿ ಬರಹಕ್ಕೆ ಬಲ ಉಳಿದೇ ತೀರುತ್ತದೆ ಎನ್ನುವ ಒತ್ತಾಸೆ ಆಗ ಬಲಗೊಂಡಿದ್ದಿರಬಹುದು. ಮುಂದಿನ ದಶಕಗಳಲ್ಲಿ ಅಕ್ಷರ ಕಲಿತವರಲ್ಲಿ ಹಲವರು ಏಕೆ ಬರಹದ ಮೊರೆ ಹೊಕ್ಕರು ಎಂಬುದಕ್ಕೆ ಇಲ್ಲಿ ಸೂಚನೆಗಳು ಸಿಕ್ಕಿಯಾವು.

ಹೊಸ ದಾರಿಯನ್ನು, ಇಲ್ಲವೇ ದಾರಿಯನ್ನು ಹೊಸದಾಗಿ ಕಂಡುಕೊಳ್ಳುವ ಮಾತನ್ನು ಮೇಲೆ ಆಡಿದ್ದೇನೆ. ಸಾಹಿತ್ಯವನ್ನು ಅರಿಯಲು ನಮಗೆ ಒದಗಿಸಿಕೊಟ್ಟಿದ್ದ ಮಾದರಿಗಳು ನಮ್ಮ ಕೃತಿಗಳನ್ನು ಹೊರಗಿನಿಂದ ನೋಡಲು ಒತ್ತಾಯಿಸುತ್ತಿವೆ ಎಂಬ ಅನಿಸಿಕೆ ಮೂಡಿತ್ತು. ನಾವು ತೆರೆದುಕೊಂಡ ಹಾಗಾಗಿಯೇ ಬಳಸುತ್ತಿದ್ದ ಸಾಹಿತ್ಯತತ್ತ್ವ ಮತ್ತು ಪರಿಕರಗಳು ಕನ್ನಡದ ಪರಂಪರೆಯಿಂದ ಹುಟ್ಟಿಕೊಂಡಿರಲಿಲ್ಲ. ಇದಕ್ಕೆ ಚರಿತ್ರೆಯಲ್ಲಿ ಕಾರಣಗಳೇನೇ ಇರಲಿ. ಆದರೆ ಅದೇ ದಾರಿಯನ್ನು ಹಿಡಿದು ನಡೆಯಬೇಕೆಂಬ ಒತ್ತಾಯಕ್ಕೆ ಮಾತ್ರ ಕಾರಣಗಳಿರಲಿಲ್ಲ. ಅರಿಯುವುದು ಮತ್ತು ಬೆಲೆಕಟ್ಟುವುದು ಈ ಎರಡೂ ಕೆಲಸಗಳಲ್ಲಿ ಎರಡನೆಯದಕ್ಕೆ ಮನ್ನಣೆ ಹೆಚ್ಚಾದಾಗ ಕೃತಿಗಳಲ್ಲಿ, ಕೃತಿಕಾರರಲ್ಲಿ ಆಯ್ಕೆಗಳನ್ನು ಮಾಡಿಕೊಳ್ಳುವ ಹಾಗೂ ನಿರಾಕರಣೆ ಮಾಡುವ ನೆಲೆಗಳು ಬೇರೂರತೊಡಗುತ್ತವೆ. ನಮ್ಮ ಸಾಹಿತ್ಯ ಚರಿತ್ರೆಯೆಂಬ ಬರೆವಣಿಗೆಯಲ್ಲಿ ಇದೇ ಕೆಲಸವನ್ನು ಮಾಡಿದ್ದೇವೆ ತಾನೆ. ಇದರಿಂದ ಕೃತಿಗಳ ಲೋಕವನ್ನು ಒಳಹೊಗುವ ದಾರಿಗಳೇ ಮುಚ್ಚಿಹೋಗುತ್ತವೆ. ಹಾಗಿದ್ದರೆ ಬೆಲೆ ಕಟ್ಟುವುದಕ್ಕಿಂತ ಅರಿಯುವ ನೆಲೆಗೆ ಮನ್ನಣೆ ಸಿಗಬೇಕೆಂಬ ಇರಾದೆ ಮುಂಚೂಣಿಗೆ ಬಂತು. ಇದರಿಂದ ನಾನು ಬರೆದದ್ದನ್ನು ಓದಿದವರು ನನ್ನನ್ನು ಸತೃಣಾಭ್ಯವಹಾರಿ ಎಂದು ಬೆರಳುಮಾಡಿ ತೋರಿಸತೊಡಗಿದರು. ಅಂದರೆ ಸಾಹಿತ್ಯಕ ಅಭಿರುಚಿ ಇಲ್ಲದ , ಏನೂ ಸಿಕ್ಕರೂ ಅದೆಲ್ಲವನ್ನೂ ಮೇಯುವವನು ಎಂದಾಯಿತು. ಈ ಬಿರುದಿನಿಂದ ನನಗೇನೂ ಬೇಸರವಾಗಿಲ್ಲ. ಆದರೆ ಹಲವು ಒತ್ತಡಗಳಿಗೆ ಒಳಗಾಗಿ ತನ್ನ ಚಹರೆಗಳಿಗೆ ಎರವಾಗಬೇಕಾಗಿ ಬಂದಿರುವ ಕನ್ನಡ ಬರೆವಣಿಗೆಯನ್ನು ನೋಡಲು ನಮಗೆ ಬೇರೆ ಯಾವುದಾದರೂ ದಾರಿಗಳಿದ್ದವೋ ಇಲ್ಲವೋ ನನಗೆ ತಿಳಿಯದು.

ನಮ್ಮ ಕೃತಿಗಳ ಒಡಲಿನಿಂದಲೇ ನಮಗೆ ಬೇಕಾದ ಅರಿಯುವ ಮಾಪುಗೋಲುಗಳನ್ನು, ಪರಿಕರಗಳನ್ನು ಹುಡಕಿಕೊಳ್ಳಬೇಕೆಂದು ಹೇಳಿದಾಗ ಎರಡು ಬಗೆಯಲ್ಲಿ ಬದಲುಗಳು ಬಂದವು. ಒಂದು ನೆಲೆಯಲ್ಲಿ ನಿಂತವರು ಹೀಗೆ ನಮ್ಮದೇ ಮಾಪುಗೋಲು ಮತ್ತು ಪರಿಕರಗಳನ್ನು ಹುಡುಕುವುದೆಂದರೆ ಹಳೆಯದಕ್ಕೆ ಮರಳುವ, ಮರುಗಳಿಕೆಯ ದಾರಿಯಾಗಿದೆ.ಇದು ಹಳಹಳಿಕೆಯ ದಾರಿ. ಹಾಗಾಗಿಯೇ ಇದು ಮುನ್ನೋಟಕ್ಕೆ ಎರವಾಗುವ ದಾರಿ ಎಂದರು. ಮತ್ತೆ ಕೆಲವರು ಹೀಗೆ 'ಬೇರೆ' ಎಂದು 'ಹೊರಗಿನದು' ಎಂದು ತಿಳಿಯಲಾದ ಪರಿಕರಗಳನ್ನು ತೊರೆದರೆ ನಾವೇ ಬಡವಾಗಿಬಿಡುತ್ತೇವೆ; ಆಗ ನಮಗೆ ದಿಕ್ಕೇ ತೋಚದಂತೆ ಆಗಿಬಿಡಬಹುದು ಎಂದರು. ಆದರೆ ಈ ಎರಡೂ ಬದಲುಗಳ ಬೇರುಗಳು ಗಟ್ಟಿಯಾಗಿರಲಿಲ್ಲ. ಏಕೆಂದು ನೋಡೋಣ.

ಬರೆವಣಿಗೆ ಇಲ್ಲವೇ ಜನರ ನೆನಪಿನಲ್ಲಿರುವ ರಚನೆಗಳನ್ನು ಅರಿಯುವ ಪರಿಕರಗಳು ಒಳಗಿನಿಂದಲೇ ಬರಬೇಕು ಎನ್ನುವ ಮಾತನ್ನು ಸರಿಯಾಗಿ ತಿಳಿದರೆ ಅದು ಕೃತಿಗಳ ಒಡಲು ಮತ್ತು ಪರಿಸರ ಇವೆರಡಕ್ಕೂ ಸಂಬಂಧಿಸಿದ ಸಂಗತಿ ಎನ್ನುವುದು ಗೊತ್ತಾಗುತ್ತದೆ. ಒಂದು ಉದಾಹರಣೆಯನ್ನು ನೋಡೋಣ. ಇಪ್ಪತ್ತನೆಯ ಶತಮಾನದ ಮೊದಮೊದಲ ಮೂರ್‍ನಾಲ್ಕು ದಶಕಗಳಲ್ಲಿ ನಡೆದ ಸಂಗತಿ ಇದು. ಜನರಲ್ಲಿ ಬಾಯ್ದರೆಯಾಗಿ ಇದ್ದ ಜನಪದ ಸಾಹಿತ್ಯವನ್ನು ಆಗ ಕೂಡಿಹಾಕಲು ಹೊರಟವರು ತಳೆದ ನಿಲುವನ್ನು ನೋಡಿ.

ಎಲ್ಲ ಬರವಣಿಗೆಗೂ ತಾಯಿಬೇರು ಈ ಜನಪದಸಾಹಿತ್ಯ ಎನ್ನುವ ನಿಲುವನ್ನು ತಳೆದರಷ್ಟೆ ಹಲಸಂಗಿಯ ಗೆಳೆಯರು ಕೂಡಿ ಹಾಕಿದ ಇಂತಹ ಬರವಣಿಗೆಯನ್ನು ಅವರು ನೋಡಿದ ಬಗೆಯನ್ನು ನೋಡಿ. ಹಾಗೆಯೇ ತೆಂಕಣಸೀಮೆಯಲ್ಲಿ ಮಾಸ್ತಿಯವರೇ ಮೊದಲಾಗಿ ಬಿಎಂಶ್ರೀ,ಗೊರೂರು ಮುಂತಾದವರು ಜನಪದಗೀತೆಗಳನ್ನು ಇಂದಿನ ಬರವಣಿಗೆಯ ಬೇರು ಎಂತಲೇ ತಿಳಿದಿದ್ದರು. (ಹಲಸಂಗಿಯ ಗೆಳೆಯರು ಕೊಂಚ ಮುಂದೆ ಹೋಗಿ ತಮ್ಮವೇ ಕೆಲವು ರಚನೆಗಳನ್ನು 'ಗರತಿಯ ಹಾಡು' ಕೃತಿಯಲ್ಲಿ ಜನರ ಹೆಸರಿನಲ್ಲಿ ಬಳಕೆ ತಂದಿದ್ದಾರೆಂದು ನನಗೆ ತೋರುತ್ತದೆ. ಇದು ಆಪಾದನೆಯಲ್ಲ. ಜನರ ನೆನಪಿನ ರಚನೆ ಮತ್ತು ನಮ್ಮ ಇಂದಿನ ರಚನೆಗಳ ನಡುವೆ ಇರುವ ಕರುಳುಬಳ್ಳಿಯ ನಂಟನ್ನು ತಿಳಿಸಿ ಹೇಳುವ ಬಗೆಯೂ ಇದಾಗಿತ್ತು.) ಚರಿತ್ರೆ ಮತ್ತು ಸಂವೇದನೆಗಳು ಕಡಿದುಹೋಗದೆ ಮುಂದುವರೆದುಕೊಂಡು ಬಂದಿವೆ ಎಂಬುದನ್ನು ತೋರಿಸುವುದು ಅಂದಿನ ಪರಿಸರದ ಒತ್ತಾಯವಾಗಿತ್ತಷ್ಟೆ ಹೀಗಾಗಿ ಜನಪದ ರಚನೆಗಳನ್ನು ನೊಡುವ ಈ ಬಗೆಯ ಪರಿಕರ ಹುಟ್ಟಿ ಕೊಂಡದ್ದು ಸರಿಯಾಗಿಯೇ ಇದೆ. ಕೆಲವರು ಇದರ ಹಿನ್ನೆಲೆಯಲ್ಲಿ ಐರ್ಲೆಂಡ್ ನಾಡು ಬಿಡುಗಡೆಗಾಗಿ ಹೋರಾಡುತ್ತಿರುವಾಗ ಅಲ್ಲಿನ ಸಾಂಸ್ಕೃತಿಕ ನಾಯಕರು ಅಲ್ಲಿನ ಜನಪದರಚನೆಗಳನ್ನು ನೋಡಿದ ಬಗೆಯ ಪ್ರಭಾವವಿದೆ ಎನ್ನಬಹುದು. ಆದರೆ ಇದನ್ನು ಗಟ್ಟಿಯಾಗಿ ಹೇಳಲು ಆಗುತ್ತಿಲ್ಲ. ಏಕೆಂದರೆ ಬೇಂದ್ರೆಯವರನ್ನು ಐರ್ಲೆಂಡಿನ ಏಈ ಕವಿಯ ಹಾಗೆ ಉಳಿದವರು–ಅಂದರೆ ಡಬ್ಲ್ಯೂ.ಬಿ. ಯೇಟ್ಸ್, ಲೇಡಿ ಗ್ರೆಗೊರಿ, ನಾಟಕಕಾರ ಜೆ.ಎಂ. ಸಿಂಜ್(ಅಥವಾ ಸಿಂಗ್?) ಸೆಳೆದಂತೆ ತೋರುತ್ತಿಲ್ಲ. ತೆಂಕಣನಾಡಿನಲ್ಲಿ ಕುವೆಂಪು ಅವರಿಗೆ ಕನ್ನಡದಲ್ಲಿ ಬರೆಯಲು ಹೇಳಿದ ಜೆ.ಎಚ್.ಕಸಿನ್ಸ್ ಆ ನಾಡಿನವನೇ ಆಗಿದ್ದರೂ ಇಲ್ಲಿಯ ಬರಹಗಾರರ ಮೇಲೆ ಐರಿಶ್ ಕವಿಗಳ ನೆರಳೂ ಬಿದ್ದಂತೆ ತೋರುತ್ತಿಲ್ಲ. ಹಾಗಾಗಿ ಜನಪದರಚನೆಗಳನ್ನು ನೋಡಲು ಆಯ್ದುಕೊಂಡ ಮಾದರಿ ನಮ್ಮ ಒಳಗಿನ ಒತ್ತಡದಿಂದಲೇ ಹುಟ್ಟಿದ್ದೆಂದು ತೋರುತ್ತದೆ.

ಆದರೆ ಮುಂದೆ ಕನ್ನಡದ ಗುರುತುಗಳನ್ನು ಹುಡುಕಿಕೊಳ್ಳುವ ಕೆಲಸ ಮೊದಲಾದಾಗ ನಾವು ಹಿಡಿದ ದಾರಿಯೇ ಬೇರೆಯಾಯಿತು. ಕನ್ನಡವನ್ನು ದ್ರಾವಿಡ ಸಂಸ್ಕೃತಿಯ ನೆಲೆಯಲ್ಲಿ ನೋಡುವ ಬಗೆ ನೆಲೆಯೂರಿತಷ್ಟೆ ಆಗ ಜನಪದಸಾಹಿತ್ಯ ನಮಗೆ ಶಿಷ್ಟಸಾಹಿತ್ಯಕ್ಕೆ ವಿರುದ್ಧವಾದ ನೆಲೆಯಲ್ಲಿ ಕಾಣತೊಡಗಿತು. ಶಿಷ್ಟವೆಂದು ನಾವು ಗುರುತಿಸಿಕೊಂಡ ಸಾಹಿತ್ಯವು ವೈದಿಕ ಮತ್ತು ಧಾರ್ಮಿಕ ನೆಲೆಗಳಿಂದ ಒತ್ತಾಸೆ ಪಡೆದುಕೊಂಡಿದ್ದರೆ ಜನಪದಸಾಹಿತ್ಯವನ್ನು ಅವೈದಿಕ ನೆಲೆಯಲ್ಲಿ ಇರಿಸಿ ನೋಡತೊಡಗಿದೆವು. ಇದೂ ಕೂಡ ಅಂದಿನ ನಮ್ಮ ಕನ್ನಡ ಗುರುತುಗಳ ಹುಡುಕಾಟದ ಕಾರಣದಿಂದ ಹುಟ್ಟಿಕೊಂಡ ಚಿಂತನೆ. ಒಂದೆರಡು ದಶಕಗಳು ಕಳೆದಮೇಲೆ ನಾವು ಜನಪದಸಾಹಿತ್ಯಕ್ಕೆ ಕೊಟ್ಟುಕೊಂಡಿದ್ದ ಕೃಷಿ ಮೂಲವನ್ನು ಬಿಟ್ಟುಕೊಟ್ಟು ದಲಿತ ನೆಲೆಗಳನ್ನು ಕಂಡುಕೊಳ್ಳಬೇಕಾದ ಅಗತ್ಯ ಉಂಟಾಯಿತು. ಆವರೆಗೆ ಕಡೆಗಣನೆಗೆ ಒಳಗಾಗಿದ್ದ ಹತ್ತಾರು ಒಳಹೊಳೆಗಳು ಈಗ ಮೈದುಂಬಿಕೊಂಡಂತೆ ತೋರತೊಡಗಿದವು. ಇದೆಲ್ಲವನ್ನೂ ಹೇಳಿದ್ದರ ಉದ್ದೇಶವಿಷ್ಟೆ ನಮ್ಮ ಸಾಹಿತ್ಯವನ್ನು ಅರಿಯುವ ಮಾಪುಗೋಲುಗಳನ್ನು ಪರಿಕರಗಳನ್ನು ನಮ್ಮ ಬೇಕು ಬೇಡಗಳಿಗೆ ತಕ್ಕಂತೆ ಹುಡುಕಿಕೊಳ್ಳಬೇಕು ಎನ್ನುವುದು ಅಷ್ಟೇನೂ ಗಾಬರಿ ಹುಟ್ಟಿಸಬೇಕಾದ

ಸಂಗತಿಯಲ್ಲ ಎನ್ನುವುದನ್ನು ಇಲ್ಲಿ ಹೇಳಬೇಕಾಗಿದೆ. ನಮಗೇ ಗೊತ್ತಿಲ್ಲದಂತೆ ನಾವು ಆ ಮಾದರಿಯನ್ನು ನಂಬಿಯೇ ಹೆಜ್ಜೆ ಇಡುತ್ತಿದ್ದೇವೆ. ನಾವು ಹುಡುಕಿಕೊಂಡ ದಾರಿ ಸರಿಯೋ ತಪ್ಪೋ ಎನ್ನುವುದನ್ನು ನೋಡಿಕೊಳ್ಳುವ ಅವಕಾಶವನ್ನು ನಾವು ಕಾಯ್ದುಕೊಂಡಿದ್ದೇವೆಯಷ್ಟೆ

ಸಾಹಿತ್ಯ ಕೃತಿಯ ದಿಟವಾದ ಇರವು ಎಲ್ಲಿದೆ ಎನ್ನುವುದು ನಮ್ಮನ್ನೆಲ್ಲ ಕಾಡಿಸುತ್ತಿದ್ದ ಇನ್ನೊಂದು ಪ್ರಶ್ನೆ. ಭಾಷೆಯೇ ಅದರ ಮೈ ಆಗಿದ್ದರಿಂದ ಅದರ ಭಾಷಿಕ ಶರೀರವನ್ನೇ ನೆಮ್ಮಿ ಅದನ್ನು ಅರಿಯಲು ಮುಂದಾಗಬೇಕೆಂಬುದು ಆಗ ಹೊಳೆದ ದಾರಿ. ಆ ಭಾಷಿಕ ಮೈಯನ್ನು ಬಿಟ್ಟು ನಾವು ಕಟ್ಟಿಕೊಟ್ಟ ಯಾವ ಹೊರ ಪ್ರಭಾವಳಿಯೂ ಕೂಡ ಕೃತಿಯನ್ನು ಅರಿಯಲು ನೇರವಾಗಿ ನೆರವಾಗಲಾರದು ಮತ್ತು ಅಂತಹ ನೆರವನ್ನು ಪಡೆದರೆ ದಾರಿ ತಪ್ಪುವುದಂತೂ ದಿಟ ಎನ್ನುವುದು ಆಗ ಅನಿಸಿತ್ತು. ಹಾಗಾಗಿಯೇ ಕೃತಿಗಳಿಗೆ ನಿನ್ನೆಗಳಿಲ್ಲ ಎಂದು ನಂಬಬೇಕಾಯಿತು. ಅದನ್ನೇ ಪಾಠಗಳನ್ನು ಕೇಳುತ್ತಿದ್ದ ವಿದ್ಯಾರ್ಥಿಗಳಿಗೂ ಹೇಳಬೇಕಾಯ್ತು. ವಿಕ್ರಮಾರ್ಜುನ ವಿಜಯವಿರಲಿ, ಕುಮಾರವ್ಯಾಸ ಭಾರತವಿರಲಿ, ಬಸವರಾಜದೇವರ ರಗಳೆಯಿರಲಿ, ಮಲೆಗಳಲ್ಲಿ ಮದುಮಗಳು ಇರಲಿ, ಜೋಗಿಯಿರಲಿ ಈ ಎಲ್ಲವೂ ಒಂದೇ ಸಾಲಿನಲ್ಲಿ ನಿಂತಂತೆ ತೋರತೊಡಗಿದವು. ಯಾವುದೂ ಒಂದಾದ ಮೇಲೊಂದರಂತೆ ಹುಟ್ಟಿಕೊಂಡಂತೆ ತೋರಲೇ ಇಲ್ಲ. ದಿಟ. ಒಂದು ಹತ್ತನೆಯ ಶತಮಾನದ್ದು, ಇನ್ನಾವುದೋ ಹದಿನೈದರದ್ದು, ಮತ್ತೊಂದು ನಿನ್ನೆ ಮೊನ್ನೆ ಹುಟ್ಟಿದ್ದು ಸರಿ. ಆದರೆ ಓದುವವರಿಗೆ ಅವೆಲ್ಲವೂ ಈಗ ಮತ್ತು ಇಲ್ಲಿ ಮಾತ್ರ ದಿಟ.

ಈ ನೆಲೆಯನ್ನು ಒಪ್ಪಿದಾಗ ಕೃತಿಯೊಳಗೇ ಇರುವ ಅದು ಹುಟ್ಟಿದಕಾಲದ ನೆನಪನ್ನು ಕೈಬಿಡುವುದು ತಪ್ಪಲ್ಲವೇ ಎಂದು ಕೇಳುವುದುಂಟು. ಅದು ಸರಿಯೇ. ಇಲ್ಲಿಯೂ ಯಾವ ನೆನಪೇ ಆದರೂ ಕೂಡ ಅದು ನಮ್ಮ ಕಾಲದೊಡನೆ ನಂಟನ್ನು ಬೆಳೆಸಿಕೊಳ್ಳದಿದ್ದರೆ ಅದು ಕೆಲಸಕ್ಕೆ ಬಾರದಂತೆಯೇ ಸರಿ ಎನ್ನುವುದು ನನ್ನ ತಿಳುವಳಿಕೆ. ನಾವು ನಮಗೆ ಬೇಡದ ನೆನಪುಗಳನ್ನು ಹೊತ್ತು ನಡೆಯುತ್ತಿರುವವರಲ್ಲ. ಹಾಗೆ ಹೊತ್ತು ನಡೆಯಬೇಕೆಂಬ ಒತ್ತಾಯಗಳನ್ನು ನಿರಾಕರಿಸುವವರು. ಹಾಗಾಗಿ ಕೃತಿಯಲ್ಲಿ ಅದು ಹುಟ್ಟಿದಕಾಲಕ್ಕೆ ಮಾತ್ರ ಸಲ್ಲುವ ನೆನಪಿನ ನಂಟುಗಳಿರುತ್ತವೆ ಎನ್ನುವುದನ್ನು ಒಪ್ಪಿ ಅದರಿಂದಾಗಿ ಅದನ್ನು ಅರಿಯುವ ಬಗೆಯಲ್ಲೇ ಬದಲಾವಣೆಯನ್ನು ಮಾಡಿಕೊಳ್ಳಬೇಕು ಎನ್ನುವುದನ್ನು ನಾನು ಒಪ್ಪಲಾರೆ.

ನಾನು ಮತ್ತು ನನ್ನ ಸರೀಕ ಕನ್ನಡ ಮೇಸ್ಟ್ರುಗಳು ಇನ್ನೊಂದು ಇಕ್ಕಟ್ಟನ್ನು ಎದುರಿಸುತ್ತಿದ್ದೆವೆಂದು ತೋರುತ್ತದೆ. ಪಶ್ಚಿಮದ ಸಾಹಿತ್ಯ ಮತ್ತು ಸಾಹಿತ್ಯತತ್ವಗಳ ಚೌಕಟ್ಟನ್ನು ಪರಾಮರ್ಶನ ಬಿಂದುವನ್ನಾಗಿ ಮಾಡಿಕೊಳ್ಳಬೇಕೆಂಬ ಒತ್ತಾಯವನ್ನು ಹೂಡುತ್ತಿದ್ದ ವಿಮರ್ಶಕರ ಒತ್ತಡಗಳಿಗೆ ಹೇಗೆ ಪ್ರತಿಕ್ರಿಯಿಸುವುದು ಎನ್ನುವುದೇ ಆ ಇಕ್ಕಟ್ಟು. ಶರಣಾಗತಿಯ ಹಾದಿಯೊಂದು ತೆರೆದೇ ಇತ್ತು. ಈ ಹಾದಿಯಲ್ಲಿ ಹೋಲಿಕೆಗಳಿಗೆ ಒತ್ತು ತುಂಬಾ ಇತ್ತು. ಆದರೆ ಹೋಲಿಕೆಗಳು ಯಾವಾಗಲೂ ಒಂದು ನಿಟ್ಟಿನಲ್ಲೇ

ಸಾಗುತ್ತಿದ್ದವು. ಬೀಜಚಿಂತನೆಗಳು ಯಾವಾಗಲೂ ಪಶ್ಚಿಮದ ಕಡೆಯಿಂದಲೇ ಹರಿದು ಬಂದಿವೆ ಎನ್ನುವುದನ್ನು ಒಪ್ಪಿಕೊಳ್ಳಲೇಬೇಕಿತ್ತು. ಹಾಗಲ್ಲದೆ ಕನ್ನಡದ್ದೇ ಆದ ಸಾಧನೆಗಳಿದ್ದರೂ ಅವುಗಳನ್ನು ವಿನಾಯತಿಗಳಂತೆ ಆಕಸ್ಮಿಕಗಳಂತೆ ನೋಡಬೇಕಿತ್ತು. ಇಂದಿಗೂ ವಚನಗಳನ್ನು ಹೇಗೆ ಚರ್ಚಿಸಬೇಕು, ಚರ್ಚಿಸುವುದಿರಲಿ ಹೇಗೆ ಓದಬೇಕು ಎಂಬ ಬಗ್ಗೆ ಗೊಂದಲವಿರುವುದು ಇದೇ ಕಾರಣದಿಂದಾಗಿ ಎಂದುಕೊಂಡಿದ್ದೇನೆ. ಈ ದಾರಿಯನ್ನು ಬಿಟ್ಟು ಹೊರಳಲು, ಇಲ್ಲವೇ ನಮ್ಮದೇ ಹಾದಿಗಳನ್ನು ಕಟ್ಟಿಕೊಳ್ಳಲು ಅವಕಾಶಗಳಿದ್ದರೂ ಅದಕ್ಕೆ ಬೇಕಾದ ಕಸುವನ್ನು ಕಟ್ಟಿಕೊಳ್ಳುವುದು ಒಂದು ಸವಾಲಾಗಿಯೇ ಕಾಣುತ್ತಿತ್ತು. ನನ್ನ ಕೆಲವು ಜೊತೆಗಾರರರಾದರೂ ಈ ನಿಟ್ಟಿನಲ್ಲಿ ದಿಟ್ಟ ಹೆಜ್ಜೆಗಳನ್ನು ಇಟ್ಟು ಸಾಗಿದವರಾಗಿದ್ದಾರೆ. ಈಗಲೂ ಕನ್ನಡದ ಮೇಸ್ಟ್ರುಗಳನ್ನು ಈ ದೆವ್ವ ಕಾಡುವುದನ್ನು ನಿಲ್ಲಿಸಿಲ್ಲ.

ಭಾಷೆಯ ಮೈಯನ್ನು, ಕೃತಿಯನ್ನು ತಿಳಿಯುವ ಮೊದಲ ಮತ್ತು ಕೊನೆಯ ಪರಿಕರವನ್ನಾಗಿ ಬಳಸುವ ಹಾದಿಯಲ್ಲಿ ಸಾಗಿದ ಮೇಲೆ ಭಾಷೆಯೇ ಇಲ್ಲಿನ ಬರಹಗಳ ಮುಖ್ಯ ಭಿತ್ತಿಯಾಗುವುದನ್ನು ಕಾಣಬಹುದು. ಇಲ್ಲಿಂದ ಬರಹಗಳ ಮುಖ್ಯ ನೆಲೆ ಕೇವಲ ಭಾಷೆಯೇ ಆಗಿಬಿಟ್ಟಿವೆ. ಇದಕ್ಕೆ ನಾನು ಕೆಲಸ ಮಾಡತೊಡಗಿದ್ದ ಕನ್ನಡ ವಿಶ್ವವಿದ್ಯಾಲಯದ ವಾತಾವರಣ, ಹೊಣೆ ಮತ್ತು ಅಲ್ಲಿನ ಬೇಡಿಕೆಗಳೂ ಕಾರಣವಾಗಿರಬಹುದು. ಜೊತೆಗೆ ಕಳೆದ ಶತಮಾನದ ಕೊನೆಯ ದಶಕದಿಂದ ಮೊದಲಾಗಿ ಕನ್ನಡ ಭಾಷೆಯನ್ನು ಆತಂಕದಲ್ಲಿರುವ ನುಡಿಯೆಂದು ತಿಳಿದು ಚಿಂತಿಸುವ ಬಗೆ ಬಲವಾಗಿ ಬೇರೂರಿತು. ಅದನ್ನು ಹೀಗೆ ಹೇಳೋಣ. ಕನ್ನಡದಂತಹ ನುಡಿಗಳು ಮತ್ತು ಅದನ್ನು ಅವಲಂಬಿಸಿದ ಸಂಸ್ಕೃತಿಗಳು ಜಾಗತೀಕರಣದ ಉರುಬಿನಲ್ಲಿ ಎದುರಿಸುತ್ತಿರುವ ಬಿಕ್ಕಟ್ಟುಗಳು ಎಲ್ಲರ ಎದುರು ಸವಾಲಾಗಿ ನಿಂತಿವೆ. ಇವು ಕಲ್ಪಿಸಿಕೊಂಡ ಹೋರಾಟದ ನೆಲೆಗಳಲ್ಲ. ದಿಟವಾಗಿಯೂ ಎದುರಿಸುತ್ತಿರುವ ಬಿಕ್ಕಟ್ಟುಗಳು. ಈ ಬಿಕ್ಕಟ್ಟುಗಳಿಗೆ ಚಾರಿತ್ರಿಕ ಒತ್ತಡಗಳಿರುವಂತೆ ಜಾಗತಿಕವಾದ ಒತ್ತಡಗಳೂ ಕಾರಣವಾಗಿವೆ. ಇವೆಲ್ಲವನ್ನೂ ಅರಿಯುವುದು , ಅರಿಯಲು ಬೇಕಾದ ಪರಿಕರಗಳನ್ನು ಹುಡುಕಿಕೊಳ್ಳುವುದು ಇಂದಿನ ಅಗತ್ಯವಾಗಿದೆ.

ಎಲ್ಲಕ್ಕಿಂತ ಮೊದಲು ಅರಿಯಬೇಕಾದ ಸಂಗತಿಯೆಂದರೆ ದೂರದಿಂದ ಬಿರುಕುಗಳಿಲ್ಲದಂತೆ ಕಾಣುತ್ತಿದ್ದ ನೆಲೆಗಳು ಹತ್ತಿರ ಹತ್ತಿರ ಹೋಗುತ್ತಿದ್ದಂತೆ ಹಲವಾರು ಬಿರುಕುಗಳಿರುವ ರಚನೆಗಳೆಂದು ತೋರತೊಡಗಿದ್ದು. ಇದನ್ನು ಇಡೀ ಕನ್ನಡ ಸಂಸ್ಕೃತಿಗೆ ಹೊಂದಿಸಿಕೊಂಡು ನೋಡಬೇಕಾಗಿದೆ. ನಾವು ಹಕ್ಕುದಾರರೂ ಹೊಣೆಗಾರರೂ ಆಗಿರುವ ಚರಿತ್ರೆ ಮತ್ತು ಸಂಸ್ಕೃತಿಗಳು ವಾಸ್ತವವಾಗಿ ನಮ್ಮೆಲ್ಲರದ್ದೂ ಆಗಿರದೆ ಕೆಲವರ ಹೊಣೆ ಮತ್ತು ಹೊರೆಗಳನ್ನು ಎಲ್ಲರೂ ತಮ್ಮದೆಂದು ಹೊರುತ್ತಿರುವ ಬಗೆ ಢಾಳಾಗಿ ಕಾಣತೊಡಗಿತು. ಇದೆಲ್ಲವೂ ಮೊದಲಾದದ್ದು ಸಚಿವ ಬಿ.ಬಸವಲಿಂಗಪ್ಪನವರು ರಾಜ್ಯದಲ್ಲಿ ಮಲಹೊರುವ ಪದ್ಧತಿಯನ್ನು ಕಾನೂನಿನ ಮೂಲಕ ಬಹಿಷ್ಕರಿಸುವ ಯೋಜನೆಯನ್ನು ಕೈಗೊಂಡಾಗ. ಹಾಗೆ ಮಲಹೊರುವ ಪದ್ಧತಿಯನ್ನು ಮುಂದುವರೆಸುವುದು ಅಪರಾಧವೆಂದು ಹೇಳುವ

ಕಾನೂನು ಜಾರಿಗೆ ಬಂತಷ್ಟೆ ಈ ಕಾನೂನಿನ ಪರಿಣಾಮವಾಗಿ ಸಾಮಾಜಿಕ ಪಲ್ಲಟಗಳು ಮೊದಲಾದವು. ಈ ಪಲ್ಲಟಗಳು ನೇರವಾಗಿ ಈ ಕಾನೂನಿನ ಗುರಿಯಾಗಿದ್ದ ಅನಿಷ್ಟ ಪದ್ಧತಿಯೊಂದಕ್ಕೆ ಮಾತ್ರ ತಳುಕು ಹಾಕಿಕೊಂಡಿರಲಿಲ್ಲ. ದಲಿತರು ಹೊರುತ್ತಿದ್ದುದು ಸಮಾಜದ ತ್ಯಾಜ್ಯವನ್ನು. ಈ ಕಾನೂನು ಬದಲು ದಾರಿಯಿಂದ ಹೇಳಿದ್ದೇನು? ದಲಿತರು ತಮ್ಮದಲ್ಲದ ಹಾಗೂ ಇತರರು ತ್ಯಾಜ್ಯವೆಂದು ತಿಳಿದ ಪಾರಂಪರಿಕ ನೆಲೆಗಳಿಗೆ, ಹೊರೆಗಳಿಗೆ ಹಕ್ಕುದಾರರೂ ಅಲ್ಲ; ಹೊಣೆಗಾರರೂ ಅಲ್ಲವೆಂದು ಹೇಳಿದಂತಾಯ್ತು. ಅಲ್ಲವೆ? ಇದರ ಪರಿಣಾಮದಿಂದಾಗಿ ಕನ್ನಡ ಸಮಾಜದಲ್ಲಿ ಉಂಟಾದ ತಿಕ್ಕಾಟಗಳನ್ನು ನೋಡಿ. ಈ ಕಾನೂನು ಜಾರಿಯಾಗಿದ್ದು ಒಂದು ಸಂದರ್ಭವನ್ನು ಹುಟ್ಟುಹಾಕಿತು. ಆದರೆ ಒಳಗಿದ್ದ ಒಡಕುಗಳು ಆಗಲೇ ಹೇಳಿದಂತೆ ಹೊರಗೆ ಕಾಣತೊಡಗಿದ್ದರಿಂದ ತಿಕ್ಕಾಟಗಳು ಮೊದಲಾದವು. ಸಾಮಾಜಿಕವಾಗಿ ನಾವು ಕಲ್ಪಿಸಿಕೊಂಡಿದ್ದ ನಂಟಿನ ಜಾಲ ಹುಸಿಯಾಗಿತ್ತು. ಒಳಗಿನ ಹುನ್ನಾರಗಳು ಎದ್ದು ಕಾಣತೊಡಗಿದವು. ಕೆರೆ ಮೈದೆರೆದಾಗ ಏನೆಲ್ಲ ಕಾಣುವುದೋ ಅದು ಮೊದಲೇ ಅಲ್ಲಿ ಇದ್ದುದು ತಾನೆ. ಈ ಮಾತು ನಮಗಿಲ್ಲಿ ಮುಖ್ಯ. ಏಕೆಂದರೆ ಕನ್ನಡ ನುಡಿಯೂ ಕೂಡ ನಾವು ಆವರೆಗೆ ತಿಳಿದಂತೆ ಎಲ್ಲರ ಕನ್ನಡವಾಗಿರುವ ಬದಲು ಕೆಲವರ ಕನ್ನಡವೇ ಎಲ್ಲರ ಕನ್ನಡವೆಂದು ಸೋಗು ತೊಟ್ಟಿತ್ತೆಂಬುದು ಈಗ ಕಣ್ಣಿಗೆ ರಾಚತೊಡಗಿತ್ತು. ಇದೆಲ್ಲದರ ಹಿಂದಿನ ಸಾಂಸ್ಕೃತಿಕ ರಾಜಕಾರಣವನ್ನು ಸರಿಯಾದ ನಿಟ್ಟಿನಲ್ಲಿ ಅರಿಯುವುದು ಇಂದಿನ ಅಗತ್ಯವಾಗಿದೆ. ಕಳೆದ ಇಪ್ಪತ್ತು ವರುಷಗಳಿಂದ ಬರೆದದ್ದರಲ್ಲಿ ನಾನು ಈ ನೆಲೆಯಲ್ಲಿ ಹೆಜ್ಜೆಗಳನ್ನು ಇಡಲು ಬಯಸಿದ್ದೇನೆಂದು ತೋರುತ್ತಿದೆ.

ಕನ್ನಡ ಬದುಕು ವ್ಯಕ್ತಿಗಳನ್ನು ಅತಿಯಾಗಿ ಹಚ್ಚಿಕೊಳ್ಳುತ್ತದೆ. ಏನನ್ನೇ ಆಗಲಿ ಅದನ್ನು ಯಾರು ಹೇಳಿದರು ಎಂಬುದು ಮುಖ್ಯವಾಗುತ್ತದೆಯೇ ಹೊರತು ಹೇಳಿದ್ದು ಏನು ಎಂಬುದು ಹಿಂದಕ್ಕೆ ಸರಿಯುತ್ತದೆ. ಇದನ್ನು ಕರ್ತೃವನ್ನು ಕಟ್ಟಿಕೊಳ್ಳುವುದು ಎಂದು ಬೇರೆಲ್ಲೋ ಕರೆದಿದ್ದೇನೆ. ಮಾಡಿದ ಕೆಲಸಗಳು ಹಿಂದಕ್ಕೆ ಸರಿದು, ಅದನ್ನು ಮಾಡಿದವರು ಕರ್ತೃಗಳಾಗಿ ಬಿಡುತ್ತಾರೆ. ಇದರಲ್ಲಿ ತಪ್ಪೇನೂ ಇಲ್ಲವಾದರೂ ಕೆಲವೊಮ್ಮೆ ಹೀಗೆ ಕರ್ತೃತ್ವ ದೊರಕಿದ ಮೇಲೆ ವ್ಯಕ್ತಿಗಳ ಎಲ್ಲ ಕೆಲಸಗಳಿಗೂ ಕನ್ನಡ ಬದುಕು ಹೆಚ್ಚಿನ ಮನ್ನಣೆಯನ್ನು ನೀಡ ತೊಡಗುತ್ತದೆ. ಇದೊಂದು ಅಪಾಯಕಾರಿ ಸ್ಥಿತಿ ಎಂದೇ ನನ್ನ ತಿಳುವಳಿಕೆ. ಈ ಅಪಾಯಗಳಿಗೆ ತುತ್ತಾದ ಜೀವನಕ್ರಮಗಳು ಎದುರಿಸುತ್ತಿರುವ ಬಿಕ್ಕಟ್ಟುಗಳನ್ನು ನಾವು ಕಂಡಿದ್ದೇವೆ. ಪ್ರಜಾಪ್ರಭುತ್ವವನ್ನು ಒಪ್ಪಿ ಆಚರಿಸಹೊರಡುವವರು ಇದರಿಂದ ಕಲಿಯಬೇಕಾದ ಪಾಠ ಇದೆ. ಈ ಮಾತನ್ನು ಇಲ್ಲಿ ಹೇಳಿದ್ದಕ್ಕೆ ಕಾರಣಗಳಿವೆ. ಏಕೆಂದರೆ ಈಗ ನಮ್ಮ ತಿಳಿವಿನ ಬದುಕು ಒಂದು ಬಿಕ್ಕಟ್ಟಿನಲ್ಲಿದೆ. ಕರ್ತೃತ್ವ ಪಡೆದವರು– ಅವರು ಸಾಹಿತಿಗಳಾಗಿರಲಿ, ರಾಜಕಾರಣಿಗಳಾಗಿರಲಿ, ಸಂಸ್ಕೃತಿ ಚಿಂತಕರಾಗಿರಲಿ, ಉದ್ಯಮಿಗಳಾಗಿರಲಿ, ದರೋಡೆಕೋರರಿರಲಿ, ಮಾಫಿಯಾ ದೊರೆಗಳಿರಲಿ ಮತ್ತೇನೋ ಆಗಿರಲಿ ಅವರು ನುಡಿದದ್ದು ಮತ್ತು ಬರೆದದ್ದು ಮನ್ನಣೆಯನ್ನು ಪಡೆದುಬಿಡುತ್ತದೆ. ಆದರೆ ಅಪಾಯದ ಮೊಳಗು ಬೇರೆಲ್ಲೋ ಇದೆ. ಏಕೆಂದರೆ ಈಗ ಮಾತಾಡುವವರ ಎದುರು ಜನರಿಲ್ಲ; ಕನ್ನಡಿಗಳಿವೆ. ಬರೆಯುವವರು ಈಗ ಏಕಾಂತ ಮತ್ತು ಮೌನದ

ಸಾಹಚರ್ಯವನ್ನು ಪಡೆದಿಲ್ಲ; ಅವರ ಕಣ್ಣು ಕಿವಿಗಳಿಗೆ ಜನರ ಸಂದಣಿ ಮತ್ತು ಮೊಳಗುಗಳು ಕೇಳುತ್ತಿವೆ. ಇದನ್ನೇ ನಾನು ಅಪಾಯಕಾರಿ ಅವಸ್ಥೆ ಎಂದು ನಾನು ತಿಳಿದಿರುವೆ. ಈಗ ನುಡಿದದ್ದು ಬರೆದದ್ದು ಚಲಾವಣೆಯ ನಾಣ್ಯಗಳಾಗದೆ ತಿಜೋರಿಯಲ್ಲಿ ಭದ್ರವಾಗ ತೊಡಗುತ್ತವೆ. ಕನ್ನಡ ಬದುಕು ಎದುರಿಸುತ್ತಿರುವ ಈ ಬಿಕ್ಕಟ್ಟನ್ನು ಚಿಕ್ಕವರು ತಿಳಿಯತೊಡಗಿದ್ದಾರೆ. ಹೊರಬರಲು ದಾರಿಗಳಿಗಾಗಿ ತಡಕಾಡುತ್ತಿದ್ದಾರೆ. ಇಂತಹ ಹೊತ್ತಿನಲ್ಲಿ ಈ ಬರಹಗಳು ಮತ್ತೊಮ್ಮೆ ಒಗ್ಗೂಡಿ ಅಚ್ಚಾಗುತ್ತಿವೆ. ಇವು ಚಲಾವಣೆಗೆ ಬರುತ್ತವೋ ಇಲ್ಲವೇ ತಿಜೋರಿಯಲ್ಲಿ ಕೊಳೆಯುತ್ತವೋ ಕಾಯ್ದು ನೋಡಬೇಕು.

ಈ ಬರಹಗಳು ಸುಮಾರು ನಲವತ್ತು ವರುಷಗಳ ಹರಹಿನಲ್ಲಿ ಮೈತಳೆದಿವೆ. ಇದೇ ಕಾರಣವಾಗಿ ಬರಹಗಳ ಮಂಡನೆಯ ಬಗೆಯಲ್ಲಿ ಹಲವು ದಾರಿಗಳು ಕಾಣುವುದು ಸಹಜವೇ ಆಗಿದೆ. ಕೆಲವೊಮ್ಮೆ ಯಾವುದೋ ಪೂರ್ವಪಕ್ಷವನ್ನು ಊಹಿಸಿಕೊಂಡು ಉತ್ತರಕೊಡುವ ನೆಲೆ ಕಂಡು ಬಂದರೆ, ಮತ್ತೆ ಕೆಲವೊಮ್ಮೆ ಹೊಸದನ್ನು ಹೇಳಲೇಬೇಕೆಂಬ ಹಂಬಲವೇ ಮೆರೆಯುತ್ತಿರುವಂತೆ ತೋರಬಹುದು. ಮತ್ತೆ ಕೆಲವು ಬರಹಗಳು ಒಮ್ಮೆ ಹೇಳಿದ್ದನ್ನೆ ಬೇರೆ ಮಾತುಗಳಲ್ಲಿ ಮತ್ತೊಮ್ಮೆ ಹೇಳುವಂತೆಯೂ ಇವೆ. ಬಳಸುವ ಭಾಷೆಯೂ ಕೂಡ ಹೀಗೆ ಏರುಪೇರಿನಿಂದ ಕೂಡಿದೆ. ಎಷ್ಟು ಬೇಕೋ ಅಷ್ಟು ಮಾತ್ರ (ಕೆಲವೊಮ್ಮೆ ಬೇಕಾದ್ದಕ್ಕಿಂತಲೂ ಕಡಿಮೆ) ಹೇಳುವ ನೆಲೆ ಕಂಡು ಬಂದರೆ ಮತ್ತೆ ಕೆಲವೊಮ್ಮೆ ಒಪ್ಪಿಸುವ ಹಠದಿಂದ ಹರಡಿಕೊಂಡ ಬಗೆಯ ಮಂಡನೆ ಕಾಣುವುದೂ ಉಂಟು. ಅಲ್ಲಲ್ಲಿ ಪ್ರವಾದಿತನದ ಸೋಗು ಕೂಡ ನುಸುಳಿದ್ದರೆ ಅಚ್ಚರಿಯಿಲ್ಲ. ಅಲ್ಲದೆ ಈ ಬರಹಗಳನ್ನು ಅವುಗಳನ್ನು ಬರೆದ ಕಾಲಕ್ಕೆ ಅನುಗುಣವಾಗಿ ಜೋಡಿಸಿಲ್ಲ. ಇದರಿಂದಲೂ  ಇವುಗಳ ನಂಟು ಮತ್ತಷ್ಟು ಜಟಿಲವಾಗಿರಲೂಬಹುದು. ಹೀಗೆ ಮಾಡುವುದಲ್ಲದೆ ನನಗೆ ಬೇರೆ ದಾರಿ ಇರಲಿಲ್ಲ. ಬೇರೆಯವರು ಬರೆದ ಕೆಲವು ಬರಹಗಳನ್ನು ಕನ್ನಡದ ಸಂದರ್ಭದಲ್ಲಿ ಓದುವುದು ಅಗತ್ಯ ಎಂದು ತಿಳಿದದ್ದರಿಂದ ಅಂತಹ ಮೂರ್‍ನಾಲ್ಕರ ಅನುವಾದ ರೂಪಗಳನ್ನು ಇಲ್ಲಿ ಉಳಿಸಿಕೊಂಡಿದ್ದೇನೆ

ಇನ್ನು ಈ ಒಗ್ಗೂಡಿಸಿದ ಹೊತ್ತಗೆಗಳಿಗೆ 'ತೊಂಡುಮೇವು' ಎಂದು ಹೆಸರಿಟ್ಟುದೇಕೆ? ಹೆಸರಿಸುವಾಗ ಹುಬ್ಬುಗಂಟಿಕ್ಕುವಂತೆ ಇರಬಾರದು ಎಂಬುದು ಮೊದಲ ಮಾತು. ಅಲ್ಲದೆ ನಿಡುಗಾಲದಿಂದ ಬೇಂದ್ರೆಯವರ ಕವಿತೆಯ ಸಾಲೊಂದು ನನ್ನ ಬೆನ್ನೇರಿದೆ. ಅವರ ನಭೋವಾಣಿ ಸಂಕಲನದ 'ನವ ವಿಸರ್ಗ' ಕವಿತೆಯ ಸಾಲುಗಳಿವು. **'ನಕ್ಷೆಯನು ಹಿಡಿದು ತಡಕಾಡಬೇಡ ನಕ್ಷತ್ರ ಮಾರ್ಗವನ್ನು/ ತೊಂಡುಮೇವರಿಗೆ ಹಾದಿ ಕೇಳದಿರು, ಹತ್ತು ದುರ್ಗವನ್ನು'**. ಈ ಸಾಲುಗಳಲ್ಲಿದ್ದ ತೊಂಡುಮೇ(ಯು) ಎಂಬ ಕೆಲಸಪದ ನನ್ನನ್ನು ಕಾಡುತ್ತಿದೆ. ಇದರ ತಿರುಳೇನಾದರೂ ಇರಲಿ. ತೊಂಡುಮೇ(ಯು) ಎಂಬ ಈ ಕೆಲಸಪದವನ್ನು ಹೆಸರುಪದವನ್ನಾಗಿ ಇಲ್ಲಿ ಬದಲಿಸಿಕೊಂಡು  ತೊಂಡುಮೇವು ಎಂದು ಮಾಡಿಕೊಂಡದ್ದಕ್ಕೂ ಕಾರಣಗಳಿವೆ. ಬೇಂದ್ರೆಯವರು ದುರ್ಗ ಹತ್ತುವವರಿಗೆ ಅವರ ಹಾದಿಯನ್ನು ಅವರೇ ಕಂಡುಕೊಳ್ಳಬೇಕೆಂದೂ, ಅಲ್ಲಲ್ಲಿ ತೊಂಡುಮೇವರು ಇದ್ದರೂ ಅಂತಹವರಲ್ಲಿ ಹಾದಿ ಕೇಳುವುದು ಬೇಡವೆಂದೂ ಹೇಳಿದ್ದಾರೆ. ಮೊದಲ

ಸಾಲಿನಲ್ಲಿ ನಕ್ಷತ್ರ ಮಾರ್ಗ ಮತ್ತು ನಕ್ಷೆಗಳಿಗೆ ಇರುವ ನಂಟನ್ನು ಹೇಳಿದ್ದಾರಷ್ಟೆ. ಕವಿ ನೀಡುವ ಎಚ್ಚರಿಕೆಯೇ ನಮ್ಮ ಬದುಕಿನ ಒಂದು ವಿಪರ್ಯಾಸವನ್ನು ಹೇಳುವಂತಿದೆ. ನೀವು ನಕ್ಷೆಯನ್ನೂ ತೊರೆಯಲಾರಿರಿ; ತೊಂಡುಮೇವರನ್ನೂ ಕಡೆಗಣಿಸಲಾರಿರಿ. ಅವು ನಮ್ಮೊಡನೆ ಇರುವಂತಹವೇ ಆಗಿವೆ. ನಮ್ಮೆಲ್ಲರ ಬರೆಹಗಳು ಹೀಗೆ ನಕ್ಷೆಗಳೋ ತೊಂಡುಮೇವರು ತೋರಿಸುವ ಪರಿಚಿತ ಒಳದಾರಿಗಳೋ ಆಗಿದ್ದರಬಹುದು. ಅಲ್ಲವೇ? ಹಾಗಾಗಿ ಈ ಬರಹಗಳನ್ನು ತೊಂಡುಮೇವು ಎಂದು ಕರೆಯಲು ಮುಂದಾದೆ.

ಇದೂ ಅಲ್ಲದೆ ನನ್ನ ಹಾಗೆ ನನ್ನ ಹಲವು ಸರೀಕರ ಹುಡುಕಾಟವೂ ಒಂದು ಗೊತ್ತಾದ ಕಣ್ಣುಕಟ್ಟಿದ ಹಾದಿಯಲ್ಲಿ ಸಾಗಿಲ್ಲ. ಹೀಗೆ ಸಿಕ್ಕಿದಕಡೆಗೆ ನುಗ್ಗಿ ಸಿಕ್ಕಿದ್ದನ್ನು ತಿಂದು, ಸಿಕ್ಕಿಬಿದ್ದರೆ ಒದೆ ತಿಂದು ಸಾಗಿ ಬಂದಿದ್ದೇವೆ. ಇದು ನಮ್ಮ ಆಯ್ಕೆಯಾಗಿತ್ತೋ ಅಥವಾ ಇದನ್ನು ನಮ್ಮ ಆಯ್ಕೆಯನ್ನಾಗಿ ಮಾಡಿಕೊಳ್ಳುವ ಒತ್ತಾಯವಿತ್ತೋ ಎಂಬುದನ್ನು ಕಡ್ಡಿ ಮುರಿದಂತೆ ಹೇಳಲಾರೆ. ಆದರೆ ಈ ಹಾದಿಯ ಏರುಪೇರುಗಳೇನೇ ಇರಲಿ, ಸಾಗಿಬಂದಾಗ ದೊರಕಿದ ಉಲ್ಲಾಸವನ್ನು ನಿರಾಕರಿಸುವುದು ಆಗದ ಮಾತು. ಈ ಕಾರಣದಿಂದಲೂ ಈ ಎಲ್ಲ ಬರಹಗಳ ಕಟ್ಟಿಗೆ **ತೊಂಡುಮೇವು** ಎಂದು ಹೆಸರಿಸಲು ಹಿಂಜರಿಕೆ ಉಂಟಾಗಿಲ್ಲ.

**ಕೈಮುಗಿವೆ**

ಎಷ್ಟುಜನರಿಗೆ ಕೈಮುಗಿಯುವುದು? ಯಾರನ್ನು ಬಿಟ್ಟರೂ ಈ ಬೈರೇಗೌಡರನ್ನು ಮಾತ್ರ ಬಿಡುವಂತಿಲ್ಲ. ಇವರು ಅದು ಹೇಗೆ ನನಗೆ ಬಲ್ಲವರಾದರೋ ತಿಳಿಯದು. ಮುಗಿಬಿದ್ದು ಮೈದುಂಬಿದಂತೆ ಈ ಕೆಲಸ ಮಾಡಿದ್ದಾರೆ. ಈ ಬರಹಗಳನ್ನು ನಾನು ಒಗ್ಗೂಡಿಸಿ ಕೊಡಲಿಲ್ಲ. ಎಲ್ಲೆಲ್ಲಿಂದಲೋ, ಯಾರು ಯಾರಿಂದಲೋ ತಾವೇ ಹುಡುಕಿ ಜೋಡಿಸಿಕೊಂಡಿದ್ದಾರೆ. ಕೆಲವನ್ನು ಕಸದ ಬುಟ್ಟಿಯಿಂದಲೂ ತೆಗೆದಿರಬೇಕು.(ಅಂತಹವು ಅಲ್ಲೇ ಇರಬೇಕಿತ್ತು ಎಂದು ಓದುವ ನಿಮ್ಮಲ್ಲಿ ಕೆಲವರಿಗಾದರೂ ಅನ್ನಿಸೀತು) ಈ ಒತ್ತಾಸೆ ಯಾರಿಗೆ ದೊರಕುತ್ತದೆ? ಅವರಿಗೆ ಶರಣು ಎಂದು ಕೈಮುಗಿಯುತ್ತೇನೆ. ಇನ್ನು ತಂಪು ಹೊತ್ತಿನಲ್ಲಿ ನೆನೆಯಬೇಕಾದವರ ಪಟ್ಟಿ ಬಲು ದೊಡ್ಡದು. ಅವರನ್ನು ಹೆಸರಿಸಿದರೆ ಕೆಲವರಿಗೆ ಮುಜುಗರ, ಕೆಲವರಿಗೆ ಕೋಪ, ಕೆಲವರಿಗೆ ನಗು ಮತ್ತು ಕೆಲವರು ನನ್ನೊಡನೆ ಮಾತು ಬಿಟ್ಟರೂ ಬಿಟ್ಟರೆ. ಹೀಗೆ ಬಗೆಬಗೆಯಲ್ಲಿ ಅವರು ಪ್ರತಿಕ್ರಿಯೆ ತೋರುತ್ತಾರೆ. ಅವರೆಲ್ಲರೂ ನನ್ನೊಳಗೆ ಇದ್ದಾರಾಗಿ ಬೇರೆಯಾಗಿ ಅವರನ್ನು ಹೆಸರಿಸುವುದನ್ನೇ ಕೈಬಿಟ್ಟಿದ್ದೇನೆ.

ಆದರೆ ಎರಡು ಸಂಸ್ಥೆಗಳನ್ನು ಹೆಸರಿಸಲೇ ಬೇಕು. ನಾನು ಬರೆಯಲು ಕಾರಣವಾದದ್ದು ಬೆಂಗಳೂರು ವಿಶ್ವವಿದ್ಯಾಲಯದ ಅಧ್ಯಯನ ಕೇಂದ್ರ ಮತ್ತು ಕನ್ನಡ ವಿಶ್ವವಿದ್ಯಾಲಯ. ಇವೆರಡೂ ಸಂಸ್ಥೆಗಳು ಬರೆಯಲು ಒತ್ತಾಸೆ ನೀಡಿದ್ದು ಮಾತ್ರವಲ್ಲದೆ ಬರಹಕ್ಕೆ ಯಾವ ಕಡಿವಾಣವನ್ನೂ ಹಾಕಲಿಲ್ಲ ಎಂಬುದನ್ನು ನೆನೆದುಕೊಳ್ಳಬೇಕು. ಪ್ರಜಾವಾಣಿ, ಉದಯವಾಣಿ, ವಿಜಯ ಕರ್ನಾಟಕ, ಸುಧಾ, ತರಂಗ, ವಿಶ್ರಾಂತ ಕರ್ನಾಟಕ, ಮಯೂರ,

ಸಾಕ್ಷಿ, ಅಂಕಣ, ಸಂಚಯ, ಶೂದ್ರ, (ಈ ಪತ್ರಿಕೆಯ ಸಂಪಾದಕರಾದ ಹೆಸರಾಂತ ಗೆಳೆಯ ಶ್ರೀನಿವಾಸ್ ಅವರನ್ನು ಹೆಚ್ಚಾಗಿ ನೆನೆಯಬೇಕು. ಕುತ್ತಿಗೆಯ ಮೇಲೆ ಕುಳಿತು ಬರೆಸಿದ್ದು ಮಾತ್ರವಲ್ಲದೆ ಅವುಗಳನ್ನು ತಮ್ಮದೇ ಆದ ಬಗೆಯಲ್ಲಿ ಅಚ್ಚು ಮಾಡಿ ಹಲವು ಬಾರಿ ನನಗೇ ಗಾಬರಿಯಾಗುವಂತೆ ಮಾಡಿದ್ದಾರೆ. ಆ ಪುರಾಣ ಬೇರೊಮ್ಮೆ ಹೇಳುವೆ.) ರುಜುವಾತು, ಸಮುದಾಯ ವಾರ್ತಾಪತ್ರ, ಮುಕ್ತ ಹೀಗೆ ಹಲವು ಪತ್ರಿಕೆಗಳ ಗೆಳೆಯರು ಇಲ್ಲಿನ ಹಲವು ಬರಹಗಳಿಗೆ ಮತ್ತು ಅವು ಬೆಳಕು ಕಾಣುವುದಕ್ಕೆ ಕಾರಣರಾಗಿದ್ದಾರೆ.

ಬಿ ರಿಪೋರ್ಟುಗಳ ಹಿಂದಕ್ಕೆ ಪಡೆದ ಈ ಹಳೆಯ ಕೇಸುಗಳನ್ನು ನೀವೀಗ ಮರುಪರಿಶೀಲನೆಗೆ ಗುರಿಪಡಿಸಿರಿ. ಈ ಬರಹಗಳಲ್ಲಿ ಕೆಲವಾದರೂ ಚಿಕ್ಕವರಲ್ಲಿ ಚರ್ಚೆಗೆ ಕಾರಣವಾದರೆ ಅದಕ್ಕಿಂತ ಸಂತಸ ನನಗೆ ಬೇರೊಂದಿಲ್ಲ. ಮೆಚ್ಚುಗೆ, ಹೊಗಳಿಕೆ ನಾನು ಅಷ್ಟು ಪಡುವುದಿಲ್ಲ. ಯಾರೋ ಎಲ್ಲೋ ಹೇಳಿದ ಮಾತನ್ನು ನೆನೆಯುವುದಾದರೆ ಹೊಗಳಿಕೆ ಪೂಸಿಕೊಳ್ಳುವ ಡಿಯೋಡರೆಂಟ್ ಇದ್ದಹಾಗೆ. ಈ ಪೂಸಿಕೊಂಡದ್ದು ದಿಟವನ್ನು ಮರೆ ಮಾಡಿಹುಸಿಯನ್ನು ಮುಂಚೂಣಿಗೆ ತಂದು ಬಿಡುತ್ತದೆ ಅಲ್ಲವೇ? ಇನ್ನು ಎಲ್ಲವೂ ನಿಮಗೆ ಸೇರಿದ್ದು.

**ಕೆ.ವಿ. ನಾರಾಯಣ**

## ತೊಂಡುಮೇವು ಕಂತೆಗಳ ಹೊರೆಹೊತ್ತು...

ಮೂರು ವರ್ಷಗಳ ಹಿಂದಿನ ಮಾತು. ಕೆ.ವಿ.ಎನ್. ಮೇಷ್ಟ್ರು ಮೈಸೂರಿನಲ್ಲಿದ್ದರು. ಸಕಲ ಪುರಾತನರೆಂದು ನಾವೆಲ್ಲ ಪ್ರೀತಿಯಿಂದ ಕರೆಯುವ ಪ್ರೊ. ಶಿವರಾಮಯ್ಯ, ಯಂಗ್ ರುದ್ರ ಎಂದೇ ಖ್ಯಾತಿ ಪಡೆದ ಕೆ.ವೈ.ಎನ್. ಮತ್ತು ನಾನು ಮೂವರೂ ಕೂಡಿ ಡಾ. ಎಲ್. ಬಸವರಾಜು ಅವರನ್ನು ಪಂಪನ ಆದಿಪುರಾಣ ಪುಸ್ತಕ ಬಿಡುಗಡೆಗೆ ಆಮಂತ್ರಿಸಲು ಹೋಗಿದ್ದಾಗ ಕೆ.ವಿ.ಎನ್. ಮೇಷ್ಟ್ರ ಮನೆಗೂ ಭೇಟಿ ನೀಡಿದೆವು. ಕೆ.ವಿ.ಎನ್. ಬರವಣಿಗೆಯನ್ನು ಒಂದು ಕಡೆ ತಂದರೆ! ಬಯಕೆಯನ್ನು ಹತ್ತಿಕ್ಕಲಾರದೆ ಕೇಳಿಯೇಬಿಟ್ಟೆ, ನೋಡುವ ಎಂದಷ್ಟೇ ಕೆ.ವಿ.ಎನ್. ಹೇಳಿದರು. ಮೈಸೂರಿಗೆ ಹೋದಾಗಲೆಲ್ಲ ಸಿ.ಐ.ಐ.ಎಲ್.ನಲ್ಲಿ ಮೇಷ್ಟ್ರನ್ನ ಭೇಟಿಯಾಗುತ್ತಿದ್ದೆ. ಅಲ್ಲಿಯೂ ಪ್ರಕಟಣೆಯ ವಿಷಯ ಮಾತನಾಡಲು ಸಾಧ್ಯವಾಗಲೇ ಇಲ್ಲ. ಮತ್ತೊಮ್ಮೆ ಮೇಷ್ಟ್ರ ಮನೆಗೆ ಡಾ. ಶಿವಪ್ಪ ಅವರೊಡನೆ ಹೋದಾಗ ಪಟ್ಟುಬಿಡದೆ, ಸರ್ ನಿಮ್ಮೆಲ್ಲ ಬರವಣಿಗೆಯನ್ನು ಒಂದೆಡೆ ಕಲೆಹಾಕಿ ತರೋಣ, ಒಪ್ಪಿಗೆ ಕೊಡಿ ಎಂದು ದುಂಬಾಲು ಬಿದ್ದೆ. ಹಸಿರು ನಿಶಾನೆ ತೋರಿದರು. ಈ ಕಾರ್ಯಕ್ಕೆ ಒತ್ತಾಸೆಯಾಗಿ ನಿಂತವರು ಶ್ರೀಮತಿ ಮೇಡಂ. ಕೆ.ವಿ.ಎನ್. ಮೇಷ್ಟ್ರು, ಶ್ರೀಮತಿ ಮೇಡಂ ಇಬ್ಬರಿಗೂ ಅನಂತಾನಂತ ನಮನಗಳು.

ಡಾ. ಕೆ.ವೈ.ಎನ್., ಪ್ರೊ. ಶಿವಪ್ಪ ಮುಂತಾದವರು ಸೇರಿ ವಿವೇಕ ಬಳಗದ ಮೂಲಕ ಪ್ರಕಟಿಸಿದ್ದ ಬೇರು ಕಾಂಡ ಚಿಗುರು ಪುಸ್ತಕದ ಅಕ್ಷರ ಜೋಡಣೆಯಾಯ್ತು. ಸಂಚಯದ ಡಿ.ವಿ. ಪ್ರಹ್ಲಾದ್, ಪುಸ್ತಕ ಮನೆ ಖ್ಯಾತಿಯ ಚಿಂತಕ ಹರಿಹರಪ್ರಿಯ, ಶೂದ್ರ ಪತ್ರಿಕೆಯ ಶ್ರೀನಿವಾಸ್, ಅನ್ವೇಷಣ ಪತ್ರಿಕೆಯ ಆರ್.ಜಿ. ಹಳ್ಳಿ ನಾಗರಾಜ್ ಅವರ ಮನೆಗಳಲ್ಲಿದ್ದ ಅಂಕಣ, ಶೂದ್ರ, ಸಂಚಯ, ಮುಕ್ತ, ಸಮುದಾಯ ವಾರ್ತಾಪತ್ರ ಹೀಗೆ ಹಲವು ಮೂಲಗಳಿಂದ ಕೆ.ವಿ.ಎನ್. ಬರೆಹಗಳನ್ನು ಕಲೆಹಾಕಿದ್ದಾಯ್ತು. ಮೇಲೆ ಹೆಸರಿಸಿರುವ ಎಲ್ಲ ಮಹನೀಯರಿಗೂ ನಮಸ್ಕಾರಗಳು.

ಹಂಪಿ ಕನ್ನಡ ವಿಶ್ವವಿದ್ಯಾಲಯದ ಡಾ. ಅಶೋಕ ಕುಮಾರ್ ರಂಜರೆ, ಡಾ. ಪಿ. ಮಹಾದೇವಯ್ಯ, ಡಾ. ಸುಜ್ಞಾನಮೂರ್ತಿ, ರವೀಂದ್ರ,

ರಾಜಶೇಖರ್, ಶಿವಮೊಗ್ಗದ ಡಿ.ಎಸ್. ನಾಗಭೂಷಣ, ಬೆಂಗಳೂರಿನ ಡಾ. ಬಸವರಾಜ ಕಲ್ಗುಡಿ, ಎಂ.ಎಸ್. ಆಶಾದೇವಿ, –ಹೀಗೆ ತೊಂಡುಮೇವು ಸಂಪುಟಗಳು ರೂಪಗೊಳ್ಳುವಲ್ಲಿ ನೆರವಾದವರು ಅನೇಕರು. ಅಭಿನವ ರವಿಕುಮಾರ್ ಧ್ವನ್ಯಾಲೋಕ ಮತ್ತು ಅಂಕೆ ತಪ್ಪಿದ ಆರ್ಥರೋ ಊಯಿ ಕೃತಿಗಳ ಸಾಫ್ಟ್ ಮತ್ತು ಹಾರ್ಡ್ ಕಾಪಿ ನೀಡಿ ಸಹಕರಿಸಿದರು. ಎಲ್ಲರನ್ನೂ ಗೌರವದಿಂದ ಸ್ಮರಿಸುವೆ.

ಡಾ. ಸಿ.ಪಿ. ನಾಗರಾಜ್, ಡಾ. ರಾಮಲಿಂಗಪ್ಪ ಟಿ. ಬೇಗೂರು, ಡಾ. ರಂಗನಾಥ ಕಂಟನಕುಂಟೆ, ಶ್ರೀ ಜಯಶಂಕರ್, ಪ್ರದೀಪ್ ಮಾಲ್ಗುಡಿ, ಬ್ರಹ್ಮಾನಂದ್ ಇವರೆಲ್ಲರೂ ಕರಡು ತಿದ್ದುವಲ್ಲಿ ನೆರವಾಗಿದ್ದಾರೆ. ಅವರ ಸೇವೆಯನ್ನು ಕೃತಜ್ಞತಾಪೂರ್ವಕ ಸ್ಮರಿಸುತ್ತೇನೆ.

ಕಳೆದ ಏರಡು ತಿಂಗಳುಗಳಿಂದ ಬೇರೆಲ್ಲಾ ಕೆಲಸಗಳನ್ನೂ ಬದಿಗಿಟ್ಟು ಒಂದು ವ್ರತದಂತೆ ನನ್ನೊಡನೆ ತೊಡಗಿಸಿಕೊಂಡಿರುವ ಡಾ. ಆರ್. ಚಲಪತಿ ಅವರಿಗೆ ಹೇಗೆ ಕೃತಜ್ಞತೆ ಸಲ್ಲಿಸಲಿ?

ಕೆ.ವಿ.ಎನ್. ಅವರ ತೊಂಡುಮೇವು ಸರಣಿಗೆ ಮುಖಪುಟ ಬರೆದ ಸುಧಾಕರ ದರ್ಬೆ, ಡಿ.ಟಿ.ಪಿ. ಮಾಡಿದ ಬಿ.ಕೆ. ಶೋಭಾರಾಣಿ, ಮಂಗಲಾ ಗಣೇಶ್, ಸವಿತಾ, ಜೋಸ್ಪಿನ್, ಸಿಸಿಲಿಯಾ ಎಲ್ಲರನ್ನು ನೆನೆವೆ. ಮುದ್ರಣ ಕಾರ್ಯದ ಜವಾಬ್ದಾರಿ ಹೊತ್ತ ವಿಶ್ವಾಸ್ ಪ್ರಿಂಟ್ಸ್ ಮತ್ತು ಸ್ನೇಹ ಪ್ರಿಂಟ್ಸ್ ಮಾಲೀಕರಾದ ಟಿ.ಎಲ್. ವೆಂಕಟೇಶ ಮತ್ತು ಮಂಜುನಾಥ್, ಡಿ.ಟಿ.ಪಿ. ವಿಭಾಗದ ಪೂರ್ಣಿಮಾ, ವಿ. ರಾಜ್ ಇವರುಗಳ ಸಹಕಾರವನ್ನು ಸ್ಮರಿಸದಿರಲಾರೆ.

ಕೆ.ವಿ.ಎನ್. ಅವರ ಈವರೆಗಿನ ಬರೆಹಗಳನ್ನು ಒಂದೆಡೆ ಕಲೆಹಾಕಿ ತೊಂಡುಮೇವು ಹೆಸರಿನಲ್ಲಿ ಒಂಬತ್ತು ಕಂತೆಗಳನ್ನು ಕಟ್ಟಿಕೊಟ್ಟಿದ್ದೇನೆಂಬ ಹೆಮ್ಮೆ ನನ್ನದು. ನನ್ನ ಸಂತೋಷಕ್ಕೆ ಕಾರಣರಾದ ಎಲ್ಲರಿಗೂ ಕೃತಜ್ಞನಾಗಿದ್ದೇನೆ.

**ಎಂ. ಬೈರೇಗೌಡ**

# ಪರಿಷ್ಕೃತ ಮುದ್ರಣ ಕುರಿತು

ತೊಂಡು ಮೇವು ಎಂಬ ಹೆಸರಿನಲ್ಲಿ ಬರಹಗಳ ಒಂಬತ್ತು ಸಂಪುಟಗಳನ್ನು 2010ರಲ್ಲಿ ಹೊರತರಲಾಗಿತ್ತು. ಈಗ ಹತ್ತನೆಯ ಸಂಪುಟವನ್ನು ನಿಮ್ಮ ಮುಂದೆ ಇಡಲಾಗುತ್ತಿದೆ. ಜೊತೆಗೆ ಹಿಂದಿನ ಒಂಬತ್ತು ಸಂಪುಟಗಳನ್ನು ಕೊಂಚ ಬದಲಾವಣೆಗಳೊಂದಿಗೆ ಮತ್ತೆ ಅಚ್ಚು ಮಾಡಿ ಪ್ರಕಟಿಸಲಾಗುತ್ತಿದೆ. ಈ ಹತ್ತು ವರುಶಗಳಲ್ಲಿ ಆಗಿರುವ ಬದಲಾವಣೆಯೊಂದಿದೆ. ಆಗ ಅಲ್ಲಿಯವರೆಗೆ ಬರೆದಿದ್ದರ ಬಗೆಗೆ ನಂಬಿಕೆ ಕಡಿಮೆಯಾಗಿತ್ತು. ಈಗ ಬರೆಯುವುದರ ಬಗೆಗೇ ನಂಬಿಕೆ ಕಡಿಮೆಯಾಗಿದೆ. ಇದು ಸಿನಿಕತನವೆಂದು ಅನಿಸಲೂಬಹುದು. ಆದರೆ ನನಗೆ ಹಾಗನ್ನಿಸುತ್ತಿಲ್ಲ. ಬರವಣಿಗೆಯನ್ನು ಅದರ ತಾಳಿಕೆಯ ಗುಣಕ್ಕಾಗಿಯೇ ಒಪ್ಪಿಕೊಳ್ಳುವ ಕಾಲವೊಂದಿತ್ತು. ಈಗ ಹಾಗಿಲ್ಲ. ಬರೆದದ್ದು ಮಾತಿನಂತೆಯೇ ಹುಟ್ಟಿದ ಕೂಡಲೇ ಸಾಯುತ್ತಿದೆ. ಎಷ್ಟೋ ವೇಳೆಯಲ್ಲಿ ಯಾರಿಗಾಗಿ ಬರೆದದ್ದೋ ಅವರಿಗೆ ತಲುಪುವ ಹೊತ್ತಿಗೆ ಅದರ ಚಹರೆಗಳು ಬದಲಾಗಿಬಿಡುತ್ತಿವೆ. ಇದೆಲ್ಲವನ್ನೂ ಕಂಡರೆ ಬರೆವಣಿಗೆಗೆ ಒಂದು ಹೆಚ್ಚಿನ ಮನ್ನಣೆ ಇದೆಯೆಂದು ಈಗ ನನಗೆ ತೋರುತ್ತಿಲ್ಲ.

ಅಲ್ಲದೆ ಬರೆಯುವುದರ ಗುರಿಯೇ ಮಾತಿಗೆಳೆಯುವುದು; ಸಂವಾದವನ್ನು ಹುಟ್ಟಿಹಾಕುವುದು. ಈ ನಂಬಿಕೆ ಕೂಡ ಈಗ ಇಲ್ಲವಾಗುತ್ತಿದೆ. ಎದುರು ನಿಲುವುಗಳಿಗೆ ಮಾತುಕತೆಗಳಲ್ಲಿ ಜಾಗವಿರುತ್ತದೆ. ಅವು ಒಪ್ಪದಿರುವ, ಮೆಚ್ಚದ ಮಾತುಗಳನ್ನೂ ಕೇಳಲು ಹಿಂಜರಿಯುವುದಿಲ್ಲ. ಹಾಗೆಯೇ ಎಲ್ಲರೂ ಒಪ್ಪುವ ಇಲ್ಲವೇ ಮೆಚ್ಚುಮಾತುಗಳನ್ನೇ ಆಡಬೇಕೆಂಬ ಹಪಾಹಪಿ ಇರುವುದಿಲ್ಲ. ಈಗ ಹಾಗಿದೆ ಎಂದು ನನಗೆ ಅನ್ನಿಸುತಿಲ್ಲ. ಎಲ್ಲರೂ ಒಪ್ಪುವುದನ್ನೆ, ಮೆಚ್ಚುವುದನ್ನೇ ಬರೆಯುವ ತವಕವಿದೆ. ಹಾಗೆಯೇ ಓದುವವರೂ ತಮಗೆ ಒಪ್ಪಿಗೆ ಆಗುವುದನ್ನೇ ಓದಲು ಮುಂದಾಗುತ್ತಿದ್ದಾರೆ. ನನ್ನ ಈ ಮಾತುಗಳಿಗೆ ಬುಡವಿಲ್ಲವೆಂದು ಕೆಲವರಿಗೆ ಅನ್ನಿಸಲೂಬಹುದು. ಸರಿಯೇ ಸರಿ. ಆದರೆ ಈ ಬಿಕ್ಕಟ್ಟು ನನ್ನ ತಿಳಿವಿನ ನೆಲೆಗೆ ಬಂದಿದ್ದರಲ್ಲಿ ಸಟೆಯಿಲ್ಲ.

ಇಂತಹ ಹೊತ್ತಿನಲ್ಲಿ ತೊಂಡುಮೇವು ಬರಹಗಳು ಮತ್ತೆ ಅಚ್ಚಾಗುತ್ತಿರುವುದು, ಹತ್ತು ವರುಶಗಳಿಂದ ಈಚೆಗೆ ಬರೆದದ್ದು ಇನ್ನೊಂದು ಕಂತೆಯಾಗಿ ಮೈದಳೆಯುತ್ತಿರುವುದು ಮುಜುಗರದ ಸಂಗತಿಯೇ ಸರಿ. ಆದರೆ ಗೆಳೆಯ ಡಾ. ಬೈರೇಗೌಡರು ಈ ಕೆಲಸಕ್ಕೆ ಮುಂದಾಗಿದ್ದಾರೆ. ಅವರಿಗೆ ಒಳಿತಾಗಲಿ ಎಂದು ಕೋರುವುದಷ್ಟೇ ನನ್ನ ಕೆಲಸ.

**ಕೆ.ವಿ. ನಾರಾಯಣ**

# ಪರಿವಿಡಿ

## ಕಂತೆ ಆರು

# ಕನ್ನಡ ಉಳಿಯುವುದೇ?

ಹಲವು ಬಗೆಯಲ್ಲಿ ಈ ಪ್ರಶ್ನೆಯನ್ನು ಮೇಲಿಂದ ಮೇಲೆ ಕೇಳಲಾಗುತ್ತಿದೆ. ಒಂದು ಭಾಷೆ ಉಳಿಯುವುದು ಎಂದರೇನು? ಆ ಭಾಷೆಯನ್ನು ಆಡುವ ಭಾಷಿಕರು ತಮ್ಮ ಭಾಷೆಯನ್ನು ಎಲ್ಲ ವಲಯಗಳಲ್ಲೂ ಬಳಸುತ್ತಾ ಹೋದರೆ ಆ ಭಾಷೆ ಉಳಿದುಕೊಂಡಂತೆ ಎಂದು ಸರಳವಾದ ಮಾತುಗಳಲ್ಲಿ ಹೇಳಬಹುದು. ಭಾಷೆಗಳು ನಾಶವಾಗಲು ಹಲವಾರು ಕಾರಣಗಳಿರುತ್ತವೆ. ಏಕೆ ಒಂದು ಭಾಷೆಯನ್ನಾಡುವ ಜನರು ತಮ್ಮ ಭಾಷೆಯನ್ನು ಬಿಟ್ಟುಕೊಡುತ್ತಾರೆ? ಪ್ರಬಲವಾದ ಮತ್ತೊಂದು ಭಾಷೆಯ ಪ್ರಭಾವಕ್ಕೆ ಸಿಕ್ಕಿದಾಗ ತಮ್ಮ ಭಾಷೆಯನ್ನು ಹಲವಾರು ತಲೆಮಾರುಗಳವರೆಗೆ ಎಲ್ಲ ವಲಯಗಳಲ್ಲೂ ಬಳಕೆಯಲ್ಲಿ ಉಳಿಸಿಕೊಳ್ಳಲು ಸಾಧ್ಯವಾಗದೇ ಹೋಗಬಹುದು. ದ್ರಾವಿಡ ಭಾಷಾವರ್ಗಕ್ಕೆ ಸೇರಿದ ಹಲವು ಭಾಷೆಗಳು ಪ್ರಬಲವಾದ ಇಂಡೋ ಆರ್ಯನ್ ಭಾಷೆಗಳನ್ನು ಆಡುವ ಪ್ರದೇಶಗಳಲ್ಲಿ ಸೇರಿಹೋಗಿರುವುದರಿಂದ ಆ ಭಾಷೆಗಳನ್ನು ಆಡುವ ಜನರು ಶತಮಾನದ ಅವಧಿಯಲ್ಲಿ ತಮ್ಮ ಭಾಷೆಯನ್ನು ಕಳೆದುಕೊಳ್ಳುತ್ತಾರೆ.

ಇದಲ್ಲದೆ ರಾಜಕೀಯವಾದ ಹಲವಾರು ಸಂದರ್ಭಗಳು ಭಾಷಾನಾಶಕ್ಕೆ ಕಾರಣವಾಗಬಹುದು. ಅಲ್ಪಸಂಖ್ಯಾತ ವರ್ಗದ ಭಾಷೆಗಳು ಅಧಿಕಾರವಿರುವ ಬಹುಸಂಖ್ಯಾತರ ಭಾಷೆಯನ್ನು ಅನಿವಾರ್ಯವಾಗಿ ತಮ್ಮ ಭಾಷೆಯನ್ನಾಗಿ ಆಯ್ಕೆಮಾಡಿಕೊಳ್ಳಬೇಕಾಗಿಬರುತ್ತದೆ. ಒಂದು ಭಾಷಾವರ್ಗ ಭೌಗೋಳಿಕವಾಗಿ ನಿರ್ದಿಷ್ಟ ಪ್ರದೇಶದಲ್ಲಿ ಮಾತ್ರ ವಾಸಿಸುತ್ತಿದ್ದರೆ ಆ ಭಾಷೆಯನ್ನಾಡುವವರಲ್ಲಿ ವಲಸೆ ಪ್ರವೃತ್ತಿ ಕಡಿಮೆಯಾಗಿದ್ದರೆ ಮತ್ತು ಆ ಭಾಷಿಕರು ರಾಜಕೀಯವಾಗಿ ಇನ್ನೊಂದು ಭಾಷೆಯನ್ನಾಡುವವರಿಗೆ ಅಧೀನರಾಗಿದ್ದರೆ ಆ ಭಾಷೆ ನಾಶವಾಗುವ ಸಂಭವ ಹೆಚ್ಚು. ಮೊದಮೊದಲು ಆ ಭಾಷೆ ಬಳಕೆಯ ವಲಯಗಳನ್ನು ಕುಗ್ಗಿಸಿಕೊಳ್ಳುತ್ತ ಹೋಗುತ್ತದೆ. ಅನಂತರ ಕೇವಲ ಮನೆಯೊಳಗಿನ ಭಾಷೆಯಾಗುತ್ತದೆ. ತಲೆಮಾರುಗಳು ಕಳೆದಂತೆ ಆ ಭಾಷೆಯನ್ನಾಡುವವರು ಹಳೆಯ ತಲೆಗಳಾಗಿ ಕೊನೆಗೆ ಆ ಭಾಷೆ ನಾಶವಾಗುತ್ತದೆ. ಇದು ಊಹೆಯ ಮಾತಲ್ಲ. ನಿದರ್ಶನಗಳು ಹಲವಾರಿವೆ.

ಕನ್ನಡ ಭಾಷೆ ಉಳಿಯುವುದೇ ಎಂಬ ಪ್ರಶ್ನೆಯನ್ನು ಎದುರಿಸುವ ಮೊದಲು ಭಾಷಾನಾಶ ಖಂಡಿತ ಎಂದು ತಿಳಿದಿರುವ ಸಂದರ್ಭ ಕನ್ನಡಕ್ಕೆ ಬಂದೊದಗಿದೆಯೇ

ನೋಡೋಣ. ಕನ್ನಡ ಭಾಷೆಯನ್ನು ಆಡುವವರು ಬಹುಮಟ್ಟಿಗೆ ನಿರ್ದಿಷ್ಟ ಭೌಗೋಳಿಕ ಪ್ರದೇಶದಲ್ಲಿ ವಾಸಿಸುತ್ತಿದ್ದಾರೆ. ಒಂದು ಬಗೆಯ ಭೌಗೋಳಿಕ ನಿರಂತರತೆ ಈ ಭಾಷಿಕರಲ್ಲಿ ಇದೆ. ಅದು ಇಂದು ಕರ್ನಾಟಕವೆಂದು ಗುರುತಿಸುವ ಭೂಪ್ರದೇಶದ ಗಡಿಗಳನ್ನು ಸುತ್ತುವರಿದು ತನ್ನದೇ ಆದ ಒಂದು ನಕ್ಷೆಯನ್ನು ರಚಿಸಿಕೊಂಡಿದೆ. ಕನ್ನಡ ಭಾಷೆಯನ್ನು ಆಡುವವರಲ್ಲಿ ವಲಸೆ ಪ್ರವೃತ್ತಿ ಇದೆಯೇ ಎಂಬುದು ಎರಡನೆಯ ಪ್ರಶ್ನೆ. ವಲಸೆಯನ್ನು ಹಲವು ಬಗೆಗಳಲ್ಲಿ ವ್ಯಾಖ್ಯಾನಿಸಬಹುದು. ಗುಂಪುಗಳು ಆರ್ಥಿಕ ಕಾರಣಗಳಿಗಾಗಿ ವಲಸೆ ಹೋಗುವುದು ಒಂದು ಬಗೆ. ವ್ಯಕ್ತಿಗಳು ಇಲ್ಲವೇ ಕುಟುಂಬಗಳು ಬೇರೆಬೇರೆ ಪ್ರದೇಶಗಳಿಗೆ ಹೋಗಿ ನೆಲಸುವುದು ಇನ್ನೊಂದು ಬಗೆ. ಕನ್ನಡಿಗರಲ್ಲಿ ಎರಡೂ ಬಗೆಯ ವಲಸೆಗಳು ಇವೆ. ಮೊದಲನೆಯದು ಕನ್ನಡವನ್ನಾಡುವ ಭೂಪ್ರದೇಶದೊಳಗೇ ಹೆಚ್ಚಿನ ಪ್ರಮಾಣದಲ್ಲಿ ನಡೆಯುತ್ತದೆ. ಅನ್ಯಭಾಷಿಕ ಪ್ರದೇಶಗಳಿಗೆ ಗುಂಪುವಲಸೆಗಳು ನಡೆಯುವುದಿಲ್ಲ ಎನ್ನಲಾಗದಿದ್ದರೂ ಪ್ರಮಾಣ ಕಡಿಮೆ. ವ್ಯಕ್ತಿಗಳು ಕುಟುಂಬಗಳು ಅನ್ಯ ಭಾಷಾಪ್ರದೇಶಗಳಿಗೆ ಹೋಗಿ ನೆಲಸುವ ಪ್ರಸಂಗಗಳು ಅಧಿಕವಾಗಿವೆ. ಅಂಥ ಪ್ರಸಂಗಗಳಲ್ಲಿ ಕನ್ನಡಿಗರು ತಮ್ಮ ಭಾಷೆಯನ್ನು ಉಳಿಸಿಕೊಳ್ಳಲು ಯತ್ನಿಸುತ್ತಿದ್ದರೂ ಒಂದೆರಡು ತಲೆಮಾರುಗಳ ಅನಂತರ ಕಳೆದುಕೊಳ್ಳುತ್ತಿರುವ ಪ್ರಸಂಗಗಳೇ ಹೆಚ್ಚು ಇನ್ನು ಮೂರನೆಯ ಅಂಶ. ಕನ್ನಡ ಪ್ರಬಲವಾದ ಭಾಷೆಯ ಅಧೀನವಾಗಿದೆಯೇ? ಈ ಸನ್ನಿವೇಶ ಕೊಂಚ ಸಂಕೀರ್ಣವಾಗಿದೆ. ಕನ್ನಡ ಭಾಷಿಕರು ವಾಸಿಸುತ್ತಿರುವ ಭೌಗೋಳಿಕ ಪ್ರದೇಶ ನಾವು ಭಾವಿಸುವಂತೆ ಕೇವಲ ಕನ್ನಡ ಭಾಷಿಕರು ಮಾತ್ರ ವಾಸಿಸುವ ಪ್ರದೇಶವಾಗಿಲ್ಲ. ಅನ್ಯಭಾಷಿಕರಲ್ಲಿ ಇರುವ ಗುಂಪು ವಲಸೆ ಪ್ರವೃತ್ತಿಯಿಂದಾಗಿ ಕನ್ನಡ ಭಾಷಿಕರ ಭೌಗೋಳಿಕ ಪ್ರದೇಶದಲ್ಲಿ ಅನ್ಯಭಾಷಿಕರೂ ವಾಸಿಸುತ್ತಿದ್ದಾರೆ. ಹಾಗೂ ಈ ಸಂಖ್ಯೆ ದಶಕಗಳು ಕಳೆದಂತೆ ಹೆಚ್ಚಾಗುತ್ತಿದೆ. ಈಗ ಲಭ್ಯವಿರುವ ಮಾಹಿತಿಯಂತೆ ಭಾರತದ ಯಾವ ಅಧಿಕೃತ ಭಾಷೆಯನ್ನು ಪರಿಗಣನೆಗೆ ತೆಗೆದುಕೊಂಡರೂ ಆಯಾ ಭಾಷೆಯನ್ನಾಡುವ ಪ್ರದೇಶದಲ್ಲಿ ಆಯಾ ಭಾಷಿಕರು ಇರುವ ಪ್ರಮಾಣ ಕನ್ನಡಿಗರಷ್ಟು ಕಡಿಮೆ ಬೇರೆ ಯಾವ ಭಾಷಿಕರಿಗೂ ಇಲ್ಲ. ಈ ಪ್ರಮಾಣ ಪ್ರತಿಶತ ೬೫ಕ್ಕೂ ಕಡಿಮೆ ಎಂಬುದನ್ನು ಗಮನಿಸಬೇಕು. ಅಂದರೆ ಕನ್ನಡ ಮಾತಾಡುವ ಭೂಪ್ರದೇಶದಲ್ಲಿಯೂ ಹಲವು ಕಡೆಗಳಲ್ಲಿ ಕನ್ನಡ ಅಲ್ಪಸಂಖ್ಯಾತರ ಭಾಷೆಯಾಗಿರುವ ಸಾಧ್ಯತೆಗಳು ಹೆಚ್ಚಾಗುತ್ತಿವೆ.

ಇದಲ್ಲದೆ ಕನ್ನಡ ಭಾಷೆಯನ್ನು ರಾಜ್ಯಾಂಗದಲ್ಲಿ ಭಾರತದ ಒಂದು ಅಧಿಕೃತ ಭಾಷೆ ಎಂದು ಘೋಷಿಸಿದ್ದರೂ ಅದು ಅಂತಾರಾಷ್ಟ್ರೀಯ ಭಾಷೆ ಎನಿಸಿಕೊಂಡ ಇಂಗ್ಲಿಶ್ ಮತ್ತು ರಾಷ್ಟ್ರೀಯ ಭಾಷೆ ಎನಿಸಿಕೊಂಡ ಹಿಂದಿ ಇವೆರಡಕ್ಕೆ ಅಧೀನವಾಗಿರಬೇಕಾದ ಪ್ರಸಂಗ ಉಂಟಾಗಿದೆ. ಆಧುನಿಕ ನೆಲೆಯ ಭಾಷಾಬಳಕೆಯ ವಲಯಗಳಲ್ಲಿ ಮೊದಲು ಇಂಗ್ಲಿಶ್‌ಗೆ ಮನ್ನಣೆ. ಆಡಳಿತ ಹಾಗೂ ಸಮೂಹ ಮಾಧ್ಯಮಗಳಿಗೆ ಸಂಬಂಧಿಸಿದಂತೆ ಹಿಂದಿಗೆ ಮನ್ನಣೆ. ಇದರಿಂದಾಗಿ ಕನ್ನಡದ ಬಳಕೆಯ ವ್ಯಾಪ್ತಿ ದಶಕಗಳು ಉರುಳಿದಂತೆ ಕಡಿಮೆಯಾಗುತ್ತಾ ಹೋಗುತ್ತಿದೆ.

ಮನೆಯ ಮಾತಿನ ಮಟ್ಟಿಗೆ ಕುಶಲೋಪರಿಗಳಲ್ಲಿ ವೇದಿಕೆಯ ಅನೌಪಚಾರಿಕ ಚರ್ಚೆಗಳಲ್ಲಿ ಕನ್ನಡ ಬಳಕೆಯಾಗುತ್ತಿದೆ. ಆದರೆ ಹೆಚ್ಚು ಅಧಿಕೃತ ಎನಿಸಿಕೊಳ್ಳುವ ಬರವಣಿಗೆಯಲ್ಲಿ ಕನ್ನಡದ ಬಳಕೆಯ ಸ್ವರೂಪ ಬೇರೆಯಾಗುತ್ತಿದೆ. ಒಂದೋ ಅಲ್ಲಿ ಕನ್ನಡ ಬಳಕೆಯಾಗುತ್ತಿಲ್ಲ ಅಥವಾ ಕನ್ನಡ ಬಳಕೆಯಾಗುತ್ತಿದ್ದರೂ ಅದರ ಉದ್ದೇಶ ಸೀಮಿತವಾಗಿರುತ್ತದೆ. ಶಿಕ್ಷಣ ಕ್ಷೇತ್ರವನ್ನು ಗಮನಿಸಿ ಸ್ನಾತಕೋತ್ತರ ಪದವಿ ತರಗತಿಗಳಲ್ಲಿ ಇಂಗ್ಲಿಷ್ ಮಾಧ್ಯಮವಿದ್ದರೂ ಹಲವಾರು ವಿಷಯಗಳನ್ನು ಬೋಧಿಸುವಾಗ ಕನ್ನಡವನ್ನು ಬಳಸಲಾಗುತ್ತದೆ. ಆದರೆ ಪರೀಕ್ಷೆಗಳಲ್ಲಿ ಇಂಗ್ಲಿಶ್‌ನಲ್ಲಿ ಉತ್ತರವನ್ನು ಬರೆಯುವುದು ಅಧಿಕೃತ. ಕನ್ನಡದಲ್ಲಿ ಬರೆಯಲು ವಿಶೇಷ ಅನುಮತಿ ಪಡೆಯಬೇಕು. ಹಲವು ಸಂದರ್ಭಗಳಲ್ಲಿ ಆ ಅನುಮತಿ ದೊರೆಯದೇ ಇರಬಹುದು.

ಅಂದರೆ ಕನ್ನಡ ಮಾತಿನ ಭಾಷೆಯಾಗಿ ಹೆಚ್ಚು ಸಾಧ್ಯತೆಗಳನ್ನು ಪಡೆದುಕೊಂಡಿದೆ ಎನ್ನಬಹುದೆ? ಈಚೆಗೆ ಡಾ. ಅನಂತಮೂರ್ತಿಯವರು ಕನ್ನಡ ಉಳಿದಿರುವುದೇ ದಲಿತರಿಂದ, ಅನಕ್ಷರಸ್ಥರಿಂದ ಎಂದು ಹೇಳಿದುದು ವರದಿಯಾಗಿದೆ. ಅದಕ್ಕೆ ಪ್ರತಿಕ್ರಿಯೆ ವ್ಯಕ್ತಪಡಿಸುತ್ತ ಶ್ರೀ ಚಂದ್ರಶೇಖರ ಪಾಟೀಲರು ಹಾಗಿದ್ದರೆ ಎಲ್ಲ ಕನ್ನಡಿಗರೂ ಅನಕ್ಷರಸ್ಥರಾಗಿ ಉಳಿಯಬೇಕೆಂಬುದು ಅನಂತಮೂರ್ತಿಯವರ ಅಭಿಪ್ರಾಯವೇ ಎಂದು ಕೇಳಿದುದಾಗಿ ಮತ್ತೊಂದು ವರದಿ. ಈ ವಿವಾದದ ಮುಂದುವರಿಕೆ ನಮ್ಮ ಗುರಿಯಲ್ಲ. ಆದರೆ ಶ್ರೀ ಅನಂತಮೂರ್ತಿಯವರ ಅಭಿಪ್ರಾಯದ ತಿರುಳು ಇಷ್ಟೇ. ಕನ್ನಡಿಗರು ಅಕ್ಷರಸ್ಥರಾದಷ್ಟೂ ಕನ್ನಡವನ್ನು ಬರವಣಿಗೆಯಲ್ಲಿ ಬಳಸುವುದನ್ನು ಕಡಿಮೆ ಮಾಡುತ್ತಾರೆ. ಇದು ಆರೋಪವಲ್ಲ ವಸ್ತು ಸ್ಥಿತಿ.

ಇದಕ್ಕೆ ಸಮಾನಾಂತರವಾದ ಉದಾಹರಣೆಯೊಂದನ್ನು ಗಮನಿಸೋಣ. ತುಳು ನಾವು ಬಲ್ಲಂತೆ ದಕ್ಷಿಣಕನ್ನಡ ಜಿಲ್ಲೆಯ ಒಂದು ಪ್ರಮುಖ ಭಾಷೆ. ಆ ಭಾಷೆಯನ್ನು ಆಡುವವರು ಬಹುಮಟ್ಟಿಗೆ ದ್ವಿಭಾಷಿಕರು. ತುಳು ಮಾತನಾಡುವವರು ದಕ್ಷಿಣ ಕನ್ನಡ ಜಿಲ್ಲೆಯ ಆಚೆಗೂ ಹರಡಿದ್ದಾರೆ. ತುಳು ಭಾಷೆಯನ್ನು ಆಧುನಿಕ ನಿಟ್ಟಿನ ಬಳಕೆಗೆ ಅದರಲ್ಲೂ ಬರವಣಿಗೆಗೆ ಸನ್ನದ್ಧಗೊಳಿಸುವ ಯತ್ನಗಳು ಅಷ್ಟು ಯಶಸ್ವಿಯಾಗಿಲ್ಲ. (ಸೃಜನಶೀಲ ಬರವಣಿಗೆಯ ಮಾತನ್ನು ಕೊಂಚ ಬದಿಗಿರಿಸೋಣ) ತುಳುವಿನ ಪತ್ರಿಕೆಗಳು ಬಿಡದೆ ಪ್ರಕಟವಾಗುವುದು ಸಾಧ್ಯವಾಗಿಲ್ಲ. ಆದರೆ ತುಳುವನ್ನು ಮಾತಿನ ಭಾಷೆಯನ್ನಾಗಿ ಉಳಿಸಿಕೊಳ್ಳುವುದು ಆ ಭಾಷಿಕರಿಗೆ ಒಂದು ಮುಖ್ಯವಾದ ಭಾಷಾಸಂಗೋಪನೆಯ ತಂತ್ರವಾಗಿ ಕಾಣಿಸಿದೆ. ಅದನ್ನವರು ಅಧಿಕ ಪ್ರಮಾಣದಲ್ಲಿ ಬಳಸುತ್ತಿದ್ದಾರೆ. ತುಳುವಿನ ಯಕ್ಷಗಾನಗಳು ತಾಳಮದ್ದಳೆಯ ಪ್ರಸಂಗಗಳು ವಿವಿಧ ರೀತಿಯ ಹಾಡುಗಳ ಕ್ಯಾಸೆಟ್ಟುಗಳು ಹೆಚ್ಚು ಹೆಚ್ಚು ಉತ್ಪಾದನೆಯಾಗುತ್ತಿವೆ. ತುಳುವರು ಅವುಗಳನ್ನು ಕೇಳುತ್ತಿದ್ದಾರೆ. ಅಂದರೆ ಆ ಮೂಲಕ ತಮ್ಮ ಭಾಷೆಯನ್ನು 'ಬಳಸುತ್ತಿದ್ದಾರೆ'. ಈ ತಂತ್ರ ಕೂಡ ಎಷ್ಟು ಕಾಲ ಆ ಭಾಷೆಯನ್ನು ಉಳಿಸಿಕೊಳ್ಳಲು ನೆರವಾಗುವುದೆಂಬುದನ್ನು ಹೇಳಬರುವುದಿಲ್ಲ.

ಕನ್ನಡವೂ ಹೀಗೆ ಮಾತಿನ ಭಾಷೆಯಾಗುವುದು ಅನಿವಾರ್ಯವೇ? ಹಾಗೆ ನೋಡಿದರೆ ಕನ್ನಡದಲ್ಲಿ ದಿನದಿನವೂ ಸಾವಿರಾರು ಪುಟಗಳಷ್ಟು ಬರವಣಿಗೆ ಸೃಷ್ಟಿಯಾಗಿ

ಮುದ್ರಣಗೊಂಡು ಓದುಗರನ್ನು ತಲುಪುತ್ತಿದೆ. ಹೀಗಿರುವಾಗ ಕನ್ನಡ ಮಾತಿನ ಭಾಷೆಯಾಗಿ ಮಾತ್ರ ಉಳಿಯುವ ಭಯಕ್ಕೆ ಕಾರಣವಿಲ್ಲ ಎನ್ನಬಹುದು. ಅದರ ಈ ಮುದ್ರಿತ ಪುಟಗಳು ತಂದುಕೊಡುತ್ತಿರುವ ಸಂಕಥನಗಳು ಸೀಮಿತ ವಲಯಕ್ಕೆ ಸೇರಿವೆ. ಹೆಚ್ಚು ಹೆಚ್ಚು ಸಂಕೀರ್ಣವಾದ ಸಂಕಥನಗಳ ಮಟ್ಟಿಗೆ ಕನ್ನಡವಿನ್ನೂ ದೂರದ ಭಾಷೆಯಾಗಿದೆ.

ಕನ್ನಡದ ಮಟ್ಟಿಗೆ ಅಷ್ಟೇಕೆ ಭಾರತದ ಎಲ್ಲ ಭಾಷೆಗಳ ಮಟ್ಟಿಗೆ ಹೇಳುವುದಾದರೆ ಆಯಾ ಭಾಷೆಯನ್ನಾಡುವ ವ್ಯಕ್ತಿಗಳು ಶಿಕ್ಷಿತರಾಗುವುದೆಂದರೆ ದ್ವಿಭಾಷಿಕರಾಗುವುದೆಂದರ್ಥ. ಔಪಚಾರಿಕ ಶಿಕ್ಷಣ ಪಡೆಯದ ದ್ವಿಭಾಷಿಕರಿಗೂ ಔಪಚಾರಿಕ ಶಿಕ್ಷಣದ ಮೂಲಕ ನಿರ್ಮಾಣಗೊಳ್ಳುವ ದ್ವಿಭಾಷಿಕರಿಗೂ ಮೂಲಭೂತವಾದ ವ್ಯತ್ಯಾಸಗಳಿವೆ. ಮೊದಲ ಬಗೆಯವರನ್ನು ಸಾಮಾಜಿಕ ದ್ವಿಭಾಷಿಕರು ಎನ್ನೋಣ. ಎರಡನೆಯ ಬಗೆಯವರನ್ನು ಶೈಕ್ಷಣಿಕ ದ್ವಿಭಾಷಿಕರೆನ್ನಬಹುದು. ಎರಡನೆಯ ಬಗೆಯವರಲ್ಲಿ ಇಂಗ್ಲಿಶ್ ಒಂದು ಭಾಷೆಯಾಗಿರುವುದು ಕಡ್ಡಾಯ. ಸಾಮಾಜಿಕ ದ್ವಿಭಾಷಿಕರಲ್ಲಿ ಕನ್ನಡವನ್ನು ಬಳಸುವ ನೆಲೆಗಳು ಮತ್ತು ಇನ್ನೊಂದು ಭಾಷೆಯನ್ನು ಬಳಸುವ ನೆಲೆಗಳು ಪರಸ್ಪರ ವ್ಯಾವರ್ತಕವಾಗಿರುತ್ತವೆ. ಒಂದು ಇನ್ನೊಂದರೊಡನೆ ಸಂಘರ್ಷಿಸುವುದಿಲ್ಲ. ಆದರೆ ಈ ಮಾತನ್ನು ಶೈಕ್ಷಣಿಕ ದ್ವಿಭಾಷಿಕರಿಗೆ ಹೇಳಬರುವುದಿಲ್ಲ. ಇಂಗ್ಲಿಶ್ ಮತ್ತು ಕನ್ನಡಗಳ ಬಳಕೆಯ ನೆಲೆಗಳು ಪರಸ್ಪರ ಮುಖಾಮುಖಿಯಾಗುತ್ತವೆ. ಹಾಗೂ ಬಹುಮಟ್ಟಿಗೆ ಕನ್ನಡ ತನ್ನ ವ್ಯಾಪ್ತಿಯನ್ನು ಇಂಗ್ಲಿಶ್‌ಗೆ ತೆರವು ಮಾಡಿಕೊಡುತ್ತಿರುತ್ತದೆ. ಈ ಪರಿಸ್ಥಿತಿಯನ್ನು ಗಮನಿಸಿದರೆ ಶಿಕ್ಷಿತರಾಗುವುದು ಮತ್ತು ಕನ್ನಡದಿಂದ ದೂರ ಸರಿಯುವುದು ಪರಸ್ಪರ ಪೂರಕ ಕ್ರಿಯೆಗಳೆಂಬಂತೆ ತೋರುತ್ತದೆ. ಇದೇ ಸ್ಥಿತಿ ಮುಂದುವರೆಯುತ್ತದೆ ಎಂದು ಇಲ್ಲಿ ವಾದಿಸುತ್ತಿಲ್ಲ. ಆದರೆ ಈ ಏರುಪೇರನ್ನು ಬದಲಾಯಿಸಲು ಯತ್ನಿಸದಿದ್ದರೆ ಕನ್ನಡದ ಬಳಕೆಯ ವ್ಯಾಪ್ತಿ ದಿನೇದಿನೇ ಕುಗ್ಗುತ್ತಾ ಹೋಗುತ್ತದೆ. ಅಶಿಕ್ಷಿತರೇ ಕನ್ನಡವನ್ನು ಉಳಿಸಿದ್ದಾರೆ ಎನ್ನುವ ಮಾತನ್ನು ಮೇಲಿನ ವಿವರಣೆಯ ಹಿನ್ನೆಲೆಯಲ್ಲಿ ಗ್ರಹಿಸುವುದು ಸೂಕ್ತ.

# ನಮ್ಮ ಭಾಷೆ ನಿಜವಾಗಿಯೂ ನಮ್ಮದೆ?

ಭಾಷೆ ಮತ್ತು ಭಾಷಿಕರ ನಡುವೆ ಯಾವ ಬಗೆಯ ಸಂಬಂಧವಿರುತ್ತದೆ ಎನ್ನುವುದನ್ನು ಕುರಿತು ಈಚಿನ ದಿನಗಳಲ್ಲಿ ಹಲವು ಬಗೆಯ ಚರ್ಚೆಗಳಾಗುತ್ತಿವೆ. ಈ ಚರ್ಚೆಗಳಲ್ಲಿ ಹೊಸದೇನೂ ಇಲ್ಲವಾದರೂ ಚರ್ಚಿತವಾಗುತ್ತಿರುವ ವಿಷಯಗಳು ಈ ಸಂದರ್ಭದಲ್ಲೇ ಏಕೆ ಮುಂಚೂಣಿಗೆ ಬಂದವು ಎನ್ನುವುದು ಕುತೂಹಲಕಾರಿಯಾಗಿದೆ. ಭಾಷಿಕರ ಅನನ್ಯತೆಯ ಕುರುಹಾಗಿ ಭಾಷೆಯನ್ನು ಈಗ ಪರಿಭಾವಿಸಲಾಗುತ್ತಿದೆ. ಆದರೆ ಎಲ್ಲ ಭಾಷಿಕರು ಸಾಮಾಜಿಕವಾಗಿ ಸಮಾನತೆಯ ಸ್ತರದಲ್ಲಿ ಇಲ್ಲ. ಕೆಲವು ಜಾಗತಿಕ ಉದಾಹರಣೆಗಳನ್ನು ನೋಡೋಣ. ಇಂಗ್ಲಿಶ್ ಭಾಷೆಯನ್ನು ಯಾವ ಸಮುದಾಯದ ಅನನ್ಯತೆಯ ಕುರುಹಾಗಿ ತೆಗೆದುಕೊಳ್ಳೋಣ? ಆ ಭಾಷೆಯನ್ನಾಡುವ ಹಲವು ಸಮುದಾಯಗಳು ಜಾಗತಿಕವಾಗಿ ಪರಸ್ಪರ ಭಿನ್ನ ನೆಲೆಗಟ್ಟುಗಳಲ್ಲಿ ಬೇರೆಬೇರೆ ಹಿತಾಸಕ್ತಿಗಳನ್ನು ಪ್ರತಿನಿಧಿಸುವಂತಿವೆ. ಹಲವು ಬ್ರಿಟಿಶ್ ವಸಾಹತುಗಳಲ್ಲಿ ಈಗಲೂ ಇಂಗ್ಲಿಶ್ ಆಯಾ ದೇಶಗಳ ಭಾಷೆಯಾಗಿದೆ. ಆದರೆ ಆ ದೇಶಗಳ ಇಂಗ್ಲಿಶ್, ಮೂಲಭಾಷಿಕರ ದೇಶಗಳ ಸಮುದಾಯಗಳಂತೆ ಇಲ್ಲ. ಅವುಗಳಿಗೆ ಸಾಂಸ್ಕೃತಿಕವಾಗಿ ಭಿನ್ನತೆ ಇದೆ. ಆದ್ದರಿಂದ ಇಂಗ್ಲಿಶ್ ಯಾವುದಾದರೊಂದು ಸಮುದಾಯದ ಅನನ್ಯತೆಯನ್ನು ಸೂಚಿಸುವ ಭಾಷೆಯೆಂದು ತಿಳಿಯಲು ಬರುವುದಿಲ್ಲ. ಅಂತಾರಾಷ್ಟ್ರೀಯ ಗಡಿರೇಖೆಗಳ ಆಸುಪಾಸುಗಳಲ್ಲಿ ಒಂದೇ ಭಾಷೆಯನ್ನಾಡುವ ಆದರೆ ಬೇರೆ ಬೇರೆ ರಾಷ್ಟ್ರಗಳಿಗೆ ಸೇರಿದ ಸಮುದಾಯಗಳಿರುತ್ತವೆ. ಸಹಜವಾಗಿಯೇ ಆಯಾ ದೇಶಗಳ ಆಳುವ ವರ್ಗದ ತಾತ್ತ್ವಿಕ ನಿಲುವುಗಳಿಗೆ ಆಯಾ ಸಮುದಾಯಗಳನ್ನು ಬದ್ಧಗೊಳಿಸುವುದಾದರೆ ಒಂದೇ ಭಾಷೆ ಭಿನ್ನ ಸಮುದಾಯಗಳ ಕುರುಹಾಗಿ ಸ್ಥಾಪಿತವಾಗುತ್ತದೆ. ಇನ್ನೂ ಕೆಲವು ಸಂದರ್ಭಗಳಲ್ಲಿ ಒಂದೇ ಸಮುದಾಯ ಎರಡು ಭಾಷೆಗಳಲ್ಲಿ ತನ್ನ ವ್ಯವಹಾರಗಳನ್ನು ಮಾಡುತ್ತಿರುವ ಹಲವು ಪ್ರಸಂಗಗಳಿರುತ್ತವೆ. ಅಂಥ ಕಡೆಗಳಲ್ಲಿ ಯಾವ ಭಾಷೆ ಆ ಸಮುದಾಯದ ಅನನ್ಯತೆಯನ್ನು ಪ್ರತಿನಿಧಿಸುತ್ತದೆ ಎಂದು ಸೂಚಿಸುವುದು ಕಷ್ಟ. ಅಂದರೆ, ಭಾಷೆ ಮತ್ತು ಸಮುದಾಯಗಳ ನೇರ ಸಂಬಂಧದ ಸೂತ್ರವನ್ನು, ಅದೆಷ್ಟೇ ಆಕರ್ಷಕವಾಗಿ ಕಾಣುವುದಾದರೂ, ನಿರ್ದಿಷ್ಟ ಸಂದರ್ಭಗಳಿಗೆ ಅನ್ವಯಿಸುವುದು ಕಷ್ಟ.

ಇದಕ್ಕಿಂತಲೂ ಸಂಕೀರ್ಣವಾದ ಸಮಸ್ಯೆಯೊಂದಿದೆ. ಒಂದೇ ಭಾಷಿಕ ಸಮುದಾಯ ಒಂದೇ ಭಾಷೆಯ ಹಲವು ಪ್ರಭೇದಗಳನ್ನಾಡುವ ಜನ ಸಮೂಹಗಳನ್ನು ಹೊಂದಿರುತ್ತದೆ.

ಆ ಸಮುದಾಯಗಳ ನಡುವೆ ಸಾಮಾಜಿಕವಾದ ಭಿನ್ನತೆಗಳು ಮುಖಾಮುಖಿಯಾಗುವ ಸಂದರ್ಭಗಳು ಬಂದಾಗ ಆಯಾ ಸಮುದಾಯಗಳು ತಮ್ಮ ಭಾಷಿಕ ಪ್ರಭೇದವನ್ನು ಅನನ್ಯತೆಯ ಕುರುಹಾಗಿ ಬಳಸಲು ತೊಡಗಬಹುದು. ಇದೊಂದು ಸಾಂಸ್ಕೃತಿಕ ರಾಜಕಾರಣದ ಹುನ್ನಾರ. ಒಂದು ನಿದರ್ಶನದೊಂದಿಗೆ ನಮ್ಮ ಚರ್ಚೆಯನ್ನು ಮೊದಲು ಮಾಡಬಹುದು.

ಕನ್ನಡದಲ್ಲಿ ಹಲವು ಪ್ರಾದೇಶಿಕ ಮತ್ತು ಸಾಮಾಜಿಕ ಪ್ರಭೇದಗಳಿವೆ. ಭಾಷಾಶಾಸ್ತ್ರಜ್ಞರು ಇವುಗಳನ್ನು ಗುರುತಿಸಿ ಅವುಗಳ ಲಕ್ಷಣ ನಿರ್ವಚನ ಮಾಡಿದ್ದಾರೆ. ಈ ಪ್ರಭೇದಗಳಿವೆ. ಎನ್ನುವುದಕ್ಕಿಂತ ಇವುಗಳ ನಡುವೆ ಇರುವ ಸಂಬಂಧ ಏನು ಎಂಬುದು ನಮಗೆ ಮುಖ್ಯ. ಇವುಗಳ ನಡುವೆ ಇರುವ ಹಲವು ಬಗೆಯ ಸಂಬಂಧಗಳಲ್ಲಿ ಒಂದು ಇಂದಿನ ನಮ್ಮ ಚರ್ಚೆ. ಸುಮಾರು ನಲವತ್ತು ವರ್ಷಗಳ ಹಿಂದೆ (1964) ನಡೆಸಿದ ಒಂದು ಅಧ್ಯಯನದಲ್ಲಿ ವಿಲಿಯಂ ಬ್ರೈಟ್ ಮತ್ತು ಎ.ಕೆ.ರಾಮಾನುಜನ್ ಅವರು ಕನ್ನಡದ ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ಪ್ರಭೇದಗಳ ನಡುವೆ ಇರುವ ವ್ಯತ್ಯಾಸಗಳನ್ನು ಗುರುತಿಸಿದ್ದರು. ಅವರ ಅಧ್ಯಯನದ ಮುಖ್ಯ ಸಾರಾಂಶವಿಷ್ಟು, ಧ್ವನಿವ್ಯತ್ಯಾಸಗಳನ್ನು, ಧ್ವನಿನಿಯಮಗಳಲ್ಲಿ ಆಗುವ ವ್ಯತ್ಯಾಸಗಳನ್ನು ಬ್ರಾಹ್ಮಣೇತರ ಕನ್ನಡವು ಒಪ್ಪಿ ಬಳಸುವಷ್ಟು ವೇಗದಲ್ಲಿ ಮತ್ತು ಅಷ್ಟು ಪ್ರಮಾಣದಲ್ಲಿ ಬ್ರಾಹ್ಮಣ ಕನ್ನಡವು ಬಳಸುವುದಿಲ್ಲ. ಆದರೆ ಪದಕೋಶವನ್ನು ವಿಸ್ತಾರಗೊಳಿಸುವಲ್ಲಿ ಬ್ರಾಹ್ಮಣ ಪ್ರಭೇದ ಹೆಚ್ಚು ತೆರೆದುಕೊಳ್ಳುವ ಮನೋಭಾವವನ್ನು ತೋರಿದರೆ ಬ್ರಾಹ್ಮಣೇತರ ಪ್ರಭೇದ ನಿಯಮಿತ ಪದಕೋಶದಲ್ಲೇ ತನ್ನ ವ್ಯವಹಾರವನ್ನು ನಡೆಸುವ ಪ್ರವೃತ್ತಿಯನ್ನು ತೋರುತ್ತದೆ. ಈ ಅಧ್ಯಯನವನ್ನು ಕುರಿತು ಮುಂದೆ ಹೆಚ್ಚಿನ ಚರ್ಚೆಗಳು ಕನ್ನಡದಲ್ಲಿ ಆಗಿಲ್ಲ. ಅದರಲ್ಲೂ ಕನ್ನಡ ಭಾಷಾಶಿಕ್ಷಣ ನೀತಿಯನ್ನು, ಭಾಷಾಕಲಿಕೆಯ ಯೋಜನೆಗಳನ್ನು ರೂಪಿಸುವವರು ಈ ಅಧ್ಯಯನದ ಫಲಿತಗಳನ್ನು ತಮ್ಮ ಯೋಜನೆಗಳಲ್ಲಿ ಬಳಸಿದಂತೆ ತೋರುವುದಿಲ್ಲ. ಏನೇ ಇರಲಿ ನಮಗೇ ಈ ಟಿಪ್ಪಣಿಯ ಚರ್ಚೆಗೆ ಅನುಕೂಲವಾಗುವಷ್ಟು ಅಂಶವನ್ನು ನಾವಿಲ್ಲಿ ಪರಿಗಣಿಸಿದರೆ ಸಾಕು. ಕನ್ನಡದ ಎರಡು ಪ್ರಭೇದಗಳ ನಡುವೆ ಇರುವ ಈ ವಿರುದ್ಧ ಪ್ರವೃತ್ತಿಗಳು ನಿರ್ದಿಷ್ಟ ಸಾಮಾಜಿಕ ಸಂದರ್ಭಗಳಲ್ಲಿ ಮುಂಚೂಣಿಗೆ ಬಂದು ಆಯಾ ಸಮುದಾಯಗಳು ತಂತಮ್ಮ ಭಾಷಾ ಪ್ರಭೇದಗಳ ಲಕ್ಷಣಗಳನ್ನು ತಂತಮ್ಮ ಅನನ್ಯತೆಯ ಕುರುಹುಗಳನ್ನಾಗಿ ಬಳಸುವುದುಂಟು. ಈಚಿನ ದಿನಗಳಲ್ಲಿ 'ಋ' ಕಾರವನ್ನು ಕುರಿತು ಚರ್ಚೆಯಲ್ಲಿ ಮಂಡಿತವಾದ ನಿಲುವುಗಳನ್ನು ಈ ನೆಲೆಯಲ್ಲಿ ನೋಡುವ ಅವಕಾಶಗಳಿವೆ.

ಅಂದರೆ ಒಂದು ಭಾಷೆ ಒಂದಕ್ಕಿಂತ ಹೆಚ್ಚು ಸಮುದಾಯಗಳಲ್ಲಿ ಹರಡಿರುವಾಗ, ಒಂದೇ ಸಮುದಾಯದಲ್ಲಿ ಒಂದಕ್ಕಿಂತ ಹೆಚ್ಚು ಭಾಷೆಗಳಿರುವಾಗ ಮತ್ತು ಒಂದೇ ಸಮುದಾಯದಲ್ಲಿ ಒಂದೇ ಭಾಷೆಯು ಭಿನ್ನ ಪ್ರಭೇದಗಳಲ್ಲಿ ವೈರುಧ್ಯಗಳು ಪ್ರಕಟಗೊಳ್ಳುತ್ತಿರುವಾಗ ಭಾಷೆಗೂ ಸಮುದಾಯಕ್ಕೂ ನೇರವಾದ ಸಂಬಂಧವನ್ನು ಕಲ್ಪಿಸುವ ವಿಚಾರಗಳು ಕೇವಲ ರೋಚಕ ನೆಲೆಯಲ್ಲಿ ಮಾತ್ರ ಉಳಿದುಬಿಡುತ್ತವೆ.

ವಾಸ್ತವವಾಗಿ ಸಾಂಸ್ಕೃತಿಕ ಅನನ್ಯತೆಯ ಸ್ಥಾಪನೆಯಲ್ಲಿ ಸಮುದಾಯಗಳು ಭಾಷಿಕ ಅಂಶಗಳನ್ನು ಒಂದು ಗುರಾಣಿಯಂತೆ ಬಳಸುತ್ತವೆ. ಅದು ವಸ್ತುಸ್ಥಿತಿಯನ್ನು ಪ್ರತಿನಿಧಿಸುವುದಕ್ಕಿಂತ ಹೆಚ್ಚಾಗಿ ವಸ್ತು ಸ್ಥಿತಿಯನ್ನು ಮುಚ್ಚಿಡಲು ಬಳಕೆಯಾಗಬಹುದು. ಆಗಲೇ ಹೇಳಿದಂತೆ ಇದು ಸಾಂಸ್ಕೃತಿಕ ರಾಜಕಾರಣದ ಒಂದು ನೆಲೆ.

ಸಾಮಾನ್ಯವಾಗಿ ಭಾಷೆಗೂ ಸಮುದಾಯಕ್ಕೂ ನಂಟನ್ನು ಕಲ್ಪಿಸುವ ಇನ್ನೊಂದು ವಾದವೆಂದರೆ ಸಮುದಾಯಗಳು ತಮ್ಮ ಚಿಂತನೆಗಳನ್ನು, ತಿಳುವಳಿಕೆಗಳನ್ನು, ಪಾರಂಪರಿಕ ಜ್ಞಾನವನ್ನು ತಮ್ಮ ಭಾಷೆಗಳಲ್ಲಿ ಅಡಗಿಸಿಟ್ಟಿರುತ್ತವೆ ಎನ್ನುವುದು. ಈ ಮಾತನ್ನು ಸಂಪೂರ್ಣವಾಗಿ ತಳ್ಳಿಹಾಕಲು ಬರುವುದಿಲ್ಲ. ಸಮುದಾಯಗಳು ಬುಡಕಟ್ಟುಗಳ ನೆಲೆಯಲ್ಲಿ ಬದುಕುತ್ತಿದ್ದ, ಅಥವಾ ಬದುಕುತ್ತಿರುವ ಸಂದರ್ಭಗಳಿಗೆ ಈ ಸಾಧ್ಯತೆ ಅನ್ವಯವಾಗುವಷ್ಟು, ಪೌರಸಮಾಜಗಳಿಗೆ ಅನ್ವಯವಾಗುವುದು ಕಷ್ಟ. ಏಕೆಂದರೆ ಪೌರಸಮಾಜದಲ್ಲಿ ಭಾಷೆ ಒಂದು ರಾಜಕೀಯ ಸಾಧನವಾಗಿರುತ್ತದೆ. ಪ್ರಭುತ್ವದ ಚಿಂತನೆಗಳನ್ನು ಬಿಂಬಿಸುವ ಮಾಧ್ಯಮವಾಗಿರುತ್ತದೆ. ಸಮುದಾಯ ತನ್ನ ಚಿಂತನೆಗಳನ್ನು ಹೊರಹಾಕಲು ಭಾಷೆಯನ್ನು ಬಳಸುವುದಕ್ಕಿಂತ, ಸಮುದಾಯವು ಏನನ್ನು ನಂಬಬೇಕು ಎನ್ನುವುದನ್ನು ತಿಳಿಸಲು ಪ್ರಭುತ್ವ ಅಥವಾ ಅದರ ಪರಿಕರಗಳು ಭಾಷೆಯನ್ನು ಬಳಸುತ್ತವೆ.

ಇಂಥ ಸಂದರ್ಭಗಳಲ್ಲಿ ಸಮುದಾಯಗಳು (ವಾಸ್ತವವಾಗಿ ಪೌರ ಸಮಾಜಗಳು) ತಮ್ಮ ತಿಳುವಳಿಕೆಯೆಂಬುದನ್ನು ರೂಪಿಸುವ ನೆಲೆಯಿಂದ ತಮಗಾಗಿ ರೂಪಿಸಿದ ತಿಳುವಳಿಕೆಯನ್ನು ಪಡೆದುಕೊಳ್ಳುವ ಹಂತಕ್ಕೆ ದಾಟಬಿಟ್ಟಿರುತ್ತವೆ. ಆಗ ಭಾಷೆ ಹೊರಹಾಕುವ, ಕಾಯ್ದಿಡುವ ಮಾಧ್ಯಮವಾಗಿ ಉಳಿಯದೆ ಒಳ ತರುವ, ನಂಬಿಸುವ, ಒಪ್ಪಿಸುವ ಸಲಕರಣೆಯಾಗಿಬಿಡುತ್ತದೆ. ಈಗ ಕನ್ನಡವೂ ಅಂಥದೇ ನೆಲೆಗೆ ದಾಟುತ್ತಿರುವುದನ್ನು ಯಾರಾದರೂ ಗಮನಿಸಲು ಸಾಧ್ಯವಿದೆ. ಇದು ಭಾರತೀಯ ಪೌರ ಸಮಾಜದ ಲಕ್ಷಣವೂ ಆಗಿರಬಹುದು. ಅಂದರೆ ಭಾರತದ ಹೆಚ್ಚು ಭಾಷೆಗಳು ಈ ಪ್ರಕ್ರಿಯೆಗಳಿಗೆ ಒಳಗಾಗಿರಲು ಸಾಧ್ಯ.

ತಿಳುವಳಿಕೆ ಎನ್ನುವುದನ್ನು ನಮಗಾಗಿ ರೂಪಿಸಿಕೊಡಲಾಗುತ್ತದೆ ಎಂದರೇನು? ಕುಮಾರವ್ಯಾಸ ಭಾರತದ ಸಭಾಪರ್ವದ ಅಕ್ಷದ್ಯೂತ ಪ್ರಸಂಗವನ್ನು ಓದಿದರೆ ಅಲ್ಲಿ ಒಂದು ಸಂಗತಿ ನಮ್ಮ ಗಮನಕ್ಕೆ ಬರುತ್ತದೆ. ಕವಿ ಅಲ್ಲಿ ಪಗಡೆಯ ಆಟವನ್ನು ವರ್ಣಿಸುತ್ತಾನೆ. ಆದರೆ ವರ್ಣನೆಯ ವಿವರಗಳನ್ನು ಮತ್ತು ವರ್ಣಿಸುವ ವಿಧಾನವನ್ನು ಗಮನಿಸಿದರೆ ಅಲ್ಲಿ ಒಂದು ಯುದ್ಧ ಜರುಗುತ್ತಿರುವಂತೆ ನಮಗೆ ತೋರುತ್ತದೆ. ಅಂದರೆ ವಿವರಗಳನ್ನು ಆಯ್ದು ಜೋಡಿಸುವ ವಿಧಾನದಲ್ಲಿ ಕವಿ ಮುಂದಿನ ಕೌರವ ಪಾಂಡವರ ಯುದ್ಧದ ಅಣಕು ಮಾದರಿಯನ್ನು ನಮ್ಮೆದುರು ಇರಿಸುತ್ತಾನೆ. ಅಂದರೆ ಪಗಡೆಯಾಟವನ್ನು ಅವನು ವರ್ಣಿಸುತ್ತಿದ್ದಾನೆ ಎನ್ನುವುದಕ್ಕಿಂತ ಅದನ್ನು ಕುರಿತು ನಮ್ಮ ತಿಳುವಳಿಕೆಯನ್ನು ಅವನು ನಿಯಂತ್ರಿಸುತ್ತಿದ್ದಾನೆ. ಕವಿಗಳಲ್ಲಿ ಇದು ಸಹಜವಾದ ವಿಧಾನ. ಆದರೆ ಈಚಿನ ಕೆಲವು ದಿನಗಳ ಪತ್ರಿಕೆ ಮತ್ತು ಇತರ ಮಾಧ್ಯಮಗಳ ಮುಖ್ಯ ಸುದ್ದಿಗಳನ್ನು ಗಮನಿಸಿದರೆ ಅವು ಭಾರತ ಮತ್ತು ಪಾಕಿಸ್ತಾನದ ಗಡಿ ರೇಖೆಯ

ಮುಖ್ಯ ಚಟುವಟಿಕೆಗಳನ್ನು ವಿವರಿಸುವ ಉದ್ದೇಶವನ್ನು ಹೊಂದಿರುವುದು ಗೊತ್ತಾಗುತ್ತದೆ. ಆ ಪರಿಸ್ಥಿತಿಯನ್ನು ಬಣ್ಣಿಸುವ ವಿಧಾನದಲ್ಲಿ ನಮ್ಮ ತಿಳುವಳಿಕೆಯನ್ನು ನಿರ್ದಿಷ್ಟ ನೆಲೆಗಳಿಗೆ ಒಯ್ಯುವ ಉದ್ದೇಶವಿದ್ದಿತೆಂಬುದು ಸುಸ್ಪಷ್ಟ. ಸಂಭವನೀಯ ಯುದ್ಧವನ್ನು ಮಾಧ್ಯಮಗಳು ನಮ್ಮೆದುರು ನಟಿಸಿ ತೋರಿಸಿದವು. ಮತ್ತು ಆ ಯುದ್ಧ ಯಾರೋ ಇಬ್ಬರ ವೈಯಕ್ತಿಕ ನಿರ್ಣಯಗಳಿಂದ ಪ್ರೇರಿತವಾಗಿದೆ ಎನ್ನುವ ಅಭಿಪ್ರಾಯವೂ ಬಿಂಬಿತವಾಗುವಂತಿತ್ತು. ಆದರೆ ಇದು ಓದುವ/ಕೇಳುವ ಜನರ ತಿಳುವಳಿಕೆಯ ಭಾಗವಾಗಬೇಕು ಎನ್ನುವುದು ಮಾಧ್ಯಮಗಳ ಮತ್ತು ಅವು ಪ್ರತಿನಿಧಿಸುವ ರಾಜ್ಯ ಶಕ್ತಿಯ ಉದ್ದೇಶವೂ ಆಗಿದೆ. ಹೀಗೆ ಮಾಧ್ಯಮಗಳ ಮೂಲಕ ರಾಜ್ಯಶಕ್ತಿ ತನ್ನ ಅವಶ್ಯಕತೆಗಳಿಗೆ ಅನುಕೂಲವಾದ ತಿಳುವಳಿಕೆಯನ್ನು ತನ್ನ ಪ್ರಜೆಗಳಿಗೆ ಹಂಚುತ್ತದೆ ಎನ್ನುವುದರಲ್ಲಿ ಹೊಸ ವಿಚಾರವೇನೂ ಇಲ್ಲ. ಈಗಾಗಲೇ ಚಿಂತಕರು ಇದನ್ನು ಕುರಿತು ವಿವರವಾದ ಚರ್ಚೆಗಳನ್ನು ನಡೆಸಿದ್ದಾರೆ. ಆದರೆ ನಮಗೆ ಈಗ ಅದು ಮುಖ್ಯವಾಗುವುದು ಬೇರೊಂದು ಉದ್ದೇಶಕ್ಕೆ. ಭಾಷೆಗೂ ಸಮುದಾಯಗಳಿಗೂ ಇರುವ ಸಂಬಂಧವನ್ನು ನಾವು ಅರಿತುಕೊಳ್ಳಬೇಕಾದ ವಿಧಾನಕ್ಕೆ ಇದು ಒಂದು ಸೂಚನೆಯಾಗಿದೆ. ಸಮುದಾಯದ ತಿಳುವಳಿಕೆಯನ್ನ ಹತ್ತಿಕ್ಕಿ ಅದಕ್ಕೆ ಬೇರೊಂದು ತಿಳುವಳಿಕೆಯನ್ನು ಊಡಿಸುವ ಈ ವಿಧಾನದಿಂದಾಗಿ ಭಾಷೆ ಪ್ರಜೆಗಳ ಮಾಧ್ಯಮವಾಗಿ ಉಳಿಯುವುದಿಲ್ಲ. ಅದು ಅವರನ್ನು ತಿದ್ದಲು, ಅವರಿಗೆ 'ತಿಳುವಳಿಕೆ' ನೀಡಲು ಬಳಸುವ ಸಾಧನವಾಗಿಬಿಡುತ್ತದೆ.

ಕನ್ನಡಕ್ಕೂ ಇಂಥದೊಂದು ಅವಸ್ಥೆ ಬಂದೊದಗಿದೆ ಎನ್ನುವುದಕ್ಕೆ ಇನ್ನೊಂದು ಉದಾಹರಣೆಯನ್ನು ನೋಡಬಹುದು. ಯಾವಾಗ ಭಾಷೆ ಸಮುದಾಯದ ತಿಳುವಳಿಕೆಯನ್ನು ಹೊರಹಾಕುವ ಸಾಧನವಾಗಿರುತ್ತದೋ ಆಗ ಆ ಭಾಷೆಯಲ್ಲಿ ಅಂಥ ತಿಳುವಳಿಕೆಯನ್ನು ಒಳಗೊಂಡ ಪದಗಳು, ಪದ ಸಮುಚ್ಚಯಗಳು, ನುಡಿಗಟ್ಟುಗಳು, ಗಾದೆಗಳು, ಜೋಡಿ ನುಡಿಗಳು ಅಧಿಕವಾಗಿರುತ್ತವೆ. ಮತ್ತು ಹಾಗೆ ಇರುವುದಲ್ಲದೆ ಅವು ಜನರಲ್ಲಿ ಬಳಕೆಯಲ್ಲೂ ಕಾಣಸಿಗುತ್ತದೆ. ಆದರೆ ಭಾಷೆ ಹೀಗೆ ಜನರ ತಿಳುವಳಿಕೆಯನ್ನು ಹೊರಹಾಕುವ ಮಾಧ್ಯಮವಾಗದೆ ಅವರಿಗೆ ತಿಳಿಸಿಕೊಡುವ ಸಾಧನವಾಗುವುದೋ ಆಗ ಆ ಭಾಷೆಯಲ್ಲಿ ಲಕ್ಷಣಾವೃತ್ತಿ ಎನ್ನುವುದೇ ಇರುವುದಿಲ್ಲ. ಅದರಿಂದ ಮೇಲೆ ಹೇಳಿದ ಉಕ್ತಿ ವಿಧಾನಗಳು ಸಂಪೂರ್ಣವಾಗಿ ಗೈರುಹಾಜರಾಗುತ್ತವೆ. ನಮ್ಮ ಶಾಲಾ ಪಠ್ಯ ಪುಸ್ತಕಗಳ ಭಾಷೆಯನ್ನು, ಪತ್ರಿಕೆಗಳ ಭಾಷೆಯನ್ನು ಎಚ್ಚರಿಕೆಯಿಂದ ಗಮನಿಸಿದರೆ ಕನ್ನಡದ ಬಳಕೆಯಲ್ಲಿ ಆಗುತ್ತಿರುವ ಬದಲಾವಣೆಗಳು ಗೊತ್ತಾಗುತ್ತವೆ. ಈ ಟಿಪ್ಪಣಿಯಲ್ಲಿ ಹೇಳಬೇಕೆಂದು ಬಯಸಿದ ಸಂಗತಿ ಇಷ್ಟೆ: ಸಮುದಾಯಗಳ ಸ್ವತ್ತಾಗಿದ್ದ ಭಾಷೆಗಳು ಅವರ ಹಿಡಿತದಿಂದ ಹೊರಹೋಗಿರುವ ಈ ಸಂದರ್ಭದಲ್ಲಿ ಭಾಷೆಯ ಅಳಿವು ಉಳಿವಿಗೂ ಸಮುದಾಯಗಳ ಅನನ್ಯತೆಯ ಅಳಿವು ಉಳಿವಿಗೂ ಸಂಬಂಧವನ್ನು ಕಲ್ಪಿಸುವ ನಮ್ಮ ವಿಚಾರಧಾರೆಯಲ್ಲಿ ಸಾಕಷ್ಟು ಬದಲಾವಣೆಯಾಗ ಬೇಕಾಗಿದೆ ಎಂದು ಹೇಳುವುದು.

# ಕನ್ನಡಗಳು: ನಮಗಿರುವ ಆಯ್ಕೆಗಳೇನು?

ನೀವು ಕರ್ನಾಟಕದ ಬೇರೆಬೇರೆ ಭಾಗಗಳಿಗೆ ಹೋದರೆ, ಅಲ್ಲಿ ಕೇಳಲು ಸಿಗುವ ಕನ್ನಡ ನೀವು ದಿನವೂ ಬಳಸುವ ಕನ್ನಡದಂತೆ ಇರುವುದಿಲ್ಲವೆನ್ನುವುದು ಸುಲಭವಾಗಿ ಗೊತ್ತಾಗುವಂತಿರುತ್ತದೆ. ಕನ್ನಡದಲ್ಲಿ ಇರುವ ಈ ಬಗೆಗಳು ಎಷ್ಟು ಎಂಬುದು ನಮಗಿನ್ನೂ ಗೊತ್ತಿಲ್ಲ. ಈ ಬಗೆಗಳು ಬೇರೆ ಬೇರೆ ಪ್ರದೇಶಗಳಿಗೆ ಮಾತ್ರ ಸೀಮಿತವಾಗಿಲ್ಲ. ಒಂದೊಂದು ಪ್ರದೇಶಗಳಲ್ಲಿ ಇರುವವರಲ್ಲೂ, ಬೇರೆಬೇರೆ ಸಾಮಾಜಿಕ ವಲಯಗಳಿಗೆ ಸೇರಿದವರೂ ಬೇರೆಬೇರೆ ಬಗೆಯ ಕನ್ನಡಗಳನ್ನು ಮಾತನಾಡುವುದನ್ನು ಗುರುತಿಸುವುದು ಸಾಧ್ಯ. ಹಾಗೆಯೇ ಕನ್ನಡ ಮಾತಾಡುವ ಪ್ರದೇಶಗಳಲ್ಲಿ ಇರುವ ಅನ್ಯ ಭಾಷಿಕ ಸಮುದಾಯಗಳು ಕನ್ನಡವನ್ನು ಎರಡನೆಯ ಭಾಷೆಯನ್ನಾಗಿ ಕಲಿತು ಬಳಸುವಾಗ ಅವರದ್ದೇ ಆದ ಕನ್ನಡದ ಬಗೆಯೊಂದನ್ನು ರೂಪಿಸಿಕೊಂಡಿದ್ದಾರೆ. ಈ ಬಗೆಗಳನ್ನು ಕೇಳಿದಾಗ ಅವರ ಮೊದಲ ಭಾಷೆ ಯಾವುದೆಂಬುದು ಗೊತ್ತಾಗುವಂತಿರುತ್ತದೆ. ಅಂದರೆ ಈ ಭಾಷಾ ಸಮುದಾಯಗಳು ಬಳಸುವ ಕನ್ನಡದ ಬಗೆಗಳೂ ಕೂಡ ಹಲವಿವೆ (ಉದಾ: ಉರ್ದು, ತೆಲುಗು, ತಮಿಳು, ಮಲೆಯಾಳಂ, ಕೊಂಕಣಿ, ಲಂಬಾಣಿ, ತುಳು, ಕೊಡಗು, ಮರಾಠಿ). ಸುಮ್ಮನೆ ಈ ಕೆಲವು ಬಗೆಗಳನ್ನು ಚಲನಚಿತ್ರ ಮತ್ತು ಇತರ ಮಾಧ್ಯಮಗಳು ಬಳಸಿ ಅವಷ್ಟೇ ಕನ್ನಡದ ಬಗೆಗಳು ಎನ್ನುವ ಅಭಿಪ್ರಾಯವನ್ನು ಮೂಡಿಸಿವೆ. ಅಲ್ಲದೆ ಆಯಾ ಪ್ರಭೇದಗಳನ್ನು ಬಳಸುವವರು ಯಾರು ಎಂಬ ಬಗೆಗೂ ಒರಟಾದ ನಿಲುವುಗಳನ್ನು ಪ್ರಚುರಪಡಿಸಿವೆ. ಅದು ಈಗ ನಮ್ಮ ಚರ್ಚೆಯ ವಿಷಯವಲ್ಲ. ಕನ್ನಡದ ಈ ಹಲವು ಬಗೆಗಳನ್ನು ಕುರಿತು ಈಗ ನಾವು ಯಾವ ನಿಲುವನ್ನು ತಳೆಯಬೇಕು ಎಂಬುದು ಒಂದು ಪ್ರಶ್ನೆಯಾಗಿದೆ.

ನಮ್ಮ ಶಿಕ್ಷಣ ಕ್ರಮ ನಮ್ಮಲ್ಲಿ ಒಂದು ನಿಲುವನ್ನು ಗಾಢವಾಗಿ ರೂಢಿಸಿದೆ. ಅದರಂತೆ "ಕನ್ನಡಕ್ಕೆ ಒಂದು ಪ್ರಮಾಣ ರೂಪವಿದೆ; ಅದನ್ನು ಬಿಟ್ಟು ಉಳಿದೆಲ್ಲ ಕನ್ನಡ ಪ್ರಭೇದಗಳೂ ಆಯಾ ಪ್ರದೇಶದ ಆಡುಮಾತಾಗಿ ಮಾತ್ರ ಇರಲು ಯೋಗ್ಯವಾಗಿವೆ." ಈ ನಿಲುವನ್ನು ನೆಲೆಗೊಳಿಸಲೆಂದೇ ಏಕೀಕರಣದ ಅನಂತರ ಇಡೀ ಕರ್ನಾಟಕಕ್ಕೆ ಶಾಲಾ ಪಠ್ಯ ಪುಸ್ತಕಗಳಲ್ಲಿ ಬಳಸುವ ಕನ್ನಡದ ರೂಪ ಒಂದೇ ಬಗೆಯಲ್ಲಿರಬೇಕೆಂಬ ನೀತಿಯನ್ನು ಜಾರಿಗೆ ತರಲಾಯಿತು. 'ಕನ್ನಡಿಗರೆಲ್ಲ ತಂತಮ್ಮ ಭೇದಭಾವಗಳನ್ನು ಮರೆತು ಒಂದಾಗಬೇಕೆಂಬ' ಆಶಯವು ಈ ಏಕರೂಪಿ ಪಠ್ಯಪುಸ್ತಕಗಳ ರಚನೆಗೆ ದಾರಿ

ಮಾಡಿಕೊಟ್ಟಿತು. ಶಿಕ್ಷಣ ಕ್ರಮದಲ್ಲಿ ನೆಲೆಗೊಂಡ ಈ ಮಾದರಿ ಸಮೂಹ ಮಾಧ್ಯಮಗಳಲ್ಲಿ ಮತ್ತು ಆಡಳಿತದಲ್ಲೂ ಅನುಸರಣೆಯಾಗತೊಡಗಿತು.

ಹಲವು ದಶಕಗಳ ಹಿಂದೆ ಜನ ಸಂಪರ್ಕದ ಪ್ರಮಾಣ ಕಡಿಮೆ ಇತ್ತು. ಸಮೂಹ ಮಾಧ್ಯಮಗಳಿಗೆ, ಅದರಲ್ಲೂ ಲಿಖಿತ ಭಾಷಾರೂಪಕ್ಕೆ ತೆರೆದುಕೊಂಡ ಜನರ ಸಂಖ್ಯೆ ಕಡಿಮೆ. ಶಿಕ್ಷಣದ ವ್ಯಾಪ್ತಿಗೆ ಬರುತ್ತಿದ್ದವರು ಸಮಾಜದ ಕೆಲವು ವರ್ಗಕ್ಕೆ ಮಾತ್ರ ಸೇರಿದವರಾಗುತ್ತಿದ್ದರು. ಹೀಗಾಗಿ ಪ್ರಮಾಣ ಭಾಷೆ ಎನ್ನುವುದು ಈ ಸಂಪರ್ಕಜಾಲಕ್ಕೆ ಸೇರ್ಪಡೆಯಾದವರ ಭಾಷೆಯಾಗಿ ರೂಪುಗೊಳ್ಳುತ್ತಿತ್ತು. ಅವರಿಗೆ ಅದು ತಮ್ಮ ಚಹರೆಯನ್ನು ಕಾಯ್ದುಕೊಳ್ಳುವ ಕನ್ನಡದ ಬಗೆಯಾಗಿ ತೋರಿದ್ದರೆ ಅಚ್ಚರಿಯೇನಿಲ್ಲ.

ಆದರೆ ಕಳೆದ ಕೆಲವು ದಶಕಗಳಲ್ಲಿ ನಡೆದಿರುವ ಸಾಮಾಜಿಕ ಬದಲಾವಣೆಗಳಿಂದಾಗಿ ಕನ್ನಡವನ್ನು ಮನೆಯಾಚೆಗೆ ಹಲವು ಉದ್ದೇಶಗಳಿಗಾಗಿ ಬಳಸುವವರ ಪ್ರಮಾಣ ಹೆಚ್ಚಾಗಿದೆ. ಲಿಖಿತ ಸಮೂಹ ಮಾಧ್ಯಮಗಳ ವ್ಯಾಪ್ತಿಗೆ ಒಳಗಾದವರೂ ಹೆಚ್ಚಿದ್ದಾರೆ. ಶಿಕ್ಷಣದ ವ್ಯಾಪ್ತಿಗೆ ಸಮಾಜದ ಎಲ್ಲ ವರ್ಗದ ಜನರೂ ಬರತೊಡಗಿದ್ದಾರೆ. ಇವರಿಗೆ ಪ್ರಮಾಣ ಕನ್ನಡ ರೂಪ 'ತಮ್ಮದೆಂದು' ಅನ್ನಿಸುತ್ತಿಲ್ಲ. ಅದು ಬೇರೆಯಾಗಿ ತೋರುತ್ತಿದೆ. ಈ ಮಾತು ಕೇವಲ ಊಹೆಯಲ್ಲ. ಶಿಕ್ಷಿತರಾದವರು ಕನ್ನಡವನ್ನು 'ಸರಿಯಾಗಿ' ಮಾತನಾಡಲಾರರು, ಓದಿ ಬರೆಯಲಾರರು ಎಂಬ ಆರೋಪ ಎಲ್ಲ ಕಡೆ ಕೇಳಿಬರುತ್ತಿದೆ. ಏಕೆ ಹೀಗಾಗಿದೆ? ಕನ್ನಡವೇ ಮೊದಲ ಭಾಷೆಯಾಗಿರುವವರು ಶಿಕ್ಷಣ ಪಡೆದರೂ, ಕನ್ನಡವನ್ನು ಸಾಮಾಜಿಕ ಸಂದರ್ಭಗಳಲ್ಲಿ ಬಳಸುವಲ್ಲಿ ಸೋಲುತ್ತಿದ್ದಾರೆಂಬ ಪರಿಸ್ಥಿತಿ ಉಂಟಾಗಲು ಕಾರಣಗಳೇನು? ಈ ಮಾತು ಬರಹ ರೂಪಕ್ಕೂ ಅನ್ವಯಿಸುತ್ತದೆ. ಇಲ್ಲಿಯೂ ಕಲಿತವರು ಕನ್ನಡವನ್ನು 'ಸರಿಯಾಗಿ' ಬರೆಯುತ್ತಿಲ್ಲವೆನ್ನುವುದು ಸಾಮಾನ್ಯವಾಗಿ ಕೇಳಿ ಬರುತ್ತಿರುವ ಗೊಣಗಾಟ. ಹಾಗಾದರೆ ಕಲಿತ ಕನ್ನಡಿಗರೆಲ್ಲ ದಡ್ಡರೇನು?

ಈ ಪರಿಸ್ಥಿತಿ ಉಂಟಾಗಲು ಕಾರಣಗಳು ಬೇರೆಯೇ ಇರಬೇಕು. ಕನ್ನಡದ ಹಲವು ಬಗೆಗಳು ಮೊದಲಿಂದಲೂ ಇದ್ದವು. ಆದರೆ ಅವುಗಳನ್ನು ಬಳಸುವವರು ತಂತಮ್ಮ ಸೀಮಿತ ವಲಯಗಳಲ್ಲಿ ಆ ಪ್ರಭೇದಗಳನ್ನು ಬಳಸುತ್ತಿದ್ದರು. ಇತರರು ಆ ಪ್ರಭೇದಗಳನ್ನು 'ಕೇಳಿಸಿ'ಕೊಳ್ಳುವವರಾಗಿದ್ದರು. ಸಾಮಾಜಿಕ ಸಂಪರ್ಕದ ಸ್ವರೂಪದಿಂದಾಗಿ ಈ ಪ್ರಭೇದಗಳ ನಡುವೆ ಕೊಡುಕೊಳೆಯ ನೆಲೆಗಳು ಕನಿಷ್ಠ ಪ್ರಮಾಣದಲ್ಲಿದ್ದವು. ಹೆಚ್ಚೆಂದರೆ ಆಯಾ ಪ್ರಭೇದಗಳು ಆಯಾ ಸಮುದಾಯಗಳನ್ನು ಗುರುತಿಸಲು ಬಳಕೆಯಾಗುತ್ತಿದ್ದ ಸೂಚಕಗಳಾಗಿದ್ದವು. ನಮ್ಮ ಹಳೆಯ ಚಲನ ಚಿತ್ರಗಳನ್ನು ನೋಡಿದರೆ ಈ ಅಂಶ ಗೊತ್ತಾಗುತ್ತದೆ. ಹಲವೆಡೆಗಳಲ್ಲಿ ಮಾತಾಡುವವರ ಸಾಮಾಜಿಕ ಲಕ್ಷಣಗಳನ್ನು ತೋರಿಸಲು ವಿಶೇಷ ಭಾಷಾ ಪ್ರಭೇದಗಳನ್ನು ಆ ಚಿತ್ರಗಳಲ್ಲಿ ಬಳಸುತ್ತಾರೆ. ಈ ವಿಧಾನ ಈಗಲೂ ಬಳಕೆಯಲ್ಲಿದೆ. ಆದರೆ ಪರಿಸ್ಥಿತಿ ಈಗ ಬದಲಾಗಿದೆ.

ಪ್ರಮಾಣ ಕನ್ನಡದಲ್ಲಿ ಮಾತಾಡಲು ಮತ್ತು ಬರೆಯಲು ಬಹುಮಂದಿ ಕಲಿತವರು ಸೋಲುತ್ತಿರುವುದಕ್ಕೆ ಕಾರಣಗಳು ನಾವು ಶಿಕ್ಷಣ ಕ್ರಮದಲ್ಲಿ ಆಯ್ದುಕೊಂಡ

ಭಾಷಾನೀತಿಯಲ್ಲೇ ಇರುವಂತೆ ತೋರುತ್ತಿದೆ. ನಾವು 'ಪ್ರಭೇದಗಳನ್ನು ಅಳಿಸುವ' ವಿಧಾನವನ್ನು ಆಯ್ದುಕೊಂಡೆವು. ಅವುಗಳ ನಡುವೆ ಇರುವ ವ್ಯತ್ಯಾಸಗಳನ್ನು ನಿರಾಕರಿಸಿ ಏಕ ರೂಪದ ಕನ್ನಡವನ್ನು ಎಲ್ಲರಿಗೂ ಕಲಿಸುವ ಮಾದರಿಯನ್ನು ಜಾರಿಗೆ ಕೊಟ್ಟೆವು. ಇದು ತರಗತಿಗಳಲ್ಲಿ ಪಠ್ಯಪುಸ್ತಕಗಳಲ್ಲಿ ಕಾಣಿಸಿಕೊಂಡಿತಷ್ಟೆ ಆದರೆ ಅದೇ ತರಗತಿಗಳಲ್ಲಿ ಕುಳಿತಿರುತ್ತಿದ್ದ ವಿದ್ಯಾರ್ಥಿಗಳಲ್ಲಿ ಶಾಲೆಗೆ ಬರುವ ಹೊತ್ತಿಗೆ ನೆಲೆಯೂರಿದ್ದ ಕನ್ನಡದ ಬಗೆಯಾಗಲೀ, ಅವರಿಗೆ ಪಾಠ ಮಾಡುತ್ತಿದ್ದ ಉಪಾಧ್ಯಾಯರು ಮಾತಾಡುತ್ತಿದ್ದ ಕನ್ನಡವಾಗಲೀ ಹಾಗೆಯೇ ಉಳಿದುಕೊಂಡಿದ್ದವು. ಈ ಒಡೆದ ನೆಲೆಯಿಂದಾಗಿ ಕಳೆದ ನಾಲ್ಕೈದು ದಶಕಗಳ ಕನ್ನಡ ಕಲಿಕೆಯೇ ಗೊಂದಲದ ಗೂಡಾಗಿದೆ. ಅದರ ಪರಿಣಾಮವನ್ನು ನಾವೀಗ ಕಾಣುತ್ತಿದ್ದೇವೆ.

ಪಠ್ಯಪುಸ್ತಕಗಳನ್ನು ರೂಪಿಸುವವರು ಕಳೆದ ದಶಕದಲ್ಲಿ ಈ ಅಪಾಯವನ್ನು ಮನಗಂಡಂತೆ ತೋರುತ್ತದೆ. ಶಿಕ್ಷಣದ ವಿವಿಧ ಹಂತಗಳಲ್ಲಿ ಕನ್ನಡದ ವಿವಿಧ ಬಗೆಗಳನ್ನು ಕಲಿಯುವವರಿಗೆ ಪರಿಚಯಿಸುವ ಹಾದಿಯನ್ನು ಅವರು ಅನುಸರಿಸಿದ್ದಾರೆ. ಇದರಿಂದ ಆ ಕನ್ನಡಗಳನ್ನು ಬರೆದಾಗ ಹೇಗಿರಬಹುದೆಂಬುದು ಬಹುಪಾಲು ಕನ್ನಡ ಕಲಿಯುವವರಿಗೆ 'ಗೊತ್ತಾಗು'ವಂತಾಗಿದೆ. ಆದರೆ ಆ ಕನ್ನಡಗಳ ಆಡುರೂಪದ ನೆಲೆಗಳು ಇನ್ನೂ ಅಪರಿಚಿತವಾಗಿಯೇ ಉಳಿದಿವೆ.

ಎಲ್ಲಕ್ಕಿಂತ ಮುಖ್ಯವಾಗಿ ಈ ಕನ್ನಡದ ಬಹುತ್ವವನ್ನು ಹೇಗೆ ಪರಿಭಾವಿಸಬೇಕೆಂಬುದು ದೊಡ್ಡ ಸಮಸ್ಯೆಯಾಗಿದೆ. ಬಹುತ್ವವಿದೆಯೆಂದು ತಿಳಿಯುವುದಷ್ಟೆ ಸಾಕೇನು? ಈ ಬಗೆಗಳ ಬಗೆಗೆ ನಿರ್ದಿಷ್ಟ ಮನೋಭಾವವೊಂದು ಬೆಳೆಯುವ ಅಗತ್ಯವನ್ನು ನಾವು ಮನಗಂಡಿಲ್ಲ. ಸಂಸ್ಕೃತಿಯಲ್ಲಿರುವ ಬಹುತ್ವದ ನೆಲೆಗಳನ್ನು ನಿರ್ವಹಿಸುವಲ್ಲಿ ಇರುವ ಗೊಂದಲಗಳೇ ಇಲ್ಲಿಯೂ ಮುಂದುವರೆದಿವೆ. ಒಂದು ಸಮಾನಾಂತರ ನಿದರ್ಶನವನ್ನು ಗಮನಿಸಿ. ವಿವಿಧ ಆಚರಣೆಗಳನ್ನು, ಜನಪದ ಕಲಾ ಪ್ರಕಾರಗಳನ್ನು ಎಲ್ಲರಿಗೂ 'ತೋರಿಸುವ' ಮಾದರಿಯನ್ನು ವ್ಯಾಪಕವಾಗಿ ಬಳಸುತ್ತಿದ್ದೇವೆ. ಆದರೆ ಈ ವೈವಿಧ್ಯಗಳ ನಡುವಣ ಸಂಬಂಧಾಂತರಗಳ ಬಗೆಗೆ ನಮ್ಮಲ್ಲಿ ಸಹ್ಯ ಭಾವನೆಯೊಂದು ಇನ್ನೂ ರೂಪುಗೊಳ್ಳುವುದು ಸಾಧ್ಯವಾಗಿಲ್ಲ. ತಮ್ಮದಲ್ಲದ ಆದರೆ ಯಾರದ್ದೋ ಆಗಿರುವುದೊಂದನ್ನು ನೋಡುತ್ತಿರುವುದೇ ಈ ಕಲಾ ಪ್ರದರ್ಶನಗಳಲ್ಲಿ ನೆಲೆಗೊಂಡ ಮನೋಭಾವವಾಗಿರುತ್ತದೆ. ಕನ್ನಡದ ಪ್ರಭೇದಗಳನ್ನೂ ಕುರಿತು ಇದೇ ನಿಟ್ಟಿನಲ್ಲಿ ನಮ್ಮ ಯತ್ನಗಳು ಸಾಗಿವೆ.

ಈ ಸಮಸ್ಯೆಗೆ ಹಾಗಾಗಿ ಎರಡು ನೆಲೆಗಳಿವೆ. ಒಂದು: ಪ್ರಭೇದಗಳನ್ನು ಬಳಸುವವರು ತಮ್ಮ ಕನ್ನಡವನ್ನು ಕಳೆದುಕೊಳ್ಳುವ ಒತ್ತಾಯಕ್ಕೆ ಒಳಗಾಗುತ್ತಲಿದ್ದಾರೆ. ಅಥವಾ ಉಳಿಸಿಕೊಂಡರೂ ಅದರ ಬಳಕೆಯ ವಲಯವನ್ನು ಸೀಮಿತಗೊಳಿಸಿಕೊಳ್ಳುವ ಸಂದರ್ಭ ಅವರಿಗೆ ಎದುರಾಗಿದೆ. ಎರಡು: ಹಾಗೆಯೇ ತಾವು ಬಳಸದ ಕನ್ನಡದ ಬಗೆಯೊಂದನ್ನು 'ಹೊರಗಿಟ್ಟು' ನೋಡುವ ಬಗೆಯನ್ನು ಎಲ್ಲ ಕನ್ನಡಿಗರಿಗೂ ಕಲಿಸಲಾಗುತ್ತಿದೆ. ಈ ಬಿಕ್ಕಟ್ಟು ನಾವು ಊಹಿಸುವುದಕ್ಕಿಂತ ಗಾಢವಾಗಿದೆ. ಕನ್ನಡದ ವಿವಿಧ ಬಗೆಗಳ ನಡುವೆ

ಇರಬೇಕಾಗಿದ್ದ ಸಹಿಸಿಕೊಳ್ಳುವ ಮನೋಭಾವ ಈಗ ಮಾಯವಾಗಿದೆ. ನಾವು ಎಲ್ಲ ಪ್ರಭೇದಗಳನ್ನು ಬಳಸುವವರಾಗುವುದು ಸಾಧ್ಯವಾಗುವುದಿಲ್ಲ. ಆದರೆ ಎಲ್ಲ ಪ್ರಭೇದಗಳನ್ನು ಸಹಿಸಿಕೊಳ್ಳುವವರಾಗಬೇಕಲ್ಲವೇ? ಪ್ರಭೇದಗಳು ಚಹರೆಗಳಾಗಿರುವಾಗ ಅವುಗಳನ್ನು ಕಳೆದುಕೊಳ್ಳುವ ಒತ್ತಾಯವನ್ನು ಹೇರುವುದು ಪ್ರತಿಭಟನೆಗೆ ಕಾರಣವಾಗುವುದು ಸಹಜ. ಅಲ್ಲದೆ ಎಲ್ಲ ಕನ್ನಡಿಗರೂ ಪ್ರಮಾಣ ಕನ್ನಡದಲ್ಲಿ ಸಮಸಮವೆನ್ನುವ ಕೌಶಲಗಳನ್ನು ಪಡೆಯಬೇಕೆನ್ನುವುದೂ ಕೂಡ ನಿಲುಕದ ನೆಲೆ. ಇವೆಲ್ಲವೂ ಸೇರಿ ಕಲಿತವರೂ ಕನ್ನಡವನ್ನು 'ಸರಿಯಾಗಿ' ಓದಿ ಬರೆಯಲಾಗದ ಪರಿಸ್ಥಿತಿಗೆ ಕಾರಣವಾಗಿದೆ. ಕನ್ನಡದ ಎಲ್ಲ ಪ್ರಭೇದಗಳನ್ನು ಸಹಿಸಿಕೊಳ್ಳುವ ಪರಿಸ್ಥಿತಿಯನ್ನು ನಾವೀಗ ಶಿಕ್ಷಣ ಕ್ರಮದಲ್ಲಿ ರೂಢಿಸಬೇಕು. ಜೊತೆಗೆ ಪ್ರಮಾಣ ಕನ್ನಡವೂ ಕೂಡ 'ಒಳಗೊಳ್ಳುವ' ನೆಲೆಗೆ ದಾಟಬೇಕು. ಈಗಿರುವ ಸೀಮಿತ ನೆಲೆಗಳನ್ನು, 'ಶುದ್ಧತೆ'ಯ ಗೀಳನ್ನು ಬಿಟ್ಟುಕೊಡಬೇಕು. ಈ ಎರಡೂ ನಿಟ್ಟಿನಿಂದ ಕಾರ್ಯತಂತ್ರ ರೂಪಿಸುವ ಅಗತ್ಯವಿದೆ. ಹೀಗಾಗದಿದ್ದರೆ ಈಗಿರುವ ಗೋಜಲಿನಿಂದ ನಮಗೆ ಬಿಡುಗಡೆ ಇಲ್ಲವೆಂದೇ ತೋರುತ್ತದೆ.

# ಸಾಮಾಜಿಕ ಚಹರೆಯಾಗಿ ದಲಿತ ಭಾಷೆ

ಇಲ್ಲಿನ ಮಾತುಗಳು ಪ್ರಮೇಯದ ರೂಪದಲ್ಲಿ ಇರುತ್ತವೆಯೇ ಹೊರತು ನಿರ್ಣಯರೂಪದಲ್ಲಿ ಇರುವುದಿಲ್ಲ. ಇಲ್ಲಿ ಮಂಡಿಸಲ್ಲಿರುವ ಪ್ರಮೇಯಗಳನ್ನು ಚರ್ಚಿಸಬಹುದು. ಏಕೆಂದರೆ ಅವು ಸಿಂಧುವಾದ ತರ್ಕದಿಂದ ಕೂಡಿರುತ್ತವೆ. ಇಡೀ ಸಮಾಜದಲ್ಲಿರುವ ದಲಿತರ ಸಮಾಜ ಮತ್ತು ಭಾಷೆಗಳ ಸಂಬಂಧವನ್ನು ನೋಡುವುದಕ್ಕೆ ಯಾಕೆ ಕಾಲ ಈಗ ಪಕ್ವವಾಗಿದೆ ಎನ್ನುವುದು ಕೂಡ ಬಹಳ ಮುಖ್ಯವಾದ ಸಮಸ್ಯೆ.

ಇಂಡಿಯಾದ ಸಮಾಜ, ಅಸಮಾನತೆಯ ಸಮಾಜ. ಹೀಗೆ ಹೇಳುವುದೂ ಒಂದು ಕ್ಲೀಷೆಯಾಗಿ ಬಿಟ್ಟಿದೆ. ಅಸಮಾನತೆಯನ್ನು ಕಂಡುಕೊಳ್ಳುವುದಕ್ಕೆ ಹಲವು ಗುರುತುಗಳನ್ನು ಈ ಸಮಾಜ ರೂಪಿಸಿಕೊಂಡಿದೆ. ಅವು ಆರ್ಥಿಕ, ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕವಾದ ಮಾನದಂಡಗಳು ಇರಬಹುದು. ಯಾವ ಕಾರಣದಿಂದ ಈ ಅಸಮಾನತೆ ಉಂಟಾಗಿದೆ ಎಂಬುದು ಗಮನಿಸುವಂತಹ ಅಂಶ. ಹಣ ಇರಬಹುದು, ಜಾತಿ ಇರಬಹುದು, ಇವೆಲ್ಲವೂ ಅಸಮಾನತೆಗೆ ಕಾರಣವಿರಬಹುದು. ಇವುಗಳಲ್ಲಿ ಭಾಷೆ ಎಲ್ಲಿ ನಿಲ್ಲುತ್ತದೆ? ಭಾಷೆಯು ಒಂದು ಗುರುತಾಗಿ ಬಳಕೆಯಾಗುತ್ತಿದೆ. ಹಾಗೆ ಕನ್ನಡ ಸಮಾಜ ಬಹಳ ಹಿಂದಿನಿಂದಲೂ ರೂಪಿಸಿಕೊಂಡು ಬಂದ ಹಾಗೆ ಕಾಣಿಸುತ್ತದೆ. ಹತ್ತನೆಯ ಶತಮಾನದ ಕನ್ನಡದ ಕವಿ ಪಂಪ 'ವಿಕ್ರಮಾರ್ಜುನ ವಿಜಯ'ದಲ್ಲಿ ದ್ರೋಣನ ಬಾಯಿಂದ ಒಂದು ಮಾತನ್ನು ಆಡಿಸುತ್ತಾನೆ : 'ಕುಲಮಂ ನಾಲಗೆ ತುಬ್ಬುವವೊಲ್'. (ನಾಲಗೆ ಕುಲವನ್ನು ಹೊರಹಾಕುವ ಹಾಗೆ). ನಾಲಗೆ ಕುಲವನ್ನು ಹೊರ ಹಾಕುತ್ತದೆ ಎನ್ನುವುದು ಆ ಮಾತು. ಇದು ಆ ಮಾತು ಹೇಳುತ್ತಿರುವ ಸತ್ಯವಲ್ಲ. ಮಾತಿನ ಮೂಲಕ ಕುಲವನ್ನು ನಾವು ಗುರುತಿಸುತ್ತೇವೆ ಎನ್ನುವುದು ಸತ್ಯ ನಮ್ಮ ಮಾತಿನಲ್ಲಿ ನಮ್ಮ ಕುಲ ಇರುತ್ತದೆ ಅಂತ ಅಲ್ಲ. ಕುಲವನ್ನು , ಜಾತಿಯನ್ನು ಗುರುತಿಸುವುದಕ್ಕೆ ಮಾತನ್ನು ಒಂದು ಸಾಧನವಾಗಿ ಬಳಸುತ್ತಿರುತ್ತೇವೆ. ಅದು ಇಂದಿಗೂ ಕೂಡ ನಿಜ. ಅಸಮಾನತೆಯನ್ನು , ಸಾಮಾಜೀಕರಣವನ್ನು ಗುರುತಿಸುವುದಕ್ಕೆ ಭಾಷೆಯನ್ನು ಒಂದು ಚಹರೆಯಾಗಿ ಇಟ್ಟುಕೊಳ್ಳಲಾಗಿದೆ. ಭಾಷೆಯೊಂದೇ ಪ್ರಮುಖವಾದ ಅಂಶವಲ್ಲ. ಆದರೆ ಎಷ್ಟೋ ಸಂದರ್ಭದಲ್ಲಿ ಈ ಗುರುತುಗಳೇ ಕಾರಣಗಳಾಗಿಬಿಡುತ್ತವೆ. ಅಸಮಾನತೆಗೆ ಯಾವುದು ಗುರುತಾಗಿರುತ್ತದೋ, ಅಸಮಾನತೆಗೆ ಅದೇ ಕಾರಣವಾಗಿಬಿಡುತ್ತದೆ. ಈ ವಿಪರ್ಯಾಸದಲ್ಲಿ ಇಪ್ಪತ್ತನೆಯ ಶತಮಾನದ ದಲಿತರ ಮತ್ತು ಭಾಷೆಯ ಸಂಬಂಧ

ರೂಪುಗೊಂಡಿದೆ. ಯಾವುದು ಕೇವಲ ಅಸಮಾನತೆಯ ಚಹರೆಯಾಗಿ ಇತ್ತೋ ಅದು ಅಸಮಾನತೆಗೆ ಕಾರಣವಾಗಿಬಿಟ್ಟಿದೆ ಎನ್ನುವುದು ನಾನು ಮಂಡಿಸುವಂತಹ ಪ್ರಮೇಯ. ಮುಂದೆ ಕೆಲವು ವಿಚಾರಗಳಾದ ಈ ಪ್ರಮೇಯವನ್ನು ಸಮರ್ಥಿಸುವುದಕ್ಕೆ ಇಷ್ಟಪಡುತ್ತೇನೆ.

ಭಾಷೆ ಮತ್ತು ದಲಿತರ ಸಂಬಂಧವನ್ನು ಸಾಮಾನ್ಯವಾಗಿ ಮೂರು ತರಹ ನೋಡಬಹುದು. 1. ಕನ್ನಡಭಾಷೆಯಲ್ಲಿ ಹೇಗೆ ದಲಿತರು ಪ್ರತಿನಿಧೀಕರಣಗೊಂಡಿದ್ದಾರೆ. 2. ದಲಿತರು ಮತ್ತು ಭಾಷೆಯ ಸಂಬಂಧ ಯಾವ ತರಹದ್ದು? 3. ದಲಿತರ ಭಾಷೆ. ಸ್ವಲ್ಪ ಎರಡನೆಯ ಅಂಶದ ಬಗ್ಗೆ ಹೆಚ್ಚು ಒತ್ತುಕೊಟ್ಟು ವಿಚಾರ ಮಂಡಿಸುವ ಪ್ರಯತ್ನ ಮಾಡಲಾಗುವುದು. ದಲಿತರ ಭಾಷೆಯ ಬಗೆಗೆ ಕೆಲವು ಪ್ರಾಸಂಗಿಕವಾದ ಮಾತುಗಳನ್ನು ಆಡಬಹುದು.

ಸುಮಾರು ನಾಲ್ಕೈದು ದಶಕಗಳ ಹಿಂದೆ ಲೋಹಿಯಾ ಅವರು ಭಾರತೀಯ ಸಮಾಜದ ಬಗ್ಗೆ ವ್ಯಾಖ್ಯೆಯನ್ನು ಕೊಡುತ್ತಾ ಸಾಮಾಜಿಕ ಮೇಲ್ಮುಖ ಚಲನೆಗೆ ಬೇಕಾಗುವ ಮೂರು ಅಂಶಗಳನ್ನು ಕುರಿತು ಮಾತನಾಡಿದ್ದಾರೆ. ಒಂದು: ಮೇಲ್ಜಾತಿ, ಎರಡು: ಸಂಪತ್ತು ಮತ್ತು ಮೂರು: ಇಂಗ್ಲಿಶ್ ಭಾಷೆ. ಈ ಮೂರೂ ಇದ್ದರೆ ಈ ಸಮಾಜದಲ್ಲಿ ಉನ್ನತ ಸ್ಥಾನಕ್ಕೆ ಹೋಗಬಹುದು ಎಂದಿದ್ದಾರೆ. ಐವತ್ತು ವರುಶ ಆದಮೇಲೂ ಕೂಡ ಈ ಮಾತನ್ನು ಹಾಗೆಯೇ ರಿಪೀಟ್ ಮಾಡುತ್ತಾ ಇದ್ದೇವೆ. ಆದರೆ ವಾಸ್ತವವಾಗಿ ಕಳೆದು ನಲವತ್ತು ಐವತ್ತು ವರುಶಗಳಲ್ಲಿ ಈ ಮೂರು ಅಂಶಗಳಲ್ಲಿ, ಯಾವ ಅಂಶ, ಯಾವ ಅಂಶದ ಜೊತೆಗೆ ಬೆರೆತು, ಯಾವ ತರಹದ ಚಲನೆ ಉಂಟಾಗಿದೆ ಎನ್ನುವುದನ್ನು ಕುರಿತು ನಾವಿನ್ನೂ ಚರ್ಚೆ ಮಾಡಿಲ್ಲ. ಈ ಮೂರರಲ್ಲಿ ಯಾವುದಾದರೂ ಎರಡು ಇದ್ದು, ಇನ್ನು ಯಾವುದಾದರೂ ಒಂದು ಇಲ್ಲದಿದ್ದರೆ ಅಥವಾ ಎರಡು ಇಲ್ಲದೆ ಇದ್ದರೆ ಏನಾಗುತ್ತದೆ, ಯಾವಯಾವ ರೀತಿ ಚಲನೆಯಾಗುತ್ತದೆ ಎಂಬುದನ್ನು ಕೂಲಂಕಷವಾಗಿ ಅಧ್ಯಯನ ಮಾಡಿದಂತಿಲ್ಲ. ಇಂಗ್ಲಿಶ್ ಮತ್ತು ದೇಶೀಯಭಾಷೆಗಳ ನಡುವೆ ಹಿಂದಿಭಾಷೆ ಬಂದು ಸೇರಿದರೆ ಏನಾಗಬಹುದು? ದೇಶೀಯ ಭಾಷೆಯಲ್ಲಿರುವ ಪ್ರಭೇದಗಳ ನಡುವೆ ಸಂಬಂಧ ಯಾವರೀತಿ ರೂಪುಗೊಳ್ಳುತ್ತದೆ? ಏಕೆಂದರೆ ಜಾತಿ ಎನ್ನುವುದು ಸ್ಥಿರ. ಅದನ್ನು ಯಾವುದೇ ಕಾರಣಕ್ಕೂ ಬದಲಾವಣೆ ಮಾಡುವುದಕ್ಕೆ ಆಗುವುದಿಲ್ಲ. ಸಂಪತ್ತು ಅಥವಾ ಹಣದಲ್ಲಿ ಚಲನೆ ಸಾಧ್ಯ. ಭಾಷೆ ಎಂದರೇನು? ಭಾಷೆಯನ್ನು ಸಂಪತ್ತು ಮತ್ತು ಜಾತಿಗಳ ಸಂಬಂಧದಲ್ಲಿ ಹೇಗೆ ನೋಡಬೇಕು? ಇಲ್ಲಿ ಪಲ್ಲಟಗಳು ಸಾಧ್ಯವಿದೆಯೇ? ಆಯ್ಕೆಗಳು ಸಾಧ್ಯವಿದೆಯೇ? ಆಯ್ಕೆಯಿದ್ದರೆ ಅದು ಸಾಮಾಜಿಕವಾದದ್ದೆ ಅಥವಾ ವೈಯಕ್ತಿಕವಾದದ್ದೇ? ವೈಯಕ್ತಿಕವಾಗಿದ್ದಾಗ ವ್ಯಕ್ತಿಗತವಾದ ಸವಲತ್ತುಗಳೇನು? ಇವುಗಳೆಲ್ಲವನ್ನೂ ಕೂಡ ನಾವು ಪರಿಶೀಲಿಸಿ ನೋಡಿಯೇ ಇಲ್ಲ. ಲೋಹಿಯಾ ಕೊಟ್ಟ ಚೌಕಟ್ಟು ಅದ್ಭುತವಾಗಿದೆ. ಇಂತಹ ಚೌಕಟ್ಟು ಸ್ವಾತಂತ್ರ್ಯೋತ್ತರ ಭಾರತದಲ್ಲಿ ಹೇಗೆ ಕಾರ್ಯಶೀಲವಾಗಿದೆ ಎಂಬುದನ್ನು ವಿಶ್ಲೇಷಣೆ ಮಾಡಿಲ್ಲ. ವಿಶ್ಲೇಷಣೆ ಮಾಡಿದರೆ ಬಹಳ ಕುತೂಹಲಕಾರಿಯಾದ ಸಂಗತಿಗಳು ನಮಗೆ ಗೋಚರವಾಗುತ್ತವೆ.

ದಲಿತರು ಮತ್ತು ಭಾಷೆ ಎನ್ನುವಾಗ, ಚರ್ಚೆಯನ್ನು ಬೆಳೆಸುವುದಕ್ಕಾಗಿ ದಲಿತರು ಮತ್ತು ಕನ್ನಡ ಅಥವಾ ದಲಿತರ ಕನ್ನಡ ಎಂದೇ ಬಳಕೆ ಮಾಡುತ್ತೇನೆ. ದಲಿತರು ಆಡುವ ಕನ್ನಡ ಯಾವ ತರಹದ್ದು? ದಲಿತರಿಗೊಂದು ಕನ್ನಡ ಇದೆಯೇ? ದಲಿತರ ಮಾತಿನ ಕನ್ನಡವನ್ನು ಅವರ ಚಹರೆಯ ಕನ್ನಡಭಾಷೆಯಾಗಿ ಪರಿಗಣಿಸಲಾಗಿದೆ. ದಲಿತ ಆದ್ದರಿಂದ ಅವರು ಆ ರೀತಿ ಕನ್ನಡವನ್ನು ಮಾತನಾಡುತ್ತಾ ಇದ್ದಾರೆ ಎಂದು ಗುರುತಿಸಿಕೊಳ್ಳುತ್ತಿದ್ದೇವೆ. ಸ್ವಾತಂತ್ರ್ಯೋತ್ತರ ಕಾಲದಲ್ಲಿ ದಲಿತರು ತಾವು ಆಡುವ ಕನ್ನಡವನ್ನು ಸಂಪೂರ್ಣವಾಗಿ ಕಳೆದುಕೊಳ್ಳಬೇಕೆಂದು ಒತ್ತಾಯ ಇತ್ತು. ಅಂದರೆ ಕನ್ನಡಭಾಷೆಯಲ್ಲಿದ್ದ ಶಿಷ್ಟ ಅಥವಾ ಪ್ರಮಾಣ ಮಾದರಿಗೆ ಹೊಂದಿಕೊಳ್ಳಬೇಕೆಂಬ ಒತ್ತಾಯ ಬಲವಾಗಿತ್ತು. ಹೀಗೆ ಹೆದ್ದಾರಿಯನ್ನು ಸೇರಬೇಕು ಎಂದರೆ ನೀವು ಸಂಪೂರ್ಣ ನಿಮ್ಮ ಭಾಷೆಯ ಸ್ವಾತಂತ್ರ್ಯ ಬಿಡಬೇಕು. ಹೆಚ್ಚು ಸಂದರ್ಭದಲ್ಲಿ ಒಬ್ಬ ವ್ಯಕ್ತಿಯ ಮುಂಚಲನೆಯನ್ನು ಹೇಗೆ ಗುರುತಿಸಿದ್ದೇವೆ ಎಂದರೆ ಅವರು ಮಾತನಾಡುತ್ತಾ ಇದ್ದರೆ ಆ ವ್ಯಕ್ತಿ ತಮ್ಮ ಸಾಮಾಜಿಕ ಹಿನ್ನೆಲೆ ಸೂಚಿಸುವ ಭಾಷೆಯನ್ನು ಬಿಟ್ಟುಕೊಟ್ಟದ್ದನ್ನು ಗುರುತಿಸುವ ಮೂಲಕ. ಈ ವಿಚಾರ, ಕರ್ನಾಟಕದಲ್ಲಿರುವ ಅಲ್ಪಸಂಖ್ಯಾತರಿಗೂ ಅನ್ವಯಿಸುತ್ತದೆ. ಒಬ್ಬ ಮುಸ್ಲಿಂ ಕನ್ನಡ ಮಾತನಾಡುತ್ತಾ ಇದ್ದರೆ ಆತ ಮುಸ್ಲಿಂ/ಸಾಬಿ ಅಂತ ಗೊತ್ತಾಗುವುದೇ ಇಲ್ಲ. ಅಷ್ಟು ಚನ್ನಾಗಿ ಕನ್ನಡ ಮಾತನಾಡುತ್ತಾರೆ ಎಂದುಬಿಡುತ್ತೇವೆ. ಅಂದರೆ ತನ್ನ ಉರ್ದುಭಾಷೆಯ ನೆಲೆಯಿಂದ ರೂಪುಗೊಂಡ ಕನ್ನಡವನ್ನು ಕಳೆದುಕೊಂಡು ತನ್ನ ಚಹರೆಯನ್ನು ಬಿಟ್ಟುಕೊಡಬೇಕು. ಆಗ ಮಾತ್ರ ಮೈನ್‌ಸ್ಟ್ರೀಮ್ ಒಳಗಡೆ ಇದ್ದಾರೆ ಅಥವಾ ಪರವಾಗಿದ್ದಾರೆ ಎನ್ನುತ್ತೇವೆ. ಈ ಒತ್ತಾಯ ಶೈಕ್ಷಣಿಕವಾಗಿ, ಸಾಮಾಜಿಕವಾಗಿಯೂ ಹಲವು ನೆಲೆಗಳಲ್ಲಿ ದಲಿತರ ಮೇಲೆ ಇತ್ತು./

ಎರಡನೇ ಆಯ್ಕೆ ಎಂದರೆ ಕೆಲವು ಬಳಕೆಯ ವಲಯಗಳಲ್ಲಿ ನಿಮ್ಮ ಪ್ರಭೇದದ ಕನ್ನಡವನ್ನು ಉಳಿಸಿಕೊಳ್ಳಬಹುದು. ಇನ್ನು ಕೆಲವು ವಲಯಗಳಲ್ಲಿ ಪ್ರಮಾಣ ಕನ್ನಡವನ್ನು ಬಳಕೆ ಮಾಡಬೇಕು ಎಂಬ ನಿರ್ಧಾರ. ಅಂದರೆ ಪ್ರಮಾಣಕನ್ನಡದ ಹೆದ್ದಾರಿಗುಂಟ ಸಾಗುವಂತಹದು. ಸಾಮಾಜಿಕ ಪ್ರಭೇದ ಹೆದ್ದಾರಿಯಲ್ಲಿ ಸಾಗುವಂತಹದ್ದಲ್ಲ. ಆದರೆ ನಿಮ್ಮ ಕನ್ನಡವನ್ನು ನಿರ್ಬಂಧಿತ ವಲಯಗಳಲ್ಲಿ ಬಳಸಿಕೊಳ್ಳಬೇಕು. ಈ ಆಯ್ಕೆಯನ್ನು ಕೂಡ ಕೆಲವು ಕಾಲ ಕೊಟ್ಟಂತೆ ಕಾಣುತ್ತದೆ.

ಆದರೆ ಎರಡು ದಶಕಗಳಲ್ಲಿ ನಡೆದಿರುವಂತಹ ಬಹಳ ಮುಖ್ಯ ಪಲ್ಲಟವೆಂದರೆ ಚಹರೆಯನ್ನು ಉಳಿಸಿಕೊಳ್ಳುವ ಕಡೆಗೆ ಇದೆ; ಸಂಪೂರ್ಣವಾಗಿ ಕಳೆದುಕೊಳ್ಳುವ ಕಡೆಗೆ ಇಲ್ಲ. ಚಹರೆ ಸಂಪೂರ್ಣವಾಗಿ ರಕ್ಷಿಸಿಕೊಳ್ಳುವಂತಹದು, ಉಳಿಸಿಕೊಳ್ಳುವಂತಹದು. ಹೇಗೆ ಉಳಿಸಿಕೊಳ್ಳಬೇಕು ಎನ್ನುವುದರ ಕಡೆಗೆ ಬಹಳ ಮುಖ್ಯವಾದ ಚಲನೆಯನ್ನು ಗಮನಿಸಿದ್ದೇವೆ. ಇದು ಭಾಷೆಗೆ ಮಾತ್ರ ಸಂಬಂಧಪಟ್ಟದ್ದು ಅಲ್ಲ. ಇಡೀ ದಲಿತ ಸಮುದಾಯದಲ್ಲಾಗುವ ಬದಲಾವಣೆಯನ್ನೇ ಈಗ ಗಮನಿಸಬಹುದು.ಯಾವುದು ಲಜ್ಜೆಯ ವಿಷಯವಾಗಿತ್ತೋ. ಅದು ಹೆಮ್ಮೆಯ ವಿಷಯವಾಗಿದೆ. ದಲಿತ ಎನ್ನುವುದು ಲಜ್ಜೆಯ ವಿಷಯವಾಗಿತ್ತು. ಅದು ಹೆಮ್ಮೆಯ ವಿಷಯವಾಗಿ ಪರಿವರ್ತನೆ ಆಗಿದೆ.

ಅದು ಅಧಿಕೃತತೆಯ ವಿಷಯವಾಗಿ ಪರಿವರ್ತನೆ ಆಗಿದೆ. ಆ ಚಹರೆಯನ್ನು ಕಾಯ್ದುಕೊಳ್ಳುವ, ಉಳಿಸಿಕೊಳ್ಳುವ, ರಕ್ಷಿಸಿಕೊಳ್ಳುವ ಕಡೆಗೆ ಬದಲಾವಣೆ ಆಗುತ್ತಿದೆ. ಈ ಮೂರು ಆಯ್ಕೆಗಳನ್ನು ಕಳೆದ 60–70ರ ದಶಕದಿಂದ ಜನಸಾಮಾನ್ಯರ ಮುಂದೆ ಇಟ್ಟಿದ್ದೇವೆ. ಈ ಕಾಯ್ದುಕೊಳ್ಳುವುದರ ಬಗೆಗೆ, ಮರುಸ್ಥಾಪಿಸುವುದರ ಬಗೆಗೆ, ನಾನು ಹೆಚ್ಚು ವಿವರಣೆಯನ್ನು ಕೊಡುತ್ತೇನೆ. ಉಳಿದೆರಡರ ಬಗ್ಗೆ ಮುಂದೇನಾಗುತ್ತದೆ ಎಂದು ಕಾಯ್ದು ನೋಡೋಣ. ಈಗ ಕನ್ನಡದ ಸಮಸ್ಯೆಯನ್ನು ಜಾಗತಿಕ ನೆಲೆಯ ಮುಖಾಂತರ ನೋಡೋಣ. ಇಂಥದೇ ಪ್ರಸಂಗ ಬೇರೆ ಬೇರೆ ಸಂದರ್ಭಗಳಲ್ಲಿ ಯಾವ ಬಗೆಯ ಪ್ರತಿಕ್ರಿಯೆ ಪಡೆದಿದೆ ಎಂಬುದನ್ನು ನೋಡಬಹುದು. ಒಂದೆರಡು ನಿದರ್ಶನಗಳನ್ನು ನಿಮ್ಮ ಮುಂದೆ ಇಡುವುದಕ್ಕೆ ಪ್ರಯತ್ನ ಪಡುತ್ತೇನೆ.

ಒಂದು : ಇಂಗ್ಲಿಶ್‌ನ ಒಂದು ಪ್ರಭೇದವನ್ನು ಮಾತನಾಡುತ್ತಾ ಇದ್ದ ಕಪ್ಪುಜನರ ಬಗೆಗೆ ಒಂದು ಮಾಹಿತಿಯನ್ನು ಕೊಡುವುದಕ್ಕೆ ಇಷ್ಟಪಡುತ್ತೇನೆ. ಕಪ್ಪುಜನರ ಮಕ್ಕಳು ಮಾತಾಡುತ್ತಿದ್ದ ಪ್ರಭೇದವನ್ನು ಬ್ಲಾಕ್ ವೆರೈಟಿ ಆಫ್ ಇಂಗ್ಲಿಶ್ ಅಂತ ಕರೆಯುತ್ತಿದ್ದರು. ಆದರೆ ಅವರ ಜತೆಯಲ್ಲಿ ಕುಳಿತುಕೊಂಡು ಓದುತ್ತಿದ್ದ ಶ್ವೇತವರ್ಣೀಯ ಮಕ್ಕಳು ಬಳಸುತ್ತಿದ್ದ ಪ್ರಭೇದ ಬೇರೆಯಾಗಿತ್ತು. ಕಪ್ಪುಮಕ್ಕಳಿಗೆ ಶಾಲೆಯಲ್ಲಿ ಕಲಿಸುತ್ತಿದ್ದ ಭಾಷೆ ಮತ್ತು ಶೈಕ್ಷಣಿಕ ವಲಯದಲ್ಲಿ ನೆಲೆಗೊಳಿಸುತ್ತಿದ್ದ ಭಾಷೆ ಬೇರೆಯಾಯಿತು. ಆ ಭಾಷಾ ಪ್ರಭೇದದ ಬಳಕೆ ಮತ್ತು ಸಾಧ್ಯತೆ ಬಿಳಿ ಮಕ್ಕಳಿಗೆ ಇದ್ದಷ್ಟು ಕಪ್ಪು ಮಕ್ಕಳಿಗೆ ಇರುತ್ತಿರಲಿಲ್ಲ. ಅಂದರೆ ಅವರು ಬೇರೊಂದು ಭಾಷೆಯನ್ನು ಕಲಿಯಬೇಕಾದ ಪರಿಸ್ಥಿತಿ ಉಂಟಾಗಿತ್ತು. ಅದನ್ನು ಕೆಲವು ಶಿಕ್ಷಣತಜ್ಞರು ಗಮನಿಸಿದರು.

ಒಂದು ವಿಚಿತ್ರವಾದ ಕೇಸು. 1979ರಲ್ಲಿ ಅಮೆರಿಕಾದ ರಾಜ್ಯ ಆನ್ ಹಾರ್ಬರ್ ಊರಿನಲ್ಲಿ. ಅಲ್ಲಿಯ ಶಾಲೆಯ ಆಡಳಿತ ಮಂಡಳಿಯ ಮೇಲೆ ಕಪ್ಪು ಮಕ್ಕಳ 25 ಜನ ತಂದೆತಾಯಂದಿರು ಒಂದು ಕೇಸು ಹಾಕಿದರು. ನಮ್ಮ ಮಕ್ಕಳು ಶಾಲೆಗೆ ಹೋಗುವಾಗ ಮಾತನಾಡುತ್ತಿದ್ದ ಇಂಗ್ಲಿಶ್, ಶಾಲೆಯಲ್ಲಿ ಅಧ್ಯಾಪಕರು ಮತ್ತು ಇತರ ಮಕ್ಕಳು ಬಳಸುವ ಇಂಗ್ಲಿಶ್ ಬೇರೆ ಬೇರೆಯಾಗಿವೆ. ಇದರಿಂದ ನಮ್ಮ ಮಕ್ಕಳು ಶೈಕ್ಷಣಿಕವಾಗಿ ಹಿಂದುಳಿದಿದ್ದಾರೆ ಎಂದು ವಾದಿಸಿದರು. ನ್ಯಾಯಾಲಯಕ್ಕೆ ಹಲವು ಜ್ಞಾನಶಿಸ್ತುಗಳ ತಜ್ಞರನ್ನು ಕರೆಯಿಸಿದರು. (ಸಾರ್ವಜನಿಕರು, ಆಡಳಿತ ಮಂಡಳಿ, ಸಮಾಜಶಾಸ್ತ್ರಜ್ಞರು, ಶಿಕ್ಷಣತಜ್ಞರು, ಭಾಷಾ ಶಾಸ್ತ್ರಜ್ಞರು ಮುಂತಾದವರು) ಕೊನೆಯಲ್ಲಿ ಆ ಕೇಸನ್ನು ನ್ಯಾಯಾಲಯ ಒಪ್ಪಿಕೊಂಡು ಒಂದು ತೀರ್ಪನ್ನು ನೀಡಿತು. ಕಪ್ಪು ಮಕ್ಕಳಿಗೆ ಅಡ್ಡಿಗಳನ್ನು ತರುವ ಸ್ಥಿತಿ ಇದೆಯೆಂದುನಲ್ಲಿ ಇದ್ದಾರೆ ಒಪ್ಪಿತು. ನಾನು ಈ ಪದವನ್ನು ಬಹಳ ಎಚ್ಚರಿಕೆಯಿಂದ ಬಳಕೆ ಮಾಡುತ್ತಾ ಇದ್ದೇನೆ. ಇದನ್ನು ಒಪ್ಪಿಕೊಂಡು ಶಾಲೆಯ ಆಡಳಿತ ಮಂಡಳಿಗೆ ಒಂದು ನಿರ್ದೇಶನವನ್ನು ಕೊಟ್ಟರು. ಅದು ಬಹಳ ಕುತೂಹಲಕಾರಿಯಾಗಿದೆ. ಅದೇನೆಂದರೆ ಶಾಲೆಗೆ ಬರುತ್ತಿರುವ ಈ ಕಪ್ಪುಮಕ್ಕಳಿಗೆ ಒಂದು ವಿಶೇಷ ತರಬೇತಿಯೊಂದನ್ನು ಪ್ರಾರಂಭಿಸಿ ಬಿಳಿಯ ಮಕ್ಕಳು ಮಾತನಾಡುತ್ತಿರುವ ಇಂಗ್ಲಿಶನ್ನು ಕಲಿಸಬೇಕು ಎಂದು. 25 ವರ್ಷದ ನಂತರ ಅಂದರೆ 2004ರಲ್ಲಿ ಒಂದು ಪುನರ್ಮಿಲನ ಮಾಡಿದರು. ಅಂದರೆ ಕಪ್ಪುಜನರ

ಮಕ್ಕಳ ಪರ ಹೋರಾಟ ನಡೆಸಿದವರೆಲ್ಲರೂ ಒಂದು ಕಡೆ ಸೇರಿ ಈ 25 ವರ್ಷಗಳಲ್ಲಿ ಏನಾಯಿತು ಅಂತ ಚರ್ಚೆ ಮಾಡಿದರು. 25 ವರ್ಷ ಹಿಂದೆ ಕೊಟ್ಟದ್ದಂತಹ ತೀರ್ಪಿನ ಪರಿಣಾಮ ವೇನಾಯಿತು ಅಂದರೆ, ಬಿಳಿಯರ ಇಂಗ್ಲಿಶ್‌ಗೆ ಹತ್ತಿರವಾಗದ ಹೊರತು ಶೈಕ್ಷಣಿಕ ಉನ್ನತೀಕರಣ ಅಥವಾ ಸಬಲೀಕರಣ ಸಾಧ್ಯವಾಗುವುದಿಲ್ಲ. ಅಂದರೆ ನಮ್ಮ ಭಾಷೆ ಚಹರೆ ಕಳೆದುಕೊಳ್ಳುವ ಹೊರತು ನಿಮ್ಮ ಉನ್ನತಿ ಸಾಧ್ಯವಿಲ್ಲ ಎಂದಾಯ್ತು. ನ್ಯಾಯಾಲಯ ಕೊಟ್ಟ ತೀರ್ಪಿನ ನಿರ್ಣಯ ಮಾತ್ರ ವಿಚಿತ್ರವಾಗಿತ್ತು. ಅದರ ಪರಿಣಾಮದಿಂದ ಬೇಕಾದಷ್ಟು ಬದಲಾವಣೆ ಆದವು. ಯುರೋಪಿನಲ್ಲಿ ಕೂಡ ಬದಲಾವಣೆ ಆದವು. ಅದೇನೆಂದರೆ ಶಾಲೆಯಲ್ಲಿ ಕಲಿಯುವ ಮಕ್ಕಳಿಗೆ ಅವರ ಉಪಭಾಷೆಯಲ್ಲೆ ಶಿಕ್ಷಣ ಕೊಡಬೇಕು ಎಂದರು. ಇದಕ್ಕೆ ತೀವ್ರವಾದ ವಿರೋಧ ಪಾಲಕರಿಂದ ಬಂತು.

ಮೈಸೂರಿನಲ್ಲಿರುವ ಭಾರತೀಯ ಭಾಷೆಗಳ ಕೇಂದ್ರ ಸಂಸ್ಥೆಯಲ್ಲಿ ಭಾರತ ಸರ್ಕಾರದ ಆದೇಶದ ಮೇರೆಗೆ ಇಂತಹ ಒಂದು ಪ್ರಯೋಗ ಮಾಡಲಾಯಿತು. ಅಂದರೆ ಕನ್ನಡವನ್ನು ಕಲಿಸುವ ಸೋಲಿಗ ಮತ್ತು ಜೇನುಕುರುಬ ಮಕ್ಕಳಿಗೆ ಅವರಾಡುವ ಉಪಭಾಷೆಯಲ್ಲಿ ಪಠ್ಯಪುಸ್ತಕ ತಯಾರಿಸಿ ಕಲಿಸಲಾಯಿತು. ಅದಕ್ಕೆ ತೀವ್ರವಾದ ವಿರೋಧ ಬಂದುದು ಆ ಸಮುದಾಯದಿಂದಲೇ. ಅವರು ಮೇಲ್ವರ್ಗದ ಅಂದರೆ ಸಾಮಾಜಿಕವಾಗಿ ಮನ್ನಣೆ ಪಡೆದಿರುವಂತಹ ಭಾಷೆಯಲ್ಲೆ ಕಲಿಸದೆ ನಮ್ಮ ಮಕ್ಕಳು ಮನೆಯಲ್ಲಿ ಮಾತನಾಡುವ ಕನ್ನಡದಲ್ಲಿ ಬೋಧಿಸಿದರೆ ನಮ್ಮ ಮಕ್ಕಳು ಶಾಲೆಗೆ ಏಕೆ ಬರಬೇಕು ಎಂಬ ಪ್ರಶ್ನೆ ಹಾಕಿದರು. ದಕ್ಷಿಣ ಆಫ್ರಿಕಾದಲ್ಲೂ ಇದೇ ರೀತಿ ಆಯ್ತು. ಆಫ್ರಿಕಾದಲ್ಲಿ ಇಂಗ್ಲಿಶ್ ಬದಲು ಆಫ್ರಿಕಾನ್‌ನಲ್ಲಿ ಶಿಕ್ಷಣ ಕೊಡಬೇಕು ಎಂದಾಗ ಆಫ್ರಿಕದ ಜನತೆ ಆಫ್ರಿಕಾನ್ ಎನ್ನುವ ಭಾಷೆಯನ್ನೇ ವಿರೋಧಿಸಿದರು. ನಮಗೆ ಇಂಗ್ಲಿಶ್‌ನಲ್ಲಿ ಶಿಕ್ಷಣ ಬೇಕು. ಆಫ್ರಿಕಾನ್‌ನಲ್ಲಿ ಬೇಡ ಎಂದು. ಆಮೇಲೆ ಅದನ್ನು ಹಿಂದಕ್ಕೆ ತೆಗೆದುಕೊಳ್ಳಲಾಯಿತು.

ಅಮೆರಿಕಾದಲ್ಲಿ ಇಂದಿಗೂ ಆಯಾ ಸಾಮಾಜಿಕ ವರ್ಗದ ಮಕ್ಕಳಿಗೆ ಅವರಾಡುವ ಪ್ರಭೇದಗಳಲ್ಲೆ ಶಿಕ್ಷಣ ನೀಡಬೇಕು ಎಂಬ ಬಗ್ಗೆ ದೊಡ್ಡ ಚರ್ಚೆ ನಡೆಯುತ್ತಿದೆ. ತೀರಾ ಈಚೆಗೆ ಒಂದು ಸಂಶೋಧನೆಯಲ್ಲಿ ಒಂದು ಸಂಗತಿ ತಿಳಿದುಬಂದಿದೆ. ಅಂದರೆ ಶೈಕ್ಷಣಿಕವಾಗಿ ಮಕ್ಕಳು ಹಿಂದುಳಿದಿರುವುದಕ್ಕೆ ಕಾರಣ, ಎರಡು ಉಪಭಾಷೆಗಳ ನಡುವೆ ಇರುವ ವ್ಯತ್ಯಾಸವಲ್ಲ; ಅದರ ಬದಲು ಒಂದು ಉಪಭಾಷೆಯನ್ನು ಇನ್ನೊಂದು ಉಪಭಾಷೆಯ ಎದುರಿಗೆ ತರತಮಭಾವದಿಂದ ನೋಡುವಂತಹದು. ಉಪಭಾಷೆಯ ನಿರಾಕರಣೆ ಸಮಸ್ಯೆಯೇ ಹೊರತು ಅವುಗಳ ನಡುವೆ ಇರುವ ವ್ಯತ್ಯಾಸವಲ್ಲ, ಅಂದರೆ ದಲಿತರು ಮಾತನಾಡುವ ಕನ್ನಡ, ಮೇಲ್ಜಾತಿಯವರು ಮಾತನಾಡುವ ಕನ್ನಡ ಅಥವಾ ಶಿಷ್ಟಕನ್ನಡದ ನಡುವೆ ಇರುವ ವ್ಯತ್ಯಾಸ ಶೈಕ್ಷಣಿಕವಾಗಿ ಬಹಳ ಮುಖ್ಯವಾಗಿಲ್ಲ. ಆದರೆ ದಲಿತರು ತಮ್ಮ ಕನ್ನಡವನ್ನು ಕಳೆದುಕೊಳ್ಳಬೇಕು. ಅದನ್ನು ಬಿಟ್ಟುಕೊಡಬೇಕು. ಅದು ನಾಚಿಕೆಯ ಸಂಗತಿ ಎನ್ನುವ ರೀತಿಯಲ್ಲಿ ಅದನ್ನು ಬಹಿಷ್ಕರಿಸತಕ್ಕದ್ದು; ಅದನ್ನು ಕೀಳು ಎಂದು ಸ್ಥಿರೀಕರಣ ಮಾಡುವುದು; ಅದನ್ನು ಚೌಕಟ್ಟು ಹೊರಗಡೆ ಇಡುವಂತಹದ್ದು;

ಇದು ಶೈಕ್ಷಣಿಕವಾಗಿ ಹಿಂದುಳಿದಿರುವುದಕ್ಕೆ ಮುಖ್ಯವಾದ ಕಾರಣವಾಗಿರುತ್ತದೆ. ಅಂದರೆ ಬೆರಳು ಮಾಡಿ ಇದು ಈ ಕನ್ನಡ ಅಂದರೆ, ಶ, ಷ ಮತ್ತು ಸಗಳ ನಡುವೆ ಭೇದವಿರಬೇಕು. 'ಶ' ಉಚ್ಚಾರ ಮಾಡುವ ಕಡೆ 'ಸ' ಉಚ್ಚರಿಸ ಬಾರದು. 'ಷ' ಎಂದು ಉಚ್ಚರಿಸಲೇಬೇಕೆಂದು ದಲಿತರ ಮೇಲೆ ಒತ್ತಡ ಹೇರಲಾಗುತ್ತಿದೆ. 'ಷ' ಹೇಳುವ ಕಡೆಗಳೆಲ್ಲ 'ಸ' ಹೇಳಿದರೆ, ಅದು ಅಶುದ್ಧವಾದ ಅವಮಾನದ (ಗ್ರಾಮ್ಯ, ತಪ್ಪುಕನ್ನಡ) ಸಂಗತಿ ಎಂದು ತಿಳಿಯಲಾಗಿದೆ. 'ವಿಷ' ಎಂದು ಹೇಳುವುದನ್ನು 'ಇಸ' ಎಂದರೆ ಅಶುದ್ಧ ಕನ್ನಡ, ಗ್ರಾಮ್ಯ ಕನ್ನಡ. ಅದು 'ವಿಷ' ಎಂದೆ ಇರಬೇಕು 'ಇಸ' ಎನ್ನುವುದು ಅವಮಾನದ ಸಂಗತಿಯಾಗಿದೆ. ಇದು ಕನ್ನಡದಲ್ಲಿ ನಡೆದರೂ ಜಗತ್ತಿನಾದ್ಯಂತ ಈ ಮಾದರಿ ಚರ್ಚೆಗಳು ನಡೆಯುತ್ತಿವೆ. ನಾನು ಕನ್ನಡ ನಿದರ್ಶನಗಳ ಮೂಲಕ ನಿಮ್ಮ ಗಮನಕ್ಕೆ ತರುತ್ತಾ ಇದ್ದೇನೆ. ಇದೇ ರೀತಿ ಮತ್ತೊಂದು ಚರ್ಚೆಯನ್ನು ಮಂಡಿಸುತ್ತೇನೆ. ಇದು ಕೂಡ ಕಳೆದ ಮೂವತ್ತು ನಾಲ್ವತ್ತು ವರ್ಷಗಳಲ್ಲಿ ನಡೆದಿರುವಂತಹದು.

ಬ್ರಿಟನಿನ ಒಬ್ಬ ಸಮಾಜ ಶಿಕ್ಷಣ ತಜ್ಞ ಮತ್ತು ಭಾಷಾ ತಜ್ಞ ಮಂಡಿಸಿದ ಕೆಲವು ವಿಚಾರಗಳು ಹೀಗಿವೆ. ಆತ ಬೆಸಿಲ್ ಬರ್ನ್‌ಸ್ಟೈನ್. ಅವನು 1971 ರಿಂದ 1990ರವರೆಗೆ ಹಲವು ಅಧ್ಯಯನಗಳನ್ನು ನಡೆಸಿದ್ದಾನೆ. 2000ದಲ್ಲಿ ತೀರಿಕೊಂಡ ಆತ. 1924ರಲ್ಲಿ ಹುಟ್ಟಿದ ಅವನು 1995ರಲ್ಲಿ ತನ್ನ ಸಂಶೋಧನಾ ಪ್ರಮೇಯಗಳನ್ನು 5 ಸಂಪುಟಗಳಲ್ಲಿ ಮಂಡಿಸಿದ್ದಾನೆ. Code-Class and Control ಹೆಸರಿನಲ್ಲಿ ಪ್ರಕಟವಾಗಿವೆ. ಆತ ಇದೇ ಸಮಸ್ಯೆಯನ್ನು ತೆಗೆದುಕೊಳ್ಳುತ್ತಾನೆ. ಅಂದರೆ ಬ್ರಿಟನ್ ಶಾಲೆಯಲ್ಲಿ ಮಕ್ಕಳು ಕಲಿಯುವ ಭಾಷಾ ಸಮಸ್ಯೆಯನ್ನು ತೆಗೆದುಕೊಂಡು ಅಧ್ಯಯನ ಆರಂಭಿಸುತ್ತಾನೆ. ಏಕೆ ಶಿಕ್ಷಣದಲ್ಲಿ ಕೆಳವರ್ಗದ ಮಕ್ಕಳು ಉನ್ನತ ವರ್ಗದ ಮಕ್ಕಳಿಗಿಂತ ಹಿಂದುಳಿದಿರುತ್ತಾರೆ? ಅವರಿಬ್ಬರು ಮಾತನಾಡುವ ಭಾಷಾ ಪ್ರಭೇದ ಬೇರೆ ಬೇರೆ. ಅಧ್ಯಾಪಕರು ಬಳಸುವ, ಮಾತನಾಡುವ, ಓದಬೇಕೆಂದು ಒತ್ತಾಯ ಪಡಿಸುವ ಭಾಷೆ ಮತ್ತು ಮಕ್ಕಳ ಸಾಮಾಜಿಕ ಪರಿಸರದ ಭಾಷೆ ಬೇರೆ ಬೇರೆ. ಅವು ಬೇರೆ ಬೇರೆ ಅಂಜಜಗಳು. ಬರ್ನ್‌ಸ್ಟೈನ್ ಈ ಮಾತನ್ನು ಬಳಸುತ್ತಾನೆ. ವಿಶಿಷ್ಟವಾದ ಪರಿಭಾಷೆಗಳನ್ನು ಬಳಸುತ್ತಾನೆ. 1. ರಿಸ್ಟ್ರಿಕ್ಟೆಡ್ ಕೋಡ್ 2. ಎಲಾಬರೇಟ್ ಕೋಡ್ ಅಂತ ಬಳಸುತ್ತಾನೆ. ಮೊದಲನೆಯದು ಸಂವೃತ ವ್ಯವಸ್ಥೆ ಇನ್ನೊಂದು ವಿವೃತ ವ್ಯವಸ್ಥೆ ಎಂದು ನಾನು ಕರೆಯುವುದಕ್ಕೆ ಇಷ್ಟಪಡುತ್ತೇನೆ.

ಸಂವೃತ ನುಡಿ ಯಾವಾಗಲೂ ಒಂದು ಸಮುದಾಯದ ಒಳಗಡೆ ಜೀರ್ಣಿಸತಕ್ಕ ಆ ಅನುಭವಗಳಿಗೆ ತೆರೆದುಕೊಂಡಿರುವ ಮತ್ತು ಯಾರ ಜತೆಯಲ್ಲಿ ಮಾತನಾಡುತ್ತಾರೋ ಅವರನ್ನು ಒಳಗೊಂಡು ಮಾತನಾಡುವ ಭಾಷೆ. ಆದರೆ ಎಲಾಬರೇಟ್ ಕೋಡ್ ಎನ್ನುವುದು ಯಾರ ಜತೆಯಲ್ಲಾದರೂ ಮಾತಾಡುತ್ತಿರುವಾಗ ತಾನು ಬೇರೆ ಕೇಳಿಸಿಕೊಳ್ಳುತ್ತಿರುವ ವ್ಯಕ್ತಿ ಬೇರೆ; ತನಗೆ ಗೊತ್ತಿರುವ ವಿಚಾರಗಳನ್ನು ಅಂದರೆ ತನಗೆ ಇರುವ ಅನುಭವಗಳನ್ನು ಇನ್ನೊಬ್ಬರಿಗೆ ರವಾನಿಸುತ್ತಾ ಇದ್ದೇನೆ ಎಂಬ ದೃಷ್ಟಿಕೋನದಿಂದ ಮಾತನಾಡುತ್ತಿರುವ ಭಾಷೆ. ಎಲಾಬರೇಟ್ ಕೋಡ್ ಹೆಚ್ಚಾಗಿ ಪ್ರಮಾಣ ಭಾಷೆಯನ್ನು ಅನುಸರಿಸುತ್ತದೆ. ಕೆಳಸಾಮಾಜಿಕ ವರ್ಗದ ಮಕ್ಕಳು ಬಳಸುವ ಭಾಷೆಯನ್ನು ರಿಸ್ಟ್ರಿಕ್ಟೆಡ್

ಕೋಡ್ ಎಂದು ಕರೆಯುತ್ತಾರೆ. ಈ ರಿಸ್ಟ್ರಿಕ್ಟೆಡ್ ಕೋಡ್‌ನಿಂದ ಎಲಾಬರೇಟ್ ಕೋಡ್‌ಗೆ ಪಲ್ಲಟವಾಗಬೇಕಾಗಿ ಬಂದಾಗ ಆ ಮಕ್ಕಳು ತೊಂದರೆಯನ್ನು ಅನುಭವಿಸುತ್ತಾರೆ. ಈಗಾಗಲೇ ಎಲಾಬರೇಟ್ ಕೋಡ್ ನಲ್ಲಿ ವ್ಯವಹರಿಸುತ್ತಿರುವ ಉತ್ತಮ ಜಾತಿಯ ಮಕ್ಕಳು. ಸುಲಭವಾಗಿ ಶೈಕ್ಷಣಿಕವಾಗಿ ಅಭಿವೃದ್ಧಿಯನ್ನು ಸಾಧಿಸುತ್ತಾರೆ ಎಲಾಬರೇಟ್ ಕೋಡ್ ನಿಂದ  ದೂರವಿರುವ ಕೆಳವರ್ಗದ ಮಕ್ಕಳು ಶೈಕ್ಷಣಿಕವಾಗಿ ಹಿಂದುಳಿಯುತ್ತಾರೆ.

ಇದರಿಂದ ಬಹಳ ತೀವ್ರವಾದ ವಿವಾದ ಉಂಟಾಯಿತು. ಸಮಾಜ ಅಮೆರಿಕಾದ ಸಮಾಜಶಾಸ್ತ್ರಜ್ಞ ವಿಲಿಯಂ ಲೆಬೋವ್ ಇದಕ್ಕೆ ತೀವ್ರವಾದ ವಿರೋಧವನ್ನು ವ್ಯಕ್ತಪಡಿಸಿದ. ಕಪ್ಪು ಜನರ ಮಕ್ಕಳು ಬಳಸುವ ಇಂಗ್ಲಿಶ್ ಸಮರ್ಥವಾದ ಇಂಗ್ಲಿಶ್ ಎಂಬುದನ್ನು ಸಮರ್ಥಿಸುತ್ತಾನೆ. ಬರ್ನ್‌ಸ್ಟೈನ್ ಎಲಾಬರೇಟ್ ಕೋಡ್  ಮತ್ತು ರಿಸ್ಟ್ರಿಕ್ಟೆಡ್ ಕೋಡ್‌ಗಳ ಬಗ್ಗೆ ಆತ ಮಾತನಾಡುತ್ತಿದ್ದಾಗ ಅವುಗಳ ಸಾಮರ್ಥ್ಯದ ಬಗ್ಗೆ ಆತ ಮಾತನಾಡುತ್ತಿರಲಿಲ್ಲ. ಅಂದರೆ ರಿಸ್ಟ್ರಿಕ್ಟೆಡ್ ಕೋಡ್ ಅಸಮರ್ಥ. ಅದರಲ್ಲಿ ಬಹಳ ಸೂಕ್ಷ್ಮವಾದ ವಿಚಾರಗಳನ್ನು ಹೇಳುವುದಕ್ಕೆ ಸಾಧ್ಯವಿಲ್ಲ ಎಂದಲ್ಲ. ಎಲಾಬರೇಟ್ ಕೋಡ್ ಎಂದರೆ ಸಮರ್ಥವಾದ ವಿಚಾರ ಗಳನ್ನು ಹೇಳಬಹುದಾದ ಬಗೆ ಎಂದೇನಲ್ಲ. ಅವುಗಳ ನಡುವೆ ಇರುವ ತಾರತಮ್ಯದ ಸ್ವರೂಪವನ್ನು ನಮ್ಮ ಮುಂದೆ ಇಡುತ್ತಾನೆ.ದಲಿತರು ಮಾತನಾಡುತ್ತಿರುವ ಕನ್ನಡವನ್ನು ಮತ್ತು ಅವರು ಕಲಿಯಬೇಕಾಗಿ ಬಂದಿರುವ ಕನ್ನಡಗಳ ನಡುವೆ ವ್ಯತ್ಯಾಸವನ್ನು ಈ ರೀತಿ ಬೇರೆ ಬೇರೆ ನೆಲೆಗಳಲ್ಲಿ ನೋಡುವ ಮುಖಾಂತರ ಅವರ ಶೈಕ್ಷಣಿಕ ಅಭಿವೃದ್ಧಿಗೆ ಇವು ಯಾವುದಾದರೂ ರೀತಿಯಲ್ಲಿ ಅಡ್ಡಿಯುಂಟು ಮಾಡಿವೆಯೇ ಎನ್ನುವುದನ್ನು ನಾವು ಇನ್ನೂ ಕೂಡ ಪರಿಶೀಲಿಸುವುದಕ್ಕೆ ಹೋಗಿಲ್ಲ. ಈ ಪರಿಕಲ್ಪನೆಗಳ ಬಗೆಗೆ ಜಗತ್ತಿನಾದ್ಯಂತ ಇವತ್ತು ಕೂಡ ಚರ್ಚೆಯಾಗುತ್ತಾ ಇದೆ. ಆಫ್ರಿಕಾದಲ್ಲಿ ನಡೆದ ಸಂಶೋಧನೆಗಳಲ್ಲಿ ಬೆಸಿಲ್ ಬರ್ನ್‌ಸ್ಟೈನ್ ಪರಿಕಲ್ಪನೆಗಳನ್ನು ಮರಳಿ ಪರಿಶೀಲನೆ ಮಾಡಲಾಗುತ್ತಿದೆ. ಈ ಎರಡೂ ಉದಾಹರಣೆಗಳನ್ನು ನೋಡುವುದರ ಮುಖಾಂತರ ಕನ್ನಡ ಮತ್ತು ದಲಿತರ ಸಂಬಂಧಗಳನ್ನು ಮರುಪರಿಶೀಲಿಸಬೇಕಾದ ಅವಕಾಶಗಳು ಇವೆ. ದಲಿತರಿಗೆ ತಾವು ಮಾತನಾಡುತ್ತಿರುವ ಕನ್ನಡವನ್ನು ಶಾಲೆಗಳಲ್ಲಿ ಬಂದಾಗ ಅಥವಾ ಸಾಮಾಜಿಕ ಸಂವಹನದಲ್ಲಿ ಅದನ್ನು ಯಾವ ರೀತಿ ಬಳಸಬೇಕು, ಉಳಿಸಿಕೊಂಡು ಬಳಸಬೇಕು ಅದನ್ನು ಕಳೆದುಕೊಳ್ಳಬೇಕೇ, ಉಳಿಸಿಕೊಳ್ಳಬೇಕೇ, ಕಾಯ್ದುಕೊಳ್ಳಬೇಕೇ ಇತ್ಯಾದಿಗಳೆಲ್ಲ ಗೊಂದಲವಾಗಿದೆ. ಸಾಮಾಜಿಕ ಒತ್ತಡಗಳು ಬೇರೆ ರೀತಿ ಇವೆ. ಈ ಸಂದರ್ಭದಲ್ಲಿ ಏಕಲವ್ಯನ  ಕಥೆಯನ್ನು ಮರಳಿ ನೆನಪು ಮಾಡಿಕೊಳ್ಳಬೇಕಾಗಿದೆ. ಅಂದರೆ ನಮಗೆ ತಿಳಿದಿರುವಂತೆ ದ್ರೋಣ ಹೆಬ್ಬೆರಳನ್ನು ಕತ್ತರಿಸಿಕೊಳ್ಳುವಂತೆ ಮಾಡಿದ. ಆದರೆ ಏಕಲವ್ಯ ಸಮರ್ಥ. ಅರ್ಜುನನಷ್ಟೇ ಸಮರ್ಥ. ಆದರೆ ಅರ್ಜುನನಿಗಿರುವ ಅವಕಾಶ, ಏಕಲವ್ಯನಿಗೆ ಇಲ್ಲ. ಹೆಬ್ಬೆರಳನ್ನು ಕತ್ತರಿಸಿರುವುದು ಸಾಮರ್ಥ್ಯವನ್ನು ಕುಂದುಗೊಳಿಸುವುದು ಅಲ್ಲ. ಸಾಮರ್ಥ್ಯದ ಬಳಕೆಯನ್ನು ಅಡ್ಡಿಮಾಡುವಂತಹದು. ಸಾಮರ್ಥ್ಯವನ್ನು ಅಡ್ಡಿ ಮಾಡುವ ಸಂಗತಿಗಳು ದಲಿತರಿಗೆ ಯಾವುವು?

ಅಂದರೆ ಶೈಕ್ಷಣಿಕವಾಗಿ ಅದರ ಉನ್ನತೀಕರಣ ಆಗುತ್ತಾ ಇರಬೇಕಾದರೆ ಅವರು ಸಮರ್ಥರಾಗುತ್ತಾ ಹೋಗುತ್ತಿರುತ್ತಾರೆ. ಆದರೆ ಅವರ ಸಾಮರ್ಥ್ಯಗಳ ಬಳಕೆಗೆ ಅಡ್ಡಿಯಾಗುವ ಸಂಗತಿಗಳಲ್ಲಿ ಭಾಷೆಯೂ ಒಂದು ಆಗಿರಬಹುದು. ಅಂದರೆ ಹೆಬ್ಬೆರಳನ್ನು ಕತ್ತರಿಸಿಕೊಂಡ  ಏಕಲವ್ಯನ ಕತೆಯಂತೆ. ಈ ರೀತಿ ಕೂಡ ಸಮಸ್ಯೆಯನ್ನು ನಾವು ಯೋಚನೆ ಮಾಡುವುದಕ್ಕೆ ಸಾಧ್ಯವಿದೆ. ನಾನು ಇನ್ನೊಂದು ಮಾತನ್ನು ಹೇಳಿದೆ. ಅದನ್ನು ಬೇರೊಂದು ರೀತಿಯಲ್ಲಿ ವಿಶ್ಲೇಷಣೆ ಮಾಡುವುದಕ್ಕೆ ಇಷ್ಟಪಡುತ್ತೇನೆ. ಕಳೆದುಕೊಂಡಿದ್ದನ್ನು ಮರಳಿ ಪಡೆದುಕೊಳ್ಳುವ ದಲಿತರು ಶಾಲೆಗೆ ಬಂದಾಗ ಸಾಮಾಜಿಕ ವಲಯಕ್ಕೆ ತಮ್ಮನ್ನು ತಾವು ಬಂದಾಗ, ಹೆಚ್ಚು ಚಲನಶೀಲವಾಗುವಾಗ, ತಮ್ಮ ಕನ್ನಡವನ್ನು ಕಳೆದುಕೊಳ್ಳುವಾಗ ಮುಚ್ಚಿಡುವ ನೆಲೆಗೆ ಬಂದಾಗ ಅದು ಅವರಲ್ಲಿ ಒಂದು ವಿಶೇಷವಾದ ಒತ್ತಡವನ್ನು ಸೃಷ್ಟಿ ಮಾಡಿರಲೇಬೇಕು. ಈ ಒತ್ತಡಗಳನ್ನು ಅವರು ಹೇಗೆ ಕಳೆದುಕೊಂಡರು, ಹೇಗೆ ಒತ್ತಡದಿಂದ ಹೊರಬಂದರು ಎನ್ನುವುದು ಸಹ ಬಹಳ ಕುತೂಹಲಕಾರಿ ವಿಷಯ. ಅಂದರೆ ಇದು ಕಳೆದುಕೊಂಡದ್ದನ್ನು ಮರಳಿ ಸ್ಥಾಪಿಸಿಕೊಳ್ಳುವುದು. ಎಂದರೆ ಮರಳಿ ತಾವು ಮತ್ತೆ ಆ ಕನ್ನಡವನ್ನೇ ಮಾತನಾಡುವಂತಹದು. ಅದಕ್ಕೆ ಇರುವ ಕೀಳುತನದ ಚೌಕಟ್ಟನ್ನು ಮೀರಿ ಮಾತನಾಡುವಂತಹದ್ದು. ಮೇಲಿಂದ ಮೇಲೆ ನನಗೆ ಕರ್ನಾಟಕ ಸರ್ಕಾರದ ವಿಧಾನ ಸಭೆಯ ಸದಸ್ಯರುಗಳು ಮಾತನಾಡುವಾಗ ಅವರು ಬಳಸುವ ಭಾಷೆಯ ಬಳಕೆಯನ್ನು ಕೇಳಿಸಿ ಕೊಳ್ಳುವುದು ತುಂಬಾ ಕುತೂಹಲಕಾರಿಯಾದ ಸಂಗತಿ. ಏಕೆಂದರೆ 224 ಜನ ಅವರೆಲ್ಲರೂ ಇದ್ದರೆ ಏಕಕಾಲಕ್ಕೆ 224 ಪ್ರಭೇದಗಳನ್ನು ಬಳಸುತ್ತಿರುತ್ತಾರೆ. ಬಹುಶಃ ಕರ್ನಾಟಕದ ಸಮಗ್ರ ಪ್ರಭೇದಗಳು ಅಥವಾ ಕನ್ನಡತ್ವದ ವಿಶಿಷ್ಟತೆ ಇದ್ದರೆ ಅದು ವಿಧಾನಸಭೆಯಲ್ಲಿ ಮಾತ್ರ. ಅಲ್ಲಿರುವವರು ತಮ್ಮ ಕನ್ನಡವನ್ನು ಬದಲಾಯಿಸಿಕೊಳ್ಳುತ್ತಾರೆ. ಅಲ್ಲಿ ಹಲವು ಸಂದರ್ಭಗಳಲ್ಲಿ ಭಾಷೆಯ ಬಗೆಗೆ ಚರ್ಚೆ ನಡೆಯುತ್ತಿರುತ್ತದೆ. ಅಂತಹ ಕಡೆಗಳಲ್ಲಿ ಭಾಷೆಯ ಚಹರೆಯನ್ನು ಕಳೆದುಕೊಳ್ಳುವುದರ ಕಡೆಗೆ ತುಂಬ ಒಲವು ಇರುತ್ತವೆ. ಅಂತಹ ಸಂದರ್ಭದಲ್ಲಿ ಅವರು ಕನ್ನಡವನ್ನು ಬಿಟ್ಟು ಬಿಡುವುದುಂಟು. ಇಂಗ್ಲಿಶ್‌ಗೆ ಹೆಚ್ಚು ಪಲ್ಲಟವಾಗುತ್ತಿರುತ್ತಾರೆ. ಏಕೆ ಆ ರೀತಿ ಪಲ್ಲಟವಾಗುತ್ತಾರೆ ಎಂದರೆ ಅವರು ತಮ್ಮ ಕನ್ನಡವನ್ನು ರಿಕ್ಲೈಮ್ ಮಾಡುವುದಕ್ಕೆ ಆಗುವುದಿಲ್ಲ. ಭೀಮಣ್ಣ ಖಂಡ್ರೆ ಅವರು ಬೀದರ್  ಕನ್ನಡದಲ್ಲಿ ಮಾತನಾಡು ವುದಕ್ಕೆ ಆಗುತ್ತಿರಲಿಲ್ಲ. ಮಾತನಾಡಿದರೆ ಬೇರೆಯವರು ಗೇಲಿ ಮಾಡುವುದಕ್ಕೆ ಸಿದ್ಧ ಇರುತ್ತಿದ್ದರು. ನೀವೇನು ಮಾತನಾಡುತ್ತೀರಿ ಸ್ವಾಮಿ ನಮಗೆ ಅರ್ಥವಾಗುವುದಿಲ್ಲ ಎನ್ನು ತ್ತಿದ್ದರು. ನಫಿಸಾ ಫಜಲ್ ಮಾತನಾಡಿದರೆ ಬೇರೆಯುವರು ಗೇಲಿ ಮಾಡುವುದಕ್ಕೆ ಆರಂಭ ಮಾಡುತ್ತಿದ್ದರು.

ಕನ್ನಡ ವಿವಿಧತೆಯನ್ನು ತೆಗೆದುಕೊಳ್ಳುವುದಕ್ಕೆ ಅಂದರೆ ಸ್ವೀಕರಿಸುವುದಕ್ಕೆ ಸಾಧ್ಯವಾಗುತ್ತಿಲ್ಲ ಅಥವಾ ಸಿದ್ಧರಿಲ್ಲ. ಕನ್ನಡ ಆವಿಷ್ಕಾರಗೊಳ್ಳುವ ಸಂದರ್ಭದಲ್ಲೆಲ್ಲ ಹೀಗೆ ನೋಡುವ ವಿಧಾನ ಬಳಕೆಯಲ್ಲಿದೆ. ದಲಿತ ಸಮುದಾಯದಲ್ಲಿ ಇದು ಯಾವ ಬಗೆಯ ಒತ್ತಡವನ್ನು ಸೃಷ್ಟಿ ಮಾಡಬಹುದು? ಚಲನಚಿತ್ರಗಳನ್ನು ನೋಡಿದರೆ ಬಹಳ ವಿಚಿತ್ರ ಸಂಗತಿ ಗೊತ್ತಾಗುತ್ತದೆ. 50 ವರ್ಷದಲ್ಲಿ ಕನ್ನಡ ಚಲನಚಿತ್ರದ ನಾಯಕ ಮತ್ತು

ಖಳನಾಯಕರ ಭಾಷೆಯನ್ನು ಗಮನಿಸಿದರೆ, ಹಾಸ್ಯ ನಟರ ಭಾಷೆಯನ್ನು ಗಮನಿಸಿದರೆ ಮರುಗಳಿಕೆ ಪ್ರಕ್ರಿಯೆ ಬಹಳ ವಿಶಿಷ್ಟವಾಗಿ ಕಾಣುತ್ತದೆ. ರಾಜಕುಮಾರ್ ಮಾತನಾಡುವ ಕನ್ನಡ ಗಮನಿಸಿ. ಕನ್ನಡವನ್ನು ಅತ್ಯಂತ ಚೆನ್ನಾಗಿ ಮಾತನಾಡುವ ಏಕೈಕ ವ್ಯಕ್ತಿ ಎಂಬ ಗೌರವ ಅವರಿಗಿದೆ. ಶಿಷ್ಟ ಅಥವಾ ಪ್ರಮಾಣ ಕನ್ನಡವನ್ನು ಮಾತನಾಡುವ ವ್ಯಕ್ತಿ ಎಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದಾರೆ. ರಾಜಕುಮಾರ್ ಮಾತನಾಡುವ ಕನ್ನಡ ನನ್ನದಲ್ಲದು. ಅದು ಯಾರ ಕನ್ನಡವೂ ಅಲ್ಲ. ಆದರೆ ನನ್ನ ಕನ್ನಡವನ್ನು ಮಾತನಾಡುವವರು ಯಾರು? ಅವರು ಈಗ ಬರುತ್ತಾ ಇದ್ದಾರೆ. ನಾಯಕರುಗಳಾಗಿ ಬರುತ್ತಾ ಇದ್ದಾರೆ. ಅಂದರೆ ಮರಳಿ ಪಡೆದು ಕೊಳ್ಳುವ ಪ್ರಕ್ರಿಯೆ ಇದೆಯಲ್ಲ ಅದು ಇನ್ನೊಂದು ರೀತಿಯಲ್ಲಿ ಬೇರೆ ಕಡೆ ಕಾಣಿಸಿಕೊಳ್ಳುತ್ತಾ ಇದೆ. ಸಾಂಸ್ಕೃತಿಕ ವಿಶ್ಲೇಷಕರು ಇದನ್ನೆಲ್ಲ ಗಮನಿಸಬೇಕಾಗಿ ಬರುತ್ತದೆ.

ಇನ್ನೊಂದು ಬಹಳ ಮುಖ್ಯವಾಗಿ ದೀರ್ಘವಾಗಿರುವುದಕ್ಕೆ ಕಾರಣವೆಂದರೆ, ಏಕೀಕರಣದ ಕಾಲದಲ್ಲಿ ಯಾವುದು ನಾವು ಪ್ರಮಾಣ ಅಥವಾ ಶಿಷ್ಟ ಕನ್ನಡ ಎನ್ನುತ್ತಿದ್ದವೋ. ಈಗ ಯಾವುದನ್ನು ಪ್ರಮಾಣ ಕನ್ನಡ ಅಥವಾ ಶಿಷ್ಟ ಕನ್ನಡ ಎನ್ನುತ್ತಿದ್ದೇವೋ ಅದೇ ಬದಲಾಗಿದೆ. ಆ ಕನ್ನಡವೇ ಬದಲಾಗಿದೆ. ಇದು ಹೇಗೆ ಬದಲಾಗಿದೆ ಎಂದರೆ ಹೆಚ್ಚು ಹೆಚ್ಚು ಜನ ಅದರಿಂದ ದೂರವಾಗಿದ್ದಾರೆ. ಅಂದರೆ ಪ್ರಮಾಣ ಕನ್ನಡ 1956ರಲ್ಲಿ ಎಷ್ಟು ಹತ್ತಿರ ವಾಗಿತ್ತೋ ಜನರಿಗೆ ಈಗ ಅಷ್ಟೇ ದೂರವಾಗಿದೆ. ಜನದೂರವಾಗುತ್ತಿದೆ. ಕನ್ನಡ ಹೆಚ್ಚು ಸಂಸ್ಕೃತಮಯವಾಗುವುದರ ಮೂಲಕ ಹೀಗಾಗಿದೆ. ಇದರ ಬಗ್ಗೆ ಡಿ.ಎನ್. ಶಂಕರಭಟ್ಟರು 'ಕನ್ನಡ ಬರಹವನ್ನು ಸರಿಪಡಿಸೋಣ' ಪುಸ್ತಕದಲ್ಲಿ ಈ ಸಿದ್ಧಾಂತವನ್ನು ಮಂಡಿಸಿದ್ದಾರೆ. ಎಲ್ಲ ಕನ್ನಡ ಅಧ್ಯಾಪಕರು ಆ ಪುಸ್ತಕವನ್ನು ಓದಲೇಬೇಕು.

ನಿನ್ನೆ ವಾಚಕರ ವಾಣಿಯಲ್ಲಿ ಒಂದು ಪತ್ರ ಬಂದಿದೆ. ತಾವೆಲ್ಲರೂ ಗಮನಿಸಿರಬೇಕು ಅಲ್ಲಿ ಸಿನಿಮಾದವರಿಗೆಲ್ಲ ನಿಘಂಟುಗಳನ್ನು ಕೊಡಬೇಕು ಅಂತಾ ಹೇಳಿ ಗೇಲಿ ಮಾಡಿ ಬರೆದಿದ್ದಾರೆ. ಇಂಗ್ಲಿಶ್ ಮಿಶ್ರಿತ ಕನ್ನಡವನ್ನು ಕೆಟ್ಟ ಕನ್ನಡ ಎಂತಲೂ, ಸಂಸ್ಕೃತಮಯ ಕನ್ನಡವನ್ನು ಪ್ರಮಾಣ ಕನ್ನಡವೆಂದೂ ಪರಿಭಾವಿಸುವವರ ಪ್ರಮಾಣ ಹೆಚ್ಚಿದೆ. ಸಂಸ್ಕೃತಮಯ ಕನ್ನಡ ಮಾತನಾಡುವವರು ಬಹಳ ಅದ್ಭುತವಾಗಿ ಮಾತನಾಡುತ್ತಾರೆ, ಜತೆಗೆ ಬರೆಯುತ್ತಾರೆ ಎಂದು ತಿಳಿಯಲಾಗುತ್ತದೆ. ಆದರೆ ಎಷ್ಟೋ ಜನಕ್ಕೆ ತಾವು ಬರೆದ ಸಂಸ್ಕೃತಮಯ ಕನ್ನಡದಲ್ಲಿ ಬಳಕೆ ಮಾಡುವ ಪದ ಸಂಸ್ಕೃತ ಎಂದು ಗೊತ್ತಿರುವುದೇ ಇಲ್ಲ. ಏಕೆ ಈ ರೀತಿ ಬಳಸುತ್ತೇವೆ ಅಂದರೆ ಅದು ಹೆಚ್ಚು ಹೆಚ್ಚು ಖಚಿತತೆಯನ್ನು ತಂದು ಕೊಡುತ್ತವೆ ಎನ್ನುತ್ತೇವೆ; ಅದಕ್ಕೊಂದು ಶಾಸ್ತ್ರೀಯತೆಯನ್ನು ತಂದು ಕೊಡುತ್ತದೆ ಎನ್ನುತ್ತೇವೆ. ಡಿ.ಎನ್. ಶಂಕರಭಟ್ಟರು ಈ ನಂಬಿಕೆಯನ್ನು ಒಡೆದಿದ್ದಾರೆ. ಸಂಸ್ಕೃತಮಯವಾಗಿರುವುದರಿಂದ ಭಾಷೆಗೆ ಒಂದು ಬಗೆಯ ಔಚಿತ್ಯ ಬರುತ್ತದೆ ಎಂಬ ಕಲ್ಪನೆಯನ್ನು ಒಡೆದಿದ್ದಾರೆ. ಒಂದು ಬಗೆಯ ಶಾಸ್ತ್ರೀಯತೆ ಬರುತ್ತದೆ ಅನ್ನುವುದೆ ಹೇಗೆ ಎಂದು ತಪ್ಪು ಕಲ್ಪನೆ ಎಂಬುದನ್ನು ವಿವರಿಸಿದ್ದಾರೆ. ಸಂಸ್ಕೃತವನ್ನು ಬಳಸುವುದರಿಂದ ಕೂಡ ಅದು ಖಚಿತವಾಗದೆ ಇರಬಹುದು ಎಂಬುದಕ್ಕೆ ನಿದರ್ಶನ ಮೂಲಕ

ಉದಾಹರಣೆಗೆ ಕೊಟ್ಟಿದ್ದಾರೆ. ಕನ್ನಡದಲ್ಲಿ ಇಲ್ಲಿಯವರೆಗೆ ಘೋಷಿಸಿಕೊಂಡು ಬಂದ ಮಿತ್‌ನ್ನು ಒಡೆದು ಹಾಕಿದ್ದಾರೆ. ಪ್ರಮಾಣ ಕನ್ನಡ ಎನ್ನುವುದು ದಲಿತರ ಕನ್ನಡದಿಂದ ದೂರ ಹೋಗುತ್ತಾ ಇದೆ. ಈ ಅಂತರವನ್ನು ನಾವು ಹೇಗೆ ಒಡೆಯಬೇಕು. ಇದು ಕೂಡ ಒಂದು ದೊಡ್ಡ ಸಮಸ್ಯೆಯಾಗಿ ನಮ್ಮನ್ನು ಕಾಡುತ್ತಿದೆ.

21ನೇ ಶತಮಾನದಲ್ಲಿ ದಲಿತರು ಒಂದು ಮುಖ್ಯ ಪ್ರಶ್ನೆಯನ್ನು ಕೇಳುತ್ತಾರೆ. ನನ್ನ ಕನ್ನಡವನ್ನು ನೀವು ಪುರಸ್ಕರಿಸದಿದ್ದರೆ ನಾನು ಯಾರ/ಯಾವ ಕನ್ನಡವನ್ನು ಉಳಿಸಬೇಕು? ನಿಮ್ಮ ಕನ್ನಡವನ್ನು ಉಳಿಸಬೇಕೇ. ಆದರೆ ಪ್ರಮಾಣ ಕನ್ನಡ ನನ್ನದಲ್ಲ. ನನಗೆ ದತ್ತವಾದ ಕನ್ನಡವಲ್ಲ. ನನ್ನ ಮೇಲೆ ಹೇರುತ್ತಾ ಇರುವ ಕನ್ನಡ ಅದು. ಜನಕನ್ನಡ ಅಲ್ಲ. ಜನ ದೂರವಾದ ಕನ್ನಡ. ಆ ಕನ್ನಡವನ್ನು ಉಳಿಸುವ ಒತ್ತಾಯವನ್ನು ನನ್ನ ಮೇಲೆ ಏಕೆ ಹೇರುತ್ತಾ ಇದ್ದೀರಿ? ನಾನು ಉಳಿಸಿಕೊಳ್ಳುವುದಿದ್ದರೆ ನನ್ನ ಕನ್ನಡವನ್ನು ಉಳಿಸಿಕೊಳ್ಳಬೇಕು.

ದಲಿತರಿಗೆ ನೀವು ಕನ್ನಡವನ್ನು ಉಳಿಸುವ ಹೊಣೆಗಾರಿಕೆಯನ್ನು ಕೊಡುವುದಾದರೆ ದಲಿತರದೊಂದು ಮೂಲಭೂತ ಪ್ರಶ್ನೆಯಿದೆ. ಯಾವ ಕನ್ನಡವನ್ನು ಉಳಿಸಿಕೊಳ್ಳುವುದಕ್ಕೆ ಹೇಳುತ್ತಾ ಇದ್ದೀರಿ? ನೀವು ಯಾವ ಕನ್ನಡವನ್ನು ಉಳಿಸಿಕೊಳ್ಳುವುದಕ್ಕೆ ಹೇಳುತ್ತಾ ಇದ್ದೀರಿ? ಅಥವಾ ನಾವು ಸಾಮಾಜಿಕವಾಗಿ ಆಡುವ ಕನ್ನಡವನ್ನು ಉಳಿಸಿಕೊಳ್ಳುವುದಕ್ಕೆ ಹೇಳುತ್ತಾ ಇದ್ದೀರೋ? ದಲಿತರು ಯಾವುದಕ್ಕೆ ಹಕ್ಕುದಾರರು? ಈ ಪ್ರಶ್ನೆ ಇಂದು ಮುಂಚೂಣೆಗೆ ಬರುತ್ತಾ ಇದೆ.

ನನಗೆ ಮೇಲಿಂದ ಮೇಲೆ ಕಳೆದ ನಾಲ್ಕೈದು ವರ್ಷಗಳಿಂದ ಕಾಡ್ತಾ ಇರುವ ಪ್ರಶ್ನೆ ಎಂದರೆ, ಬಸವಣ್ಣನವರು ಬೇರೆ ಸಂದರ್ಭದಲ್ಲಿ ಅವರು ಹೇಳಿದಂತೆ ಗುಂಡು ಮತ್ತು ಬೆಂಡು ಇವುಗಳ ಚಿತ್ರ. ಗುಂಡು ಮತ್ತು ಬೆಂಡು ಕಟ್ಟಿದ ವ್ಯಕ್ತಿಯೊಬ್ಬ ನೀರೊಳಗೆ ಇದ್ದಾಗ, ಮುಳುಗಲಿಕ್ಕೆ ಬಿಡದು ಗುಂಡು. ತೇಲಲಿಕ್ಕೂ ಬಿಡದು ಬೆಂಡು. ಆದರೆ ನೀರಿನಲ್ಲಿರುವ ವ್ಯಕ್ತಿಗೆ ಮುಳುಗುವ ಅಪೇಕ್ಷೆಯೇನೂ ಇರುವುದಿಲ್ಲ. ತೇಲುವ ಆಪೇಕ್ಷೆ ಇರುತ್ತದೆ. ಆದರೆ ತೇಲುವುದಕ್ಕೆ ಬಿಡುತ್ತಿಲ್ಲ ಗುಂಡು. ಹೋಗಲಿ ಸತ್ತು ಹೋಗಿ ಬಿಡುತ್ತೇನೆ. ಅಂದರೆ ಮುಳುಗಲೀಯದು ಗುಂಡು. ನಾವು ಎದುರಿಸಬೇಕಾಗಿರುವ ಪ್ರಶ್ನೆ ಎಂದರೆ ಈ ಗುಂಡು ಮತ್ತು ಬೆಂಡುಗಳಲ್ಲಿ ಕನ್ನಡ ಯಾವುದು? ಇಂಗ್ಲಿಶ್ ಯಾವುದು? ಒಂದು ವ್ಯಾಖ್ಯಾನದ ಪ್ರಕಾರ ನಮಗೆ ಕಟ್ಟಿರುವ ಗುಂಡು ಇಂಗ್ಲಿಶ್. ನಮ್ಮ ರಕ್ಷಿಸುವ ಬೆಂಡು ಕನ್ನಡ. ದಲಿತರು ಇದಕ್ಕೆ ವಿರುದ್ಧವಾಗಿ ನೋಡುತ್ತಾ ಇರಬಹುದು. ನಮಗೆ ಕಟ್ಟಿರುವುದು ಗುಂಡು ಕನ್ನಡ, ನಮ್ಮನ್ನು ತೇಲಿಸುವ ಬೆಂಡು ಇಂಗ್ಲಿಶ್ ಎಂದು. ಯಾಕೆ ಇಂಗ್ಲಿಶ್ ಕಡೆಗೆ ಹೋಗುತ್ತಾ ಇದ್ದಾರೆ? ಇಂಗ್ಲಿಶ್ ಅವರಿಗೆ ಹೊಸ ಜಗತ್ತಿಗೆ ರಹದಾರಿಯನ್ನು ಕಲ್ಪಿಸಿಕೊಡದೆ ಇರಬಹುದು; ಆದರೆ ಇನ್ನೊಂದು ಜಗತ್ತಿಗೆ ಒಂದು ಹೊರದಾರಿಯನ್ನಾದರೂ ಕಲ್ಪಿಸಿಕೊಡುತ್ತದೆ.

ದಲಿತರಿಗೆ ಇಂಗ್ಲಿಶ್ ಕಲಿತರೆ ಅವಕಾಶ ಸಿಕ್ಕುತ್ತದೋ? ಅಥವಾ ಬೇಕಾದಂತಹ ಅಂಕಿ ಅಂಶಗಳನ್ನು ತಂದು ಬಿಡಬಹುದು. ನೂರೆಂಟು ಅರ್ಹತೆಗಳನ್ನು ಸೃಷ್ಟಿಸಬಹುದು. ಅದರಿಂದ ನಿರುದ್ಯೋಗ ಪ್ರಮಾಣದಲ್ಲಿ ವ್ಯತ್ಯಾಸವಾಗದೆ ಇರಬಹುದು. ದಲಿತರ ಸ್ಥಿತಿಗತಿ ಹೀಗೆ ಮುಂದುವರಿಯಬಹುದು. ಹೊಸ ಅವಕಾಶಗಳು ಸೃಷ್ಟಿ ಆಗುತ್ತವೋ ಇಲ್ಲವೋ ಅದು ಬೇರೆ ಪ್ರಶ್ನೆ. ಆದರೆ ಈ ಗುಂಡು ಮತ್ತು ಬೆಂಡುಗಳ ತರ್ಕದೊಳಗೆ ಯಾವುದು ಇವರನ್ನು ಕೆಳಗಡೆ ಎಳೆಯುತ್ತಿದೆ. ಯಾವುದು ಇವರನ್ನು ಮೇಲೆಡೆಗೆ ಎಳೆಯುತ್ತಿದೆ ಎನ್ನುವುದನ್ನು ಚರ್ಚಿಸಬೇಕಾಗಿದೆ ಅಥವಾ ಯಾವುದು ಇವರನ್ನು ಬಿಡುಗಡೆ ಆಗದಂತೆ ನೋಡಿಕೊಳ್ಳುತ್ತ ಇದೆ ಎಂಬುದನ್ನು ಪರಾಮರ್ಶಿಸಬೇಕಾಗಿದೆ. ಅದಕ್ಕೆ ಒಂದು ಹೊರದಾರಿಯನ್ನು ಇಂಗ್ಲಿಶ್ ಕಲ್ಪಿಸಿ ಕೊಡಬಹುದು. ಆದರೆ ಇಂಗ್ಲಿಶ್ ಪರವಾಗಿ ದಲಿತರು ಮಾತನಾಡುತ್ತಿದ್ದರೆ ನಾವು ಕನ್ನಡ ವಿರೋಧವೆಂಬಂತೆ ನೋಡುವುದಕ್ಕೆ ಪ್ರಯತ್ನ ಪಡುತ್ತಾ ಇರುತ್ತೇವೆ. ನಾನು ಇದನ್ನ ನಿರಾಕರಿಸುತ್ತಿಲ್ಲ. ಏಕೆಂದರೆ ಇದನ್ನು ನಾವು ಸಮನ್ವಯ ನೆಲೆಯಲ್ಲಿ ನೋಡಬೇಕಾಗಿಲ್ಲ. ಏಕೆಂದರೆ ನಾವು ಬಲಬದಿಯಲ್ಲಿ ಕನ್ನಡವನ್ನು, ಎಡ ಬದಿಯಲ್ಲಿ ಇಂಗ್ಲಿಶ್‌ನ್ನು ನೋಡ ಬೇಕಾಗಿಲ್ಲ. ಇದು ಈಗ ಇಂಗ್ಲಿಷ್ ಅಥವಾ ಕನ್ನಡ ಎನ್ನಬೇಕೋ ಅಥವಾ ಇಂಗ್ಲಿಶ್ ಮತ್ತು ಕನ್ನಡ ಎನ್ನಬೇಕೋ?ಕನ್ನಡ ಅಂದರೆ ಯಾವ ಕನ್ನಡವನ್ನು ಶಾಲೆಯಲ್ಲಿ ಕಲಿಯಬೇಕು ಎನ್ನುವುದೆ ನನ್ನ ಪ್ರಶ್ನೆ. ದಲಿತರಿಗೂ ಅವರ ಸಂಸ್ಕೃತಿಗೂ ಸಂಬಂಧ ಇದೆ ಎಂದರೆ ಆ ಕನ್ನಡ ಯಾವುದು?

ಇದು ಕೂಡ 20ನೇ ಶತಮಾನದ ಅರ್ಧ ಭಾಗದವರೆಗೂ ಚರ್ಚೆ ಆಗಿರುವಂತಹದು. ಭಾಷೆ ಮತ್ತು ಸಂಸ್ಕೃತಿ ಸಂಬಂಧಗಳ ಬಗ್ಗೆ ಚರ್ಚೆ ನಿರಂತರವಾಗಿ ನಡೆಯುತ್ತಿದೆ. ಭಾಷೆ ಒಬ್ಬ ವ್ಯಕ್ತಿಯನ್ನು ನಿಯಂತ್ರಿಸುತ್ತಿರುತ್ತದೆ. ಅದೇ ಸಂದರ್ಭದಲ್ಲಿ ಬಿಡುಗಡೆ ಪಡೆಯಬೇಕೆಂಬ ಅಪೇಕ್ಷೆಯೂ ಇರುತ್ತದೆ. ಒಂದು ವೇಳೆ ಇದನ್ನು ಒಪ್ಪಿಕೊಂಡರೆ ನಮ್ಮನ್ನು ನಮ್ಮ ಸಂಸ್ಕೃತಿಗೆ ಬದ್ಧವಾಗಿಡುವುದು ನಮ್ಮ ಭಾಷೆ ಎಂದು ತಿಳಿದುಕೊಂಡರೂ ಕೂಡ. ಅದರಿಂದ ಬಿಡುಗಡೆ ಪಡೆಯುವ ಹಪಾಹಪಿಯ ಕಾಲವಿದು. ಬಂಧನದ ಹಪಾಹಪಿಯ ಕಾಲ ಅಲ್ಲ. ಅದರಿಂದಾಗಿ ಈ ಕಾಲದಲ್ಲಿ ನಿಂತು ಯೋಚನೆ ಮಾಡ್ತಾ ಇದ್ದೇವೆ ಎಂದರೆ, ಈ ಸಮಸ್ಯೆಯನ್ನು ಬೇರೆ ಚೌಕಟ್ಟಿನಲ್ಲಿ ನಿಂತುಕೊಂಡು ನೋಡಬೇಕಾದ ತುರ್ತಿದೆ.

# ಕನ್ನಡದಲ್ಲಿ ಸ್ವೀಕರಣ ಪ್ರಕ್ರಿಯೆ: ಮರು ಚಿಂತನೆ

ಭಾಷೆಗಳ ನಡುವೆ ನಡೆಯುವ ಕೊಡುಕೊಳೆಯನ್ನು ವ್ಯಾಪಾರದ ಪರಿಭಾಷೆಯಲ್ಲಿ ವರ್ಣಿಸುವ ಪರಿಪಾಠವಿದೆ. ಎರವಲು ಎಂಬ ಪದವೇ ಇದನ್ನು ಸೂಚಿಸುತ್ತದೆ. ಇಂಗ್ಲಿಶಿನಲ್ಲಿ 'ಬಾರೊಯಿಂಗ್' ಎಂಬ ಪದವನ್ನು ಬಳಸುತ್ತಾರೆ. ಈ ಪದದ ಬಳಕೆ ಅಷ್ಟು ಸರಿಯಲ್ಲ. ಏಕೆಂದರೆ ಎರವಲು ತಂದದ್ದು ನಮ್ಮದಾಗುವುದಿಲ್ಲ. ಎಂದಾದರೂ ಮೊದಲ ಯಜಮಾನರಿಗೆ ಹಿಂದಿರುಗಿಸಬೇಕೆಂಬ ಶರತ್ತಿರುತ್ತದೆ. ಯಾವುದೇ ಭಾಷೆ ತಾನು ಎರವಲು ಪಡೆದ ಭಾಷಾಂಶಗಳನ್ನು ಹಿಂದಿರುಗಿಸುವುದಿಲ್ಲ. ಎಷ್ಟೋ ವೇಳೆ ಅದನ್ನು ಎರವಲು ತಂದದ್ದು ಎಂಬುದನ್ನೂ ಮರೆತುಬಿಡಬಹುದು. ಒಂದು ವೇಳೆ ಎರವಲು ತಂದದ್ದು ಎಂಬ ನೆನಪು ಉಳಿದರೂ ಯಾರಿಂದ, ಎಲ್ಲಿಂದ ಎರವಲು ತಂದದ್ದು ಎಂಬುದನ್ನು ಮರೆತುಬಿಡಬಹುದು. ಬಾರೊಯಿಂಗ್ ಪದಕ್ಕೆ ಬದಲಾಗಿ ಮೊದಲು ಬಳಸುತ್ತಿದ್ದ 'ಲೋನ್ ವರ್ಡ್ಸ್' ಎಂಬ ಮಾತಿಗೂ ಈ ಮಾತು ಅನ್ವಯಿಸುತ್ತದೆ. ಕಡ ತಂದದ್ದು ಎಂದೂ ನಮ್ಮದಾಗುವುದಿಲ್ಲ. ಮರಳಿಸಬೇಕಷ್ಟೆ. ಆದರೆ ಭಾಷೆಗಳು ಹೀಗೆ ಮಾಡುವುದಿಲ್ಲ. ಈ ಎರಡು ಪದಗಳ ಬದಲಾಗಿ ಬಳಸುತ್ತಿರುವ ಸ್ವೀಕರಣ ಪದವೇ ಸರಿ. ಇಲ್ಲಿ ಭಾಷಾಂಶಗಳ ಏಕಮುಖಿ ಚಲನೆಯ ಸೂಚನೆ ಇದೆ. ಏಕ ಮುಖಿ ಏಕೆಂದರೆ ಒಮ್ಮೆ ಬಂದ ಪದ ಇಲ್ಲವೇ ಭಾಷಾಂಶ ಮರಳಿ ಮೂಲ ಭಾಷೆಗೆ ಹಿಂತಿರುಗುವ ಮಾತಿಲ್ಲ.

ಕನ್ನಡ ಅನ್ಯ ಭಾಷೆಗಳಿಂದ ಸ್ವೀಕರಿಸುವ ಕೆಲಸವನ್ನು ಬಹು ಹಿಂದಿನಿಂದಲೂ ಮಾಡಿಕೊಂಡು ಬಂದಿದೆ. ಈ ಬಗೆಗೆ ಕನ್ನಡದ ಮೊದಲ ಬರೆಹಗಾರನೆಂದು ಪರಿಗಣಿಸಲಾದ ಶ್ರೀವಿಜಯನಿಗೇ ಅರಿವಿತ್ತು. ಕನ್ನಡಕ್ಕೆ ಬಂದಿರುವ ಸಂಸ್ಕೃತ ಪದಗಳ ಬಳಕೆಯ ವಿಧಾನಗಳ ಬಗೆಗೆ ಆತ ಚರ್ಚಿಸುತ್ತಾನೆ. ಅಲ್ಲಿಂದ ಮುಂದೆ ಹತ್ತೊಂಬತ್ತನೆಯ ಶತಮಾನದವರೆಗೆ ಈ ಸ್ವೀಕರಣ ಪ್ರಕ್ರಿಯೆ ಅವ್ಯಾಹತವಾಗಿ ಮುಂದುವರೆದಿದೆ. ಕಾಲದಿಂದ ಕಾಲಕ್ಕೆ ಸ್ವೀಕರಣಗೊಂಡ ಭಾಷಾಂಶಗಳ ಬಳಕೆಯ ಬಗೆಗೆ ಚರ್ಚೆಗಳು ನಡೆದಿವೆ. ಅವೆಲ್ಲವನ್ನೂ ಇಲ್ಲಿ ವಿವರಿಸಲು ಹೋಗುವುದಿಲ್ಲ.

ಸ್ವೀಕರಣ ಏಕೆ ನಡೆಯುತ್ತದೆ ಮತ್ತು ಯಾವಾಗ ನಡೆಯುತ್ತದೆ ಎಂಬುದು ಮೊದಲ ಪ್ರಶ್ನೆ. ಅನಂತರ ಹೀಗೆ ಸ್ವೀಕರಣ ನಡೆದಾದ ಮೇಲೆ ಏನಾಗುತ್ತದೆ ಎನ್ನುವುದು ಎರಡನೆಯ ಪ್ರಶ್ನೆ. ಭಾಷಾ ಶಾಸ್ತ್ರಜ್ಞರು ಈ ಬಗೆಗೆ ಚರ್ಚಿಸಿದ್ದಾರೆ. ಮುಖ್ಯವಾಗಿ

ಭಾಷಾ ಸಂಪರ್ಕದ ಪರಿಣಾಮವಾಗಿ ಸ್ವೀಕರಣ ನಡೆಯುತ್ತದೆಂದೂ, ಒಂದು ಭಾಷೆ ತನ್ನ ಕೊರತೆಗಳನ್ನು ತುಂಬಿಕೊಳ್ಳಲು ಇನ್ನೊಂದು ಭಾಷೆಯಿಂದ ಭಾಷಾಂಶಗಳನ್ನು ಸ್ವೀಕರಿಸುತ್ತದೆಂದೂ ತಿಳಿಯಲಾಗಿದೆ. ಕನ್ನಡದ ಮಟ್ಟಿಗೆ ಈ ಮಾತು ಹೆಚ್ಚುಕಡಿಮೆ ಸರಿಯಾಗಿದೆ. ಈ ನೆಲೆಯಲ್ಲಿ ಇನ್ನೂ ಚರ್ಚೆ ಸಾಧ್ಯವಿದೆ. ಆದರೆ ಈ ಪ್ರಬಂಧದಲ್ಲಿ ಸ್ವೀಕರಣದ ಪರಿಣಾಮಗಳನ್ನು ಕುರಿತು ಚರ್ಚಿಸುವ ಆಸಕ್ತಿಯನ್ನು ಹೊಂದಿರುವುದರಿಂದ ಸಂದರ್ಭ ಮತ್ತು ಕಾರಣಮೀಮಾಂಸೆಯನ್ನು ಕುರಿತು ಚರ್ಚೆಯನ್ನು ಬೆಳೆಸಿಲ್ಲ.

ಸ್ವೀಕರಿಸಿದ ಭಾಷಾಂಶಗಳು ಯಾವ ಬಗೆಯ ಬದಲಾವಣೆಗೂ ಒಳಗಾಗದೆ ಉಳಿಯುವ ಪ್ರಸಂಗಗಳನ್ನು ಭಾಷಾಶಾಸ್ತ್ರಜ್ಞರು ಗುರುತಿಸುತ್ತಾರೆ( ಎಚ್.ಎಚ್. ಹಾಕ್). ಆದರೆ ಕನ್ನಡದಲ್ಲಿ ಇಂತಹ ಪ್ರಸಂಗಗಳು ಇಲ್ಲ. ತತ್ಸಮಗಳೆಂಬ ಪರಿಕಲ್ಪನೆಯನ್ನು ನಮ್ಮ ಭಾಷಾಚಿಂತಕರು ಬಳಸಿದ್ದಾರೆ. ಇದರೊಡನೆ ಸಂಸ್ಕೃತ ಭಾಷೆಯ ಸಂದರ್ಭಕ್ಕೆ ಹೊಂದುವಂತೆ ಸಮಸಂಸ್ಕೃತವೆಂಬ ಮಾತನ್ನೂ ಬಳಸಿದ್ದಾರೆ. ಈ ಎರಡೂ ಪದಗಳ ಅರ್ಥವ್ಯಾಪ್ತಿಯ ಬಗೆಗೆ ಈಗಾಗಲೇ ಚರ್ಚೆ ನಡೆದಿದೆ. ಕನ್ನಡ ಮತ್ತು ಸಂಸ್ಕೃತ ಭಾಷೆಗಳೆರಡಲ್ಲೂ ಸಮಾನವಾಗಿ ಕಾಣಿಸಿಕೊಳ್ಳುವ ಕೆಲವು ಪದಗಳನ್ನು ಬೇರೆಮಾಡಿ ತೋರಿಸಿದ್ದಾರೆ. ಆದರೆ ಈಗ ಅಂತಹ ಪದಗಳನ್ನು ವಿಶ್ಲೇಷಿಸುವ ಬಗೆಯೇ ಬೇರೆಯಾಗಿದೆ. ಆ ಪದಗಳು ಮೂಲದಲ್ಲಿ ಯಾವುದೋ ಒಂದು ಭಾಷೆಗೆ ಸೇರಿರಬೇಕು ಅಥವಾ ಹೋಲಿಕೆ ಆಕಸ್ಮಿಕವಾಗಿರಬೇಕು. ಇದೇ ಇಂದಿನ ನಿಲುವು. ಸದ್ಯ ಈ ಬಗೆಯ ಪದಗಳನ್ನು ಬದಿಗಿರಿಸೋಣ. ಸಂಸ್ಕೃತ ಭಾಷೆಯಿಂದ ಕನ್ನಡಕ್ಕೆ ಸ್ವೀಕರಣವಾಗಿ ಬಂದರೂ, ಮೂಲದ ತಮ್ಮ ಚಹರೆಯನ್ನು ಬದಲಾಯಿಸಿಕೊಳ್ಳದ ಭಾಷಾಂಶಗಳು ಯಾವುವಾದರೂ ಇವೆಯೇ ಎನ್ನುವುದು ಈಗ ನಮ್ಮ ಪ್ರಶ್ನೆ. ಅಂತಹವು ಇವೆ ಮತ್ತು ಅವನ್ನು ತತ್ಸಮಗಳೆಂದು ಕರೆಯಬೇಕೆಂಬುದು ಭಾಷಾ ಚಿಂತಕರ ಮತ್ತು ಶಾಲಾ ವ್ಯಾಕರಣಕಾರರ ನಿಲುವು. ಮೇಲು ನೋಟಕ್ಕೆ ಈ ವ್ಯಾಖ್ಯೆಯನ್ನು ಸಮರ್ಥಿಸುವ ನಿದರ್ಶನಗಳು ದೊರೆಯುತ್ತವೆ. ಉದಾಹರಣೆಗೆ 'ಸೂರ್ಯ' ಎಂಬ ಪದ. ಅದನ್ನು ಸಂಸ್ಕೃತದಲ್ಲಿರುವಂತೆಯೇ ಕನ್ನಡದಲ್ಲೂ ಬಳಸುತ್ತಿರುವುದರಿಂದ ಅದರಲ್ಲಿ ಯಾವ ಬದಲಾವಣೆಯೂ ಆಗಿಲ್ಲವೆಂದು ವಾದಿಸಬಹುದು. ಆದರೆ ಈ ಮಾತನ್ನು ಒಪ್ಪುವುದು ಕಷ್ಟ. ಧ್ವನಿ ರಚನೆಯಲ್ಲಾಗಲೀ ಅರ್ಥದಲ್ಲಾಗಲೀ ಬದಲಾವಣೆಯಾಗಿಲ್ಲ ಎಂದ ಮಾತ್ರಕ್ಕೆ, ಅವು ಸಂಸ್ಕೃತದಲ್ಲಿರುವ ಸ್ವರೂಪವನ್ನೇ ಉಳಿಸಿಕೊಂಡಿವೆ ಎನ್ನಲು ಬರುವುದಿಲ್ಲ. ಇದಕ್ಕೆ ಎರಡು ಕಾರಣಗಳಿವೆ. 1) ಸಂಸ್ಕೃತದಲ್ಲಿ ಆ ಪದಗಳಿಗೆ ಇರುವ ವ್ಯುತ್ಪತ್ತಿ ಸಂಬಂಧದ ಅರ್ಥವ್ಯಾಪ್ತಿ ಕನ್ನಡದಲ್ಲಿ ಬಳಕೆಯಾಗುವುದಿಲ್ಲ. ನಾಮಪದಗಳ ಮಟ್ಟಿಗಂತೂ ಈ ಮಾತು ಹೆಚ್ಚು ನಿಜ. ಮಾರ್ತಂಡ ಮತ್ತು ಆದಿತ್ಯ ಎಂಬ ಎರಡೂ ಪದಗಳಿಗೆ ಕನ್ನಡದಲ್ಲಿ ಒಂದೇ ಅರ್ಥ. ಆ ಪದಗಳಿಗೆ ಇರುವ ಅರ್ಥ ವ್ಯತ್ಯಾಸ ಕನ್ನಡಕ್ಕೆ ಮುಖ್ಯವಾಗುವುದಿಲ್ಲ. ಆದ್ದರಿಂದ ಸಂಸ್ಕೃತದ ಪದಗಳು ಕನ್ನಡದಲ್ಲಿ ಹಾಗೆಯೇ ಉಳಿದುಕೊಳ್ಳುತ್ತವೆ ಎನ್ನುವುದನ್ನು ಒಪ್ಪಲಾಗುವುದಿಲ್ಲ. 2) ಈ ಪದಗಳು ತೋರಿಕೆಗೆ ಬದಲಾಗದಂತೆ ಕಂಡರೂ, ಕನ್ನಡ ಪದಕೋಶದ ಆಂತರಿಕ ಸಮತೋಲನವನ್ನು ಪಲ್ಲಟಗೊಳಿಸಿರುತ್ತವೆ. ಅಂದರೆ ಸ್ವೀಕರಿಸಿದ ಪದಗಳಿಂದಾಗಿ ಕನ್ನಡದ ಪದಗಳಿಗೆ ಇರುವ ಅರ್ಥ ವ್ಯಾಪ್ತಿಯಲ್ಲಿ ಮರು ಹೊಂದಾಣಿಕೆ ನಡೆದಿರುತ್ತದೆ.

'ಸೂರ್ಯ' ಪದದಿಂದಾಗಿ 'ಹೊತ್ತು' ಪದದ ಅರ್ಥವ್ಯಾಪ್ತಿ ಬದಲಾಯಿತು. 'ಅನ್ನ'ದಿಂದ 'ಕೂಳು' ತನ್ನ ಅರ್ಥವನ್ನು ಬದಲಾಯಿಸಿಕೊಂಡಿತು. ಇಂತಹ ನೂರಾರು ಪದಗಳನ್ನು ಉದಾಹರಿಸಬಹುದು. ಒಟ್ಟಾರೆ ವಾದವಿಷ್ಟೆ. ಸ್ವೀಕರಿಸಿದ ಪದಗಳು ಬದಲಾಗದೆ ಅಥವಾ ಬದಲಾವಣೆಗೆ ಕಾರಣವಾಗದೆ ಉಳಿಯುತ್ತವೆ ಎನ್ನುವ ಗ್ರಹಿಕೆಯೇ ಸರಿಯಲ್ಲ. ಕನ್ನಡದ ಮಟ್ಟಿಗೆ ಸ್ವೀಕರಿಸಿದ ಎಲ್ಲ ಭಾಷಾಂಶಗಳೂ ಒಂದೋ ತಾವೇ ಬದಲಾಗಿವೆ ಇಲ್ಲವೇ ಕನ್ನಡ ರಚನೆಯ ಆಂತರಿಕ ಸಮತೋಲನದಲ್ಲಿ ಬದಲಾವಣೆಯಾಗಲು ಕಾರಣಗಳಾಗಿವೆ.

ಇನ್ನು ತದ್ಭವಗಳ ಮಾತಿಗೆ ಬರೋಣ. ತತ್ಸಮದ ಜೊತೆಪದವಾಗಿ ತದ್ಭವವನ್ನು ಬಳಸುತ್ತಿದ್ದೇವೆ. ಅಡಾಪ್ಟೇಶನ್ ಎಂಬ ಇಂಗ್ಲಿಶಿನ ಪಾರಿಭಾಷಿಕ ಪದಕ್ಕೆ ಬದಲಾಗಿ ಬಳಸಬಹುದಾದ ಪದವಿದೆಂದು ತೋರುತ್ತದೆ. ತದ್ಭವಗಳು ಉಂಟಾಗಲು ಕಾರಣಗಳೇನು? ಸಾಮಾನ್ಯವಾಗಿ ಸ್ವೀಕರಣಗಳು ಆಡುಮಾತಿನ ಮೂಲಕ ಒಳಬರುತ್ತವೆ ಎಂದು ತಿಳಿಯುವುದಾದರೆ, ಆಗ ತದ್ಭವಗಳ ಉಗಮಕ್ಕೆ ಉಚ್ಚಾರಣೆಯ ಕಾರಣಗಳನ್ನು ಮುಂದಿಡಬೇಕಾಗುತ್ತದೆ. ಇದನ್ನು ಸದ್ಯಕ್ಕೆ ಒಪ್ಪಿಕೊಳ್ಳೋಣ. ಆದರೆ ಆಗ ತದ್ಭವಗಳಲ್ಲಿ ಧ್ವನಿ ಪರಿವರ್ತನೆಗೆ ಒಳಗಾದ ಪದಗಳು ಮಾತ್ರ ಸೇರುತ್ತವೆ. ಅರ್ಥ ಪರಿವರ್ತನೆಗೆ ಒಳಗಾದ ಪದಗಳನ್ನು ತದ್ಭವಗಳೆಂದು ಕರೆಯುವ ವಾಡಿಕೆ ನಮ್ಮ ವೈಯಾಕರಣರಲ್ಲಿ ಕಾಣಬರುವುದಿಲ್ಲ. ಕನ್ನಡದ ಮಟ್ಟಿಗೆ ಈ ಧ್ವನಿ ಪರಿವರ್ತನೆಯ ಪ್ರಕ್ರಿಯೆ ತುಂಬಾ ಸಂಕೀರ್ಣವಾದುದು. ಏಕೆಂದರೆ ಸ್ವೀಕರಣದ ವಿಧಾನಗಳು ಸಂಕೀರ್ಣವಾಗಿವೆ. ಕನ್ನಡದಲ್ಲಿ ಬಳಕೆಯಲ್ಲಿರುವ ನೂರಾರು ಪದಗಳು ಮೂಲದಲ್ಲಿ ಸಂಸ್ಕೃತಕ್ಕೆ ಸೇರಿದವಾಗಿದ್ದರೂ, ಅವು ಪ್ರಾಕೃತಗಳ ಮೂಲಕ ಕನ್ನಡಕ್ಕೆ ಬಂದಿವೆ. ಪ್ರಾಕೃತದಲ್ಲಿ ನಡೆದ ಧ್ವನಿ ಪರಿವರ್ತನೆಗಳನ್ನು ಕನ್ನಡ ಒಪ್ಪಿ ಆ ಪದಗಳನ್ನು ಸ್ವೀಕರಿಸಿರುವುದರಿಂದ ಅವುಗಳ ಧ್ವನಿ ವ್ಯತ್ಯಾಸಗಳಿಗೆ ಕನ್ನಡದಲ್ಲಿ ಕಾರಣಗಳನ್ನು ಹುಡುಕುವುದು ಸಾಧ್ಯವಾಗುವುದಿಲ್ಲ. ಉದಾ.ಗೆ 'ಕಜ್ಜ' ಎಂಬ ಪದಕ್ಕೆ ಮೂಲ 'ಕಾರ್ಯ' ಎನ್ನುವುದಾದರೆ, 'ಸಜ್ಜೆ'ಯ ಮೂಲ ರೂಪ 'ಶಯ್ಯಾ' ಎನ್ನುವುದಾದರೆ, ಆಗ ಕನ್ನಡದಲ್ಲಿ ಬಳಕೆಯಾಗಿರುವ ಪದಗಳ ಧ್ವನಿ ರೂಪಗಳನ್ನು ವಿವರಿಸುವುದು ಸಾಧ್ಯವಿಲ್ಲ. ಏಕೆಂದರೆ ಈ ಪದಗಳು ಪ್ರಾಕೃತಗಳಿಂದ ಕನ್ನಡಕ್ಕೆ ಬಂದಿವೆ. ಇಂತಹ ಪದಗಳನ್ನು ತದ್ಭವಗಳೆನ್ನಬೇಕೆ? ಸಲ್ಲದೆಂದು ತೋರುತ್ತದೆ. ಸ್ವೀಕರಿಸುವಾಗ ಯಾವ ಭಾಷೆಯಿಂದ ಪಡೆಯುತ್ತೇವೆ ಎನ್ನುವುದು ಮುಖ್ಯವೇ ಹೊರತು, ಆ ಭಾಷೆ ಆ ಪದ ಅಥವಾ ಭಾಷಾಂಶ ಯಾವ ಭಾಷೆಯಿಂದ ಬಂದಿದೆ ಎನ್ನುವುದು ಮುಖ್ಯವಾಗುವುದಿಲ್ಲ. ಹೊಸ ಉದಾಹರಣೆಗಳನ್ನು ಗಮನಿಸೋಣ. ಇಂಗ್ಲಿಶಿನಿಂದ ಕನ್ನಡ ಪಡೆದಿರುವ ನೂರಾರು ಪದಗಳು ಇಂಗ್ಲಿಶಿಗೆ ಬೇರೆ ಭಾಷೆಗಳಿಂದ ಬಂದು ಸೇರಿರುವಂತಹವು. ಆ ಕಾರಣದಿಂದ ಕನ್ನಡ ಆ ಎಲ್ಲ ಭಾಷೆಗಳಿಂದ ಆ ಪದಗಳನ್ನು ಸ್ವೀಕರಿಸಿದೆ ಎಂದು ಹೇಳುವುದು ಸರಿಯಾಗದಲ್ಲವೇ? ಈ ಗೊಂದಲ ಸಂಸ್ಕೃತ–ಪ್ರಾಕೃತಗಳ ವಿಷಯದಲ್ಲಿ ಮಾತ್ರ ಇರುವಂತಹುದಲ್ಲ. ಕನ್ನಡದಲ್ಲಿ ಈಗ ಬಳಕೆಯಾಗುತ್ತಿರುವ ಎಷ್ಟೋ ಪದಗಳಿಗೆ ಪರ್ಶಿಯನ್ ಮತ್ತು ಅರಾಬಿಕ್ ಮೂಲವನ್ನು ಗುರುತಿಸುತ್ತೇವೆ. ನಮಗೆ ತಿಳಿದಿರುವಂತೆ ಪರ್ಶಿಯನ್ ಮತ್ತು ಅರಾಬಿಕ್‌ಗಳ ಧಾರ್ಮಿಕ ರಾಜಕೀಯ ಸಂಬಂಧಗಳೇನೇ ಇರಲಿ, ಅವೆರಡೂ ಬೇರೆ ಬೇರೆ ಭಾಷಾವಂಶಕ್ಕೆ

ಸೇರಿದ ಭಾಷೆಗಳು. ಕನ್ನಡ ಬಳಸುತ್ತಿರುವ ಪದಗಳಲ್ಲಿ ಯಾವುದು ಪರ್ಶಿಯನ್ ಮೂಲದ್ದು ಮತ್ತು ಯಾವುದು ಅರಾಬಿಕ್ ಮೂಲದ್ದು ಎಂದು ವಿಂಗಡಿಸುವ ಅಗತ್ಯವಿದೆ. ಪ್ರೊ. ಶಂಕರ ಕೆದಿಲಾಯ ಅವರು ಈ ಕೆಲಸವನ್ನು ಅಚ್ಚುಕಟ್ಟಾಗಿ ಮಾಡಿದ್ದಾರೆ. ಈ ಸಮಸ್ಯೆ ಇನ್ನೂ ಗೋಜಲಾಗಲು ಬೇರೆ ಕಾರಣಗಳಿವೆ. ಈ ಪದಗಳಲ್ಲಿ ಹಲವನ್ನು ಈ ಎರಡೂ ಭಾಷೆಗಳಿಂದ ಪಡೆಯದೆ ಮಧ್ಯವರ್ತಿಯಾದ ಬೇರೊಂದು ಭಾಷೆಯಿಂದ (ಉದಾ.ಗೆ ಉರ್ದು, ಮರಾಠಿ, ಹಿಂದಿ) ಕನ್ನಡ ಪಡೆದುಕೊಂಡಿದೆ. ಹಾಗಾಗಿ ಆ ಪದಗಳಲ್ಲಿ ಕಾಣುವ ಧ್ವನಿರೂಪ ಅಥವಾ ಅರ್ಥಗಳಿಗೆ ನಾವು ಮೂಲವನ್ನು ಪರ್ಶಿಯನ್ ಅಥವಾ ಅರಾಬಿಕ್ ಗಳಲ್ಲಿ ಹುಡುಕುವುದು ಸರಿಯಾಗುವುದಿಲ್ಲ. ಇಷ್ಟೆಲ್ಲಾ ಹೇಳಿದ್ದರ ಉದ್ದೇಶವಿಷ್ಟೆ. ನಾವು ತದ್ಭವಗಳೆಂದು ಗುರುತಿಸುತ್ತಿರುವ ಪದಗಳಲ್ಲಿ ಎಷ್ಟೋ ತದ್ಭವಗಳಲ್ಲ ಎಂದು ತಿಳಿಯಬೇಕಾಗಿದೆ.

ನಮ್ಮ ಮುಂದಿನ ಸಮಸ್ಯೆ ಬೇರೆ ಬಗೆಯದ್ದು. ಎಷ್ಟೋ ಪದಗಳು ತದ್ಭವಗಳಾಗಿದ್ದರೂ ಅವುಗಳನ್ನು ಹಾಗೆ ಗುರುತಿಸುತ್ತಿಲ್ಲ. ಕನ್ನಡ ಶಾಲಾ ವ್ಯಾಕರಣಗಳಂತೂ ತದ್ಭವಗಳನ್ನು ಸಂಸ್ಕೃತದ ಚೌಕಟ್ಟಿನಿಂದ ಹೊರಗೆ ತರುವ ಗುರಿಯನ್ನು ಹೊಂದಿಲ್ಲ. ಕನ್ನಡ ತಾನು ಪಡೆದ ಪದಗಳಲ್ಲಿ ಧ್ವನಿಸ್ತರದಲ್ಲಿ ಬದಲಾವಣೆ ಮಾಡಿಕೊಂಡ ಎಲ್ಲ ಪದಗಳನ್ನೂ ತದ್ಭವಗಳೆಂದು ಗುರುತಿಸುವ ಅಗತ್ಯವಿದೆ. ಆ ಪದಗಳು ಕೇವಲ ಸಂಸ್ಕೃತ ಮೂಲದಿಂದ ಮಾತ್ರ ಬಂದವಾಗಿರಬೇಕಿಲ್ಲ. ಪರ್ಸೋ-ಅರಾಬಿಕ್ ಪದಗಳು, ಇಂಗ್ಲಿಶಿನಿಂದ ಬಂದ ಪದಗಳು ಎಲ್ಲವೂ ಇದರಲ್ಲಿ ಸೇರಬೇಕಾಗಿದೆ. ಜಮೀನು, ಶರಬತ್ತು, ಸವಾರಿ ಇಂತಹ ಪದಗಳಲ್ಲದೆ ಬಸ್ಸು, ಪೆನ್ನು, ಸ್ಕೂಲು, ಮೇಷ್ಟ್ರು ಮುಂತಾದ ಪದಗಳೂ ತದ್ಭವಗಳೆಂದು ಪರಿಗಣಿತವಾಗಬೇಕು. ಈ ಹಠ ಏಕೆ? ತದ್ಭವಗಳ ವ್ಯಾಪ್ತಿಯನ್ನು ಹೆಚ್ಚಿಸ ಬೇಕೇಕೆ? ಈ ಪ್ರಶ್ನೆಗಳು ಸಹಜ. ಹೀಗೆ ಮಾಡುವುದರಿಂದ ಕನ್ನಡ ಬೇರೆ ಭಾಷೆಗಳಿಂದ ಹೊಸ ಪದಗಳನ್ನು ಪಡೆದಾಗ ಮಾಡಿಕೊಳ್ಳುವ ಧ್ವನಿ ವ್ಯತ್ಯಾಸಗಳ ವ್ಯಾಪ್ತಿ ಮತ್ತು ಆ ವ್ಯತ್ಯಾಸಗಳಲ್ಲಿರುವ ಸಮಾನಾಂಶಗಳನ್ನು ಗುರುತಿಸುವುದು ಸಾಧ್ಯವಾಗುತ್ತದೆ.

ಇಲ್ಲಿ ಮೊದಲು ಹೇಳಿದ ಸಮಸ್ಯೆಯೊಂದನ್ನು ಈಗ ಮರಳಿ ಪರಿಗಣಿಸುವ ಅಗತ್ಯವಿದೆ. ಧ್ವನಿವ್ಯತ್ಯಾಸಗಳಾಗಲು ಆಡುಮಾತಿನ ಮೂಲಕ ಹೊಸ ಪದಗಳನ್ನು ಪಡೆದುಕೊಳ್ಳುತ್ತಿರುವುದು ಮುಖ್ಯ ಕಾರಣವೆಂದು ಮೊದಲು ಹೇಳಿದೆವು. ಆದರೆ ಎಷ್ಟೋ ಸಂದರ್ಭದಲ್ಲಿ ಹೊಸ ಪದಗಳು ಬರವಣಿಗೆಯ ಮೂಲಕ ಒಳಬರುತ್ತವೆ. ಅಂತಹ ಪದಗಳಿಗೆ ಹಲವು ಬಾರಿ ಮೂಲ ಭಾಷೆಯಲ್ಲಿ ಯಾವ ಉಚ್ಚಾರವಿರುತ್ತದೆ ಎನ್ನುವುದು ಸ್ವೀಕರಿಸಿ ಬಳಸುವವರಿಗೆ ಗೊತ್ತಿರುವುದಿಲ್ಲ. ಆಗ ಆ ಪದಗಳ ಧ್ವನಿ ರೂಪದಲ್ಲಿ ಆಗುವ ವ್ಯತ್ಯಾಸಗಳಿಗೆ ಉಚ್ಚಾರಣೆ ಕಾರಣವಾಗುವುದಿಲ್ಲ. ಕನ್ನಡ ಬರವಣಿಗೆಯ ಚೌಕಟ್ಟು ಮತ್ತು ಸಾಧ್ಯತೆಗಳು ಕಾರಣವಾಗುತ್ತವೆ. ಈ ಪ್ರಕ್ರಿಯೆಗೊಂದು ಚರಿತ್ರೆ ಇದೆ. ಹೀಗೆ ಬರವಣಿಗೆಯ ಮೂಲಕ ಹೊಸ ಭಾಷಾಂಶಗಳನ್ನು ಪಡೆದುಕೊಳ್ಳುವುದು ಹೊಸ ವಿಚಾರವೇನೂ ಅಲ್ಲ. ಹಿಂದೆಯೂ ಸಂಸ್ಕೃತದ ಸಂದರ್ಭದಲ್ಲಿ ಇದು ನಡೆಯುತ್ತಿದ್ದ ಪ್ರಕ್ರಿಯೆಯೇ ಆಗಿದೆ. ಆಗ ಉಂಟಾದ ಸಮಸ್ಯೆಯನ್ನು ಬಿಡಿಸಲು ಕನ್ನಡ ಹೊಸ ದಾರಿಯೊಂದನ್ನು ಕಂಡುಕೊಂಡಿದೆ. ಅದರಂತೆ ಕನ್ನಡ ಬರವಣಿಗೆಯ ಸಾಧ್ಯತೆಯನ್ನು

ಕನ್ನಡ ಉಚ್ಚಾರಣೆಗೆ ಮಾತ್ರ ಸೀಮಿತಗೊಳಿಸಿಕೊಳ್ಳದೇ, ಕನ್ನಡಕ್ಕೆ ಹೊರಗಿನಿಂದ ಬಂದ ಭಾಷಾಂಶಗಳನ್ನು ಬರೆಯಲು ಅನುಕೂಲವಾಗುವಂತೆ ಹಿಗ್ಗಿಸಲಾಯಿತು. ಹೊಸ ಲಿಪಿಚಿಹ್ನೆಗಳನ್ನು ಬಳಸಿದರು. ಇದರಿಂದ ಕನ್ನಡದಲ್ಲಿ ನಡೆದ ಸ್ವೀಕರಣ ಪ್ರಕ್ರಿಯೆಗೆ ಎರಡು ವಿಭಿನ್ನ ನೆಲೆಗಳು ಒದಗಿದವು. ಆಡುಮಾತಿನ ಮೂಲಕ ಬಂದ ಪದಗಳು ಕನ್ನಡದ ಉಚ್ಚಾರಣೆಯ ನಿಯಮ ಮತ್ತು ಧ್ವನಿ ರಚನೆಯ ನಿಯಮಗಳಿಗೆ ಅನುಗುಣವಾಗಿ ತಮ್ಮ ಧ್ವನಿರೂಪವನ್ನು ಬದಲಾಯಿಸಿಕೊಂಡರೆ, ಬರಹದ ಮೂಲಕ ಬಂದ ಪದಗಳು ಹೊಸ ಲಿಪಿಚಿಹ್ನೆಗಳ ನೆರವಿನಿಂದ ಮೂಲ ರೂಪವನ್ನು ಕಾಯ್ದುಕೊಂಡವು. ಇದರಿಂದ ದ್ವಿಸ್ತರತೆಯ ಸಂದರ್ಭವೊಂದು ನಿರ್ಮಾಣವಾಗಲು ಸಹಕಾರಿಯಾಯಿತೆಂಬ ಪ್ರಮೇಯವನ್ನು ಇಲ್ಲಿ ಮಂಡಿಸಬಯಸುತ್ತೇನೆ. ಕನ್ನಡದಲ್ಲಿ ಇನ್ನೂ ಮುಂದುವರೆಯುತ್ತಿರುವ ಆಡುಮಾತಿಗಿಂತ ಬರಹ ಶ್ರೇಷ್ಠವೆಂಬ ಮನೋಭಾವದ ಮೂಲ ಇಲ್ಲಿದೆ. ತಮ್ಮ ರೂಪವನ್ನು ಕದಡದಂತೆ ಕಾಯ್ದುಕೊಂಡ ಬರಹದ ಪದಗಳು ಕನ್ನಡದ ಲಕ್ಷಣಕ್ಕೆ ಹೊಂದಿಕೊಂಡ ಆಡುಮಾತಿನ ಪದಗಳಿಗಿಂತ ಹೆಚ್ಚು ಪ್ರಮಾಣೀಭೂತವಾದವೆಂಬ ನಿಲುವು ಕನ್ನಡದಲ್ಲಿ ನೆಲೆಯೂರಿತು.

ಈ ದ್ವಿಸ್ತರತೆಯ ನೆಲೆಯನ್ನು ಮುರಿಯುವ ಯತ್ನಗಳು ಕನ್ನಡದಲ್ಲಿ ನಡೆದಿಲ್ಲವೆಂದಲ್ಲ. ನಡುಗನ್ನಡದ ದಾಖಲೆಗಳನ್ನು ನೋಡಿದರೆ ನಮಗೆ ಈ ಬಗೆ ಕೆಲವು ಸೂಚನೆಗಳು ದೊರೆಯುತ್ತವೆ. ಮೊದಲಿಗೆ ಆಂಡಯ್ಯ ತನ್ನ ಕೃತಿಯನ್ನು ಕನ್ನಡದಲ್ಲಿ ಬರೆಯುವ ನಿರ್ಧಾರವನ್ನು ಮಾಡಿದನು. ಸಂಸ್ಕೃತ ಪದಗಳನ್ನು ಬೇಕೆಂತಲೇ ದೂರವಿರಿಸುವ ಪ್ರಯತ್ನವನ್ನು ಮಾಡಿದನು. ನಮ್ಮ ವಿಮರ್ಶಕರು ಅವನ ಯತ್ನವನ್ನು ಮೆಚ್ಚುತ್ತಾರಾದರೂ, ಆತ ಸಂಸ್ಕೃತ ಪದಗಳ ಬದಲು ತದ್ಭವಗಳನ್ನು ಬಳಸಿದ್ದಕ್ಕೆ ವಿಷಾದ ವ್ಯಕ್ತಪಡಿಸುತ್ತಾರೆ. ಅದು ಕವಿಯ ಸೋಲು ಎಂಬ ವಾದವನ್ನು ಮಂಡಿಸುತ್ತಾರೆ. ಆದರೆ ಆಂಡಯ್ಯನ ಪ್ರಯತ್ನವನ್ನು ನಾವು ಇನ್ನೊಂದು ರೀತಿಯಿಂದ ನೋಡಬೇಕು. ಸಂಸ್ಕೃತ ಪದಗಳನ್ನು ದೂರವಿರಿಸುವ ನಿರ್ಧಾರವನ್ನು ಮಾಡಿದ ಆಂಡಯ್ಯ ಜನರ ಆಡುನುಡಿಯಲ್ಲಿದ್ದ ತದ್ಭವ ರೂಪಗಳನ್ನು ಲಿಖಿತ ರೂಪಕ್ಕೆ ತರುವ ಯತ್ನವನ್ನು ಮಾಡಿದ್ದಾನೆ. ಲಿಪಿಚಿಹ್ನೆಯ ಸುಧಾರಣೆಗಳಿಂದಾಗಿ ಸ್ವೀಕರಿಸಿದ ಪದಗಳ ತದ್ಭವ ರೂಪಗಳನ್ನು ಬರೆಯುವ ಒತ್ತಾಯವಿರಲಿಲ್ಲ. ಹಾಗಿದ್ದಲ್ಲಿ ಬರವಣಿಗೆಯಲ್ಲಿ ತದ್ಭವಗಳನ್ನು ಬಳಸುವುದು ಎಂದರೇನು? ಆಡುಮಾತಿನ ರೂಪಗಳನ್ನು ಬರಹಕ್ಕೆ ತರುವ ಮೂಲಕ ಅವುಗಳಿಗೆ ಮನ್ನಣೆಯನ್ನು ದೊರಕಿಸುವ ಯತ್ನವೆಂದು ಪರಿಗಣಿಸಬೇಕು ತಾನೆ? ಇಂತಹುದೇ ಪ್ರಯತ್ನ ಬೇರೊಂದು ರೀತಿಯಲ್ಲಿ ಹಲವು ನಡುಗನ್ನಡದ ಕವಿಗಳಲ್ಲಿ ಕಾಣಿಸಿಕೊಳ್ಳುತ್ತದೆ. ಕುಮಾರವ್ಯಾಸನ ಕೃತಿಯಲ್ಲಿ ತದ್ಭವಗಳ ಬಳಕೆಯಿದೆ. ಭಕುತಿ, ಹರುಷ, ಶಕುತಿ, ಯುಕುತಿ ಮುಂತಾದ ಪದಗಳನ್ನು ಗಮನಿಸಿ. ಇಲ್ಲಿಯೂ ಆಡು ಮಾತಿನ ರೂಪಗಳನ್ನು ಬರಹಕ್ಕೆ ತರುವುದಕ್ಕೆ ಹಿಂಜರಿಕೆ ಇಲ್ಲದಿರುವುದನ್ನು ಗುರುತಿಸಬಹುದು. ಎಂದರೆ ಕನ್ನಡದಲ್ಲಿ ಅನಗತ್ಯವಾಗಿ ಮೈದೋರಿದ ದ್ವಿಸ್ತರತೆಯನ್ನು ನಿರಾಕರಿಸುವ ಯತ್ನ ಮೊದಲಾಗಿ ಹಲವು ಶತಮಾನಗಳು ಕಳೆದಿವೆ. ಆದರೆ ಆ ಯತ್ನದ ಮಹತ್ವವನ್ನು ನಾವಿನ್ನೂ ಸರಿಯಾಗಿ ಗ್ರಹಿಸಿಲ್ಲವೆಂದು ತೋರುತ್ತದೆ. ಏಕೆಂದರೆ

ಈಗಲೂ ಪ್ರಮಾಣೀಕೃತ ರೂಪಗಳಿಗಾಗಿ ನಾವು ಬರಹದತ್ತಲೇ ಮೊಗಮಾಡುತ್ತೇವೆ.

ಸ್ವೀಕರಿಸಿದ ಪದಗಳ ಯಥಾರೂಪವನ್ನು ಕಾಯ್ದುಕೊಳ್ಳಬೇಕೆಂಬ ಹಠ ಕನ್ನಡದಲ್ಲಿ ಮೊದಲಿನಷ್ಟು ಬಲವಾಗಿಲ್ಲ. ಪರ್ಸೋ-ಅರಾಬಿಕ್ ಮೂಲದ ಪದಗಳ ಬಗೆಗೆ ನಾವು ಅಂತಹ ಕಾಳಜಿಯನ್ನು ತೋರಿಲ್ಲವಾದರೂ, ಇಂಗ್ಲಿಶಿನಿಂದ ಪದಗಳನ್ನು ಸ್ವೀಕರಿಸಿದಾಗ ಕೆಲವೊಮ್ಮೆ ಮೂಲದ ಉಚ್ಚಾರಣೆಯನ್ನು ಬರಹದಲ್ಲಿ ಕಾಯ್ದುಕೊಳ್ಳಲೆಂದು ಒಂದೆರಡು ಲಿಪಿಚಿಹ್ನೆಗಳನ್ನು ಹೊಸದಾಗಿ ಬಳಸಲು ಮೊದಲು ಮಾಡಿದ್ದೇವೆ. ವರ್ತ್ಸ್ಯ ಘರ್ಷ ಘೋಷ (ಜ಼್) ಮತ್ತು ದಂತೋಷ್ಠ್ಯ ಘರ್ಷ ಅಘೋಷ(ಫ಼್)ಗಳನ್ನು ಬರೆಯುವಾಗ ಚಿಹ್ನೆಗಳ ಕೆಳಗೆ ಎರಡು ಚುಕ್ಕಿ ಇಡುತ್ತಿದ್ದೇವೆ. ಕನ್ನಡದ ಕಂಪ್ಯೂಟರ್ ಕಾರ್ಯವಾಹಿಗಳಲ್ಲೂ ಈ ಅಳವಡಿಕೆ ಆಗಿದೆ. ಅದೇನೇ ಇದ್ದರೂ ಕನ್ನಡ ಬರವಣಿಗೆ ಈಗ 1)ತನಗೆ ಗೊತ್ತಿಲ್ಲದಂತೆ ತಾನೇ ತದ್ಭವಗಳಿಗೆ ಕಾರಣವಾಗುತ್ತಿದೆ ಮತ್ತು 2) ಆಡುಮಾತಿನಲ್ಲಿರುವ ತದ್ಭವ ರೂಪಗಳನ್ನು ತನ್ನಲ್ಲಿ ಅಳವಡಿಸಿಕೊಳ್ಳಲು ಹಿಂಜರಿಯುತ್ತಿಲ್ಲ. ಮೊದಲನೆಯ ಪ್ರಕ್ರಿಯೆಗೆ ಮುಖ್ಯ ಕಾರಣ ಹೊಸ ಪದಗಳ ಆಗಮನ ಆಡುಮಾತಿನ ಸಂಪರ್ಕದ ಮೂಲಕ ಆಗದೆ ಬರವಣಿಗೆಯ ಮೂಲಕವೇ ಆಗುತ್ತಿರುವುದು. ಕನ್ನಡಕ್ಕೆ ದಿನವೂ ಸೇರುತ್ತಿರುವ ಹತ್ತಾರು ಬೇರೆ ದೇಶದ ಹೆಸರುಗಳ ಬರೆಹ ರೂಪಗಳನ್ನು ಗಮನಿಸಿದರೆ, ಕನ್ನಡ ಬರವಣಿಗೆಯೂ ತದ್ಭವಗಳಿಗೆ ಒಗ್ಗಿಹೋಗಿರುವ ರೀತಿಯ ಪರಿಚಯವಾಗುತ್ತದೆ.

ಸ್ವೀಕರಣ ಪದಗಳಲ್ಲಿ ಆಗಿರುವ ಧ್ವನಿ ವ್ಯತ್ಯಾಸಗಳನ್ನು ನಮ್ಮ ಅಧ್ಯಯನಗಳು ವಿವರಿಸಿವೆ. ಆದರೆ ಆ ವ್ಯತಾಸಗಳ ಹಿಂದಿರುವ ಸಾಮಾನ್ಯಾಂಶಗಳನ್ನು ಮತ್ತು ಸಾರ್ವತ್ರಿಕತೆಗಳನ್ನು ಗುರುತಿಸಿಲ್ಲ. ಉದಾಹರಣೆಗೆ ನಡುಗನ್ನಡದಲ್ಲಿ ಕಾಣಿಸಿಕೊಂಡ ಯುಕುತಿ, ಶಕುತಿ, ರಕುತ, ಭಕುತ, ಆತುಮ, ಹರುಷ, ಕಾರಿಯ, ರತುನ ಮುಂತಾದ ಪದಗಳನ್ನು ಗಮನಿಸಿ. ಇವುಗಳಲ್ಲಿ ಪದಮಧ್ಯದ ವ್ಯಂಜನ ದ್ವಿತ್ವಗಳ ನಡುವೆ ಉಕಾರಾಗಮವಾಗಿರುವ ಸಾಮಾನ್ಯ ಲಕ್ಷಣ ಕಾಣುತ್ತದೆ. ಹೀಗಾಗಲು ಕಾರಣಗಳೇನು? ಇದಕ್ಕೂ ಹಳಗನ್ನಡದ ವ್ಯಂಜನಾಂತಪದಗಳು ನಡುಗನ್ನಡದಲ್ಲಿ ಸ್ವರಾಂತವಾಗುವ ಬದಲಾವಣೆಗೂ ಏನಾದರೂ ಸಂಬಂಧವಿದೆಯೇ ಎಂಬುದನ್ನು ನಮ್ಮ ಅಧ್ಯಯನಗಳು ಪರಿಶೀಲಿಸಿಲ್ಲ. ಅಂದರೆ ಸ್ವೀಕರಣ ಪದಗಳಿಗೆ ವಿಶಿಷ್ಟವಾದ ಧ್ವನಿ ವ್ಯತ್ಯಾಸಗಳು ನಡೆಯುತ್ತವೆ ಎನ್ನುವುದಕ್ಕಿಂತ, ಭಾಷೆಯಲ್ಲಿ ನಡೆಯುವ ಸಾಮಾನ್ಯ ಧ್ವನಿ ವ್ಯತ್ಯಾಸಗಳೇ ಅಲ್ಲಿಯೂ ಅನ್ವಯವಾಗುತ್ತಿರುತ್ತವೆ ಎಂದು ಹೇಳಲು ಸಾಧ್ಯವಿದೆಯೇ? ಮೇಲಿನ ಸಮಸ್ಯೆಗೆ ಉತ್ತರವನ್ನು ಕಂಡುಕೊಳ್ಳಲು ಕನ್ನಡದ ಅಕ್ಷರ (ಸಿಲೆಬಲ್) ರಚನೆಯನ್ನು ಅಭ್ಯಾಸ ಮಾಡಬೇಕು. ವ್ಯಂಜನಾಂತ ಪದಗಳು ಪದಾಂತ್ಯದಲ್ಲಿ ಭಾರಾಕ್ಷರಗಳನ್ನು ಅಥವಾ ಸಂವೃತಾಕ್ಷರಗಳನ್ನು (ಕ್ಲೋಸ್ಡ್ ಸಿಲೆಬಲ್) ಒಪ್ಪಿಕೊಳ್ಳುತ್ತವೆ. ಆದರೆ ನಡುಗನ್ನಡ ಈ ಸಾಧ್ಯತೆಯನ್ನು ಬಿಟ್ಟುಕೊಟ್ಟಿದೆ. ಅಂದರೆ ಪದಾಂತ್ಯದಲ್ಲಿ ವಿವೃತಾಕ್ಷರ(ಓಪನ್ ಸಿಲೆಬಲ್)ಮಾತ್ರ ಬರಲು ಸಾಧ್ಯವೆಂಬ ಹೊಸ ಸಾಧ್ಯತೆ ರೂಪಗೊಂಡಂತೆ ತೋರುತ್ತದೆ. ಇದೇ ನಿಯಮ ಪದದ ಒಳಗಿನ ಅಕ್ಷರ ರಚನೆಗೂ ಅನ್ವಯವಾದಾಗ ಪದಾರಂಭದ ಸಿಲೆಬಲ್ ಕೂಡ ವಿವೃತವಾಗುತ್ತದೆ ಅಥವಾ ಭಾರಾಕ್ಷರಗಳು ಪದಾದಿಯಲ್ಲಿ ಬರುವ

ಅವಕಾಶಗಳು ಇಲ್ಲವಾಗುತ್ತವೆ. ಇದರಿಂದಾಗಿ ರಕ್ತ>ರಕುತ, ಶಕ್ತಿ>ಶಕುತಿ ಮಾದರಿಯ ಬದಲಾವಣೆಗಳಾಗುತ್ತವೆ. ಆದರೆ ಈ ವಿವರಣೆಗೆ ಅವ್ಯಾಪ್ತಿ ದೋಷವಿದೆ. ಏಕೆಂದರೆ ಪದಾದಿಯ ಎಷ್ಟೋ ಭಾರಾಕ್ಷರ ರಚನೆಗಳು ಈ ಬದಲಾವಣೆಗೆ ಒಳಗಾಗುವುದಿಲ್ಲ. ಉದಾಹರಣೆಗೆ ಚಕ್ರ, ಸಖ್ಯ, ಅನ್ನ ಇತ್ಯಾದಿ ಪದಗಳಲ್ಲಿ ಬದಲಾವಣೆಗಳಾಗಿಲ್ಲ. ಇದರಿಂದ ನಿಯಮವನ್ನು ಮತ್ತಷ್ಟು ಪರಿಷ್ಕರಿಸಬೇಕಾಗಿದೆ. ಬಹುಶಃ ಪದಾದಿಯ ಸಂವೃತಾಕ್ಷರದ ಕೊನೆಯ ವ್ಯಂಜನದ ಸ್ವರೂಪವು ಈ ಬದಲಾವಣೆಗಳನ್ನು ನಿಯಂತ್ರಿಸುತ್ತಿರುವಂತಿದೆ ಅಥವಾ ಹೀಗೂ ಹೇಳಬಹುದು. ಪದಮಧ್ಯದ ವ್ಯಂಜನ ದ್ವಿತ್ವದಲ್ಲಿ ಎರಡೂ ವ್ಯಂಜನಗಳು ಸ್ಪರ್ಶಗಳೂ ಅಥವಾ ಅಲ್ಲವೋ ಎಂಬುದು ಮುಖ್ಯ. ಎರಡೂ ಸ್ಪರ್ಶಗಳಾದರೆ ಧ್ವನಿ ವ್ಯತ್ಯಾಸ ಅಂದರೆ ಅಕ್ಷರರಚನೆಯ ಮರು ವ್ಯಾಖ್ಯಾನ ನಡೆದಿದೆ. ಹಾಗಿಲ್ಲದಿದ್ದಲ್ಲಿ ಬದಲಾವಣೆಯನ್ನು ನಿಯಂತ್ರಿಸುವ ಬೇರೆ ಕಾರಣಗಳಿವೆ. ಇದನ್ನು ಅಭ್ಯಾಸ ಮಾಡಬೇಕಾಗಿದೆ. ಈ ವಿವರಣೆಯನ್ನು ನೀಡಲು ಇರುವ ಕಾರಣವೆಂದರೆ ಸ್ವೀಕರಣ ಪದಗಳಲ್ಲಿ ನಡೆಯುವ ಧ್ವನಿ ವ್ಯತ್ಯಾಸಗಳಿಗಿರುವ ಸಾರ್ವತ್ರಿಕತೆಯನ್ನು ವಿವರಿಸುವುದು.

ಸ್ವೀಕರಣ ಕ್ರಿಯೆಯ ಧ್ವನಿ ವ್ಯತ್ಯಾಸಗಳ ಬಗ್ಗೆ ಮಾತ್ರ ಈವರೆಗೆ ಗಮನಿಸಿದ್ದೇವೆ. ಅರ್ಥವ್ಯತ್ಯಾಸಗಳನ್ನು ಚರ್ಚಿಸಿಲ್ಲ. ಈ ವ್ಯತ್ಯಾಸಗಳನ್ನು ಈಗಾಗಲೇ ಅಧ್ಯಯನ ಮಾಡಲಾಗಿದೆ.ಈ ಪ್ರಬಂಧದಲ್ಲಿ ಅರ್ಥ ವ್ಯತ್ಯಾಸದ ಪ್ರಕ್ರಿಯಾ ಮೀಮಾಂಸೆಯತ್ತ ಮಾತ್ರ ಗಮನ ಹರಿಸಲಾಗಿದೆ. ಎಂದರೇನು? ಅರ್ಥ ವ್ಯತ್ಯಾಸದಿಂದ ಅಗುವ ಪರಿಣಾಮಗಳೇನು? ಮೇಲು ನೋಟಕ್ಕೆ ಇದರ ಪರಿಣಾಮಗಳು ಗೋಚರವಾಗುವುದಿಲ್ಲ. ಆದರೆ ಸ್ವೀಕರಣ ನಡೆದಾಗ ಯಾವಾಗಲೂ ಸ್ವೀಕರಿಸುವ ಭಾಷೆಯ ಪದಕೋಶದ ಕೊರತೆ ಅಥವಾ ತೆರಪುಗಳು ತುಂಬಿಕೊಳ್ಳುವ ಉದ್ದೇಶ ಮಾತ್ರ ಇರುವುದಿಲ್ಲ. ಈ ಭಾಷೆಯಲ್ಲಿ ಸೂಕ್ತ ಪದವಿದ್ದಾಗಲೂ ಇನ್ನೊಂದು ಭಾಷೆಯಿಂದ ಬೇರೆಬೇರೆ ಕಾರಣಗಳಿಂದ ಹೊಸ ಪದಗಳನ್ನು ಸ್ವೀಕರಿಸುವುದನ್ನು ನೋಡಿದ್ದೇವೆ. ಹಾಗಾದಾಗ ಹೊಸ ಪದ ಮತ್ತು ಮೊದಲಿದ್ದ ಪದಗಳ ನಡುವೆ ವಿಶಿಷ್ಟ ಸಂಬಂಧವೊಂದು ರೂಪುಗೊಳ್ಳುತ್ತವೆ. ಈ ಸಂಬಂಧದಿಂದ ಬಳಕೆಯ ನಿಯಮಗಳು ಸಿದ್ಧಗೊಳ್ಳುತ್ತವೆ. ಮೂಲ ಪದದ ಬಳಕೆಯ ವಲಯ ಮತ್ತು ಪಡೆದ ಪದದ ಬಳಕೆಯ ವಲಯಗಳು ನಿಗದಿಗೊಳ್ಳುತ್ತವೆ. ತದ್ಭವಗಳ ವಿಷಯದಲ್ಲಿ ನಾವು ಕಂಡ ದ್ವಿಸ್ತರತೆಯ ಸಂಬಂಧ ಇಲ್ಲೂ ಉಂಟಾಗುತ್ತದೆ. ಸಾಮಾನ್ಯವಾಗಿ ಮೂಲಪದಗಳ ಬಳಕೆಯ ವಲಯ ಕುಗ್ಗುತ್ತದೆ. ಅವು ಆಪ್ತವಲಯಕ್ಕೆ ಅನೌಪಚಾರಿಕ ವಲಯಕ್ಕೆ ಸರಿಯುತ್ತವೆ. ಪಡೆದುಕೊಂಡ ಪದಗಳು ಔಪಚಾರಿಕ ಮತ್ತು ಸಾರ್ವಜನಿಕ ವಲಯದಲ್ಲಿ ಚಾಲ್ತಿಗೆ ಬರುತ್ತವೆ. ಇದಲ್ಲದೆ ಮೂಲ ಪದಗಳ ಅರ್ಥ ವ್ಯಾಪ್ತಿ ಕುಗ್ಗುವ ಸಂದರ್ಭಗಳೂ ಇವೆ. ಮೂಲ ಪದದ ಅರ್ಥ ಸ್ತರದಲ್ಲಿ ಹೊಸ ಪದ ತನ್ನ ಪಾಲನ್ನು ಪಡೆಯುತ್ತದೆ. ಇದರಿಂದ ಈ ಅರ್ಥದ ಹಂಚಿಕೆಗಳು ನಡೆಯುತ್ತವೆ.

ಅರ್ಥದ ರಾಜಕೀಯಕ್ಕೆ ಇನ್ನೂ ಹಲವು ಆಯಾಮಗಳಿವೆ. ಸ್ವೀಕೃತ ಪದಗಳು ವ್ಯಾಚ್ಯಾರ್ಥವನ್ನು ಮೂಲ ಭಾಷೆಯ ತಮ್ಮ ಅಭಿದಾರ್ಥವನ್ನು ಕಾಯ್ದುಕೊಳ್ಳುತ್ತವೆ.

ಆದರೆ ಮೂಲ ಪದಗಳಿಗೆ ಮೊದಲೇ ಇದ್ದ ಲಕ್ಷಣಾರ್ಥದಲ್ಲಿ ಈ ಹೊಸ ಪದಗಳು ಪಾಲು ಪಡೆಯಲಾರವು. ಈ ಸಾಧ್ಯತೆ ಮೂಲ ಪದಗಳ ಗೌರವವನ್ನು ಕಾಯ್ದುಕೊಂಡರೂ, ಸ್ವೀಕೃತ ಪದಗಳ ವ್ಯಾಚ್ಯಾರ್ಥ ಪ್ರಧಾನತೆಯೇ ಅವುಗಳಿಗೆ ಕೆಲವು ವಲಯಗಳಿಗೆ ಅಗತ್ಯವಾದ ಪಾರಿಭಾಷಿಕ ಬಳಕೆಯ ಅರ್ಹತೆಯನ್ನು ನೀಡಿಬಿಡುತ್ತವೆ. ಈ ಪೈಪೋಟಿಯಲ್ಲಿ ಮೂಲಪದಗಳು ಕನ್ನಡದಲ್ಲಿ ಹಿಂದಕ್ಕೆ ಸರಿಯುವ ಸಾಧ್ಯತೆಯೇ ಹೆಚ್ಚು. ಮಾದರಿಗೆಂದು 'ಗುಂಡಿಗೆ' ಮತ್ತು 'ಹೃದಯ' ಎಂಬ ಪದಗಳನ್ನು ಗಮನಿಸಿ. 'ಗುಂಡಿಗೆ' ಪದಕ್ಕೆ ಪಾರಿಭಾಷಿಕವಾಗಿ ಬಳಕೆಯಾಗಲು ಇರುವ ತೊಂದರೆ ಎಂದರೆ ಅದು ಲಕ್ಷಣಾರ್ಥಗಳನ್ನೂ ಪಡೆದುಕೊಂಡಿರುವುದು. (ಇದೇ ಮಾತು ಎದೆ ಪದಕ್ಕೂ ಹೊಂದುತ್ತದೆ.) ಆದರೆ ಹೃದಯ ಪದಕ್ಕೆ ಈ 'ಗೋಜಲಿಲ್ಲ'.

ಒಂದಕ್ಕಿಂತ ಹೆಚ್ಚು ಮೂಲಗಳಿಂದ ಸ್ವೀಕರಣ ನಡೆದಿರುವ ಸಂದರ್ಭಗಳಲ್ಲಿ ಅರ್ಥಜಾಲದ ಸಂಕೀರ್ಣತೆ ಇನ್ನೂ ಗಾಢವಾಗಿರುತ್ತದೆ.. ಕನ್ನಡದ ಮೂಲ ಪದಕ್ಕೆ ಸಂವಾದಿಯಾಗಿ ಸಂಸ್ಕೃತ, ಪರ್ಸೋ-ಅರಾಬಿಕ್ ಮತ್ತು ಇಂಗ್ಲಿಶ್ ಈ ಮೂರೂ ಮೂಲಗಳಿಂದ ಬೇರೆಬೇರೆ ಪದಗಳನ್ನು ಸ್ವೀಕರಿಸಿದ್ದರೆ, ಆಗ ಆ ಪದಗಳ ನಡುವೆ ಬಳಕೆಯ ವಲಯಗಳ ಹಂಚಿಕೆ ನಡೆಯುವ ಕ್ರಮ ಅಧ್ಯಯನಯೋಗ್ಯವಾಗಿದೆ. ಕೈಲಾಸಂ ಅವರ ನಾಟಕಗಳಲ್ಲಿ ಇಂಗ್ಲಿಶ್ ಮತ್ತು ಪರ್ಸೋ-ಅರಾಬಿಕ್ ಪದಗಳು ತಮ್ಮ ಬಳಕೆಯ ವಲಯಗಳನ್ನು ಕಂಡುಕೊಳ್ಳುವ ವಿಧಾನವನ್ನು ಶ್ರೀಧರ್ ಎಸ್.ಎನ್. ಅಧ್ಯಯನ ಮಾಡಿದ್ದಾರೆ. ಈ ಭಾಷಿಕ ವಿತರಣೆ ನಮ್ಮ ಸಾಮಾಜಿಕ ಚಿಂತನೆ ಮತ್ತು ವಿನ್ಯಾಸಗಳ ಪ್ರತಿಬಿಂಬವೇ ಆಗಿರುವುದು ಗಮನಿಸಬೇಕಾದ ಸಂಗತಿಯಾಗಿದೆ. ಸ್ವೀಕರಣ ಪ್ರಕ್ರಿಯೆ ಭಾಷಿಕ ನೆಲೆಯಲ್ಲಿ ನಡೆದದ್ದೆಂದು ನಾವು ತಿಳಿದಿದ್ದರೂ, ಅದು ಸಾಮಾಜಿಕ ವಿನ್ಯಾಸಗಳ ಮತ್ತು ಅದರಿಂದ ಪ್ರಭಾವಿತವಾದ ಭಾಷೆಗಳ ನಡುವಣ ಅಧಿಕಾರ ಸಂಬಂಧಗಳ ಸೂಚಕವಾಗುವ ಸಾಧ್ಯತೆ ಇರುತ್ತದೆ. ಕನ್ನಡದಲ್ಲಿ ಈ ಬಗೆಯ ಅಧ್ಯಯನಗಳಿಗೆ ಅಪಾರ ಅವಕಾಶಗಳಿವೆ.

ಈ ಪ್ರಬಂಧದಲ್ಲಿ ಮೊದಲಿಂದ ಸ್ವೀಕರಣವನ್ನು ಕೇವಲ ಪದಗಳಿಗೆ ಸೀಮಿತಗೊಳಿಸದೆ, ಭಾಷಾಂಶಗಳ ಸ್ವೀಕರಣ ಎನ್ನುವ ಮಾತನ್ನು ಬಳಸುತ್ತಾ ಬರಲಾಗಿದೆ. ಸ್ವೀಕರಣವು ಢಾಳಾಗಿ ಕಾಣುವುದು ಪದಗಳ ಹಂತದಲ್ಲಾದರೂ, ಅದರ ವ್ಯಾಪಕತೆ ಭಾಷೆಯ ಎಲ್ಲ ಹಂತಗಳಿಗೂ ವ್ಯಾಪಿಸುತ್ತದೆ ಎನ್ನುವುದನ್ನು ಭಾಷಾಶಾಸ್ತ್ರಜ್ಞರು ಈಗ ಒಪ್ಪುತ್ತಿದ್ದಾರೆ. ಕನ್ನಡ ಹೀಗೆ ಬೇರೆ ಭಾಷೆಗಳಿಂದ ಪದಗಳನ್ನಲ್ಲದೆ ಮತ್ತೇನನ್ನೊ ಸ್ವೀಕರಿಸಿದೆ ಎಂಬ ಪ್ರಶ್ನೆಯನ್ನು ನಾವಿನ್ನೂ ವಿವರವಾಗಿ ಅಧ್ಯಯನ ಮಾಡಿಲ್ಲ. ಧ್ವನಿಗಳನ್ನು ಸ್ವೀಕರಿಸಿರುವ ಮಾತನ್ನು ಹಿಂದಿನಿಂದಲೂ ಮಂಡಿಸಲಾಗುತ್ತಿದೆ. ಉದಾ.ಗೆ ಮಹಾಪ್ರಾಣಗಳನ್ನು ಕನ್ನಡ ಸಂಸ್ಕೃತದಿಂದ (ಅಥವಾ ಪ್ರಾಕೃತಗಳಿಂದ) ಸ್ವೀಕರಿಸಿದ್ದನ್ನು ಗುರುತಿಸಿದ್ದಾರೆ. ಈ ಧ್ವನಿಗಳನ್ನು ಆಯಾ ಭಾಷೆಗಳ ಪದಗಳ ಸಂದರ್ಭದಲ್ಲಿ ಮಾತ್ರವಲ್ಲದೆ ಬೇರೆ ಪದಗಳಲ್ಲೂ ಉಚ್ಚರಿಸುತ್ತಿರುವುದನ್ನು ಗಮನಿಸಿದಾಗ ಇದನ್ನು ಧ್ವನಿ ಸ್ವೀಕರಣವೆಂದು ಗುರುತಿಸಬಹುದೆಂದು ತೋರುತ್ತದೆ. ಪರ್ಸೋ ಅರಾಬಿಕ್‌ನ ಗಲೀಯ ಘರ್ಷ ಧ್ವನಿಯ

ಬದಲು, ಕನ್ನಡದಲ್ಲಿ ಕಂಠ್ಯ ಘರ್ಷ ಮಹಾಪ್ರಾಣಗಳನ್ನು ಉಚ್ಚರಿಸುತ್ತಿದ್ದೇವೆ. (ಉದಾ. ಖಬರ್) ಇದು ಮೂಲ ಪರ್ಸೋ-ಅರಾಬಿಕ್ ಧ್ವನಿಯೂ ಅಲ್ಲ, ಕನ್ನಡದ ಧ್ವನಿಯೂ ಅಲ್ಲ. ಇದೇ ಮಾದರಿಯಲ್ಲಿ ಇಂಗ್ಲಿಶ್ ಭಾಷೆಯಿಂದ ಸ್ವೀಕರಿಸಿದ ಪದಗಳಲ್ಲಿ ದಂತ್ಯ ಘರ್ಷ ಅಘೋಷಗಳ ಬದಲು, ವರ್ತ್ಸ್ಯ ಮಹಾಪ್ರಾಣಗಳನ್ನು ಉಚ್ಚರಿಸುವುದನ್ನು ಮತ್ತು ಬರೆಯುವುದನ್ನು ಗಮನಿಸಬಹುದು (ಉದಾ. ಥಿಂಕ್) ಆದ್ದರಿಂದ ಕೆಲವೊಮ್ಮೆ ಧ್ವನಿಗಳನ್ನು ಕೆಲವು ಶರತ್ತುಗಳ ಮೇಲೆ ಬೇರೆ ಭಾಷೆಗಳಿಂದ ಸ್ವೀಕರಿಸುತ್ತೇವೆ ಎನ್ನಬಹುದೇ? ಅಥವಾ ಕನ್ನಡ ತನ್ನ ಧ್ವನಿ ಸಮಾಮ್ನಾಯವನ್ನು (ಭಾಷಾಧ್ವನಿ ಸಾಧ್ಯತೆಗಳನ್ನೂ) ವಿಸ್ತರಿಸಿಕೊಂಡಿದೆ ಎನ್ನಬೇಕೋ? ಇದು ಚರ್ಚೆಯ ವಿಷಯ.

ಸಂಸ್ಕೃತದ ನಿಷೇಧ ಪ್ರತ್ಯಯಗಳಲ್ಲಿ ಕೆಲವನ್ನು ಕನ್ನಡ ಸ್ವೀಕರಿಸಿದೆ ಎಂದು ಕೆಲವರು ವಿಶ್ಲೇಷಿಸುವುದುಂಟು. ಅ–ನಿ– ಪೂರ್ವಪ್ರತ್ಯಯಗಳನ್ನು ನಿಷೇಧ ರೂಪಗಳನ್ನು ರಚಿಸಲೆಂದು ಕನ್ನಡ ಬಳಸುತ್ತಿರುವುದಕ್ಕೆ ನಿದರ್ಶನಗಳಿವೆ. ಉದಾ. ಅನಿಗದಿತ ಎಂಬ ರೂಪವನ್ನು ನೋಡಿ. ಇದು ಕನ್ನಡದಲ್ಲೇ ರಚನೆಗೊಂಡ ರೂಪ. ಆದರೆ ಬಳಕೆಯಾಗಿರುವ ಪ್ರತ್ಯಯ ಸಂಸ್ಕೃತದ್ದು. ದುರ್ನಡತೆ, ಸನ್ನಡತೆ, ದುರ್ಬಳಕೆ ಇಂತಹ ರೂಪಗಳನ್ನು ಹೆಚ್ಚಿನ ಉದಾಹರಣೆಗಳನ್ನಾಗಿ ಗಮನಿಸಲು ಸಾಧ್ಯ. ಈಚೆಗೆ ಬಳಕೆಯಾದ 'ಅನಂಟು ರೋಗ' ಎಂಬ ಪ್ರಯೋಗವನ್ನು ನೋಡಿ. ಅಂಟು ರೂಪಕ್ಕೆ ಸಂಸ್ಕೃತದ ನಿಷೇಧ ರೂಪವನ್ನು ಬಳಸಿರುವುದು ಮಾತ್ರವಲ್ಲ, ನಿಯಮವನ್ನೂ ಪಾಲಿಸಲಾಗಿದೆ (ಅ ಸ್ವರಗಳ ಎದುರು ಬಂದಾಗ ಅನ್ ಆಗುವುದು). ಇದೆಲ್ಲವನ್ನು ಹೇಗೆ ವಿಶ್ಲೇಷಿಸುವುದು? ಆದರೂ ಇಲ್ಲೆಲ್ಲ ಸಂಸ್ಕೃತ ಪ್ರತ್ಯಯಗಳನ್ನು ಸ್ವೀಕರಿಸಲಾಗಿದೆ ಎಂದು ತಿಳಿಯುವುದಕ್ಕಿಂತ, ಸಮಾನ ರೂಪ ರಚನೆಯ ಮಾದರಿಯನ್ನು ಅನುಸರಿಸಲಾಗಿದೆ ಎಂದು ತಿಳಿಯುವುದೇ ಸರಿ. ಇನ್ನೂ ಕೆಲವು ಉದಾಹರಣೆಗಳನ್ನು ಗಮನಿಸಿದರೆ ಈ ಮಾತು ಸ್ಪಷ್ಟವಾಗುತ್ತದೆ. ಊಟೋಪಚಾರ ಮತ್ತು ಹಸುರೋತ್ಸವ ಎಂಬ ರೂಪಗಳನ್ನು ಗಮನಿಸಿ. ಇಲ್ಲಿ ಕನ್ನಡದ ಸಂಧಿ ನಿಯಮಗಳು ಪಾಲನೆಯಾಗಿಲ್ಲ. ಗುಣಸಂಧಿ(ಸಂಸ್ಕೃತದ) ನಿಯಮಗಳನ್ನು ಪಾಲಿಸಿದಂತೆ ತೋರುತ್ತದೆ. ಆದರೆ ಅದೂ ಸರಿಯಾದ ವಿವರಣೆಯಲ್ಲ. ಇಲ್ಲೆಲ್ಲಾ ಸಮಾನ ರೂಪ ರಚಿಸುವ ವಿಧಾನದ ಪಾಲನೆಯಾಗುತ್ತಿದೆಯೆಂದು ಹೇಳುವುದೇ ಸರಿ. ಆದ್ದರಿಂದ ಗುಣಸಂಧಿಯ ನಿಯಮಗಳು ಕನ್ನಡ ಭಾಷಿಕರ ಅಂತಸ್ಥ ವ್ಯಾಕರಣಕ್ಕೆ ಸೇರ್ಪಡೆಯಾಗಿರುವ ಸಾಧ್ಯತೆ ಕಡಿಮೆ. ಆದ್ದರಿಂದ ವ್ಯಾಕರಣ ನಿಯಮಗಳನ್ನು ಸ್ವೀಕರಿಸುವ ಪ್ರಶ್ನೆ ಜಟಿಲವಾಗಿಯೇ ಉಳಿದಿದೆ.

# ಕ್ಲಾಸಿಕಲ್ ಸ್ಥಾನಮಾನ

ಕನ್ನಡ ಕ್ಲಾಸಿಕಲ್ ಆಯಿತು. ಹಾಗೆಂದು ಕೇಂದ್ರದ ಸಚಿವ ಸಂಪುಟ ತೀರ್ಮಾನಿಸಿದೆ. ತಮಿಳಿನಂತೆಯೇ ಕನ್ನಡಕ್ಕೂ ಕ್ಲಾಸಿಕಲ್ ಎಂಬ ಸ್ಥಾನವನ್ನು ನೀಡಬೇಕೆಂದು ಕೇಳಿ ಕೊಂಡದ್ದನ್ನು ಒಪ್ಪಿ ಮನ್ನಿಸಿದಂತೆ ಆಗಿದೆ. ಈಗಲೂ ಬಗೆ ಹರಿಯದಿರುವ ಪ್ರಶ್ನೆಯೊಂದಿದೆ. ಒಂದು ಭಾಷೆ ಕ್ಲಾಸಿಕಲ್ ಎಂದು ಕರೆಸಿಕೊಳ್ಳಲು ಏಕೆ ಇಷ್ಟೊಂದು ಹಪಾಹಪಿಯನ್ನು ತೋರಬೇಕು? ತಮಿಳಿಗೇನೋ ವಿಶೇಷ ಮನ್ನಣೆ ದೊರಕಿದೆ, ನಮಗೂ ಅದು ಸಿಗಲಿ ಎನ್ನುವ 'ನೀರು ಹಂಚಿಕೆ'ಯ ಮನಸ್ಸು ಮಾತ್ರ ಇಲ್ಲಿ ಕೆಲಸ ಮಾಡುತ್ತಿದೆಯೇ? ಇದೆಲ್ಲವೂ ಮೊದಲಾಗುವುದಕ್ಕೆ ಕೆಲವು ಹಳೆಯ ಕಾರಣಗಳಿವೆ. ನಾವು ನಮಗೆ ಕೊಟ್ಟುಕೊಂಡ ಸಂವಿಧಾನದಲ್ಲಿ ಇಂಡಿಯಾದ ಎಲ್ಲ ಭಾಷೆಗಳಿಗೂ ( ಒಂದು ಲೆಕ್ಕದಂತೆ ಇವುಗಳ ಸಂಖ್ಯೆ ಸುಮಾರು 1600) ಸಮಾನ ಸ್ಥಾನವಿಲ್ಲ. ಇಂಗ್ಲಿಶ್ ಮತ್ತು ಹಿಂದಿಗಳಿಗೆ ಆಡಳಿತ ಭಾಷೆಗಳಾಗಿ ಮನ್ನಣೆ ದೊರಕಿದೆ. ಆ ಜಾಗದಿಂದ ಇಂಗ್ಲಿಶನ್ನು ಹೊರತಳ್ಳಲು 1965 ರ ಬಳಿಕ ನಡೆಸಿದ ಯತ್ನಗಳು ವಿಫಲಗೊಂಡು ಸಂವಿಧಾನದ ತಿದ್ದುಪಡಿಯಲ್ಲಿ ಕೊನೆಗೊಂಡವು. ಉಳಿದಂತೆ ಸಂವಿಧಾನದ ಎಂಟನೆಯ ಅನುಚ್ಛೇದದಲ್ಲಿ ಪಟ್ಟಿ ಮಾಡಿದ ಕೆಲವು ಭಾಷೆಗಳು ಇನ್ನೊಂದು ಗುಂಪಿಗೆ ಸೇರಿದವು. ಈ ಪಟ್ಟಿಯಲ್ಲಿ ಕನ್ನಡವೂ ಸೇರಿದೆ. ಈ ಪಟ್ಟಿಯೀಗ ರಾಜಕೀಯ ಕಾರಣಗಳಿಂದ ಬೆಳೆಯುತ್ತ ಬಂದು ಈಚೆಗೆ ಹೊಸದಾಗಿ ನಾಲ್ಕು ಭಾಷೆಗಳು ಸೇರಿಕೊಂಡವು. ಈ ಪಟ್ಟಿಯಲ್ಲಿ ಜಾಗ ಪಡೆಯದಿದ್ದರೂ ಸಂಸ್ಕೃತಕ್ಕೆ ವಿಶೇಷ ಸ್ಥಾನಮಾನಗಳನ್ನು ಕೇಂದ್ರ ಸರಕಾರ ಕೊಡಮಾಡುತ್ತ ಬಂದಿದೆ. ಕೇಂದ್ರ ಮಾನವ ಸಂಪನ್ಮೂಲ ಇಲಾಖೆಯ ವಾರ್ಷಿಕ ಆಯವ್ಯಯದಲ್ಲಿ ಅತ್ಯಧಿಕ ಅನುದಾನವನ್ನೂ ಈಗಲೂ ಪಡೆದುಕೊಳ್ಳುತ್ತಿರುವ ಭಾಷೆ ಸಂಸ್ಕೃತವೇ ಆಗಿದೆ. ಇದು ಬಹುಮಟ್ಟಿಗೆ ತಮಿಳು ಮುಂದಿಟ್ಟ ಬೇಡಿಕೆಯ ಹಿಂದೆ ಕೆಲಸ ಮಾಡಿದ ಕಾರಣವಾಗಿದೆ.

ಕ್ರಿಸ್ತ ಶಕದ ಆರಂಭ ಕಾಲದಿಂದಲೂ ಜನಭಾಷೆಯಾಗಿದ್ದು ಈಗಲೂ ಜನರ ಭಾಷೆಯಾಗಿಯೇ ಮುಂದುವರೆಯುತ್ತಿರುವ ಭಾಷೆಗಳ ಪಟ್ಟಿಯಲ್ಲಿ ತಮಿಳು ಕನ್ನಡಗಳು ಸೇರುತ್ತವೆ. ಈ ಎರಡೂ ಭಾಷೆಗಳಲ್ಲಿ ಕನ್ನಡ ತನ್ನದೇ ಸ್ವತಂತ್ರ ಬರಹ ವ್ಯವಸ್ಥೆಯನ್ನು ತಮಿಳಿಗಿಂತಲೂ ಮೊದಲು ರೂಪಿಸಿಕೊಂಡಿತು. ಹಾಗಾಗಿ ಈ ಭಾಷೆಗಳು ಇಂಡಿಯಾದ

ಇತರ ಭಾಷೆಗಳಿಗಿಂತ ತಾವು ಭಿನ್ನ ಎಂದು ಕರೆದುಕೊಳ್ಳಲು ಉತ್ಸುಕವಾಗಿರುವಂತೆ ತೋರುತ್ತದೆ. ಇದಕ್ಕೆ ಈ ಭಾಷೆಗಳು ಕ್ಲಾಸಿಕಲ್ ಎಂಬ ಉಪಾಧಿಯನ್ನು ಬಯಸಿವೆ.

ಇದೇನೇ ಇರಲಿ. ಕನ್ನಡವನ್ನು ಕ್ಲಾಸಿಕಲ್ ಭಾಷೆ ಎಂದು ಕರೆದದ್ದರಿಂದ ಕನ್ನಡಿಗರಿಗೆ ಚಹರೆಯ ಪಟ್ಟಿಗೆ ಒಂದು ಹೊಸ ಸಂಗತಿ ಸೇರ್ಪಡೆಯಾಯಿತು. ಏಳು ಜ್ಞಾನ ಪೀಠ ಪ್ರಶಸ್ತಿಗಳಿಂದ ಮೊದಲಾಗುತ್ತಿದ್ದ ಗುಣಗಾನ ( ಜ್ಞಾನ ಪೀಠ ಪ್ರಶಸ್ತಿಗಿಂತಲೂ ದೊಡ್ಡ ಮೊತ್ತ ನೀಡುವ ಸರಸ್ವತಿ ಸಮ್ಮಾನ್ ಕನ್ನಡಕ್ಕೆ ಕಳೆದ ಇಪ್ಪತ್ತು ವರ್ಷಗಳಲ್ಲಿ ಒಂದು ಬಾರಿಯೂ ಬಂದಿಲ್ಲ. ಅದು ಬೇರೆ ಮಾತು) ಈಗ ಕ್ಲಾಸಿಕಲ್ ಎಂಬ ಮಾತಿನಿಂದ ಮೊದಲಾಗುತ್ತದೆ. ವಾಸ್ತವವಾಗಿ ಕನ್ನಡದಲ್ಲಿ ಕ್ಲಾಸಿಕಲ್ ಎಂಬ ಪ್ರಭೇದವಿದೆಯೆಂದೂ, ಈಗ ನಾವು ಬರೆದು ಮಾತಾಡುತ್ತಿರುವ ಕನ್ನಡಕ್ಕಿಂತ ಅದು ಸಂಪೂರ್ಣವಾಗಿ ಬೇರೆಯೆಂದು ಈಗ ಒಪ್ಪಿಕೊಂಡಂತಾಗಿದೆ. ಅಂದರೆ ಕ್ಲಾಸಿಕಲ್ ಕನ್ನಡದ ಬಗೆಗೆ ಏನು ಮಾಡಿದರೂ ಅದು ಈಗ ಬಳಕೆಯಲ್ಲಿಲ್ಲದ ಕನ್ನಡವನ್ನು ಕುರಿತು ಇರುವುದೇ ಹೊರತು, ನಾವು ನೀವು ಬಳಸುತ್ತಿರುವ ಕನ್ನಡದ ಬಗೆಗೆ ಇರುವುದಿಲ್ಲ. ತಮಿಳಿನವರು ಕ್ರಿಶ 650ರ ವರೆಗಿನ ತಮಿಳು ಬರಹಗಳ ಭಾಷೆಯನ್ನು ಕ್ಲಾಸಿಕಲ್ ತಮಿಳು (ಇದನ್ನವರು ಚೆಮ್ಮೊಳಿ=ಚೆಲುವಾದ ಭಾಷೆ ಎಂದಿದ್ದಾರೆ) ಎಂದು ಗುರುತಿಸಿಕೊಂಡಿದ್ದಾರೆ. ಹಾಗಿದ್ದಲ್ಲಿ ಕನ್ನಡದ ಯಾವ ಚಾರಿತ್ರಿಕ ಪ್ರಭೇದವನ್ನು ಕ್ಲಾಸಿಕಲ್ ಎಂದು ಕರೆಯಬೇಕು? ಇದನ್ನೀಗ ನಿರ್ಧರಿಸಬೇಕಾಗಿದೆ.

ಕ್ಲಾಸಿಕಲ್ ಎಂಬುದಕ್ಕೆ ಕನ್ನಡ ವಾರ್ತಾ ಮಾಧ್ಯಮಗಳು ಶಾಸ್ತ್ರೀಯ ಮತ್ತು ಅಭಿಜಾತ ಎಂಬ ಎರಡು ಪದಗಳನ್ನು ಬಳಸಿವೆ. ಇವೆರಡೂ ಪದಗಳ ಬದಲು ಪರಂಪರೆಯ ಭಾಷೆ ಎಂದು ಕರೆಯುವುದು ಹೆಚ್ಚು ಸರಿಯಾದೀತು. ಇಂದಿನ ಕನ್ನಡ ತನ್ನ ಪರಂಪರೆಯ ಮುಂದುವರಿಕೆಯೇ ಆಗಿರುವುದರಿಂದ, ಆಗ ಕ್ಲಾಸಿಕಲ್ ಎಂಬ ಚೌಕಟ್ಟಿನಲ್ಲಿ ನಡೆಯುವ ಕಾರ್ಯಯೋಜನೆಗಳಿಂದ ಇಂದಿನ ಕನ್ನಡವನ್ನು ಹೊರಗಿಡುವ ಪ್ರಮೇಯ ಒದಗುವುದಿಲ್ಲ. ಈ ಬಗೆಗೆ ಕನ್ನಡದ ಪ್ರಾಜ್ಞರು ಯೋಚಿಸಬೇಕಾಗಿದೆ.

ಕೇಂದ್ರ ಸರಕಾರದ ಮುಂದಿನ ಹೆಜ್ಜೆಗಳು ಸ್ಪಷ್ಟವಾಗಿವೆ. ಅದು ಬಿಡುಬೀಸಾಗಿ ಅನುದಾನವನ್ನು ನೀಡುವುದಿಲ್ಲ. ಯಾವ ಕೆಲಸಕ್ಕೆ ಎಷ್ಟು ಅನುದಾನ ಬೇಕಾಗಿದೆ ಎಂದು ಯೋಜನಾ ಪ್ರಸ್ತಾವವನ್ನು ಸಲ್ಲಿಸುವ ಉನ್ನತ ಸಲಹಾ ಸಮಿತಿಯೊಂದನ್ನು ಮಾನವ ಸಂಪನ್ಮೂಲ ಇಲಾಖೆ ರಚಿಸುತ್ತದೆ. ಈ ಸಮಿತಿಯ ಚಿಂತನಾ ಕ್ರಮವನ್ನು ಅವಲಂಬಿಸಿ ಮುಂದಿನ ಹೆಜ್ಜೆಗಳು ನಿರ್ಧಾರವಾಗುತ್ತವೆ.

ಮೊದಲೇ ಹೇಳಿದಂತೆ ಕನ್ನಡಕ್ಕೆ ಶಾಸ್ತ್ರೀಯ ಸ್ಥಾನ ದೊರಕಿದ್ದರಿಂದ ಜನರಲ್ಲಿ ಹೆಮ್ಮೆಯ ಭಾವವನ್ನು ಮೂಡಿಸಲು ಸಾಧ್ಯವಾಗಬಹುದು. ಆದರೆ ಅವರ ಬದುಕಿನಲ್ಲಿ ಕನ್ನಡ ವಹಿಸಬಹುದಾದ ಪಾತ್ರವನ್ನು ಬದಲಿಸಲು ಬೇರೆ ನೆಲೆಯ ದಿಟ್ಟ ಹೆಜ್ಜೆಗಳನ್ನು ಇಡಬೇಕಾಗಿದೆ. ಈಗ ಕನ್ನಡ ಯಾವ ಇಕ್ಕಟ್ಟಿನಲ್ಲಿ ಸಿಲುಕಿಕೊಂಡಿದೆ ಎನ್ನುವುದನ್ನು

ಮೊದಲು ಗುರುತಿಸಿಕೊಳ್ಳಬೇಕು. ಈ ಇಕ್ಕಟ್ಟುಗಳು ನಮಗೆ ಮುಜುಗರವನ್ನು ಉಂಟು ಮಾಡುವಂತಿದ್ದರೂ ಒಪ್ಪಿಕೊಳ್ಳಬೇಕು. ಆ ಬಳಿಕ ಆ ಇಕ್ಕಟ್ಟಿನಿಂದ ಹೊರಬರಲು ಬೇಕಾದ ಯೋಜನೆಗಳನ್ನು ರೂಪಿಸಬೇಕು.

ಕನ್ನಡ ಎದುರಿಸುತ್ತಿರುವ ಇಕ್ಕಟ್ಟುಗಳಲ್ಲಿ ಹೆಚ್ಚು ತೀವ್ರವಾದುದೆಂದರೆ ಅದೀಗ ಕೇವಲ 'ಪಡೆದುಕೊಳ್ಳುವ' ಭಾಷೆಯಾಗಿ ಬಿಟ್ಟಿರುವುದು. ಹೊಸ ಚಿಂತನೆಗಳನ್ನು ಬರಮಾಡಿಕೊಳ್ಳುವ ಭರದಲ್ಲಿ ನಾವು ಕನ್ನಡ ಮನಸ್ಸೊಂದು ಸ್ವತಂತ್ರವಾಗಿ ಚಿಂತಿಸಬಲ್ಲುದು ಎಂಬುದನ್ನೇ ಮರೆತಿದ್ದೇವೆ. ಅಷ್ಟೇ ಅಲ್ಲ; ಹಾಗೆ ಸ್ವತಂತ್ರ ಚಿಂತನೆಗಳು ಕನ್ನಡದಲ್ಲಿ ಮೂಡಲಾರವು ಎನ್ನುವುದನ್ನೇ ದಿಟವೆಂದು ನಂಬಿದ ಹತಾಶೆಯ ಹಂತವನ್ನು ತಲುಪಿದ್ದೇವೆ. ಎರಡೂವರೆ ಸಾವಿರ ವರ್ಷಗಳ ಕಾಲ ಜನರ ನಡುವೆ ಅವರ ನುಡಿಯಾಗಿ ಉಳಿದಿರುವ ಈ ಭಾಷೆಗೆ 'ಕೊಡುವ' ಸಾಮರ್ಥ್ಯವೂ ಇದೆ. ಆ ಸಾಮರ್ಥ್ಯವನ್ನು ಮರುಖನನ ಮಾಡಿಕೊಡುವುದು ಇಂದಿನ ಮೊದಲ ಅಗತ್ಯ. ಆಗ ಮಾತ್ರ ಕನ್ನಡಕ್ಕೆ ಸಿಕ್ಕದ ಈ ಹೊಸ ಉಪಾಧಿಗೊಂದು ಅರ್ಥ ಬರುತ್ತದೆ. ಇಲ್ಲದಿದ್ದರೆ ಇದು ನಾವು ನಮ್ಮದೆಂದು ಹೆಮ್ಮೆ ಪಡುತ್ತಿರುವ ಹಲವು ಸಂಕೇತಗಳ ಸಾಲಿಗೆ ಹೊಸ ಸೇರ್ಪಡೆಯಷ್ಟೇ ಆಗಲಿದೆ.

# ಕ್ಲಾಸಿಕಲ್ ಭಾಷೆ ಎಂದರೇನು?

ತಮಿಳು ಒಂದು ಕ್ಲಾಸಿಕಲ್ ಭಾಷೆಯೆಂದು ಕೇಂದ್ರ ಸರಕಾರ ಪರಿಗಣಿಸಿ ಅದಕ್ಕೆ ತಕ್ಕ ಮನ್ನಣೆಯನ್ನು ನೀಡುವುದೆಂದು ಹೇಳಲಾಗಿದೆ. ಆಳುವ ಘಟಕವು ತನ್ನ ಸಾಮಾನ್ಯ ಕನಿಷ್ಠ ಕಾರ್ಯಕ್ರಮದಲ್ಲಿ ಈ ಅಂಶವನ್ನು ಸೇರಿಸಿಕೊಂಡಿದೆ. ಈಗ ಕೆಲವು ಪ್ರಶ್ನೆಗಳು ಎದುರು ನಿಂತಿವೆ.

೧. ಕ್ಲಾಸಿಕಲ್ ಭಾಷೆ ಯಾವುದು? ೨. ಒಂದು ಭಾಷೆಗೆ 'ಕ್ಲಾಸಿಕಲ್' ಎಂಬ 'ಮನ್ನಣೆ'ಯನ್ನು ನೀಡುವವರು ಯಾರು? ೩. ಹೀಗೆ ಕ್ಲಾಸಿಕಲ್ ಎಂಬ ಪರಿಗಣನೆಗೆ ಒಳಗಾದ ಭಾಷೆಗೆ ಅಥವಾ ಆ ಭಾಷೆಯ ಆಡುಗರಿಗೆ ಸಿಗುವ ಸವಲತ್ತುಗಳು ಯಾವುವು?

ಕ್ಲಾಸಿಕಲ್[೧] ಭಾಷೆಗಳು ಎಂಬುದು ಮುಖ್ಯವಾಗಿ ಶೈಕ್ಷಣಿಕ ಪರಿಕಲ್ಪನೆಯಾಗಿದೆ. ಶಾಲೆಗಳಲ್ಲಿ ಭಾಷಾಕಲಿಕೆಯ ಸ್ವರೂಪವನ್ನು ಚರ್ಚಿಸುವಾಗ ಈ ಮಾತನ್ನು ಬಳಸಲಾಗುತ್ತದೆ. ಭಾಷಾಶಾಸ್ತ್ರಜ್ಞರು ಭಾಷಾ ಬೋಧನೆಯ ಸಂದರ್ಭದಲ್ಲಿ ಕ್ಲಾಸಿಕಲ್ ಭಾಷೆಯ ವ್ಯಾಖ್ಯೆಯನ್ನು ನೀಡುತ್ತಾರೆ. ಅದರಂತೆ "ಪ್ರಾಚೀನವೂ ವಿಸ್ತೃತವೂ ಆದ ಬರೆಹಗಳನ್ನು ಹೊಂದಿದ್ದು ಈಗ ಯಾವ ಸ್ವಭಾಷಿಕರನ್ನೂ ಹೊಂದಿರದ ಭಾಷೆಯೇ ಕ್ಲಾಸಿಕಲ್ ಭಾಷೆ. ಉದಾ: ಲ್ಯಾಟಿನ್, ಪ್ರಾಚೀನ ಗ್ರೀಕ್, ಸಂಸ್ಕೃತ" (ಎನ್ಸೈಕ್ಲೊಪಿಡಿಯಾ ಆಫ್ ಲಾಂಗ್ವೆಜ್ ಅಂಡ್ ಲಿಂಗ್ವಿಸ್ಟಿಕ್ಸ್, ೧೯೯೪, (ಸಂ) ಆಶರ್, ಸಂ.೩. ಪು.೧೯೯೧). ಕ್ಲಾಸಿಕಲ್ ಭಾಷೆಗಳು ಬಹುಕಾಲದಿಂದ ಬಳಕೆಯಲ್ಲಿದ್ದು ಈಗ ಅವುಗಳನ್ನು ಆಡುವವರು ಯಾರೂ ಇರುವುದಿಲ್ಲ ಎಂಬುದು ಮುಖ್ಯ ವಿಷಯ. ಫರ್ಗುಸನ್ ಮತ್ತು ಸ್ಟೂವರ್ಟ್ ಅವರು ಇದೇ ಅಭಿಪ್ರಾಯವನ್ನು ಒಪ್ಪುವವರಾಗಿದ್ದಾರೆ (ಫಸೋಲ್ಡ್ ಆರ್, ೧೯೮೪, ಪು. ೬೫). 'ಈಗ ಸ್ವಭಾಷಿಕರಿಲ್ಲದ ಭಾಷೆಯನ್ನು ಕ್ಲಾಸಿಕಲ್ ಎನ್ನುತ್ತೇವೆ'. ಬೇರೆ ಬೇರೆ ನೆಲೆಗಳಿಂದ ನೋಡಿದಾಗಲೂ ಕ್ಲಾಸಿಕಲ್ ಭಾಷೆ ಎಂಬುದು ಈಗ ಆಡುಮಾತಾಗಿ ಬಳಕೆಯಲ್ಲಿರದ ಭಾಷೆ ಎಂಬ ವಿಷಯವೇ ಭಾಷಾಶಾಸ್ತ್ರದಲ್ಲಿ ಅನುರಣಿತವಾಗಿದೆ. ಪ್ರಮಾಣಬದ್ಧತೆ, ಸ್ವಾಯತ್ತತೆ, ಚಾರಿತ್ರಿಕತೆ ಮತ್ತು ಚೈತನ್ಯಶೀಲತೆ ಎನ್ನುವ ನಾಲ್ಕು ಲಕ್ಷಣಗಳಲ್ಲಿ ಕ್ಲಾಸಿಕಲ್ ಭಾಷೆಗೆ ಮೊದಲ ಮೂರು ಸಲ್ಲುತ್ತವೆ; ಆದರೆ ನಾಲ್ಕನೆಯ ಲಕ್ಷಣವಾದ ಚೈತನ್ಯಶೀಲತೆ ಅದರಲ್ಲಿ ಇರುವುದಿಲ್ಲ. ಚೈತನ್ಯಶೀಲತೆ ಎಂಬ ಲಕ್ಷಣಕ್ಕೂ ಈಗ ಬಳಕೆಯಲ್ಲಿರುವುದು ಎಂಬ ಅಂಶವೇ ವ್ಯಾಖ್ಯೆಯಾಗಿದೆ. ಕ್ಲಾಸಿಕಲ್ ಭಾಷೆಗಳಲ್ಲದೆ ಕೃತಕ ಭಾಷೆಗಳು ಮತ್ತು ಪಿಜಿನ್‌ಗಳಿಗೂ ಈ ಚೈತನ್ಯಶೀಲತೆಯ ಲಕ್ಷಣವಿರುವುದಿಲ್ಲ ಎಂಬುದು ಗಮನಾರ್ಹ. ಈ ಮೂರೂ ಬಗೆಯ ಭಾಷೆಗಳು ಯಾರಿಗೂ ಪ್ರಥಮ

ಭಾಷೆಯಲ್ಲ. (ಪಿಜಿನ್‌ಗಳು ತಲೆಮಾರು ದಾಟಿದಾಗ ಸ್ವಭಾಷಿಕರನ್ನು ಪಡೆದುಕೊಂಡು ಕ್ರಿಯೊಲ್‌ಗಳಾಗುತ್ತವೆ; ಕೃತಕ ಭಾಷೆಗಳನ್ನು ಸ್ವಪ್ರೇರಣೆಯಿಂದ ವಯಸ್ಕರು ಕಲಿಯುತ್ತಾರೆ. ಅವು ಯಾರಿಗೂ ಪ್ರಥಮ ಭಾಷೆಗಳಲ್ಲ).

ಭಾಷಾಶಾಸ್ತ್ರದ ಈ ವಿವರಣೆಗಳನ್ನು ಗಮನಿಸಿದಾಗ ತಮಿಳು ಭಾಷೆಯನ್ನಾಗಲೀ, ಭಾರತದ ವಿವಿಧ ಪ್ರದೇಶಗಳಲ್ಲಿ ಬಳಕೆಯಲ್ಲಿರುವ ಯಾವ ಭಾಷೆಯನ್ನಾಗಲೀ ಕ್ಲಾಸಿಕಲ್ ಎಂಬ ವರ್ಗೀಕರಣಕ್ಕೆ ಸೇರಿಸುವುದು ಅಶಕ್ಯ. ಹಾಗೆ ಮಾಡಿದರೆ ಅದು ಆ ಭಾಷೆಗೆ ಇರುವ ಜೀವಂತಿಕೆಗೆ ಎಸಗುವ ಅವಮಾನವೇ ಸರಿ. ಹಾಗಿದ್ದಲ್ಲಿ ತಮಿಳು ಒಂದು ಕ್ಲಾಸಿಕಲ್ ಭಾಷೆ ಎಂದು ಪರಿಗಣಿಸುತ್ತಿರುವ ಕೇಂದ್ರ ಕ್ರಮಕ್ಕೆ ಯಾವ ಕಾರಣಗಳಿವೆ? ಏಪ್ರಿಲ್ ೧೧, ೨೦೦೦ದಂದು ಉತ್ತರ ಅಮೆರಿಕಾದ ಯೂನಿವರ್ಸಿಟಿ ಆಫ್ ಕ್ಯಾಲಿಪೋರ್ನಿಯಾ, ಬರ್ಕ್ಲಿ ಇಲ್ಲಿನ ಡಿಪಾರ್ಟ್‌ಮೆಂಟ್ ಆಫ್ ಸೌತ್ ಅಂಡ್ ಸೌತ್ ಏಶಿಯನ್ ಸ್ಟಡೀಸ್‌ನ ತಮಿಳು ಪ್ರಾಧ್ಯಾಪಕರಾದ ಜಾರ್ಜ್ ಎಲ್. ಹರ್ಟ್ ಇವರು ಒಂದು ಹೇಳಿಕೆ ನೀಡಿದ್ದಾರೆ. 'ಸ್ಟೇಟ್ ಮೆಂಟ್ ಆನ್ ದ ಸ್ಟೇಟಸ್ ಆಫ್ ದ ತಮಿಳ್ ಆ್ಯಸ್ ಎ ಕ್ಲಾಸಿಕಲ್ ಲಾಂಗ್ವೇಜ್' ಎಂಬ ಈ ಹೇಳಿಕೆಗೆ ಕಾರಣ ಪ್ರೊ. ಮರೈಮಲ್ಯ ಎಂಬುವವರು ಪ್ರೊ. ಹರ್ಟ್ ಅವರಿಗೆ ಬರೆದ ಪತ್ರ. ಆ ಪತ್ರದ ವಿವರಗಳು ಲಭ್ಯವಿಲ್ಲ. ಹರ್ಟ್ ಅವರ ಈ ಹೇಳಿಕೆ ಅಂತರ್ಜಾಲದ ಹಲವು ಜಾಲತಾಣಗಳಲ್ಲಿ ವಿವಿಧ ರೂಪದಲ್ಲಿ ಲಭ್ಯವಿದೆ. ತಮಿಳು ಅಭಿಮಾನಿಗಳ ಒಕ್ಕೂಟವೊಂದು ಈ ಹೇಳಿಕೆಯನ್ನು ಬಳಸಿ ಜಗತ್ತಿನಾದ್ಯಂತ ಇರುವ ತಮಿಳರನ್ನು ಒಂದು ಹಕ್ಕೊತ್ತಾಯದ ಪತ್ರಕ್ಕೆ ಅಂತರ್ಜಾಲದ ಮೂಲಕವೇ ಸಹಿ ಮಾಡಲು ಕೋರಿದೆ. ಈ ಸಂಬಂಧದಲ್ಲಿರುವ ಬೇರೆ ವಿವರಗಳು ನಮಗೀಗ ಅಪ್ರಸ್ತುತ. ಪ್ರೊ. ಹರ್ಟ್ ಅವರ ಹೇಳಿಕೆಯ ಸಾರಾಂಶವೇನು ನೋಡೋಣ.

'ತಮಿಳು ಒಂದು ಪ್ರಾಚೀನ ಭಾಷೆ; ಅದಕ್ಕೆ ಸ್ವತಂತ್ರವಾದ (ಅಂದರೆ ಸಂಸ್ಕೃತದಿಂದ ಪ್ರಭಾವಿತವಾಗದ) ಸಾಹಿತ್ಯ ಪರಂಪರೆ ಇದೆ; ಈ ಭಾಷೆಯಲ್ಲಿರುವ ಸಾಹಿತ್ಯದ ಗುಣಮಟ್ಟವು ಸಂಸ್ಕೃತ, ಗ್ರೀಕ್, ಲ್ಯಾಟಿನ್, ಚೈನಿಸ್, ಪರ್ಶಿಯನ್ ಮತ್ತು ಅರಾಬಿಕ್ ಭಾಷಾ ಸಾಹಿತ್ಯಗಳಿಗೆ ಸಾಟಿಯಾಗಿದೆ. ಇದಲ್ಲದೆ ತಮಿಳು ಸಾಹಿತ್ಯ ಪರಂಪರೆಯು ಭಾರತದ–ಸಂಸ್ಕೃತವೂ ಸೇರಿದಂತೆ–ಎಷ್ಟೋ ಸಾಹಿತ್ಯ ಪರಂಪರೆಗಳಿಗೆ ಸಾಮಗ್ರಿಯನ್ನು ಒದಗಿಸುವಷ್ಟು ಪ್ರಭಾವಶಾಲಿಯಾಗಿದೆ'[೨].

ಪ್ರೊ. ಹರ್ಟ್ ಅವರು ಭಾಷೆ ಮತ್ತು ಸಾಹಿತ್ಯ ಪರಂಪರೆಗಳನ್ನು ಸಮಾನಾರ್ಥಕಗಳಾಗಿ ನೋಡುತ್ತಿದ್ದಾರೆ. ನಮ್ಮ ಸದ್ಯದ ಚಿಂತನಾ ಕ್ರಮದಲ್ಲಿ ಈ ಸಮೀಕರಣ ಚಾಲ್ತಿಯಲ್ಲಿದೆ. ಆದರೆ ಇದು ಎಷ್ಟು ಸರಿ? ಲಿಖಿತ ಪರಂಪರೆ ಇಲ್ಲದ ಭಾಷೆಗಳ ಪ್ರಾಚೀನತೆಯನ್ನು ಅವುಗಳಲ್ಲಿರುವ ಸಾಹಿತ್ಯದ ಅನನ್ಯತೆಯನ್ನು ಗುರುತಿಸಲು ಯಾವ ದೃಷ್ಟಿಕೋನಗಳನ್ನೂ ನಾವು ರೂಪಿಸಿಕೊಂಡಿಲ್ಲ. ಹೀಗಾಗಿ ಈ ಮೇಲೆ ಹೇಳಿದ ಸಮೀಕರಣವು ಲಿಖಿತ ಭಾಷೆಗಳ ಪರವಾಗಿದೆ. ಈ ಸಾಹಿತ್ಯ ಪರಂಪರೆಗೂ ಭಾಷಿಕರಿಗೂ ಭಾವನಾತ್ಮಕ ಸಂಬಂಧವನ್ನು ಬಿಟ್ಟರೆ ಬೇರೆ ಯಾವ ಬಗೆಯ ಸಂಬಂಧವಿರುವುದು

ಎಂಬ ಪ್ರಶ್ನೆಯೂ ಮುಖ್ಯ. ಈಗ ಆ ಭಾಷೆಯನ್ನು ಬಳಸುವವರು ಪ್ರಾಚೀನವೆನ್ನಲಾದ ಸಾಹಿತ್ಯ ಪರಂಪರೆಯ ಉತ್ಪಾದಕರೂ ಅಲ್ಲ; ಗ್ರಾಹಕರೂ ಅಲ್ಲ. ಹಾಗೆ ನೋಡಿದರೆ ಜಾಗತಿಕ ನೆಲೆಯಲ್ಲಿ ಈ ಬಗೆಯ ಪ್ರಾಚೀನ ಸಾಹಿತ್ಯ ಪರಂಪರೆಗಳಿಗೆ ಬೇರೆ ಬೇರೆ ಭಾಷೆಗಳನ್ನು ಆಡುವವರೇ ಮುಖ್ಯ ಗ್ರಾಹಕರಾಗಿರುತ್ತಾರೆ. ಸಂಸ್ಕೃತ ಸಾಹಿತ್ಯವನ್ನು ಅಭ್ಯಾಸ ಮಾಡುವವರು ಅನ್ಯಭಾಷಿಕರೇ ಆಗಿರುತ್ತಾರೆ. ಸ್ವತಃ ಪ್ರೊ. ಹರ್ಟ್ ಅವರೇ ಈ ಪ್ರಕ್ರಿಯೆಗೆ ಒಳ್ಳೆಯ ಉದಾಹರಣೆಯಾಗಿದ್ದಾರೆ. ಆದರೆ ಭಾಷೆಗೆ ದ್ವಿಭಾಷಿಕರಿಗಿಂತ ಸ್ವಭಾಷಿಕರು ಇರುವುದು ಮುಖ್ಯ. ಒಂದು ಸಾಹಿತ್ಯ ಪರಂಪರೆಯ ಮಹತ್ವವನ್ನು ಭಾಷೆಗೆ ರವಾನಿಸುವುದರಿಂದ ಉಂಟಾಗುವ ಇಕ್ಕಟ್ಟುಗಳನ್ನು ಹರ್ಟ್ ಅವರ ಟಿಪ್ಪಣಿ ಗಮನಿಸುತ್ತಿಲ್ಲ.

ಹರ್ಟ್ ಅವರ ವಿವಾದಾತ್ಮಕ ಹೇಳಿಕೆಯಿಂದಾಗಿ ನಡೆದಿರುವ ಘಟನೆಗಳ ಅವಲೋಕನಕ್ಕೆ ಇಲ್ಲಿ ಅವಕಾಶವಿಲ್ಲ. ಆದರೆ ಒಂದು ಭಾಷೆ ಕ್ಲಾಸಿಕಲ್ ಎಂದು ಪರಿಗಣಿಸುವ ಅಧಿಕಾರ ಆಳುವ ಸರಕಾರಕ್ಕೆ ಒದಗಿ ಬಂದದ್ದು ಹೇಗೆ ಎಂಬುದು ಸೋಜಿಗದ ವಿಚಾರ. ಭಾಷೆಗಳಿಗೆ ಶೈಕ್ಷಣಿಕ ಮತ್ತು ರಾಜಕೀಯ ಸ್ಥಾನಮಾನಗಳನ್ನು ನೀಡುವ ಅವಕಾಶ ಮತ್ತು ಅಧಿಕಾರಗಳು ಸರಕಾರಕ್ಕೆ ಇದೆ. ಆದರೆ ಕ್ಲಾಸಿಕಲ್ ಭಾಷೆಗಳು ಯಾವುವು ಎಂಬ ಪಟ್ಟಿಯನ್ನು ಸರಕಾರ ಮನ್ನಿಸಬಹುದೇ ಹೊರತು ತಾನೇ ಆ ಲಕ್ಷಣವನ್ನು ಆ ಭಾಷೆಗೆ ಆರೋಪಿಸುವುದು ಸಾಧ್ಯವಿಲ್ಲ.

ಕ್ಲಾಸಿಕಲ್ ಭಾಷೆ ಎಂಬ 'ಸ್ಥಾನಮಾನ' ದೊರೆತ ಭಾಷೆಗೆ ರಾಜ್ಯಾಂಗದತ್ತವಾದ ಸೌಲಭ್ಯಗಳೇನೂ ಇಲ್ಲ. ಭಾಷಾಶಾಸ್ತ್ರದ ವ್ಯಾಖ್ಯೆಯಂತೆ ಅವುಗಳನ್ನು ಕಲಿಯುವ ಯಾರಿಗೂ ಅದು ಮೊದಲ ಭಾಷೆಯಾಗಿರುವುದಿಲ್ಲ. ಈ ವಿರೋಧಾತ್ಮಕ ನೆಲೆಯಲ್ಲಿ ತಮಿಳಿನಂತಹ ಚೈತನ್ಯಶೀಲ ಭಾಷೆಗೆ ಕ್ಲಾಸಿಕಲ್ ಎಂಬ ಅಭಿದಾನ ಒಂದು ರಾಜಕೀಯ ಕಸರತ್ತು ಮಾತ್ರ ಎಂದು ತಿಳಿಯುವುದು ಅನಿವಾರ್ಯವಾಗಿದೆ.

೧. 'ಕ್ಲಾಸಿಕಲ್'ಗೆ ಸಂವಾದಿಯಾಗಿ ಕನ್ನಡ ಪತ್ರಿಕೆಗಳು 'ಶಾಸ್ತ್ರೀಯ' ಎನ್ನುವ ಪದವನ್ನು ಬಳಸಿವೆ. ಇದು ಸೂಕ್ತವಾದ ಪದವಲ್ಲ. ಒಂದು ಭಾಷೆ 'ಶಾಸ್ತ್ರೀಯ' ಎನ್ನುವುದಾದರೆ ಉಳಿದವು 'ಅಶಾಸ್ತ್ರೀಯ' ಎನ್ನಲು ಬರುವುದೇ? ಕ್ಲಾಸಿಕಲ್ ಎಂಬ ವಿಶೇಷಣಕ್ಕೆ ಅದು ಯಾವ ಪದದ ಜತೆಗೆ ಬಳಕೆಯಾಗುತ್ತದೋ ಅದನ್ನು ಅನುಸರಿಸಿ ಭಿನ್ನಾರ್ಥಗಳಿವೆ. ಗಮನಿಸಿ: ಕ್ಲಾಸಿಕಲ್ ಮ್ಯೂಸಿಕ್, ಕ್ಲಾಸಿಕಲ್ ಲಿಟರೇಚರ್, ಕ್ಲಾಸಿಕಲ್ ಏಜ್ ಇತ್ಯಾದಿ. ಕನ್ನಡದಲ್ಲಿ ಸದ್ಯ ಕ್ಲಾಸಿಕಲ್ ಎಂದೇ ಬಳಸುವುದು ಸೂಕ್ತವಾಗಿದೆ.

೨. ಪ್ರೊ. ಹರ್ಟ್ ನೀಡುವ ನಾಲ್ಕು ಕಾರಣಗಳಲ್ಲಿ ಮೊದಲನೆಯದನ್ನು, ಅನಂತರ ಸ್ವಲ್ಪಮಟ್ಟಿಗೆ ಎರಡನೆಯದನ್ನು ಒಪ್ಪಬಹುದು. ಆದರೆ ಮೂರು ಮತ್ತು ನಾಲ್ಕನೆಯ ಅಂಶಗಳು ಹೆಚ್ಚು ವ್ಯಕ್ತಿಗತ ಅಭಿಪ್ರಾಯಗಳಾಗಿವೆ. ತಮ್ಮ ವಾದವನ್ನು ಸಮರ್ಥಿಸಲು ಹರ್ಟ್ ಅವರು ತಕ್ಕ ಪರಿಕರಗಳನ್ನು ಹೊಂದಿರಲೂಬಹುದು. ಆದರೆ ಅವರ ತೀರ್ಮಾನಗಳು ಪ್ರಶ್ನಾತೀತವಾಗಿ ಉಳಿಯುವುದಿಲ್ಲ. ತಮಿಳು ಸಾಹಿತ್ಯ ಪರಂಪರೆಯಿಂದ ಅನ್ಯಭಾಷಾ ಪರಂಪರೆಗಳು ಪ್ರಭಾವಿತವಾಗಿವೆ ಎನ್ನುವ ನಿಲುವು ಮತ್ತಷ್ಟು ಸಮರ್ಥನೆಯನ್ನು ಬಯಸುತ್ತದೆ.

# ಕ್ಲಾಸಿಕಲ್ ಕನ್ನಡ: ಏನು ಮಾಡಬೇಕೀಗ?

ಟಿಪ್ಪಣಿ 1 : ಒಂದು ಭಾಷೆಗೆ ಕ್ಲಾಸಿಕಲ್ ಎಂಬ ಗುರುತನ್ನು ನೀಡುವುದು ಯಾವಾಗ? 1. ಅದು ಬಹು ಪ್ರಾಚೀನವಾದ ಭಾಷೆಯಾಗಿರಬೇಕು. 2. ಅದರಲ್ಲಿ ಅಗಾಧ ಪ್ರಮಾಣದ ಬರವಣಿಗೆ ಇದ್ದು, ಆ ಬರವಣಿಗೆಯಲ್ಲಿ ಮಾನವ ಜನಾಂಗಕ್ಕೆ ಬೇಕಾದ ತಿಳಿವಳಿಕೆ ಸಂಗ್ರಹಗೊಂಡಿರಬೇಕು. 3. ಆ ಭಾಷೆಗೆ ಈಗ ಸ್ವಭಾಷಿಕರು ಇರುವುದಿಲ್ಲ. ಒಂದುವೇಳೆ ಆ ಹೆಸರಿನ ಭಾಷೆಯನ್ನು ಆಡುವವರು ಇದ್ದರೂ ಅವರು ಬಳಸುವ ಭಾಷೆ ಅದರ ಹಳೆಯ ರೂಪದಿಂದ ಗುರುತಿಸಲಾಗದಷ್ಟು ಬದಲಾಗಿರಬೇಕು. ಅರಾಬಿಕ್, ಗ್ರೀಕ್‌ನಂತಹ ಭಾಷೆಗಳನ್ನು ಈಗಲೂ ಆಡುವವರು ಇದ್ದಾರೆ. ಆದರೆ ಅವರು ಬಳಸುತ್ತಿರುವ ಅರಾಬಿಕ್ ಆಗಲೀ ಗ್ರೀಕ್ ಆಗಲಿ ಆ ಭಾಷೆಗಳ ಪ್ರಾಚೀನ ರೂಪಕ್ಕಿಂತ ಬಹಳವಾಗಿ ಭಿನ್ನವಾಗಿವೆ. ಸಂಸ್ಕೃತ, ಲ್ಯಾಟಿನ್ ಭಾಷೆಗಳಿಗಂತೂ ಸ್ವಭಾಷಿಕರು ಇಲ್ಲವೇ ಇಲ್ಲ. (ಕೆಲವರು ಸಂಸ್ಕೃತವನ್ನು ಮಾತಾಡುವವರು ಈಗಲೂ ಇದ್ದಾರೆ ಎಂದು ವಾದಿಸಿಯಾರು. ಆದರೆ ಹೀಗೆ ಸಂಸ್ಕೃತವನ್ನು ಮಾತಾಡುವವರಿಗೆ ಅದು ಮೊದಲ ಭಾಷೆಯಾಗಿರುವುದಿಲ್ಲ. ಬೇರೊಂದು ಭಾಷೆಯನ್ನು ಕಲಿತ ಮೇಲೆ ಅವರು ಸಂಸ್ಕೃತವನ್ನೂ ಕಲಿತು ಬಳಸುತ್ತಿರಬಹುದು ಅಷ್ಟೆ.) ಈ ನಿಟ್ಟಿನಲ್ಲಿ ನೋಡಿದಾಗ ಈಗ ಭಾರತದಲ್ಲಿ ಜನರಾಡುವ ಯಾವ ಭಾಷೆಯೂ ಕ್ಲಾಸಿಕಲ್ ಅಲ್ಲ.

ಆದರೆ ಜನರೂ ಈಗಲೂ ಬಳಸುತ್ತಿದ್ದು, ಬಹು ದೀರ್ಘ ಪರಂಪರೆಯಿರುವ ಭಾಷೆಗಳನ್ನು ಕ್ಲಾಸಿಕಲ್ ಎಂದು ಗುರುತಿಸಬೇಕೆಂಬ ಬೇಡಿಕೆಯ ಮೇರೆಗೆ ಕೇಂದ್ರ ಸರಕಾರ 2004 ರಲ್ಲಿ ತಮಿಳನ್ನು ಈ ಪಟ್ಟಿಯಲ್ಲಿ ಸೇರಿಸುವ ನಿರ್ಣಯವನ್ನು ತೆಗೆದುಕೊಂಡಿತು. ಆ ಬಳಿಕವಷ್ಟೆ ಸಂಸ್ಕೃತವನ್ನೂ ಕ್ಲಾಸಿಕಲ್ ಭಾಷೆಗಳ ಪಟ್ಟಿಗೆ ಸೇರಿಸುವ ನಿರ್ಧಾರವನ್ನು ಮಾಡಿದರು. ಇದರಿಂದ ಗೊತ್ತಾಗುವುದಿಷ್ಟು. ಒಂದು ಭಾಷೆ ಕ್ಲಾಸಿಕಲ್ ಹೌದೋ ಅಲ್ಲವೋ ಎಂಬುದು ತಂತಾನೇ ತೀರ್ಮಾನವಾಗುವ ವಿಷಯವಾಗಿ ಉಳಿದಿಲ್ಲ. ಕೇಂದ್ರ ಸರಕಾರ ತೆಗೆದುಕೊಳ್ಳುವ ಬಹುಮಟ್ಟಿಗೆ ರಾಜಕೀಯ ಲೇಪಿತ ನಿರ್ಣಯದ ಮೇರೆಗೆ ಈ ಗುರುತನ್ನು ಭಾಷೆಗಳು ಪಡೆದುಕೊಳ್ಳುತ್ತಿವೆ. ಈಗ ಕನ್ನಡ ಮತ್ತು ತೆಲುಗು ಈ ಪಟ್ಟಿಗೆ ಸೇರ್ಪಡೆಯಾಗಿವೆ.

ಟಿಪ್ಪಣಿ 2 : ಕ್ಲಾಸಿಕಲ್ ಎಂಬ ಇಂಗ್ಲಿಶ್ ಪದಕ್ಕೆ ಸಮ ಎಂಬಂತೆ ಕನ್ನಡ ವಾರ್ತಾ ಮಾಧ್ಯಮಗಳು ಮತ್ತು ವಿದ್ವತ್ವಲಯ ಶಾಸ್ತ್ರೀಯ ಮತ್ತು ಅಭಿಜಾತ ಎಂಬ

ಎರಡು ಪದಗಳನ್ನು ಬಳಸುತ್ತಿವೆ. ಶಾಸ್ತ್ರೀಯ ಎಂಬ ಪದಕ್ಕೆ ಕಟ್ಟುನಿಟ್ಟಾದ ನಿಯಮಗಳಿಗೆ ಬದ್ಧವಾದ ಎಂಬ ಅರ್ಥವಿರುವುದು ಗೊತ್ತಾಗುತ್ತದೆ. ಶಾಸ್ತ್ರೀಯ ಸಂಗೀತ ಎಂಬ ಮಾತಿಗೆ ಇದೇ ಅರ್ಥ ತಾನೆ. ಈ ನಿಟ್ಟಿನಲ್ಲಿ ನೋಡಿದಾಗ ಎಲ್ಲ ಭಾಷೆಗಳೂ ಶಾಸ್ತ್ರೀಯವೇ. ಏಕೆಂದರೆ ನಿಯಮಗಳನ್ನು ಮೀರುವ ಭಾಷೆ ಜಗತ್ತಿನಲ್ಲಿ ಯಾವುದೂ ಇಲ್ಲ. ಎಲ್ಲ ಭಾಷೆಗಳಿಗೂ ಅವುಗಳದ್ದೇ ಆದ ನಿಯಮಾವಳಿಗಳು ಇದ್ದೇ ಇರುತ್ತವೆ. ಹಾಗಾಗಿ ಕೆಲವು ಭಾಷೆಗಳನ್ನು ಮಾತ್ರ ಶಾಸ್ತ್ರೀಯ ಎಂದು ಕರೆಯಲು ಬರುವುದಿಲ್ಲ. ಅಭಿಜಾತ ಎಂಬ ಪದವೂ ಕೂಡ ಹೆಚ್ಚು ಸಾಹಿತ್ಯಕವಾದ ನೆಲೆಯನ್ನು ಹೊಂದಿದೆ. ಸರ್ವ ಶ್ರೇಷ್ಠವಾದ ಮತ್ತು ಕಾಲದ ಪರೀಕ್ಷೆಯನ್ನು ಗೆದ್ದು ನಿಂತ ಕೃತಿಗಳನ್ನು ಕ್ಲಾಸಿಕ್ ಎಂದು ಗುರುತಿಸುವುದುಂಟು. ಇವುಗಳನ್ನು ಅಭಿಜಾತ ಕೃತಿಗಳೆಂದು ಕನ್ನಡದಲ್ಲಿ ಕರೆಯಲಾಗುತ್ತಿದೆ. ಇದೂ ಕೂಡ ಒಂದು ಭಾಷೆಯ ವಿಶಿಷ್ಟ ಲಕ್ಷಣವನ್ನು ಹೇಳಲು ಸಾಧ್ಯವಿರುವ ಪದವೆನಿಸುವುದಿಲ್ಲ.

ಹಾಗಿದ್ದರೆ ಯಾವುದು ಸರಿಯಾದ ಪದವಾಗಬಹುದು? ಭಾಷೆಗಳ ಬಗೆಗೆ ಚಿಂತಿಸುತ್ತಿರುವವರು ಜಗತ್ತಿನ ಭಾಷೆಗಳಲ್ಲಿ ಬಹುದೀರ್ಘ ಕಾಲದಿಂದಲೂ ಜನಬಳಕೆಯಲ್ಲಿದ್ದು, ಈಗಲೂ ಜನಬಳಕೆಯ ಭಾಷೆಗಳಾಗಿಯೇ ಉಳಿದಿರುವ ಭಾಷೆಗಳನ್ನು ಪಾರಂಪರಿಕ ಭಾಷೆ (ಹೆರಿಟೇಜ್ ಲಾಂಗ್ವೆಜ್)ಗಳೆಂದು ಗುರುತಿಸುತ್ತಿದ್ದಾರೆ. ಇಂತಹ ಭಾಷೆಗಳನ್ನು ಎರಡನೆಯ ಭಾಷೆಯಾಗಿ ಕಲಿಯಲು ಉತ್ತೇಜಿಸಲಾಗುತ್ತಿದೆ. ಕನ್ನಡದಂತಹ ಭಾಷೆಗಳು ನಿಜವಾಗಿ ಈ ಪಟ್ಟಿಗೆ ಸೇರುತ್ತವೆ ಎಂದು ತೋರುತ್ತದೆ. ಆದ್ದರಿಂದ ಕನ್ನಡವನ್ನು ಪಾರಂಪರಿಕ ಭಾಷೆ ಎಂದು ಕರೆಯುವುದು ಹೆಚ್ಚು ಸರಿಯಾಗುತ್ತದೆ.

ಇದೂ ಅಲ್ಲದೆ ಇನ್ನೂ ಒಂದು ಕಾರಣದಿಂದ ಹೊಸ ಹೆಸರೊಂದು ಅಗತ್ಯವಾಗಿದೆ. ಕ್ಲಾಸಿಕಲ್ ಎಂದು ಗುರುತಿಸಲಾದ ಭಾಷೆಗಳಲ್ಲಿ ಈಗ ಜನ ಬಳಸುತ್ತಿರುವ ಆ ಭಾಷೆಯ ರೂಪವನ್ನು ಕ್ಲಾಸಿಕಲ್ ಎನ್ನುವುದಿಲ್ಲ. ಆ ಭಾಷೆಯ ಒಂದು ಚಾರಿತ್ರಿಕ ಅವಧಿಯ ಭಾಷೆಯನ್ನು ಹಾಗೆ ಗುರುತಿಸಲಾಗುತ್ತದೆ. ತಮಿಳಿನ ಮಟ್ಟಿಗೆ ಹೇಳುವುದಾದರೆ ಕ್ರಿ.ಶ 650ರ ವರೆಗಿನ ತಮಿಳನ್ನು ಕ್ಲಾಸಿಕಲ್ ಎಂದು ಗುರುತಿಸಿಕೊಂಡಿದ್ದಾರೆ. ಕನ್ನಡದಂತಹ ಭಾಷೆಗಳಿಗೆ ನಿರಂತರತೆಯೆ ಒಂದು ಮುಖ್ಯ ಲಕ್ಷಣವಾಗಿರುವುದರಿಂದ, ಈ ಭಾಷೆಗಳ ಇಂದಿನ ಜನಬಳಕೆಯ ರೂಪಗಳನ್ನು ಕ್ಲಾಸಿಕಲ್ ರೂಪದಿಂದ ಬೇರೆಯಾಗಿ ಇರಿಸುವುದು ಸರಿಯಾಗದು. ಆದ್ದರಿಂದ ಹಿಂದಿನ ರೂಪದ ಮುಂದುವರಿಕೆಯೇ ಇಂದಿನ ರೂಪ ಎಂಬ ತಿಳುವಳಿಕೆಯನ್ನು ಆಧರಿಸಿ ಈ ಭಾಷೆಗಳನ್ನು ಪಾರಂಪರಿಕ ಭಾಷೆಗಳೆಂದು ಕರೆಯುವುದೇ ಹೆಚ್ಚು ಸೂಕ್ತವಾದುದು.

ಟಿಪ್ಪಣಿ 3 : ತಮಿಳನ್ನು ಕ್ಲಾಸಿಕಲ್ ಭಾಷೆಯೆಂದು ಗುರುತಿಸಬೇಕೆಂಬ ಕೋರಿಕೆ ಹತ್ತೊಂಬತ್ತನೆಯ ಶತಮಾನದ ಕೊನೆಯಲ್ಲೇ ಮಂಡಿತವಾದಂತೆ ತೋರುತ್ತದೆ. ಇದು ಬಲಗೊಂಡು ಎನ್‌ಡಿಎ ಸರಕಾರವಿದ್ದಾಗ ಈ ಬೇಡಿಕೆ ತೀವ್ರವಾಯಿತು. ಉತ್ತರ ಅಮೆರಿಕಾದ ತಮಿಳು ಮತ್ತು ಸಂಸ್ಕೃತ ವಿದ್ವಾಂಸ ಜಾರ್ಜ್ ಎಲ್.ಹಾರ್ಟ್ ಈ ಬೇಡಿಕೆಯನ್ನು ಸಮರ್ಥಿಸಿ 2000ನೆಯ ವರ್ಷದಲ್ಲಿ ನೀಡಿದ ಹೇಳಿಕೆಯೊಂದು

ಚಲಾವಣೆ ಪಡೆಯಿತು. ಬಹುಮಟ್ಟಿಗೆ ಭಾರತೀಯ ಭಾಷೆಗಳಲ್ಲಿ ಯಾವುದನ್ನು ಕ್ಲಾಸಿಕಲ್ ಎಂದು ಕರೆಯಬೇಕೆಂಬ ಚೌಕಟ್ಟನ್ನು ರೂಪಿಸುವಾಗ ಹಾರ್ಟ್ ನೀಡಿದ ಚೌಕಟ್ಟನ್ನೇ ಪಾಲಿಸಿರುವುದನ್ನು ನೋಡಬಹುದು. ಕೊನೆಗೆ 2004ರಲ್ಲಿ ತಮಿಳು ಕ್ಲಾಸಿಕಲ್ ಎಂಬ ಗುರುತನ್ನು ಪಡೆದುಕೊಂಡಿತು. ಈ ಗುರುತು ತಮಗೂ ಬೇಕೆಂಬ ಬೇಡಿಕೆಯನ್ನು ಕನ್ನಡ ಮತ್ತು ತೆಲುಗು ಭಾಷೆಗಳ ವಿದ್ವಾಂಸರು ಮತ್ತು ಅವರ ಮಾತನ್ನು ಬೆಂಬಲಿಸಿದ ರಾಜಕಾರಣಿಗಳು ಮಂಡಿಸಿದರು. ಈಗ, ಮೂರೂವರೆ ವರ್ಷಗಳ ಬಳಿಕ ಕನ್ನಡಕ್ಕೆ ಈ ಗುರುತು ಲಭಿಸಿದೆ.

ಟಿಪ್ಪಣಿ 4 :ನಮ್ಮ ಭಾಷೆಗೆ ಕ್ಲಾಸಿಕಲ್ ಎಂಬ ಗುರುತನ್ನು ಪಡೆದುಕೊಳ್ಳಲು ಏಕಿಷ್ಟು ತವಕ? ನಮ್ಮ ನೆರೆಯ ರಾಜ್ಯದ ಭಾಷೆಗೆ ಆ ಮನ್ನಣೆ ದೊರಕಿದ್ದರಿಂದ ನಮ್ಮ ಭಾಷೆಗೂ ಆ ಗುರುತು ದೊರಕಲೆಂದು ಬಯಸಿದ್ದು ಒಂದು ಕಾರಣ. ಇದಲ್ಲದೆ ಈ ಗುರುತು ಪಡೆದುಕೊಂಡ ಭಾಷೆಗಳ ಅಭಿವೃದ್ಧಿಗೆ ಕೇಂದ್ರ ಸರಕಾರ ಹೆಚ್ಚಿನ ಪ್ರಮಾಣದ ಅನುದಾನವನ್ನು ನೀಡುತ್ತದೆಂದೂ, ಆ ಅನುದಾನ ಕನ್ನಡಕ್ಕೂ ದೊರಕಲಿ ಎಂಬ ಬಯಕೆ ಇನ್ನೊಂದು ಕಾರಣ. ಈಗ ಭಾಷೆಯ ಅಭಿವೃದ್ಧಿ ಎಂದರೇನು ಎಂಬ ಪ್ರಶ್ನೆಯನ್ನು ನಾವು ಕೇಳಿಕೊಳ್ಳಬೇಕಾಗಿದೆ. ಇಲ್ಲದಿದ್ದರೆ ಅನುದಾನ ಒಂದು ಮರೀಚಿಕೆ ಆಗಬಹುದು ಇಲ್ಲವೇ ಅಪವ್ಯಯದ ಒಂದು ಹಾದಿಯಾಗಲೂಬಹುದು.

ಈವರೆಗೆ ಕನ್ನಡವನ್ನು ಅಭಿವೃದ್ಧಿಪಡಿಸಲು, ಬೆಳೆಸಲು ಮಾಡಿರುವ ಪ್ರಯತ್ನಗಳನ್ನು ನೋಡಿದರೆ ನಾವು ಸರಿಯಾದ ದಿಕ್ಕಿನಲ್ಲಿ ಹೆಜ್ಜೆಗಳನ್ನು ಇಟ್ಟಿಲ್ಲವೆಂಬುದು ತಿಳಿಯುತ್ತದೆ. ಭಾಷೆಯ ಅಭಿವೃದ್ಧಿ ಎಂದರೆ ಆ ಭಾಷೆಯನ್ನು ಎಲ್ಲ ವಲಯಗಳಲ್ಲೂ ಹೊಸ ಜಗತ್ತಿನ ಅಗತ್ಯಗಳಿಗೆ ತಕ್ಕಂತೆ ಬಳಸಲು ಸಿದ್ಧಗೊಳಿಸುವುದು ಎಂದರ್ಥ. ಎಲ್ಲ ವಲಯಗಳಲ್ಲೂ ಬಳಸಬೇಕು ಎಂದು ತೀರ್ಮಾನಿಸಿದರೆ ಹಾಗೆ ಹೇಳುವ ಸರಕಾರಿ ಆದೇಶಗಳನ್ನು ಹೊರಡಿಸಿದರೆ ಎಲ್ಲ ಸಮಸ್ಯೆಗಳೂ ಪರಿಹಾರವಾದಂತಲ್ಲ. ಭಾಷೆಯ ಬಳಕೆಗೆ ಅನುಕೂಲವಾಗುವಂತಹ ಭಾಷಾ ನೀತಿಯನ್ನು ರೂಪಿಸಬೇಕು. ಆ ಭಾಷಾ ನೀತಿಯನ್ನು ಜಾರಿಗೆ ತರಲು ನೆರವಾಗುವ ಭಾಷಾ ಯೋಜನೆಗಳನ್ನು ಜಾರಿಗೆ ತರಬೇಕು. ಇದರಿಂದ ದೂರಗಾಮಿಯಾದ ಪರಿಣಾಮಗಳನ್ನು ನಿರೀಕ್ಷಿಸಬಹುದೇ ಹೊರತು ಕೇವಲ ಅಪೇಕ್ಷೆಗಳನ್ನು ಮುಂದಿಡುವುದರಿಂದಲ್ಲ. ಕರ್ನಾಟಕವೆಂಬ ಈ ರಾಜ್ಯವನ್ನು ರೂಪಿಸಿ ಐವತ್ತು ವರ್ಷಗಳು ಕಳೆದರೂ ನಾಡಿನ ಮುಖ್ಯ ವಾಹಿನಿಯಲ್ಲಿ ಕನ್ನಡದ ಸ್ಥಾನವೇನೆಂಬುದನ್ನು ಖಚಿತಗೊಳಿಸಲು ಇನ್ನೂ ಸಾಧ್ಯವಾಗಿಲ್ಲ. ಇದಕ್ಕೆ ಯುಕ್ತ ಭಾಷಾನೀತಿ ಮತ್ತು ಭಾಷಾ ಯೋಜನೆಗಳು ಇಲ್ಲದಿರುವುದೂ ಒಂದು ಮುಖ್ಯ ಕಾರಣ. ಕನ್ನಡಕ್ಕೆ ಕ್ಲಾಸಿಕಲ್ ಭಾಷೆ ಎಂಬ ಗುರುತು ದೊರಕಿರುವ ಸಂದರ್ಭದಲ್ಲಾದರೂ ಈ ಕೊರತೆಯನ್ನು ನೀಗಿಕೊಳ್ಳಲು ಮುಂದಾಗಬೇಕಿದೆ.

ಟಿಪ್ಪಣಿ 5 : ಕನ್ನಡ ಎಷ್ಟು ಹಳೆಯದು? ನಾವೀಗ ದಿನವೂ ಮಾತಾಡಲು ಬಳಸುತ್ತಿರುವ ಕನ್ನಡವೆಂಬ ಭಾಷೆ ಎರಡು ಸಾವಿರ ವರ್ಷಕ್ಕೂ ಮಿಕ್ಕಿದಷ್ಟು ಹಳೆಯದು.ಈಗ ತಮಿಳು, ತೆಲುಗು, ಕನ್ನಡ, ತುಳು, ಮಲೆಯಾಳಂ, ಕೊಡಗು,

ತೊದವ ಎಂದು ಬೇರೆಬೇರೆಯಾಗಿರುವ ಭಾಷೆಗಳೆಲ್ಲವೂ ಒಂದು ಕಾಲಕ್ಕೆ ಒಂದೇ ಆಗಿದ್ದವು. ಅಂದರೆ ಈ ಭಾಷೆಗಳನ್ನಾಡುವ ಪ್ರದೇಶಗಳಲ್ಲಿದ್ದ ಜನರು ಒಂದೇ ಭಾಷೆಯನ್ನಾಡುತ್ತಿದ್ದರು. ಆ ಭಾಷೆಯು ವಿವಿಧ ಬಗೆಗಳಾಗಿ ಕವಲೊಡೆದು ಹೀಗೆ ಹಲವು ಭಾಷೆಗಳು ಬಳಕೆಗೆ ಬಂದಿವೆ. ಇದೆಲ್ಲವೂ ನಡೆದದ್ದು ಏಕೆ ಮತ್ತು ಯಾವಾಗ ಎಂಬುದನ್ನು ನಿಖರವಾಗಿ ಹೇಳಲು ಆಗುವುದಿಲ್ಲ. ಆದರೂ ಕೆಲವು ಪುರಾವೆಗಳನ್ನು ಆಧರಿಸಿ ಈ ಭಾಷೆಗಳೆಲ್ಲವೂ ಸ್ವತಂತ್ರ ಭಾಷೆಗಳಾದುದು ಯಾವಾಗ ಎಂದು ಹೇಳಲು ಸಾಧ್ಯವಿದೆ. ವಿದ್ವಾಂಸರು ಈ ಕುರಿತು ಕಳೆದ ಒಂದು ಶತಮಾನದಿಂದ ಸಾಕಷ್ಟು ಸಂಗತಿಗಳನ್ನು ಮಂಡಿಸಿದ್ದಾರೆ. ಇಂತಹ ಪುರಾವೆಗಳು ಕೆಲವೊಮ್ಮೆ ನೇರವಾಗಿ ಕನ್ನಡದ ಮಾಹಿತಿಯನ್ನೇ ನೀಡುತ್ತಿರಬಹುದು. ಮತ್ತೆ ಕೆಲವೊಮ್ಮೆ ಈ ಪುರಾವೆಗಳು ಪರೋಕ್ಷವಾಗಿ ಕನ್ನಡದ ಅಸ್ತಿತ್ವವನ್ನು ನಮಗೆ ತೋರಿಸುತ್ತಿರಬಹುದು.

ಈಗ ಬಹುಮಟ್ಟಿಗೆ ಎಲ್ಲರೂ ಕನ್ನಡ ಬರವಣಿಗೆಯ ಮೊದಲ ದಾಖಲೆ ಎಂದು ಹಾಸನ ಜಿಲ್ಲೆಯ ಹಲ್ಮಿಡಿ(=ಹನ್ಮಿಡಿ) ಎಂಬ ಊರಿನಲ್ಲಿ ದೊರಕಿರುವ ಕ್ರಿಶ 450 ರ ಕದಂಬ ರಾಜರ ಕಾಲದ ಶಾಸನವನ್ನು ಗುರುತಿಸಿದ್ದಾರೆ. ಈ ಶಾಸನದಲ್ಲಿ ಕನ್ನಡ ಬರವಣಿಗೆಗೆ ಬೇಕಾದ ಲಿಪಿ ವ್ಯವಸ್ಥೆಯನ್ನು ರೂಪಿಸಿಕೊಂಡಿದ್ದೂ ಕೂಡ ಗೊತ್ತಾಗುತ್ತಿದೆ. ಕೆಲವು ವಿದ್ವಾಂಸರು ಇದಕ್ಕಿಂತಲೂ ಮೊದಲಿನ ಕೆಲವು ಕನ್ನಡ ಶಾಸನಗಳಿವೆಯೆಂದು ಗುರುತಿಸಿದ್ದಾರಾದರೂ ಎಲ್ಲರೂ ಆ ಬಗೆಗೆ ಸಹಮತವನ್ನು ಹೊಂದಿಲ್ಲ. ಗಂಗ ರಾಜ ಕೊಂಗುಣಿವರ್ಮನ ಎರಡು ಶಾಸನಗಳು ಹಲ್ಮಿಡಿ ಶಾಸನಕ್ಕಿಂತಲೂ ಹಳೆಯವು ಎಂಬ ವಾದವೂ ಇದೆ. ಆದರೆ ಅವು ಕೂಟ ಶಾಸನಗಳೆಂದು ವಿದ್ವಾಂಸರು ವಾದಿಸುತ್ತಾರೆ. ಕೂಟ ಶಾಸನಗಳೆಂದರೇನು? ಸುಳ್ಳು ದಾಖಲೆಗಳೆಂದು ಸರಳವಾಗಿ ಹೇಳಬಹುದು. ಅಂದರೆ ದಾನದತ್ತಿಗಳನ್ನು ಕುರಿತು ಹೇಳುವ ನಕಲಿ ಶಾಸನಗಳನ್ನು ಸೃಷ್ಟಿಸುವ ಪದ್ಧತಿಯಿತ್ತೆಂದು ವಿದ್ವಾಂಸರು ವಾದಿಸುತ್ತಾರೆ. ಅಂದರೆ ಆ ಶಾಸನಗಳು ಬೇಕೆಂದೇ ಹಳೆಯ ಕಾಲದವೆಂಬ ಸೋಗನ್ನು ಹಾಕುತ್ತವೆ ಎಂದು ವಾದಿಸಲಾಗಿದೆ. ಆದರೆ ಈ ವಾದ ಯಾವಾಗಲೂ ನಿಜವಾಗಿರಬೇಕಿಲ್ಲ. ಏಕೆಂದರೆ ದಾನ ನೀಡಿದ ಶಾಸನ ಯಾವುದೋ ಕಾರಣದಿಂದ ಹಾಳಾಗುವಂತಿದ್ದರೆ ಮುಂದೆ ಯಾರೋ ಒಬ್ಬರು ಆ ಶಾಸನದ ಪಾಠವನ್ನು ತಮ್ಮ ಕಾಲದ ಬರವಣಿಗೆಯ ರೀತಿಯಲ್ಲಿ ನಕಲು ಮಾಡಿಕೊಳ್ಳುತ್ತಿದ್ದರು. ಹೀಗಾಗಿ ಬೇರೆ ಕಾಲದ ಶಾಸನಗಳೆಂದು ನಾವು ತಿಳಿದಿರುವ ಕೆಲವು ಶಾಸನಗಳಾದರೂ ಹಿಂದೆ ಇದ್ದ ನಿಜವಾದ ಶಾಸನಗಳ ಪ್ರತಿಗಳಾಗಿರಬೇಕು. ಹೀಗಾಗಿ ಹಲ್ಮಿಡಿ ಶಾಸನಕ್ಕಿಂತಲೂ ಹಿಂದಿನ ಅವಧಿಯವು ಎಂದು ಹೇಳಲಾಗಿರುವ ಕನ್ನಡ ಶಾಸನಗಳನ್ನು ಮತ್ತೆ ನಾವು ಪರಿಶೀಲಿಸಬೇಕಾಗಿದೆ. ಅವು ನಿಜವಾಗಿಯೂ ಹಳೆಯವೇ ಆಗಿರಬಹುದು.

ಇದಲ್ಲದೆ ಕನ್ನಡ ಬರವಣಿಗೆಯ ದಾಖಲೆಗಳಲ್ಲದಿದ್ದರೂ ಈ ಭಾಷೆಯನ್ನು ಆಡುತ್ತಿದ್ದ ಜನರ ಬಗೆಗೆ ಮಾಹಿತಿಗಳು ನಮಗೆ ದೊರಕುತ್ತವೆ; ಅಲ್ಲದೆ ಕನ್ನಡ ಮಾತಿನ ಉಲ್ಲೇಖಗಳು ಕೂಡ ಅಲ್ಲಲ್ಲಿ ಸಿಗುತ್ತವೆ. ತಮಿಳಿನ ಸಂಗಂ ಸಾಹಿತ್ಯದಲ್ಲಿ

ಕೃತಿ ರಚನೆ ಮಾಡಿದ ಎಷ್ಟೋ ಕವಿಗಳು ತಮಿಳು ಭಾಷಾ ಪ್ರದೇಶಕ್ಕೆ ಸೇರಿದವರಾಗಿರಲಿಲ್ಲವೆಂದೂ ಅವರಲ್ಲಿ ಕೆಲವರಾದರೂ ಕನ್ನಡ ಮಾತಾಡುತ್ತಿದ್ದ ಪ್ರದೇಶಗಳಿಂದ ಹೋದವರೆಂದು ಪ್ರೊ.ಷ.ಶೆಟ್ಟರ್ ತೋರಿಸಿಕೊಟ್ಟಿದ್ದಾರೆ. ಈ ಕವಿಗಳೆಲ್ಲ ತಮಿಳಿನಲ್ಲಿ ಕಾವ್ಯವನ್ನು ರಚನೆ ಮಾಡಿದ್ದರೂ ಅವರು ಆಡುತ್ತಿದ್ದ ಭಾಷೆ ಕನ್ನಡವೇ ಆಗಿದ್ದಿರಬೇಕು ಎಂದು ವಾದಿಸಲು ಬರುತ್ತದೆ. ಅದೂ ಅಲ್ಲದೆ ಸಂಗಂ ಕಾವ್ಯದಲ್ಲಿ ಕಾಣಬರುವ ಹಲವು ತಮಿಳು ರೂಪಗಳು ಇಂದಿನ ತಮಿಳಿನಲ್ಲಿ ಕಾಣಿಸುವುದಿಲ್ಲ; ಆದರೆ ಅಂತಹ ರೂಪಗಳಲ್ಲಿ ಕೆಲವು ಕನ್ನಡದಲ್ಲಿ ಇವೆ. ಇದರಿಂದಲೂ ಕನ್ನಡ ತಮಿಳು ಸಂಗಂ ಸಾಹಿತ್ಯ ರಚನೆಯ ಕಾಲದಲ್ಲಿ ಒಂದು ಸ್ವತಂತ್ರ ಭಾಷೆಯಾಗಿ ಬಳಕೆಯಲ್ಲಿತ್ತು ಎಂದು ಹೇಳಲು ಸಾಧ್ಯವಿದೆ.

ಇಂತಹ ಹಲವಾರು ಮಾಹಿತಿಗಳನ್ನು ಈಗಾಗಲೇ ಬೇರೆಬೇರೆ ಕಡೆಗಳಲ್ಲಿ ಪಟ್ಟಿ ಮಾಡಿಕೊಡಲಾಗಿದೆ. ಅಶೋಕನ ಬ್ರಹ್ಮಗಿರಿಯ ಶಾಸನದಲ್ಲಿ ಬರುವ 'ಇಸಿಲ' ಎಂಬ ಪದ, ಗ್ರೀಕ್ ಪ್ರವಾಸಿ ಟಾಲೆಮಿ ತನ್ನ ಪ್ರವಾಸ ಕಥನದಲ್ಲಿ ಹೆಸರಿಸುವ ಕನ್ನಡ ನಾಡಿನ ಊರಿನ ಹೆಸರುಗಳು, ಗ್ರೀಕ್ ನಾಟಕವೊಂದರಲ್ಲಿ ಬರುವ ಕನ್ನಡ ಮಾತುಗಳು, ತಮಿಳು ನಾಡಿನ ಸಿತ್ತಿನವಾಸಲ್ ಎಂಬಲ್ಲಿ ದೊರಕಿದ ಶಾಸನದಲ್ಲಿ ಕಂಡುಬರುವ ಕನ್ನಡ ಪದಗಳು, ಹಾಲರಾಜ ಎಂಬಾತ ಬರೆದ ಪ್ರಾಕೃತ ಭಾಷೆಯ 'ಗಾಥಾ ಸಪ್ತಶತಿ' ಎಂಬ ಕೃತಿಯಲ್ಲಿ ಇರುವ ಕನ್ನಡ ಪದಗಳು ಹೀಗೆ ಈ ಪಟ್ಟಿ ಬೆಳೆಯುತ್ತಲೇ ಹೋಗುತ್ತದೆ. ಇವೆಲ್ಲವೂ ಕ್ರಿಪೂ ಎರಡನೆಯ ಶತಮಾನದಿಂದ ಕ್ರಿಶ ಮೂರನೆಯ ಶತಮಾನದ ಅವಧಿಗೆ ಸೇರಿದ ದಾಖಲೆಗಳು ಎನ್ನುವುದನ್ನು ಗಮನದಲ್ಲಿಡಬೇಕು. ಅಂದರೆ ಈ ಕಾಲಾವಧಿಯ ಹೊತ್ತಿಗೆ ಕನ್ನಡ ಜನರ ಆಡು ಭಾಷೆಯಾಗಿ ಬಳಕೆಯಲ್ಲಿತ್ತು ಮತ್ತು ಬರೆಯಲು ಅನುಕೂಲವಾದ ಲಿಪಿ ವ್ಯವಸ್ಥೆಯೊಂದನ್ನು ರೂಪಿಸಿಕೊಂಡಿತ್ತು ಎಂದು ತಿಳಿಯಬಹುದಾಗಿದೆ.

ಬರವಣಿಗೆಗೆ ಸಂಬಂಧಿಸಿದಂತೆ ಹೇಳುವುದಾದರೆ ತಮಿಳಿಗಿಂತ ಕನ್ನಡ ಒಂದು ಹೆಜ್ಜೆ ಮುಂದೆ ಹೋದಂತೆ ತೋರುತ್ತದೆ. ತಮಿಳು ತನ್ನ ಕ್ಲಾಸಿಕಲ್ ಸಾಹಿತ್ಯ ಎಂದು ಕರೆದುಕೊಳ್ಳುತ್ತಿರುವ ಸಂಗಂ ಕಾಲದ ರಚನೆಗಳು ಬರಹ ರೂಪದಲ್ಲಿರಲಿಲ್ಲ. ಅವು ಬಾಯ್ದೆರೆಯ ರಚನೆಗಳಾಗಿದ್ದವು. ಅವುಗಳು ಲಿಪಿ ರೂಪಕ್ಕೆ ಬಂದದ್ದೇ ಕ್ರಿಶ 6–7 ನೆಯ ಶತಮಾನದ ಬಳಿಕ. ಆ ಕಾಲದ ಶಾಸ್ತ್ರ ಸಾಹಿತ್ಯ ಕೃತಿಯೆಂದು ಗುರುತಿಸಲಾಗಿರುವ ತೊಲ್‌ಕಾಪ್ಪಿಯಂ ಕೂಡ ಹೀಗೆ ಬಾಯ್ದೆರೆಯಲ್ಲೇ ಇದ್ದು ಅನಂತರ ಲಿಖಿತ ರೂಪವನ್ನು ಪಡೆದುಕೊಂಡಂತಿದೆ.

ಈ ಕಾವ್ಯಕೃತಿಗಳು ರಚನೆಯಾಗುತ್ತಿದ್ದ ಅವಧಿಯಲ್ಲಿ ತಮಿಳಿಗೆ ಒಂದು ಬರವಣಿಗೆಯ ವ್ಯವಸ್ಥೆ ಇದ್ದಿತಾದರೂ ಅದು ಸಮರ್ಥವಾಗಿದ್ದಂತೆ ತೋರುವುದಿಲ್ಲ. ಈ ಅವಧಿಯ ಶಾಸನಗಳೆಲ್ಲ ಕೆಲವೇ ಅಕ್ಷರಗಳನ್ನು ಹೊಂದಿರುವಂತಹವು. ಅತಿ ಉದ್ದದ ಶಾಸನದಲ್ಲಿ 52 ಅಕ್ಷರಗಳಿವೆ. ಹಾಗೆ ನೋಡಿದರೆ ತಮಿಳಿಗೆ ಸುವ್ಯವಸ್ಥಿತವಾದ ಬರವಣಿಗೆಯ ಚೌಕಟ್ಟನ್ನು ನೀಡಿದ ವಟ್ಟೆಳತ್ತು ಎಂಬ ಬರವಣಿಗೆಯ ಬಗೆ ಅಲ್ಲಿ ನೆಲೆಗೊಂಡದ್ದೇ

ಕ್ರಿಶ 6 ನೆಯ ಶತಮಾನದ ಬಳಿಕ. ಅದೂ ಕನ್ನಡ ಮಾತಾಡುವ ಪ್ರದೇಶದಿಂದ ಹೋದವರೆನ್ನಲಾದ ಕಳಭ್ರ ಅರಸರು ಈ ಲಿಪಿ ವ್ಯವಸ್ಥೆಯನ್ನು ತಮಿಳಿಗೆ ಒದಗಿಸಿದರು ಎಂದು ಹೇಳಲಾಗಿದೆ.

ಇಷ್ಟು ಹಳೆಯದಾದ ಕನ್ನಡ ಮುಂದೆ ಜನರ ಮಾತಿನಲ್ಲಿ, ಬರವಣಿಗೆಯಲ್ಲಿ ನೆಲೆಗೊಂಡು ಈಗ ಇಪ್ಪತ್ತೊಂದನೆಯ ಶತಮಾನದ ಸವಾಲುಗಳನ್ನು ಎದುರಿಸಲು ಸಿದ್ಧಗೊಳ್ಳುತ್ತಿದೆ. ಈ ಅವಧಿಯಲ್ಲಿ ಕನ್ನಡದ ರಚನೆಯಲ್ಲಿ ಹಲವು ಬದಲಾವಣೆಗಳಾಗಿವೆ. ಚಾರಿತ್ರಿಕವಾಗಿ ಕನ್ನಡದ ನಾಲ್ಕು ಪ್ರಭೇದಗಳನ್ನು ಗುರುತಿಸುತ್ತಾರೆ. ಪೂರ್ವದ ಹಳಗನ್ನಡ,ಹಳಗನ್ನಡ,ನಡುಗನ್ನಡ ಮತ್ತು ಹೊಸಗನ್ನಡ ಎಂಬುವೇ ಈ ನಾಲ್ಕು ಚಾರಿತ್ರಿಕ ಪ್ರಭೇದಗಳು. ಇವುಗಳಲ್ಲಿ ಹೊಸಗನ್ನಡವನ್ನು ಬಿಟ್ಟು ಉಳಿದ ಮೂರೂ ಪ್ರಭೇದಗಳನ್ನು ಕ್ಲಾಸಿಕಲ್ ಕನ್ನಡದ ಮಾದರಿಗಳೆಂದು ತಿಳಿಯುವ ದಿಕ್ಕಿನಲ್ಲಿ ಚಿಂತನೆಗಳು ಹರಿಯುತ್ತಿವೆ. ಇದು ಸರಿಯಾದುದಲ್ಲ. ಕನ್ನಡ ಈಗಲೂ ಜನ ಬಳಸುತ್ತಿರುವ ಭಾಷೆ. ಹಾಗಾಗಿ ಈಗ ನಾವು ಬಳಸುವ ಕನ್ನಡವನ್ನೂ ಕೂಡ ಈ ವ್ಯಾಖ್ಯಾನದೊಳಗೆ ಸೇರಿಸುವುದು ಸೂಕ್ತ. ಆಗ ಮಾತ್ರ ಕ್ಲಾಸಿಕಲ್ ಎಂಬ ಗುರುತಿಗೆ ಹೆಚ್ಚಿನ ಮಹತ್ವ ಬರುತ್ತದೆ.

ಕನ್ನಡದ ಹಿಂದಿನ ಪ್ರಭೇದಗಳನ್ನು ಈಗ ಏಕೆ ಅಧ್ಯಯನ ಮಾಡಬೇಕು? ಪೂರ್ವದ ಹಳಗನ್ನಡವನ್ನು ಕಲಿತು ಅದನ್ನು ಬಳಸಲು ಸಾಧ್ಯವೇ? ಈ ಪ್ರಶ್ನೆಗಳು ಈಗ ಕನ್ನಡವನ್ನು ಬಳಸುತ್ತಿರುವವರನ್ನು ಕಾಡಿಸಬಹುದು. ಆದರೆ ಈ ಸಮಸ್ಯೆಯನ್ನು ಬೇರೊಂದು ಬಗೆಯಲ್ಲಿ ನೋಡೋಣ. ಕನ್ನಡ ಜನಭಾಷೆಯಾಗಿ ಬೆಳೆದುಬಂದಿದೆ. ಜನರ ನಿಡುಗಾಲದ ಜೀವನ ಕ್ರಮದಿಂದ ಕೂಡಿಕೊಂಡ ತಿಳುವಳಿಕೆ ಈ ಭಾಷೆಯಲ್ಲಿ ಅಡಕಗೊಂಡಿರುತ್ತದೆ. ಅಂದರೆ ಜನರು ಬದುಕುವ ಕ್ರಮಕ್ಕೂ ಅವರಾಡುವ ಭಾಷೆಗೂ ನಿಕಟ ಸಂಬಂಧವಿದೆಯೆಂದು ನಾವು ತಿಳಿದರೆ ಆಗ ನಿರಂತರವಾಗಿ ಬಳಕೆಯಾಗುತ್ತಿರುವ ಕನ್ನಡದ ಸ್ವರೂಪವನ್ನು ತಿಳಿಯುವುದಕ್ಕೆ ಅರ್ಥ ಬರುತ್ತದೆ. ಕನ್ನಡ ಮನಸ್ಸುಗಳು ಹೇಗೆ ಚಿಂತಿಸಿದವು ಎಂಬುದನ್ನು ತಿಳಿಯುವುದರಿಂದ, ಈಗ ನಮಗೂ ನಮ್ಮ ಕನ್ನಡಕ್ಕೂ ಇರುವ ಸಂಬಂಧದ ನೆಲೆಗಳನ್ನು ಕಂಡುಕೊಳ್ಳಲು ಸಾಧ್ಯವಾಗುತ್ತದೆ. ಹಾಗಾಗಿ ಕನ್ನಡದ ಹಳೆಯ ರೂಪಗಳನ್ನು ಕುರಿತು ಅಧ್ಯಯನ ಮಾಡುವುದು ಕೇವಲ ಪಾಂಡಿತ್ಯದ ಆಸಕ್ತಿ ಮಾತ್ರವಾಗಿ ಉಳಿಯಲಾರದು; ಉಳಿಯಬಾರದು.

ಹೊಸಗನ್ನಡ ಎದುರಿಸುತ್ತಿರುವ ಬಿಕ್ಕಟ್ಟುಗಳನ್ನು ಪರಿಹರಿಸಲು ನಾವೀಗ ಸನ್ನದ್ಧವಾಗಬೇಕಿದೆ. ಆಧುನಿಕಗೊಳ್ಳುವ ಹಂಬಲದಲ್ಲಿ ನಾವು ಕನ್ನಡವನ್ನು **ತೆಗೆದುಕೊಳ್ಳುವ** ಭಾಷೆಯಾಗಿ ರೂಪಿಸಿಕೊಂಡಿದ್ದೇವೆ. ಜಗತ್ತಿನಲ್ಲಿರುವ ಎಲ್ಲವೂ ಕನ್ನಡಕ್ಕೆ ಹರಿದು ಬರಲಿ ಎಂಬುದನ್ನು ಧ್ಯೇಯವಾಕ್ಯವೆಂಬಂತೆ ಆಚರಿಸುತ್ತಿದ್ದೇವೆ. ಇದರಿಂದ **ಕನ್ನಡಿಗರ ತಿಳುವಳಿಕೆ** ಹೆಚ್ಚಿದೆ ಎನ್ನುವುದೇನೋ ನಿಜ. ಆದರೆ ಅದು **ಕನ್ನಡದ ತಿಳುವಳಿಕೆಯಾಗಿಲ್ಲ**. ಹೊರ ಮೂಲಗಳಿಂದ ಹರಿದು ಬಂದದ್ದನ್ನು ನಮ್ಮದೆಂದು ತಿಳಿದು ನಡೆಯುತ್ತಿದ್ದೇವೆ. ಇದು ಕನ್ನಡ ಮತ್ತು ಇಂಗ್ಲಿಶ್ ಭಾಷೆಗಳ

ಮುಖಾಮುಖಿಯಲ್ಲಿ ಸಿದ್ಧಗೊಂಡಿರುವ ನೆಲೆಯಾಗಿದೆ. ಇಂಗ್ಲಿಶ್ **ಕೊಡುವ ಭಾಷೆಯಾಗಿಯೂ** ಕನ್ನಡ **ತೆಗೆದುಕೊಳ್ಳುವ** ಭಾಷೆಯಾಗಿಯೂ ಪಾತ್ರವನ್ನು ಹಂಚಿಕೊಂಡಿವೆ. ತೆಗೆದುಕೊಳ್ಳುವ ಭಾಷೆಯಾಗಿರುವ ಕನ್ನಡ ಅದಕ್ಕೆ ತಕ್ಕಂತೆ ತನ್ನ ರಚನೆಗಳನ್ನು ನುಡಿಗಟ್ಟುಗಳನ್ನು ರೂಪಿಸಿಕೊಂಡಿದೆ. ದುಃಖದ ಮಾತೆಂದರೆ ಇದೊಂದು ಅಪಾಯಕಾರಿ ಸ್ಥಿತಿ ಎಂದು ನಮಗೆ ಅನ್ನಿಸುತ್ತಲೇ ಇಲ್ಲ. ಕನ್ನಡ ತನಗೆ ವಹಿಸಲಾಗಿರುವ ಈ ಪಾತ್ರದ ಇಕ್ಕಟ್ಟಿನಿಂದ ಹೊರಬಂದು ತಾನೂ ಕೊಡುವ ಭಾಷೆಯಾಗಿ ಹೊಸಹುಟ್ಟನ್ನು ಪಡೆದುಕೊಳ್ಳಬೇಕಿದೆ.

ಹಾಗಿದ್ದರೆ ಏನು ಮಾಡಬೇಕು? ಕನ್ನಡದಲ್ಲಿ ಸ್ವತಂತ್ರ ಚಿಂತನೆಗಳು ಮೂಡುವುದು ಅಸಾಧ್ಯವೆಂಬ ನೆಲೆಯಲ್ಲಿ ನಿಂತಿರುವುದನ್ನು ಮೊದಲು ನಮ್ಮ ಅರಿವಿನ ಪರಿಧಿಗೆ ತಂದುಕೊಳ್ಳಬೇಕು; ಬಳಿಕ ಸ್ವತಂತ್ರ ಚಿಂತನೆಗಳು ಕನ್ನಡದಲ್ಲೂ ಮೂಡಿಬರಲು ಸಾಧ್ಯ ಎನ್ನುವುದನ್ನು ನಂಬಬೇಕು. ಹಾಗೆ ಮೂಡಲು ಅನುಕೂಲವಾಗುವ ತೆರದಲ್ಲಿ ನಮ್ಮ ಭಾಷೆಯನ್ನು ಬೆಳೆಸಬೇಕು. ಅದರ ನುಡಿಕಟ್ಟುಗಳನ್ನು ತಿದ್ದಬೇಕು. ಈ ನಿಟ್ಟಿನಲ್ಲಿ ನಮಗೆ ಕನ್ನಡದ ಹಿಂದಿನ ಪ್ರಭೇದಗಳಿಂದ ಪಡೆದುಕೊಳ್ಳುವುದು ಬೇಕಾದಷ್ಟಿದೆ. ಜೊತೆಗೆ ಕನ್ನಡದ ಇಂದಿನ ಪ್ರಭೇದಗಳಲ್ಲೂ ನಮಗೆ ಬೇಕಾದ ಸಾಮಗ್ರಿ ಅಡಕವಾಗಿದೆ. ಅದನ್ನು ಮರುಖನನ ಮಾಡುವತ್ತ ಯೋಜನೆಗಳನ್ನು ರೂಪಿಸಕೊಳ್ಳಬೇಕು. ನಾವಿನ್ನೂ ಕನ್ನಡದ ಅಂಚಿನ ಭಾಷೆಗಳಾದ ಸೋಲಿಗ, ಜೇನುಕುರುಬ, ಬಡಗ, ಆಲುಕುರುಂಬ, ಕಾಡು ಕುರುಂಬ, ಇರುಳ ಮುಂತಾದ ನುಡಿಗಳನ್ನು ಸರಿಯಾಗಿ ಅಧ್ಯಯನ ಮಾಡಿಲ್ಲ. ಈ ನುಡಿಗಳಲ್ಲಿ ಅಡಕಗೊಂಡಿರುವ ಲೋಕ ದೃಷ್ಟಿಯನ್ನು ಅನಾವರಣಗೊಳಿಸಿಕೊಂಡಿಲ್ಲ. ಇದೆಲ್ಲವನ್ನೂ ಈಗ ಕೈಗೆತ್ತಿಕೊಳ್ಳಬೇಕು. ಆಗ ಕನ್ನಡಕ್ಕೆ ಸ್ವಾಯತ್ತತೆ ಎನ್ನುವುದು ಸಹಜವಾಗಿಯೇ ಸಾಧ್ಯವಾಗುತ್ತದೆ. ಕನ್ನಡಕ್ಕೆ ಸಿಕ್ಕ ಈ ಹೊಸ ಗುರುತು ಈ ದಿಕ್ಕಿನತ್ತ ಕನ್ನಡವನ್ನು ಕರೆದೊಯ್ಯಬೇಕಿದೆ. ಇದೊಂದು ಚಾರಿತ್ರಿಕ ಅವಕಾಶ. ಇದರ ಸದುಪಯೋಗ ಆಗದಿದ್ದರೆ , ಈ ಅವಕಾಶವನ್ನು ಬಳಸಿ ಕನ್ನಡವನ್ನು ಇಪ್ಪತ್ತೊಂದನೆಯ ಶತಮಾನದ ಭಾಷೆಯನ್ನಾಗಿ ಕನ್ನಡಿಗರಿಗೆ ರೂಪಿಸಿಕೊಡದಿದ್ದರೆ, ಈ ಗುರುತು ಕೇವಲ ಸಾಂಕೇತಿಕವಾಗಿ ಬಿಡುವ ಅಪಾಯವಿದೆ.

# ಕನ್ನಡದ ಶುದ್ಧತೆ

ಕನ್ನಡದ ಉಳಿವಿನ ಬಗ್ಗೆ ಮಾತನಾಡುವವರು ಮಂಡಿಸುವ ವಾದಗಳಲ್ಲಿ ಹಲವು ಬಗೆಗಳಿವೆ. ಕನ್ನಡ ತನ್ನ ಶುದ್ಧತೆಯನ್ನು ಕಾಯ್ದುಕೊಳ್ಳುವುದು ಸಾಧ್ಯವಾಗುತ್ತಿಲ್ಲ ಎಂಬ ಆತಂಕ ಈ ವಾದಗಳಲ್ಲಿ ಒಂದಾಗಿದೆ. ಶುದ್ಧಕನ್ನಡ ಎಂದರೇನು? ಅಶುದ್ಧತೆಯನ್ನು ನಾವು ಎಲ್ಲಿ ಗುರುತಿಸುತ್ತಿದ್ದೇವೆ? 1) ಕಾಗುಣಿತ ದೋಷಗಳಿರುವ ಕನ್ನಡ. ಇದು ಬರವಣಿಗೆಗೆ ಸಂಬಂಧಿಸಿದ್ದು.(2)ಉಚ್ಚಾರಣಾ ದೋಷಗಳಿರುವ ಕನ್ನಡ. ಇದು ಮಾತಿಗೆ ಸಂಬಂಧಿಸಿದ್ದು. ಇಲ್ಲಿ ಅ) ಮಹಾಪ್ರಾಣಗಳನ್ನು ತಕ್ಕ ಕಡೆಗಳಲ್ಲಿ ಬಳಸದಿರುವುದು; ಆ) ಸ,ಶ ಮತ್ತು ಷ ಗಳ ಬಳಕೆಯಲ್ಲಿ ಏರುಪೇರಾಗುವುದು ಮತ್ತು ಇ) ಪದದ ಮೊದಲಿನ ಹಕಾರದ ಬದಲು ಅಕಾರವನ್ನು ಉಚ್ಚರಿಸುವುದು. ಈ ಮೂರು ನೆಲೆಗಳನ್ನು ಸಾಮಾನ್ಯವಾಗಿ ಬಳಸಲಾಗುತ್ತದೆ. ಇದಲ್ಲದೆ ವಾಕ್ಯರಚನೆಯ ನಿಯಮಗಳನ್ನು ಸರಿಯಾಗಿ ಪಾಲಿಸದಿರುವ ಕನ್ನಡ ಬರವಣಿಗೆಯನ್ನು ಕೂಡ ಅಶುದ್ಧಕನ್ನಡವೆಂದು ಗುರುತಿಸುವುದುಂಟು. ಇದು ಬಹುಪಾಲು ಶಾಲಾಕಾಲೇಜುಗಳ ಶಿಕ್ಷಕರ ಕಾಳಜಿಯಂತೆ ತೋರುತ್ತದೆ. ಮತ್ತೆ ಕೆಲವೊಮ್ಮೆ ವಾಕ್ಯಗಳಲ್ಲಿ ಸೂಕ್ತ ಪದಗಳನ್ನು ಆಯ್ಕೆ ಮಾಡದಿರುವುದು. ಹಾಗೆ ಆಯ್ಕೆ ಮಾಡಿಕೊಂಡ ಪದಗಳ ಅರ್ಥವನ್ನು ಸರಿಯಾಗಿ ಗ್ರಹಿಸಿ ಬಳಸದಿರುವುದು. ಅನ್ಯಭಾಷಾ ಪದಗಳನ್ನು (ಅದರಲ್ಲೂ ಮುಖ್ಯವಾಗಿ ಇಂಗ್ಲಿಶ್ ಪದಗಳನ್ನು) ಬೆರಸಿ ಮಾತನಾಡುವುದು. ಬರೆಯುವುದು ದೋಷಪೂರ್ಣವಾಗಿ ಹಲವರಿಗೆ ತೋರುತ್ತದೆ. ಆದರೆ ಈಗ ಬರವಣಿಗೆಯಲ್ಲಿ ಹೆಚ್ಚಾಗಿ ಕಾಣುತ್ತಿರುವ ಇನ್ನೊಂದು ಬಗೆಯ ಕನ್ನಡ ಬಳಕೆ ಸಾಮಾನ್ಯವಾಗಿ ಗಮನಕ್ಕೆ ಬಾರದೇ ಹೋಗುತ್ತಿದೆ. ಕನ್ನಡದ ನುಡಿಗಟ್ಟುಗಳ ಬಳಕೆಯಲ್ಲಿ ಈಚೆಗೆ ಸಾಕಷ್ಟು ಅಪಪ್ರಯೋಗಗಳು ಕಾಣುತ್ತಿವೆ. ನುಡಿಗಟ್ಟುಗಳಲ್ಲಿ ಪದಗಳಿಗೆ ಇರುವ ಸಾಮಾನ್ಯ ಬಳಕೆಯ ಅರ್ಥಗಳಿಗಿಂತ ಭಿನ್ನವಾದ ಅರ್ಥವೊಂದು ರೂಢಿಯಲ್ಲಿ ಇರುತ್ತದೆ. ನಿಘಂಟುಗಳಲ್ಲಿ ನುಡಿಗಟ್ಟಿನಲ್ಲಿನ ಪದಗಳಿಗೆ ಇರುವ ಅರ್ಥವನ್ನು ಜೋಡಿಸಿಕೊಳ್ಳುವುದರಿಂದ ನುಡಿಗಟ್ಟಿನ ಅರ್ಥ ನಮಗೆ ದೊರಕುವುದಿಲ್ಲ. ಉದಾಹರಣೆ 'ಕಣ್ಣಿಗೆ ಮಣ್ಣೆರಚು' ಎಂದಾಗ ನಿಜವಾಗಿ ಕಣ್ಣು ,ಮಣ್ಣು ಮತ್ತು ಎರಚು ಎಂಬ ಪದಗಳ ಅರ್ಥಗಳ ಮೊತ್ತದಿಂದ ನಮಗೆ ಆ ನುಡಿಗಟ್ಟಿನ ಅರ್ಥ (=ಗೊತ್ತಾಗದಂತೆ ಮೋಸ ಮಾಡು)ತಿಳಿಯುವುದಿಲ್ಲ. ಅಗಾಧ ಪ್ರಮಾಣದಲ್ಲಿ ಕನ್ನಡವನ್ನು ಕೇಳುವ ಮತ್ತು ಓದುವ ಮೂಲಕ ಮಾತ್ರ ನುಡಿಗಟ್ಟುಗಳ ಅರ್ಥ ನಮಗೆ ಗೊತ್ತಾಗುವುದು

ಸಾಧ್ಯ. ಆದರೆ ಈಗ ಇವೆರಡೂ ಇಲ್ಲವಾಗುತ್ತಿವೆ ಅಥವಾ ಕಡಿಮೆಯಾಗುತ್ತಿವೆ. ಇದರಿಂದ ನಮ್ಮ ಕನ್ನಡದಲ್ಲಿ ನುಡಿಗಟ್ಟುಗಳು ಮಾಯವಾಗುತ್ತಿವೆ ಅಥವಾ ತಪ್ಪು ಅರ್ಥದಲ್ಲಿ ಬಳಕೆಯಾಗುತ್ತಿವೆ. ಈ ಅಪಪ್ರಯೋಗಗಳು ಅನ್ಯಭಾಷೆಯ ನುಡಿಗಟ್ಟುಗಳನ್ನು ಕನ್ನಡಕ್ಕೆ ಅನುವಾದಿಸಿಕೊಳ್ಳುವಾಗ ಕೂಡ ಉಂಟಾಗುತ್ತಿವೆ. ಪದಗಳ ನಿಘಂಟಿನ ಅರ್ಥಕ್ಕೆ ಸೀಮಿತಗೊಳಿಸಿಕೊಳ್ಳುವ ಪ್ರವೃತ್ತಿ ಕಾಣುತ್ತದೆ. ಇಂತಹ ಕೆಲವು ನಿದರ್ಶನಗಳನ್ನು ಮುಂದೆ ಚರ್ಚಿಸಿದ್ದೇನೆ.

ಈಚೆಗೆ ಪತ್ರಿಕೆಯೊಂದರಲ್ಲಿ ಕಂಡು ಬಂದ ಸಾಲು ಹೀಗಿತ್ತು. 'ತಿಂಗಳಾದರೂ ಕೈಗೆಟುಕದ ಪಠ್ಯಪುಸ್ತಕಗಳು' ಈ ವಾಕ್ಯ ಬರೆದವರಿಗೆ ಪಠ್ಯಪುಸ್ತಕಗಳು ಪೇಟೆಯಲ್ಲಿ ದಿನಗಳುರುಳಿದರೂ ದೊರೆಯುತ್ತಿಲ್ಲ ಎಂದು ಹೇಳಬೇಕಿದೆ. ಆದರೆ 'ಕೈಗೆಟುಕದ' ಎಂಬ ನುಡಿಗಟ್ಟನ್ನು 'ಕೈಗೆಬಾರದ' ಎಂಬುದಕ್ಕೆ ಬದಲಾಗಿ ಬಳಸಿದ್ದಾರೆ. ಇದ್ದರೂ ದೊರಕದಂತಹ ಸ್ಥಿತಿಯನ್ನು ಬಣ್ಣಿಸುವಾಗ 'ಕೈಗೆಟುಕದ' ಎನ್ನುತ್ತೇವೆ. ನಮಗೆ ಬೇಕಾದದ್ದು ಕಣ್ಣಿಗೆ ಕಾಣದಂತಿದ್ದಾಗ ಈ ನುಡಿಗಟ್ಟನ್ನು ಬಳಸಲು ಬರುವುದಿಲ್ಲ. ಇಂತಹ ಪ್ರಯೋಗಗಳು ಅಪರೂಪವೇನಲ್ಲ. ಮತ್ತೊಂದನ್ನು ನೋಡಿ. 'ಹೊಳೆನರಸೀಪುರದ ಸಾರಾಯಿ ದುರಂತದ ನೆನಪು ಹಸಿರಾಗಿರುವಾಗಲೇ ಇನ್ನೊಂದು ಅಂತಹುದೇ ದುರಂತದಲ್ಲಿ ನಾಲ್ವರ ಸಾವು ಸಂಭವಿಸಿದೆ.' ಇದು ವರದಿಯೊಂದರಲ್ಲಿ ಕಾಣಿಸಿದ ವಾಕ್ಯ. ಇಲ್ಲಿ ನೆನಪು 'ಹಸಿರಾಗಿರುವ' ಮಾತಿದೆ. ಹಿತವಾದ ನೆನಪುಗಳ ಸಂಬಂಧದಲ್ಲಿ ಹೀಗೆ ಹಸಿರಾಗಿರುವ ನೆನಪಿನ ಮಾತನ್ನಾಡುತ್ತೇವೆ. ಈ ವಾಕ್ಯವನ್ನು ನೋಡಿ. 'ಚಿಕ್ಕಂದಿನ ಆ ದಿನಗಳ ಒಡನಾಟವಿನ್ನೂ ಮನಸ್ಸಿನಲ್ಲಿ ಹಸಿರಾಗಿದೆ.' ಆದರೆ ಅಹಿತಕಾರಿಯಾದ, ಬೇಸರ, ಖಿನ್ನತೆಗಳನ್ನುಂಟುಮಾಡುವ ನೆನಪುಗಳನ್ನು ಕುರಿತು ಮಾತನಾಡುವಾಗ "ಹಸಿರು" ಎಂಬ ಮಾತನ್ನು ಸಾಮಾನ್ಯವಾಗಿ ಬಳಸುವುದಿಲ್ಲ. ಇಂತಹ ಕಡೆಗಳಲ್ಲಿ ಮಾಯದ ಗಾಯ, ಆರದ ಗಾಯ ಎಂಬಿತ್ಯಾದಿ ಮಾತುಗಳನ್ನು ಬಳಸುತ್ತೇವೆ. ಇಂತಹುದೇ ಇನ್ನೊಂದು ಪ್ರಯೋಗ. ಪತ್ರಿಕೆಯೊಂದರಲ್ಲಿ ಸುಂದರವಾದ ಭೂದೃಶ್ಯವೊಂದಕ್ಕೆ ನೀಡಿದ ಶೀರ್ಷಿಕೆ: 'ಕಡಲ ತೀರದ ವಿಹಂಗಮ ನೋಟ'. ನೆಲದಿಂದ ಎತ್ತರಕ್ಕೆ ಸಾಗಿ ಅಲ್ಲಿಂದ ಕಂಡ ನೋಟವನ್ನು 'ವಿಹಂಗಮ ನೋಟ', 'ಪಕ್ಷಿ/ಹಕ್ಕಿ ನೋಟ' (ಸಂಕ್ಷಿಪ್ತ ಆವೃತ್ತಿಯೆಂಬ ಅರ್ಥ ಕೂಡ ಈ ರಚನೆಗೆ ಇದೆ) ಎನ್ನುತ್ತೇವೆ. ನೆಲದ ಮೇಲೇ ನಿಂತು ತೆಗೆದ ಚಿತ್ರವನ್ನು 'ವಿಹಂಗಮ' ಎನ್ನುವುದು ಹೇಗೆ?

ಅನ್ಯ ಭಾಷೆಗಳಿಂದ ನುಡಿಗಟ್ಟುಗಳನ್ನು ಪಡೆದುಕೊಳ್ಳುವಾಗ ಆಗುವ ತೊಡರುಗಳು ಹಲವಿವೆ.' ನಾಯಕರು ಮುಚ್ಚಿದ ಬಾಗಿಲುಗಳ ಹಿಂದೆ ಎರಡು ಗಂಟೆ ಚರ್ಚಿಸಿದರು' ಎನ್ನುವ ವಾಕ್ಯವನ್ನು ಗಮನಿಸಿ. ಇಲ್ಲಿ 'ಮುಚ್ಚಿದ ಬಾಗಿಲ ಹಿಂದೆ' ಎನ್ನುವುದು 'ಬಿಹೈಂಡ್ ಕ್ಲೋಸ್ಡ್ ಡೋರ್ಸ್' ಎನ್ನುವ ರಚನೆಯ ಕನ್ನಡಾನುವಾದ. ಪ್ರತ್ಯೇಕವಾಗಿ, ರಹಸ್ಯವಾಗಿ ಎನ್ನುವ ಅರ್ಥದ ಬದಲಿಗೆ ಪದಾನುಸಾರಿಯಾಗಿ ಅನುವಾದಿಸಿದ್ದರ

ಪರಿಣಾಮವಿದು. ನಾಯಕರ ನಡುವಣ ಎಲ್ಲ ಚರ್ಚೆಗಳೂ ಮುಚ್ಚಿದ ಬಾಗಿಲುಗಳ ಹಿಂದೆಯೇ ನಡೆಯುತ್ತವೆಯಲ್ಲವೇ? ಇನ್ನೊವೃ ಪತ್ರಿಕೆಯೊಂದರಲ್ಲಿ ಶ್ರೇಷ್ಠ ಕ್ರೀಡಾಪಟುವೊಬ್ಬರನ್ನು ಪರಿಚಯಿಸುತ್ತಾ ಅವರು' 'ಎಲ್ಲ ನಿಟ್ಟಿನಿಂದಲೂ ಹೊರಗೆ ನಿಲ್ಲುವ ಆಟಗಾರ' ಎಂದು ಬಣ್ಣಿಸಲಾಗಿತ್ತು. ವಿಶಿಷ್ಟ, ಎದ್ದುಕಾಣುವ ಎಂಬ ಅರ್ಥ ನೀಡುವ 'ಔಟ್ ಸ್ಟ್ಯಾಂಡಿಂಗ್' ಎಂಬ ಮಾತನ್ನು ಕನ್ನಡದಲ್ಲಿ 'ಹೊರಗೆ ನಿಲ್ಲುವ' ಎಂದು ಈ ವಾಕ್ಯದಲ್ಲಿ ವಿವರಿಸಲಾಗಿತ್ತು.

ಪದಗಳ ಅರ್ಥದಲ್ಲಿ ಉಂಟಾಗುವ ಗೊಂದಲದ ಕೆಲವು ನಿದರ್ಶನಗಳನ್ನು ನೋಡೋಣ. 'ದಳದಲ್ಲಿನ ಭಿನ್ನಮತ ತಾರಕಕ್ಕೆ' ಎನ್ನುವ ವರದಿಯ ತಲೆಬರಹವನ್ನು ಓದಿದಾಗ 'ತಾರಕ' ಎಂಬ ಪದಕ್ಕೆ ತೀವ್ರ ಎಂಬ ಅರ್ಥವಿರುವುದೆಂದು ಗ್ರಹಿಸಬೇಕಾಗುತ್ತದೆ. ವಾಸ್ತವವಾಗಿ ತಾರಕ ಎನ್ನುವ ಪದವನ್ನು ಸದ್ದು ಜೋರಾಗುವುದನ್ನು ಸೂಚಿಸಲು ಬಳಸುತ್ತೇವೆ. ಈ ಬಳಕೆಗೂ ಬಹಳ ಹಳೆಯ ಚರಿತ್ರೆ ಇಲ್ಲ. ಇದು ನಿಜವಾಗಿ ತಾರ (ಇದು ಸಂಗೀತಕ್ಕೆ ಸಂಬಂಧಿಸಿದ ಪದ) ಎಂದಿರಬೇಕು. ತೀರ ಈಚೆಗೆ ತಾರ ಎನ್ನುವ ಬದಲು ತಾರಕ ಎಂದು ಬಳಸುವ ಪ್ರವೃತ್ತಿ ಹೆಚ್ಚಾಗಿದೆ. ಯಾವುದೇ ಸಂಗತಿ ಹೆಚ್ಚು ತೀವ್ರಗೊಂಡಿದೆ ಎಂದು ಬಣ್ಣಿಸಬೇಕಾದಾಗ ಈ ಪದಕ್ಕೆ ಮೊರೆ ಹೋಗುವುದುಂಟು. 'ಗೈರು' ಎನ್ನುವುದು ಇಂತಹುದೇ ಇನ್ನೊಂದು ಪದ. ಇದು ಪರ್ಸೋ ಅರಾಬಿಕ್ ಮೂಲದ ಪದ. ಕನ್ನಡದಲ್ಲಿ ಇದು ಬಿಡಿಯಾಗಿ ಬಳಕೆಯಾದಾಗ 'ತಪ್ಪು' ಎನ್ನುವ ಅರ್ಥವನ್ನು ನೀಡುತ್ತದೆ. ಉಳಿದಂತೆ 'ಗೈರು ಹಾಜರ್', 'ಗೈರುವಿಲೆ' ಮುಂತಾದ ರಚನೆಗಳಲ್ಲಿ ಮಾತ್ರ ಕಾಣಸಿಗುತ್ತದೆ. 'ಜಿಲ್ಲಾ ಪಂಚಾಯತಿ ಸಭೆಗೆ ಅಧಿಕಾರಿಗಳ ಗೈರು' ಎನ್ನುವ ರಚನೆಯಲ್ಲಿ ನಿಜವಾಗಿ ಗೈರುಹಾಜರ್ ಎಂಬ ರೂಪ ಬಳಕೆಯಾಗಬೇಕಿತ್ತು. ಸಂಕ್ಷಿಪ್ತಗೊಳಿಸುವ ಭರದಲ್ಲಿ ಅರ್ಥವಿರದ ರಚನೆಯೊಂದು ಸಿದ್ಧವಾಗಿದೆ. ಈ ಬಗೆಯ ಬಳಕೆಯಂತೂ ಹೆಚ್ಚಿನ ಪ್ರಮಾಣದಲ್ಲಿ ಕಾಣಸಿಗುತ್ತಿದೆ.

ಹೀಗೆ ನುಡಿಗಟ್ಟುಗಳನ್ನು ಸರಿಯಾಗಿ ಬಳಸದಿರುವುದು, ಸರಿಯಾದ ಅರ್ಥದಲ್ಲಿ ಪದಗಳನ್ನು ಬಳಸದಿರುವುದು ಅಕಸ್ಮಾತ್ ಆಗುತ್ತಿರುವ ಪ್ರಮಾದಗಳಲ್ಲ. ದಿನವೂ ಇಂತಹ ಪ್ರಯೋಗಗಳು ನಮಗೆ ಎದುರಾಗುತ್ತಿವೆ. ಹೀಗಿರುವಾಗ ಈ ಪ್ರಯೋಗಗಳಿಗೆ ಅಥವಾ ಕನ್ನಡದ ಅಪ್ರಬುದ್ಧ ಬಳಕೆಗೆ ಕಾರಣಗಳನ್ನು ಹುಡಕಬೇಕೋ ಅಥವಾ ಇಂತಹ ಪ್ರಯೋಗಗಳ ಪರಿಣಾಮವನ್ನು ಕುರಿತು ಚಿಂತಿಸಬೇಕೋ ಎನ್ನುವುದು ಮುಖ್ಯ ಪ್ರಶ್ನೆಯಾಗಿದೆ. ಬಹುಶಃ ಇವೆರಡೂ ರೀತಿಯ ಚಿಂತನೆಗಳು ಅಗತ್ಯ. ಕಾರಣಗಳನ್ನು ಹುಡುಕುವ ಮೂಲಕ ದೂರಗಾಮಿಯಾದ ಬದಲಾವಣೆಗಳನ್ನು ತರಲು ಸಾಧ್ಯ. ಪರಿಣಾಮಗಳನ್ನು ಗಮನಿಸುವ ಮೂಲಕ ಬಳಕೆಯಲ್ಲಿ ಎಚ್ಚರವನ್ನು ತರಲು ಸಾಧ್ಯವಾದೀತು.

ಕೊನೆಗೊಂದು ಮಾತು: ಕೆಲವು ತಿಂಗಳುಗಳ ಹಿಂದೆ ಅಮೆರಿಕಾದ ಮಾಜಿ ಅಧ್ಯಕ್ಷ ಬಿಲ್ ಕ್ಲಿಂಟನ್ ಅವರಿಗೆ ಹೃದಯಕ್ಕೆ ಸಂಬಂಧಿಸಿದ ಚಿಕಿತ್ಸೆ ನಡೆಯಿತಷ್ಟೆ.

ಆಗೊಂದು ವರದಿಯಲ್ಲಿ ಅವರಿಗೆ 'ಆತುರಾತುರವಾಗಿ ತಿನ್ನುವ ಅಭ್ಯಾಸ' ಇದ್ದುದರಿಂದ ಹೀಗೆ ಹೃದಯಕ್ಕೆ ಈ ತೊಂದರೆಯಾಗಿದೆಯೆಂದು ಹೇಳಲಾಗಿತ್ತು. ಇದಂತೂ ವಿಚಿತ್ರವಾಗಿತ್ತು; ಏನೂ ಅರ್ಥವಾಗುವಂತಿರಲಿಲ್ಲ. ಚೇತರಿಸಿಕೊಂಡ ಅನಂತರ ಕ್ಲಿಂಟನ್ ಅವರು ಅಮೆರಿಕಾದ ಜನತೆಯಲ್ಲಿ ಫ಼ಾಸ್ಟ್ ಫುಡ್ (ಕೆಲವರು ಇದನ್ನು ದಿಢೀರ್ ತಿಂಡಿ/ಆಹಾರ ಎನ್ನುತ್ತಾರೆ) ಗಳ ಬಗ್ಗೆ ಇರುವ ಅತಿವ್ಯಾಮೋಹದ ವಿರುದ್ಧ ಚಳುವಳಿ ಆರಂಭಿಸುವುದಾಗಿ ಹೇಳಿದರು. ಆಗ ಮಾತ್ರ ಮೊದಲ ವರದಿ ಎಲ್ಲಿ ಎಡವಿತ್ತು ಎನ್ನುವುದು ಗೊತ್ತಾಯಿತು: 'ಫ಼ಾಸ್ಟ್ ಫುಡ್ ಈಟಿಂಗ್' ಎಂಬ ಇಂಗ್ಲಿಷ್ ರಚನೆ ಕನ್ನಡದಲ್ಲಿ 'ಆತುರಾತುರವಾಗಿ ತಿನ್ನುವುದು' ಎಂದು ವರದಿಯಲ್ಲಿ ಅನುವಾದವಾಗಿತ್ತು.

# ಕನ್ನಡ: ಮುಂದೇನು?

ಕನ್ನಡ ಹಿಂದೆ ಹೇಗಿತ್ತು, ಇಂದು ಹೇಗಿದೆ ಎಂಬುದನ್ನು ಕುರಿತು ಮಾತಾಡುವಾಗಲೇ ಅದು ನಾಳೆ ಹೇಗೆ ಇರುತ್ತದೆ ಎನ್ನುವುದನ್ನೂ ಗಮನಿಸಬೇಕು. ಇಲ್ಲದಿದ್ದರೆ ತಕ್ಕ ಸಿದ್ಧತೆ ಇಲ್ಲದೆ ಓಡಲು ಹೋಗಿ ಮುಗ್ಗುರಿಸಿದ ಅನುಭವ ಆಗುವುದು ಖಂಡಿತ. ಭಾಷೆಗಳು ತಂತಾವೇ ಒಂದು ಹಾದಿ ಹಿಡಿದು ಮುನ್ನಡೆಯುತ್ತಿರುತ್ತವೆ ಎನ್ನುವುದು ನಿಜ. ಹೀಗಿದ್ದರೂ ಶ್ರೀವಿಜಯನ ಕಾಲದಿಂದಲೂ ಕನ್ನಡದ ಬಳಕೆ ಹೇಗಿರಬೇಕು ಎಂದು ಯೋಚಿಸಿದ್ದೇಕೆ ಎನ್ನುವುದನ್ನು ಕೂಡ ಒಂದು ಮುಖ್ಯ ವಿಷಯವಾಗಿ ಪರಿಗಣಿಸಬೇಕು. ಆತ  ಕನ್ನಡ ಮತ್ತು ಸಂಸ್ಕೃತಗಳ ಬೆರಕೆಯ ಮಾದರಿಯನ್ನು ವಿವರಿಸಿದ್ದರ ಹಿನ್ನೆಲೆಯಲ್ಲಿ ಗಮನಿಸಿದರೆ, ಭಾಷೆಯ ಬೆಳವಣಿಗೆಯನ್ನು ಹೊರಗಿನಿಂದ ನಿಯಂತ್ರಿಸುವುದು ಅಗತ್ಯವೆಂಬುದು ಗೊತ್ತಾಗುತ್ತದೆ. ಹೀಗೆ ಮಾಡುವ ಮೊದಲು ನಮಗೆ ಇರುವ ಆಯ್ಕೆಗಳೇನು ಎನ್ನುವುದನ್ನು ಮೊದಲು  ಗಮನಿಸಬೇಕು.

ಜನಸಂಖ್ಯೆಯ ಹೆಚ್ಚಳದೊಂದಿಗೆ ಕನ್ನಡವನ್ನು ಮೊದಲ ಭಾಷೆಯನ್ನಾಗಿ ಹೊಂದಿರುವವರ ಸಂಖ್ಯೆಯೂ ಸಹಜವಾಗಿಯೇ ಹೆಚ್ಚಾಗುತ್ತಿದೆ. ಆದರೆ ಭಾಷಿಕರ ಸಂಖ್ಯೆ ಹೆಚ್ಚಾದ ಹಾಗೆ ಭಾಷೆಯ ಬಳಕೆಯ ವ್ಯಾಪ್ತಿ ಹೆಚ್ಚುತ್ತದೆ ಎನ್ನುವಂತಿಲ್ಲ. ಏಕೆಂದು ನೋಡೋಣ. ಭಾಷೆಗೆ ವ್ಯಕ್ತಿಗತ ಬಳಕೆ ಇರುವಂತೆ ಸಾಮುದಾಯಿಕ ಬಳಕೆಯೂ ಇರುತ್ತದೆ. ಒಂದು ಸಂದರ್ಭದಲ್ಲಿ ನಾನು ಕನ್ನಡವನ್ನು ಬಳಸಬೇಕೋ ಬೇಡವೋ ಎಂಬ ಆಯ್ಕೆಯನ್ನು ನಾನೇ ಮಾಡಬಹುದು. ಇದರ ಹಿಂದೆಯೂ ಕೆಲವು ಸಾಮುದಾಯಿಕ ಒತ್ತಡಗಳು ಇರುತ್ತವೆಯಾದರೂ, ಇಂತಹ ಕಡೆಗಳಲ್ಲಿ ಆಯ್ಕೆಗೆ ಅವಕಾಶವಿರುವುದಂತೂ ದಿಟ. ಶಿಕ್ಷಣ, ಮಾಧ್ಯಮ, ಆಡಳಿತ, ನ್ಯಾಯಾಂಗ ಮುಂತಾದ ಕಡೆಗಳಲ್ಲಿ ಯಾವ ಭಾಷೆ ಬಳಕೆಯಾಗಬೇಕು ಎಂಬುದು ಸಾಮುದಾಯಿಕ ಆಯ್ಕೆಯಾಗಿರುತ್ತದೆ. ಇಂತಹ ಕಡೆಗಳಲ್ಲಿ ವ್ಯಕ್ತಿಗಳಿಗೆ ತಮ್ಮ ಆಯ್ಕೆಯ ಭಾಷೆಯನ್ನು ಆಯ್ದುಕೊಳ್ಳುವ  ಅವಕಾಶ  ಇರುವುದಿಲ್ಲ.

ಹೀಗಿರುವಾಗ ಭಾಷೆಯ ಮುಂದಿನ ದಿನಗಳು ಒಂದು ಯೋಜಿತ ರೀತಿಯಲ್ಲಿ ನಡೆಯದಿದ್ದರೆ, ಸಾಮುದಾಯಿಕ ನೆಲೆಯಲ್ಲಿ ನಾವು ಬಯಸಿದ ಹಾದಿಯಲ್ಲಿ ಸಾಗುವುದಿಲ್ಲ. ಮತ್ತು ವೈಯಕ್ತಿಕ ನೆಲೆಯಲ್ಲಿ ಕನ್ನಡದ ಬಳಕೆಯು ಎಲ್ಲ ವಲಯಗಳಲ್ಲೂ ಆಗಬೇಕಾದರೆ ಅದಕ್ಕೆ ತಕ್ಕ ವಾತಾವರಣವನ್ನು  ಕಟ್ಟಿಕೊಡಬೇಕಾಗಿ ಬರುತ್ತದೆ. ಇಲ್ಲದಿದ್ದರೆ ಕನ್ನಡದ

ಬಳಕೆಯ ವಲಯಗಳು ಕುಗ್ಗುತ್ತಲೇ ಹೋಗುತ್ತವೆ. ಇಲ್ಲವೇ ಈಗಿರುವ ಕುಗ್ಗಿದ ಬಳಕೆಯ ಪರಿಸ್ಥಿತಿಯನ್ನೇ ಕನ್ನಡದ ಸಮೃದ್ಧ ಸ್ಥಿತಿ ಎಂದು ನಂಬಿಕೊಂಡು ಕೂರಬೇಕಾಗುತ್ತದೆ. ಈಗ ಏನಾಗಿದೆ ಎನ್ನುವುದನ್ನು ಕೊಂಚ ವಿವರವಾಗಿ ನೋಡೋಣ.

ಈಗ ಕನ್ನಡದ ಭವಿಷ್ಯದ ಬಗೆಗೆ ಮಾತಾಡದವರೇ ಪಾಪಿಗಳು. ಎಲ್ಲರಿಗೂ ಕನ್ನಡದ ನಾಳೆಗಳು ಹೇಗಿರುತ್ತವೆಂದು ಹೇಳಲು ಕೆಲವಾದರೂ ಮಾತುಗಳಿರುತ್ತವೆ. ಕೆಲವರು ಎಲ್ಲ ಮುಗಿದು ಹೋದ ದನಿಯಲ್ಲಿ ಮಾತಾಡಿದರೆ, ಮತ್ತೆ ಕೆಲವರು ಈ ಪರಿಸ್ಥಿತಿಯಿಂದ ಹೊರಬರಲು ಇರುವ ಹಾದಿಗಳನ್ನು ಕಾಣಿಸುವ ಹಂಬಲವನ್ನು ತೋರಿಸುತ್ತಾರೆ. ಕನ್ನಡದಂತಹ ಭಾಷೆಗೆ ಎಂದೂ ಅಳಿಗಾಲವಿಲ್ಲವೆಂದೂ, ಇಷ್ಟು ಪ್ರಾಚೀನವೂ ಸಂಪದ್ಭರಿತವೂ ಆದ ಭಾಷೆಗೆ ಅಳಿಗಾಲವಿರಲಾರದೆಂದೂ ವಾದಿಸುವರಿದ್ದಾರೆ. ದಿಟ; ಕನ್ನಡ ಅಳಿಯಲಾರದು. ಆದರೆ ಉಳಿದುಕೊಂಡರೂ ಅದು ಹೇಗೆ ಉಳಿದಿರಬೇಕು ಎಂದು ಯೋಚಿಸಬೇಕಿದೆ. ಈಗ ಇರುವಂತೆಯೇ ಬಿಟ್ಟರೆ ಕನ್ನಡ ನಮ್ಮ ಕಿವಿಗೆ ಬೀಳುವ ಭಾಷೆಯಾಗಿ ಉಳಿದುಕೊಳ್ಳುವುದರಲ್ಲಿ ಸಂದೇಹ ಬೇಡ. ಅಂದರೆ ಜನರು ತಮ್ಮ ಅನೌಪಚಾರಿಕ ಬಳಕೆಗಳಲ್ಲಿ ಕನ್ನಡವನ್ನು ಉಳಿಸಿಕೊಳ್ಳುತ್ತಾರೆ.

ಮಾತಿನ ರೂಪದ ಕನ್ನಡ ಈಗ ಹಿಂದೆಂದಿಗಿಂತಲೂ ಹೆಚ್ಚಾಗಿ ಬಳಕೆಯಾಗುತ್ತಿದೆ. ಕಳೆದ ಹತ್ತು ವರುಷಗಳಿಂದೀಚೆಗೆ ಕನ್ನಡ ಟಿವಿ ವಾಹಿನಿಗಳ ಸಂಖ್ಯೆ ಬೆಳೆದಿದೆ. ದಿನದ ಇಪ್ಪತ್ತು ನಾಲ್ಕು ಘಂಟೆ ಕಾಲವೂ ಕನ್ನಡ ಮಾತಿನ ವಿವಿಧ ಬಗೆಗಳು ಸಿದ್ಧಗೊಳ್ಳಬೇಕಿದೆ. ಕೇಳುವ ಕಿವಿಗಳಿಗೆ ಕನ್ನಡವನ್ನು ಕೇಳಿಸಿಕೊಳ್ಳಲು ಅದೀಗ ಯಾವಾಗ ಎಲ್ಲಿ ಬೇಕಾದರೂ ದೊರಕುತ್ತಿದೆ. ಜನರು ಕನ್ನಡವನ್ನು ಕೇಳಿ ಮರೆಯಲು ಈಗ ಹೆಚ್ಚು ಹೆಚ್ಚು ಸಿದ್ಧರಾಗುತ್ತಿದ್ದಾರೆ. ಹಾಸ್ಯ ಕಾರ್ಯಕ್ರಮಗಳಿಗೆ ಜನ ಸೇರುವುದನ್ನು ಒಂದು ಉದಾಹರಣೆಯನ್ನಾಗಿ ನೋಡಬಹುದು. ಅಲ್ಲಿ ಕನ್ನಡ ಕೇಳಿ ಬಂದರೂ ಅದು ಕೇಳಿ ಮರೆಯುವ ಕನ್ನಡ. ಇಲ್ಲದಿದ್ದರೆ ಮತ್ತೆ ಮತ್ತೆ ಅಂತಹುದೇ ಕಾರ್ಯಕ್ರಮಗಳಿಗೆ ಜನರು ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಸೇರುವುದು ಸಾಧ್ಯವಾಗುವುದಿಲ್ಲ.

ಇದು ಕನ್ನಡ ಸಂಸ್ಕೃತಿಯಲ್ಲಿ ಕನ್ನಡ ಪಡೆದುಕೊಳ್ಳುತ್ತಿರುವ ಸ್ಥಾನದ ಸ್ವರೂಪವನ್ನು ತಿಳಿಸುವಂತಿದೆ. ಕನ್ನಡವೀಗ ಕಿವಿಯ ಭಾಷೆಯಾಗುತ್ತಿರುವುದರಿಂದ ಲೋಕವನ್ನು ಒಳಗೆ ಪಡೆದುಕೊಳ್ಳಲು ಈ ಭಾಷೆಯನ್ನು ಕನ್ನಡಿಗರು ಆಶ್ರಯಿಸುತ್ತಿದ್ದಾರೆ. ಆದರೆ ಹಾಗೆ ಪಡೆದುಕೊಂಡ ಲೋಕಕ್ಕೆ ನಿರಂತರತೆ ಇಲ್ಲ. ಹೀಗೆ ಬಂದು ಹಾಗೆ ಮಾಯವಾಗುವ ಅನುಭವ ಸರಣಿಯಂತೆ ಇದು ಕಾಣುತ್ತಿದೆ. ಇಲ್ಲಿಯೂ ಕನ್ನಡದ ನುಡಿಗಟ್ಟುಗಳು ,ಮಾತಿನ ವರಸೆಗಳು, ನುಡಿಯ ಬಗೆಗಳು ಎಷ್ಟು ಜಾಗ ಪಡೆದುಕೊಳ್ಳುತ್ತಿವೆ ಎನ್ನುವುದನ್ನು ಮತ್ತಷ್ಟು ವಿವರವಾಗಿ ನೋಡಬೇಕಿದೆ. ಕನ್ನಡವನ್ನು ಕೇಳಿಸುವ ಇನ್ನೊಂದು ಮಾಧ್ಯಮವಾದ ಚಲನಚಿತ್ರವನ್ನೇ ನೋಡಿದರೆ ಪರಿಸ್ಥಿತಿ ಹೆಚ್ಚು ಆಶಾದಾಯಕವಾಗಿ ಕಾಣುತ್ತಿಲ್ಲ. ಇಲ್ಲಿ ಕನ್ನಡದ ಸವಕಳಿ ರೂಪಗಳು ನೆಲೆಗೊಳ್ಳುತ್ತಿರುವಂತೆ ತೋರುತ್ತಿದೆ.

ಮಾತಿನ ಕನ್ನಡಕ್ಕೂ ಕೆಲವೊಮ್ಮೆ ಬರಹದ ಮೂಲ ಆಕರ ಇರುತ್ತದೆ. ಅಂದರೆ ಕನ್ನಡದ ಬರಹದ ರೂಪಗಳೂ ಈಗ ಮೊದಲಿಗಿಂತ ಹೆಚ್ಚಾಗಿ ಸಿದ್ಧಗೊಳ್ಳುತ್ತಿವೆ. ಇದೂ ದಿಟ. ಅನೌಪಚಾರಿಕ ನೆಲೆಯಲ್ಲಿ ಬಳಕೆಯಾಗುವ ಕನ್ನಡ ಬರಹಗಳನ್ನು ಬದಿಗಿರಿಸಿದರೆ, ಉಳಿದ ಕನ್ನಡ ಬರಹದ ಹಿಂದೆ ಇಂಗ್ಲಿಶಿನ ಪ್ರಭಾವ ದಟ್ಟವಾಗಿ ಕಾಣುತ್ತಿದೆ. ಕನ್ನಡ ಬರಹವನ್ನು ಅದರಲ್ಲೂ ಔಪಚಾರಿಕ ನೆಲೆಯ ಕನ್ನಡ ಬರಹವನ್ನು ರೂಪುಗೊಳಿಸುತ್ತಿರುವ ಕನ್ನಡಿಗರು ಹೆಚ್ಚಾಗಿ ದ್ವಿಭಾಷಿಕರು. ಅದರಲ್ಲೂ ಕನ್ನಡ ಮತ್ತು ಇಂಗ್ಲಿಶ್‌ಗಳನ್ನು ಬಲ್ಲ ದ್ವಿಭಾಷಿಕರು. ಭಾರತದ ಇತರ ಭಾಷೆಗಳನ್ನು ಬಲ್ಲ ಕನ್ನಡಿಗರ ಪ್ರಮಾಣ ಸಾಕಷ್ಟಿದೆಯಾದರೂ, ಅವರು ಕನ್ನಡ ಮಾತಿನ ವರಸೆಗಳಲ್ಲಿ ತಮ್ಮ ದ್ವಿಭಾಷಿಕತೆಯನ್ನು ಬಳಸುತ್ತಿರುವವರು. ಬರಹದ ಔಪಚಾರಿಕ ರೂಪಗಳ ಸಿದ್ಧತೆಯಲ್ಲಿ ತೊಡಗಿಕೊಂಡ ಕನ್ನಡಿಗರು ಮಾತ್ರ ತಮ್ಮ ಬರಹಗಳಲ್ಲಿ ಕನ್ನಡ ಮತ್ತು ಇಂಗ್ಲಿಶ್‌ಗಳನ್ನು ಮುಖಾಮುಖಿಗಳನ್ನಾಗಿ ಮಾಡುತ್ತಿದ್ದಾರೆ. ಈ ಮುಖಾಮುಖಿಯಲ್ಲಿ ಕನ್ನಡ ಯಾವಾಗಲೂ ತೆಗೆದುಕೊಳ್ಳುವ ಭಾಷೆಯಾದರೆ, ಇಂಗ್ಲಿಶ್ ಯಾವಾಗಲೂ ಕೊಡುವ ಭಾಷೆಯಾಗಿರುತ್ತದೆ. ಕಳೆದ ಎರಡು ದಶಕಗಳಲ್ಲಿ ಈ ಪಾತ್ರ ನಿಗದೀಕರಣ, ಇದಕ್ಕೆ ಪರ್ಯಾಯ ಇಲ್ಲವೇನೋ ಎಂಬಷ್ಟು ಗಟ್ಟಿಯಾಗಿ ನೆಲೆಗೊಂಡಿದೆ. ಈ ಪಾತ್ರ ನಿಗದೀಕರಣದ ಅರಿವೂ ಕೂಡ ಇಲ್ಲದಂತೆ ನಾವು ಕನ್ನಡವನ್ನು ನಮ್ಮ ಬರಹಗಳಲ್ಲಿ ಬಳಸುತ್ತಿದ್ದೇವೆ. ಮೂರು ನಾಲ್ಕು ದಶಕಗಳ ಹಿಂದೆ ಸೃಜನಶೀಲ ಸಾಹಿತ್ಯ ಮತ್ತು ವಿಮರ್ಶೆಯ ವಲಯಗಳಲ್ಲಿ ಮಾತ್ರ ಕೇಳಿ ಬರುತ್ತಿದ್ದ ಈ ಮಾತು ಈಗ ತಿಳುವಳಿಕೆಯ ಎಲ್ಲ ವಲಯಗಳಲ್ಲೂ ನಿಜವೆನಿಸತೊಡಗಿದೆ.

ಇದು ಕನ್ನಡ ಮಾತ್ರವಲ್ಲ; ಎಲ್ಲ ಭಾರತೀಯ ಭಾಷೆಗಳಲ್ಲೂ ಬೇರೆಬೇರೆ ಪ್ರಮಾಣದಲ್ಲಿ ಕಂಡುಬರುತ್ತಿರುವ ಸಮಸ್ಯೆಯಿರಬಹುದು. ಇದರಿಂದ ಲೋಹಿಯಾ ಅವರು ಹಲವು ದಶಕಗಳ ಹಿಂದೆ ಹೇಳಿದ ಮಾತು ಈಗ ಪ್ರವಾದಿತನದ ಮಾತಿನಂತೆ ತೋರತೊಡಗಿದೆ. ಭಾರತೀಯ ಭಾಷೆಗಳಲ್ಲಿ ಸ್ವತಂತ್ರ ಚಿಂತನೆಗಳು ಲೋಹಿಯಾ ಅವರ ಪ್ರಕಾರ ಕ್ರಿ.ಶ ಎಂಟನೆಯ ಶತಮಾನದಿಂದ ಈಚೇಗೆ ನಿಂತು ಹೋಯಿತು (ಈ ಗಡಿಗೆರೆಯನ್ನೆಳೆಯಲು ಅವರು ಆದಿಶಂಕರರನ್ನು ಗಮನದಲ್ಲಿ ಇರಿಸಿಕೊಂಡಿದ್ದರು. ಅದು ಹಾಗಿರಲಿ). ಈಗ ಯಾವುದೇ ವಲಯದಲ್ಲಿ ಆಗಲೀ ಭಾರತೀಯ ಭಾಷೆಗಳಲ್ಲಿ ಸ್ವತಂತ್ರ ಚಿಂತನೆಗಳು ಮೂಡಿಬರುತ್ತಿಲ್ಲ ಎಂದು ಹಲುಬುವುದಿರಲಿ; ಹಾಗೆ ಹೊಸ ಚಿಂತನೆಗಳು ಮೂಡುವ ಸಾಧ್ಯತೆಗಳನ್ನು ಕುರಿತು ಯೋಚಿಸುವುದನ್ನೇ ನಿಲ್ಲಿಸಿದಂತೆ ತೋರುತ್ತದೆ. ಅಂದರೆ ಕನ್ನಡ ಕೇಳಿಸಿಕೊಳ್ಳುವ ಭಾಷೆಯಾಗಿರುವಂತೆ ಹೇಳುವ ಭಾಷೆಯೂ ಆಗಬೇಕು.

ಕನ್ನಡಿಗರ ನಿರಭಿಮಾನವನ್ನು ಕುರಿತು ಮಾತಾಡುವುದನ್ನು ಕೇಳುತ್ತೇವೆ. ಕೆಲವರು ಮತ್ತೂ ಮುಂದುವರೆದು ಇದನ್ನು ಕನ್ನಡಿಗರ ಷಂಡತನವೆಂದು ಬಣ್ಣಿಸುತ್ತಲೂ ಇದ್ದಾರೆ. ಇವೆಲ್ಲ ಬಣ್ಣನೆಗಳು ಗಂಡು ದೃಷ್ಟಿಯ ಮಾತುಗಳು. ಕನ್ನಡವನ್ನು ತಾಯಿ ಎಂದು ಹೇಳುವವರೂ ಕನ್ನಡಿಗರಲ್ಲಿ ಇರಬೇಕಾದ 'ವೀರಗುಣ'ವನ್ನು ಕುರಿತು ಮಾತಾಡುತ್ತಾರೆ.

ಇದು ನಮ್ಮ ಚಿಂತನೆಯಲ್ಲಿ ಇರುವ ಒಂದು ಕೊರತೆ. ಎಲ್ಲಿಯವರೆಗೆ ಕನ್ನಡ ನುಡಿ ಕನ್ನಡಿಗರಿಗೆ ತಮ್ಮ ಜಗತ್ತನ್ನು ಅರಿಯುವ ಮತ್ತು ಹೇಳುವ ಸಮರ್ಥ ಸಾಧನವೆಂದು ಅನ್ನಿಸುವುದಿಲ್ಲವೋ ಅಲ್ಲಿಯವರೆಗೆ ಅಭಿಮಾನವನ್ನು ಹೊರಗಿನಿಂದ ತಂದು ತುಂಬಬೇಕಾಗುತ್ತದೆ. ದುಡಿಮೆಯ ಎಲ್ಲ ವಲಯಗಳಲ್ಲಿರುವವರು, ಸಾಮಾಜಿಕ ತಾರತಮ್ಯಕ್ಕೆ ತುತ್ತಾಗಿರುವವರು, ಬಡವಬಲ್ಲಿದರು ಕನ್ನಡದ ಮೂಲಕ ಲೋಕಕ್ಕೆ ತಮ್ಮನ್ನು ತೆರೆದುಕೊಳ್ಳಲು ಅವಕಾಶ ಮತ್ತು ಸಾಮರ್ಥ್ಯಗಳು ಸೃಷ್ಟಿಯಾಗಬೇಕು. ಆಗ ಕನ್ನಡ ಈಗಿರುವಂತೆ ಕಿವಿಯ ಭಾಷೆಯಗಿ ಮಾತ್ರ ಉಳಿಯುವುದಿಲ್ಲ. ಅದು ಎಲ್ಲ ಕನ್ನಡಿಗರ ವ್ಯಕ್ತಿತ್ವದ ಹೊರಚಾಚಾಗುತ್ತದೆ. ಇದಕ್ಕೆ ಬೇಕಾದ ದಾರಿಗಳನ್ನು ನಾವೀಗ ಹುಡುಕಿಕೊಳ್ಳಬೇಕಾಗಿದೆ. ಇಷ್ಟೆಲ್ಲ ಹೇಳಿದ ಮೇಲೆ ಇದು ಕೇವಲ ಭಾಷೆಗೆ ಸಂಬಂಧಿಸಿದ ಮಾತಷ್ಟೇ ಆಗಿ ಉಳಿದಿಲ್ಲ ಎನ್ನುವುದು ಗೊತ್ತಾಗಿರಬೇಕು. ಇದು ನಮ್ಮ ಬದುಕಿನ ಕ್ರಮವನ್ನೇ ತಿದ್ದಿಕೊಂಡ ಹೊರತು ಸಾಧ್ಯವಾಗುವುದಿಲ್ಲ. ಈ ಬದಲಾವಣೆ ಆಗುವವರೆಗೆ ಭಾಷೆಯ ಬಗೆಗೆ ನಾವು ಏನು ಮಾತಾಡಿದರೂ ಅದು ದೂರಗಾಮಿ ಪರಿಣಾಮಗಳನ್ನು ಮಾಡಲಾರದು. ಈ ಟಿಪ್ಪಣಿಯ ಮೊದಲಲ್ಲಿ ಶ್ರೀವಿಜಯನ ಕವಿರಾಜ ಮಾರ್ಗದ ನೆನಪನ್ನು ಮಾಡಿಕೊಂಡೆವಷ್ಟೆ. ಅವನ ಚಿಂತನೆಯ ತಿರುಳಿನಲ್ಲಿ ಕನ್ನಡಿಗರ ನೆಲವೊಂದರ ಚಹರೆಗಳು ಅವರ ಭಾಷೆಯ ಮೂಲಕವೇ ಮೂಡಿಬರಬೇಕೆಂಬ ಹಂಬಲವಿತ್ತೆಂಬುದನ್ನು ಮರೆಯಬಾರದು. ಇದು ನಾವು ಮರೆತಿರುವ ಪಾಠ. ಈಗ ಮತ್ತೊಮ್ಮೆ ನೆನಪು ಮಾಡಿಕೊಳ್ಳಬೇಕಿದೆ.

## ಕನ್ನಡ ತಾಳಿಕೆಯ ಗುಣ

ಕನ್ನಡದ ಮಾತು ಬಂದಾಗ ನಾವೆಲ್ಲರೂ ಪುಳಕಿತರಾಗುತ್ತೇವೆ: ಉದ್ವಿಗ್ನರಾಗುತ್ತೇವೆ. ಹೆಮ್ಮೆಯಿಂದ ಬೀಗುತ್ತೇವೆ. ನಮ್ಮ ಹೆಮ್ಮೆಗೆ ಕಾರಣ ಕೇಳಿದರೆ ನಮ್ಮ ಭಾಷೆಯ ಏಳು ಜನ ಸಾಹಿತಿಗಳಿಗೆ ಜ್ಞಾನಪೀಠ ಪ್ರಶಸ್ತಿಗಳು ಬಂದಿವೆ ಎನ್ನುತ್ತೇವೆ. (ಇದಕ್ಕಿಂತಲೂ ಬಹುಮಾನದ ಮೊತ್ತ ಹೆಚ್ಚಿರುವ ಸರಸ್ವತಿ ಸಮ್ಮಾನ ಕಳೆದ ಹನ್ನೊಂದು ವರ್ಷಗಳಲ್ಲಿ ಒಂದು ಬಾರಿಯೂ ಬಂದಿಲ್ಲ ಎನ್ನುವುದನ್ನು ಯಾರೂ ಹೇಳುತ್ತಿಲ್ಲ. ಆ ಮಾತು ಬೇರೆ.) ಕನ್ನಡ ಬಹು ಪ್ರಾಚೀನವಾದ ಭಾಷೆ ಎನ್ನುತ್ತೇವೆ. ಕನ್ನಡದ ಹಳಮೆಯ ಬಗ್ಗೆ ನಮಗೆ ಅಭಿಮಾನ. ಕವಿ ಹೇಳುವಂತೆ ಕನ್ನಡವೆಂದರೆ ಅದು ಬರಿ ಹೆಸರಲ್ಲ: ಮಂತ್ರ. ಈ ಮಾತು ಈಗ ಇನ್ನೊಂದು ರೀತಿಯಲ್ಲಿ ನಿಜವಾಗುತ್ತಿದೆ. ಮಂತ್ರಕ್ಕೆ ಏನನ್ನಾದರೂ ಮಾಡಬಲ್ಲ ಶಕ್ತಿ ಇದೆಯೆಂಬ ಅರ್ಥಕ್ಕಿಂತ ಮಂತ್ರವೆಂಬುದು ಮನೆಯ ಮೂಲೆಯಲ್ಲಿ ಕುಳಿತು ಗುಣುಗುಣಿಸುವ ಸದ್ದು ಎಂಬುದೇ ಈಗ ಹೆಚ್ಚು ಸಮಂಜಸವಾಗುತ್ತಿದೆ. ಎಂದರೇನು? ಕನ್ನಡವನ್ನು ನಾವು ದಿನನಿತ್ಯದ ಹತ್ತಾರು ಕೆಲಸಗಳಲ್ಲಿ ಬಳಸುವುದು ಕಡಿಮೆಯಾಗಿ ಅದನ್ನು ಮನೆಯೊಳಗೆ ಆಪ್ತವಲಯಗಳಲ್ಲಿ ಬಳಸುತ್ತಿದ್ದೇವೆ. ಆಧುನಿಕವೆನಿಸುವ ಪರಿಸರಗಳಲ್ಲಿ ಕನ್ನಡವನ್ನು ಬಳಸಲು ಹಿಂಜರಿಕೆ ಇದೆ. ಅಥವಾ ತೊಡಕುಗಳಿವೆಯೆಂದು ನಂಬಿದ್ದೇವೆ. ಇದನ್ನು ಕಂಡುಕೊಳ್ಳಲು ದೊಡ್ಡ ಸಂಶೋಧನೆ ಅವಶ್ಯವಿಲ್ಲ. ಆಡಳಿತವನ್ನೇ ನೋಡೋಣ. ಕನ್ನಡವನ್ನು ಎಲ್ಲ ಹಂತಗಳಲ್ಲೂ ಆಡಳಿತ ಭಾಷೆಯನ್ನಾಗಿ ಬಳಸಬೇಕೆಂಬ ಸಂಕಲ್ಪ ಮೂರು ನೂರು ಆದೇಶಗಳ ಅನಂತರವೂ ಪೂರ್ಣವಾಗಿ ಈಡೇರಿಲ್ಲ. ಈಗಲೂ ಇಂಗ್ಲಿಷ್ ಅಧಿಕೃತ ಭಾಷೆಯಾಗಿದೆ. ಆಂಗ್ಲರ ಆಡಳಿತದ ಕಾಲದಲ್ಲೇ ಕನ್ನಡ ಹೆಚ್ಚು ಬಳಕೆಯಾಗುತ್ತಿಲ್ಲ ಎಂದು ಹಳಹಳಿಸುವ ಪಾಡು ನಮ್ಮದಾಗಿದೆ. ಶಿಕ್ಷಣ ಕ್ಷೇತ್ರದಲ್ಲೂ ಇದೇ ಕಥೆ. ಇಂಗ್ಲೀಷ್ ಮಾಧ್ಯಮದ ಹಿಡಿತ ಎಂದಿಗಿಂತ ಬಲವಾಗಿದೆ. ಕನ್ನಡದಲ್ಲಿ ಓದುವುದು ದಡ್ಡರ, ಸೌಲಭ್ಯವಂಚಿತರ. ಬಡವರ ಅವಕಾಶವಾಗಿದೆ. ಅವರೂ ಇಂಗ್ಲಿಷಿಗಾಗಿ ಹಂಬಲಿಸುತ್ತಿದ್ದಾರೆ. ಆ ಭಾಷೆ ಅವಕಾಶಗಳಿಗೆ ಏಣಿ ಎಂಬ ತಿಳುವಳಿಕೆ ಎಂದಿಗಿಂತ ಈಗ ಬಲವಾಗಿದೆ. ವಾಣಿಜ್ಯ ವ್ಯವಹಾರಗಳ ವಲಯವಂತೂ ಕನ್ನಡದ ಪಾಲಿಗೆ ದಕ್ಕದ ವಲಯ. ಜಾಹಿರಾತುಗಳಲ್ಲಿ ಕನ್ನಡಕ್ಕೆ ಅಷ್ಟಿಷ್ಟು ಮನ್ನಣೆ ಸಿಗುವುದು ಬಿಟ್ಟರೆ ಅಲ್ಲಿ ಕನ್ನಡ ಯಾರಿಗೂ ಬೇಡದ ಭಾಷೆ. ನಮ್ಮ ಅಭಿಮಾನದ ಮಾತೆಲ್ಲಿ? ನಿಜದಲ್ಲಿ ಕನ್ನಡಕ್ಕೆ ಒದಗಿರುವ ಈ ಗತಿ ಎಲ್ಲಿ? ಅಥವಾ ಕೆಲವರು ತಿಳಿಯುವಂತೆ ಕನ್ನಡದ ಸ್ಥಿತಿಗತಿಯು ಇಷ್ಟು ಹದಗೆಟ್ಟಿದೆಯೆಂದು ಹೇಳುವುದೇ

ಸರಿಯಲ್ಲ. ಕನ್ನಡಕ್ಕೆ ಯಾವ ಕುತ್ತೂ ಒದಗಿಲ್ಲ. ದಶಕಗಳು ಕಳೆದಂತೆ ಕನ್ನಡವನ್ನು ಮಾತಾಡುವವರ ಸಂಖ್ಯೆ ಗಣನೀಯವಾಗಿ ಹೆಚ್ಚಾಗುತ್ತಿದೆ. ಅದನ್ನು ಎರಡನೆಯ ಭಾಷೆಯನ್ನಾಗಿ ಕಲಿಯುವವರ ಸಂಖ್ಯೆಯೂ ಹೆಚ್ಚಾಗುತ್ತಿದೆ. ಆದ್ದರಿಂದ ನಾವು ಕನ್ನಡದ ಸ್ಥಾನಮಾನದ ಬಗೆಗೆ ಆತಂಕಿತರಾಗಬೇಕಿಲ್ಲ. ಈ ಎರಡು ನಿಲುವುಗಳಲ್ಲಿ ಯಾವುದು ಸರಿ?

ಕಳೆದ ಒಂದು ದಶಕದಲ್ಲಿ ನಡೆದಿರುವ ಸಾಮಾಜಿಕ ಆರ್ಥಿಕ ಬದಲಾವಣೆಗಳ ಪರಿಣಾಮ ಭಾಷೆಗೆ ಹೇಗೆ ತಟ್ಟಿದೆ ಎಂಬುದನ್ನು ಈಗ ಪರಿಶೀಲಿಸಬೇಕಾಗಿದೆ. ಮುಕ್ತ ಮಾರುಕಟ್ಟೆಯ ಸಿದ್ಧಗುರಿಯೆಂದರೆ ಏಕ ರೂಪೀಕರಣ ಮತ್ತು ವೈವಿಧ್ಯದ ವಿನಾಶ. ಅಥವಾ ಇನ್ನೂ ಸರಿಯಾಗಿ ಹೇಳಬೇಕೆಂದರೆ ಮಾರುಕಟ್ಟೆಯ ನಿಯಂತ್ರಕರು ಬಯಸುವ ಆಶಯ ಮತ್ತು ಆಕೃತಿಗಳಿಗೆ ಮಾತ್ರ ಮನ್ನಣೆ. ಈಗ ಮಾರುಕಟ್ಟೆಯ ನಿಯಂತ್ರಕರು ಎಂದರೆ ನಮ್ಮ ತಿಳುವಳಿಕೆಯಂತೆ ಇಂಗ್ಲಿಷ್ ಮಾತಾಡುವವರು. ಅವರಲ್ಲದೆ ಇತರರು ಜಾಗತಿಕವಾಗಿ ಇನ್ನೂ ಮಾರುಕಟ್ಟೆಯನ್ನು ತಮ್ಮ ಹಿಡಿತಕ್ಕೆ ತೆಗೆದುಕೊಳ್ಳಬಲ್ಲವರು ಬೇರಾದರೂ ಇರಬಹುದೆಂದು ನಂಬಲೂ ಕೂಡಾ ನಾವು ಸಿದ್ಧರಿಲ್ಲ. ಇಂಗ್ಲಿಷ್ ಮನೆ ಮಾತಲ್ಲದವರೂ ಕೂಡ ದೇಶ ದೇಶಗಳಲ್ಲಿ ಇದೇ ನಂಬಿಕೆಯನ್ನು ಹೊಂದಿದ್ದಾರೆಂದು ತಿಳಿದಿದ್ದೇವೆ. ಕನ್ನಡದಂಥ ಭಾಷೆಯನ್ನು ಬಳಸುವವರಲ್ಲಿ ಈಗ ಒಂದು ಕನಸನ್ನು ಬಿತ್ತಲಾಗುತ್ತಿದೆ. ಅದೆಂದರೆ ಜಾಗತಿಕ ನೆಲೆಯ ಸವಲತ್ತುಗಳನ್ನು ಪಡೆದುಕೊಳ್ಳಲು ಇಂಗ್ಲಿಷಿನ ರಹದಾರಿಯನ್ನು ಪಡೆದುಕೊಳ್ಳಬೇಕೆಂಬುದು. ಜಾಗತೀಕರಣ ನಮಗೆ ಬಿಡುಗಡೆಯ ಸಾಧನವೋ ಅಥವಾ ಇದ್ದುದನ್ನೆಲ್ಲವ ಕಿತ್ತುಕೊಂಡು ನಿರ್ಗತಿಕರನ್ನಾಗಿ ಮಾಡುವ ಹುನ್ನಾರವೋ ಎಂಬ ಚರ್ಚೆಯನ್ನು ಇನ್ನೂ ಮುಂದುವರೆಸುವುದರಲ್ಲಿ ಅರ್ಥವಿಲ್ಲ. ಏಕೆಂದರೆ ಪರಿಣಾಮಗಳು ಈಗಾಗಲೇ ದಟ್ಟವಾಗಿ ಕಾಣತೊಡಗಿವೆ.

ಈ ಸಂದರ್ಭದಲ್ಲೇ ಇನ್ನೂ ಒಂದು ಸಂಗತಿಯನ್ನು ನಾವು ಕಾಣತೊಡಗಿದ್ದೇವೆ. ಇಂಗ್ಲಿಷ್ ಮತ್ತು ತಂತ್ರಜ್ಞಾನಕ್ಕೆ ತಳುಕು ಹಾಕುವ ಚಿಂತನೆಯೊಂದು ಬಲವಾಗಿ ಬೇರು ಬಿಡತೊಡಗಿದೆ. ಇಂಗ್ಲಿಷ್ ಗೊತ್ತಿದ್ದರೆ ತಂತ್ರಜ್ಞಾನ ಕರತಲಾಮಲಕವಾಗುವುದೆಂದು ನಂಬಿಸಲಾಗುತ್ತಿದೆ. ಇದನ್ನು ಬಲಪಡಿಸಲು ಇನ್ನೂ ಒಂದು ಬಗೆಯಲ್ಲಿ ವಾದವನ್ನು ಮಂಡಿಸಲಾಗುತ್ತಿದೆ. ಕೇವಲ ಕನ್ನಡವೆನ್ನುತ್ತಾ ಕುಳಿತರೆ ನಮಗೆ ಒದಗಿಬರುವ ಅವಕಾಶಗಳಿಂದ ವಂಚಿತರಾಗುತ್ತೇವೆ ಎಂದು ಹೇಳುವವರು ಮುಂಚೂಣಿಗೆ ಬರುತ್ತಿದ್ದಾರೆ. ಇನ್ಫೋಸಿಸ್ ಸಂಸ್ಥೆಯ ನಾರಾಯಣಮೂರ್ತಿಗಳು ಹೇಳುತ್ತಿರುವುದೂ ಇದೇ ಮಾತನ್ನು ತಾನೇ. **ಡಿಜಿಟಲ್ ಡಿವೈಡ್** ಎಂಬ ಹೊಸ ದಿನಮಾನದ ತಾರತಮ್ಯದ ಮಾನಕವನ್ನು ನಾವೀಗ ಬಳಸತೊಡಗಿದ್ದೇವೆ. ಇದು ನಿವಾರಣೆಯಾಗಬೇಕಾದರೆ ಎಲ್ಲರೂ ಇಂಗ್ಲಿಷನ್ನು ಕಲಿಯುವುದೇ ಸರಿಯಾದ ಮಾರ್ಗವೆಂದು ಈಗ ಹೇಳಲಾಗುತ್ತಿದೆ.

ಇಂಗ್ಲಿಷ್ ಬೇಕೆಂದು ಹೇಳುವುದು ಹೊಸದೇನೂ ಅಲ್ಲ. ಆದರೆ ಈಗ ಅದಕ್ಕೊಂದು ಹೊಸ ಆಯಾಮ ಒದಗಿದೆ. ಇಂಗ್ಲಿಷ್ ಬೇಕೆಂದರೆ ಕನ್ನಡವನ್ನು ಬಿಡಬೇಕು ಎಂಬುದೇ ಇಂದಿನ ತಿಳುವಳಿಕೆಯಾಗತೊಡಗಿದೆ. ಇಂಗ್ಲಿಷಿಗಾಗಿ ಕನ್ನಡವನ್ನು ಬಿಡುವುದಕ್ಕೆ ಈಗ

ಸಂಕೋಚಗಳಿಲ್ಲ. ಕನ್ನಡ ಬಾರದಿರುವುದು ಅವಮಾನ. ಹಿಂಜರಿಕೆಯ ಸಂಗತಿಯಾಗಿ ಉಳಿದಿಲ್ಲ. ಕನ್ನಡ ಈಗ ಅಟ್ಟಕ್ಕೆ ಸೇರಬೇಕಾದ ಹಳೆಯ ವಸ್ತುವೆಂದು ಹಲವರಿಗೆ ತೋರುತ್ತಿದ್ದರೆ ಆಶ್ಚರ್ಯವಿಲ್ಲ.

ಇಂದಿನ ಸನ್ನಿವೇಶವನ್ನು ಹೀಗೆ ಗ್ರಹಿಸುವುದು ಉತ್ಪ್ರೇಕ್ಷೆಯೆಂದು ಕೆಲವರಿಗೆ ಅನ್ನಿಸಬಹುದು. ಕನ್ನಡ ಸಮಾಜದ ಬಹುಸಂಖ್ಯಾತರು ಈಗಲೂ ಕನ್ನಡವನ್ನು ಮಾತ್ರ ಅವಲಂಬಿಸಿರುವುದು; ಅವರಿಗೆ ಆ ಭಾಷೆಯನ್ನು ಬಿಟ್ಟು ಬೇರೊಂದು ಭಾಷೆ ಗೊತ್ತಿಲ್ಲದಿರುವುದು ನಿಜ. ಆದರೆ ಅವರು ಶಕ್ತಿ ರಾಜಕಾರಣದ ಗ್ರಹಿಕೆಯಲ್ಲಿ ಅಂಚಿನ ಸಮಾಜಕ್ಕೆ ಸೇರಿದವರು. ನಾಡಿನ ಬಹುಮಾನ್ಯ ವಿಜ್ಞಾನಿ–ಆಡಳಿಗಾರ ಅಬ್ದುಲ್ ಕಲಾಂ ಅವರು ಹೇಳುವ ಮಾತನ್ನು ಕೇಳಿದ್ದೇವೆ. ಅವರೆನ್ನುವುದೇನು? ನಮ್ಮ ಸಮಾಜವೀಗ ಕೃಷಿ ಆಧಾರಿತವಾಗಿದೆ; ಅದನ್ನೀಗ ಜ್ಞಾನಾಧಾರಿತವನ್ನಾಗಿ ನಾವೀಗ ಪರಿವರ್ತಿಸಬೇಕಾಗಿದೆ. ಈ ಮಾತಿನ ಅರ್ಥವೇನೇ ಇರಲಿ; ತಥ್ಯವೇನೇ ಇರಲಿ; ಪರಿಣಾಮವಂತೂ ಕಣ್ಣಿಗೆ ಕಟ್ಟುವಂತಿದೆ. ಈಗ ದುಡಿಮೆಯನ್ನೇ ತಮ್ಮ ಇರುವಿಕೆಯ ಚಹರೆಯನ್ನಾಗಿ ಮಾಡಿಕೊಂಡಿರುವ ಕೋಟ್ಯಂತರ ಜನರಿಗೆ ನಾಳಿನ ಸಮಾಜದಲ್ಲಿ ಕನಸುಗಳಿಲ್ಲ. ಅವರಿಗೆ ಯಾವ ಪಾತ್ರವೂ ಇಲ್ಲ. ಕನ್ನಡವನ್ನು ಬಳಸುವವರು ಇವರೇ ಆಗಿದ್ದಾರೆ. ಅಂದರೆ ಕನ್ನಡವನ್ನು ನಂಬಿದವರು ಬರುವ ದಿನಗಳಲ್ಲಿ ಅಂಚಿಗೆ ಸರಿಯಲಿದ್ದಾರೆ.

ಹೋಗಲಿ ಅವರೆಲ್ಲರನ್ನೂ ಇಂಗ್ಲಿಷಿನ ಗಾಡಿಗೆ ಹತ್ತಿಸಿಕೊಂಡು ಒಯ್ಯಲು ಸಾಧ್ಯವೇ? ಈಚಿನ ದಿನಗಳಲ್ಲಿ ಕರ್ನಾಟಕ ಸರ್ಕಾರ ಜನರನ್ನು ಬೇಗ ಬೇಗ ಇಂಗ್ಲಿಷಿನ ಬಂಡಿಗೆ ಹತ್ತಿಸಲು ಯೋಜನೆಗಳನ್ನು ರೂಪಿಸುತ್ತಿದೆ. ಮಕ್ಕಳಿಗೆ ಮೂರನೆಯ ತರಗತಿಯಿಂದಲೇ ಇಂಗ್ಲಿಷನ್ನು ಹೇಳಿಕೊಡಲು ಶುರುಮಾಡಬೇಕೆಂಬ ಯೋಜನೆ ರೆಕ್ಕೆಪುಕ್ಕ ಪಡೆಯತೊಡಗಿದೆ. ಆದರೆ ಇಂಗ್ಲಿಷ್ ಗಾಡಿಯಲ್ಲಿ ಎಲ್ಲರಿಗೂ ಜಾಗವಿಲ್ಲ. ಏಕೆಂದರೆ ನಮ್ಮ ಕೋಟ್ಯಂತರ ಮಕ್ಕಳಿಗೆ ಇಂಗ್ಲಿಷ್ ಕಲಿಸುವವರು ಯಾರು? ಅವರನ್ನು ಎಲ್ಲಿಂದ ತರುವುದು? ಅಂದರೆ ಕೊನೆಗೂ ಇಂಗ್ಲಿಷ್ ದಕ್ಕುವುದು ಕೆಲವರಿಗೆ ಮಾತ್ರ, ಉಳಿದವರು ಕನ್ನಡವನ್ನೇ ನಂಬಿಕೊಂಡಿರಬೇಕಾಗುತ್ತದೆ.

ಒಟ್ಟಾರೆ ಏನಾಯ್ತು? ಕನ್ನಡದ ಬದಲು ಇಂಗ್ಲಿಷ್ ಎಂಬ ಚಿಂತನೆಯು ಬಲ ಪಡೆಯುತ್ತಿದೆ. ಆದರೆ ಇಂಗ್ಲಿಷ್ ಎಲ್ಲರಿಗೂ ದೊರಕದ ಸನ್ನಿವೇಶ ಸೃಷ್ಟಿಯಾಗುತ್ತಿದೆ. ಇದು ಕೇವಲ ಭಾಷೆಗೆ ಬಂದಿರುವ ಕುತ್ತು ಎನ್ನುವಂತಿಲ್ಲ. ಇದು ನಿಜದಲ್ಲಿ ಭಾಷಿಕರಿಗೇ ಬಂದಿರುವ ಕುತ್ತು. ಕನ್ನಡವೋ ಇಂಗ್ಲಿಷೋ ಎನ್ನುವುದು ಈಗ ಆಯ್ಕೆಯ ವಿಷಯವಾಗಿ ಉಳಿದಿಲ್ಲ. ಸದ್ಯದ ಸಾಮಾಜಿಕ, ಆರ್ಥಿಕ ವ್ಯವಸ್ಥೆಗಳು ಯಾವುದು ಯಾರಿಗೆ ಸಿಗಬೇಕು ಎಂಬುದನ್ನು ಆಯ್ದುಕೊಡುತ್ತವೆ. ನಮ್ಮ ಪಾಲಿಗೆ ಬಂದದ್ದನ್ನು ನಾವು ಪಡೆದು ಸಂತೃಪ್ತರಾಗಬೇಕಾಗಿದೆ.

ಕನ್ನಡದ ಬಳಕೆಯನ್ನು ಹೀಗೆ ನಿಯಂತ್ರಿಸುತ್ತಿರುವ ಸಂದರ್ಭವನ್ನು ಮತ್ತೊಂದು ದಿಕ್ಕಿನಿಂದಲೂ ನೋಡುವುದು ಸಾಧ್ಯವಿದೆ. ಜಗತ್ತನ್ನೆಲ್ಲ ಏಕರೂಪಕ್ಕೆ ತರುವುದು ಮುಕ್ತ

ಮಾರುಕಟ್ಟೆಯ ಒಂದಂಶದ ಕಾರ್ಯಸೂಚಿಯಾಗಿತ್ತು. ಆದರೆ ದಿನಗಳೆದಂತೆ ಈವರೆಗೆ ಗೊತ್ತಿರದಿದ್ದ ಸಂಗತಿಗಳು ಮುನ್ನೆಲೆಗೆ ಬಂದಿವೆ. ಜಗತ್ತಿನಲ್ಲಿ ಇರುವ ಸಾವಿರಾರು– ಎಷ್ಟೆಂಬುದನ್ನು ಖಚಿತವಾಗಿ ಹೇಳಲು ಸಾಧ್ಯವಿಲ್ಲ ಸರಿಸುಮಾರು 6000 ದಿಂದ 8000 ಭಾಷೆಗಳಿವೆ ಎಂದು ಅಂದಾಜು ಮಾಡಲಾಗಿದೆ. ಭಾಷೆಗಳಲ್ಲಿರುವ ವೈವಿಧ್ಯಕ್ಕೂ ಲೋಕದಲ್ಲಿರುವ ಜೀವವೈವಿಧ್ಯಕ್ಕೂ ಒಂದು ನಂಟಿದೆ ಎಂಬುದು ನಮಗೆ ಈವರೆಗೆ ಗೊತ್ತಿರಲಿಲ್ಲ. ಎಲ್ಲೆಲ್ಲಿ ಜೀವರಾಶಿಯ ವೈವಿಧ್ಯ ನಮಗೆ ಕಾಣಸಿಗುತ್ತದೆಯೋ ಅಲ್ಲೆಲ್ಲ ಭಾಷಾವೈವಿಧ್ಯವೂ ಕಂಡುಬಂದಿದೆ. ಇದೊಂದು ಆಕಸ್ಮಿಕವೋ ಅಥವಾ ಇವೆರಡು ಸಂಗತಿಗಳ ನಡುವೆ ಏನಾದರೂ ಸಂಬಂಧವಿದೆಯೋ ಎಂಬುದನ್ನು ಈಗ ಅಧ್ಯಯನ ಮಾಡಲಾಗುತ್ತಿದೆ. ಮುಂದಿನ ದಿನಗಳಲ್ಲಿ ಈ ವಿಷಯದಲ್ಲಿ ಹೆಚ್ಚಿನ ತಿಳಿವಳಿಕೆ ನಮಗೆ ದೊರಕಲಿದೆ. ಅದಕ್ಕೂ ಮಿಗಿಲಾದ ಒಂದು ಸಂಗತಿಯನ್ನು ನಾವೀಗ ಗಮನಿಸಬೇಕಾಗಿದೆ. ಜಾಗತೀಕರಣ ಮತ್ತು ಮುಕ್ತಮಾರುಕಟ್ಟೆಗಳು ಜಗತ್ತಿನ ಜೀವವೈವಿಧ್ಯಗಳನ್ನು ನಾಶಮಾಡುವ ವ್ಯವಸ್ಥಿತ ಕಾರ್ಯಕ್ರಮಗಳನ್ನು ರೂಪಿಸಿಕೊಂಡಿದ್ದವು. ಆದರೆ ವೈವಿಧ್ಯದ ವಿನಾಶದಿಂದ ಉಂಟಾಗುವ ಅಪಾಯಗಳು ಈಗ ಗೋಚರವಾಗತೊಡಗಿವೆ. ವೈವಿಧ್ಯವೆಂಬುದು ನಿಸರ್ಗದ ಆಟವಲ್ಲ. ಆದರ ತಾಳಿಕೆಯ ರಹಸ್ಯವೆಂಬ ಸತ್ಯವೀಗ ನಮಗೆ ಗೊತ್ತಾಗುತ್ತಿದೆ. ವೈವಿಧ್ಯವಿಲ್ಲದ ಏಕರೂಪಿ ತಳಿಗಳಿಗೆ ನಮಗೆ ಭಾಷೆಯ ಸಂದರ್ಭವನ್ನು ಅರಿಯಲೂ ನೆರವಾಗಬಲ್ಲುದು. ಭಾಷಾ ವೈವಿಧ್ಯವನ್ನು ಕಳೆದು ಜಗತ್ತಿಗೆಲ್ಲ ಒಂದೇ ಭಾಷೆಯನ್ನು ಒದಗಿಸಲು ಹೊರಟರೆ ಆಗುವ ಅಪಾಯವೂ ಇಂಥದೇ ಆಗಿದೆ. ಜಗತ್ತಿಗೆಲ್ಲ ಒಂದೇ ಭಾಷೆ ಇದ್ದರೆ ಚಂದವೆಂದು ಹೇಳುವ ಕನಸುಣಿಗಳೂ ಇದ್ದಾರೆ. ಹಾಗಾದಾಗ ಮಾತ್ರ ಜನರು ಸುಖ ಸಂತೋಷಗಳಿಂದ ಸಮೃದ್ಧ ಜೀವನ ನಡೆಸಲು ಸಾಧ್ಯ; ಜಗಳ ಕದನಗಳಿಲ್ಲದ ದಿನಗಳೂ ಆಗ ಒದಗಿಬರುತ್ತವೆ ಎಂದು ನಂಬುವವರಾರಿದ್ದಾರೆ. ಆದರೆ ಇಂಗ್ಲಿಶ್ ಭಾಷೆಯನ್ನು ಎಲ್ಲ ಭಾಷೆಗಳನ್ನು ಇಕ್ಕಿ ಮೆಟ್ಟುವ ಹಾಗೆ ಜಾಗತಿಕ ಭಾಷೆಯನ್ನಾಗಿ ರೂಪಿಸಬೇಕೆಂಬುವವರೂ ಕೂಡ ತಮ್ಮ ಚಿಂತನೆಯನ್ನು ಮಂಡಿಸಲು ಈಗ ಹಿಂಜರಿಯಬೇಕಾದ ಕಾಲ ಒದಗಿಬರುತ್ತಿದೆ. ಇದಕ್ಕೆ ಎರಡು ಮುಖ್ಯ ಕಾರಣಗಳಿವೆ. ಒಂದು: ಈಗಾಗಲೇ ಹೇಳಿದಂತೆ ವೈವಿಧ್ಯಗಳಿಲ್ಲದ ಏಕರೂಪೀ ಅಸ್ತಿತ್ವಕ್ಕೆ ಬಹುಕಾಲ ಬದುಕುಳಿಯುವ ಸಾಧ್ಯತೆಗಳು ಕಡಿಮೆ ಎಂಬ ತಿಳುವಳಿಕೆ ಮೂಡುತ್ತಿರುವುದು. ಎರಡು: ಏಕರೂಪಿಯಾಗಿ ಬೆಳೆಯಬೇಕೆಂಬ ಹಂಬಲದಿಂದ ಜಗತ್ತಿನ ಎಲ್ಲ ಕಡೆಗೆ ಹರಡಿಕೊಂಡ ಇಂಗ್ಲಿಶ್ ಭಾಷೆಯಲ್ಲೇ ವೈವಿಧ್ಯಗಳು ಮೂಡತೊಡಗಿರುವುದು ಈಗ ಒಪ್ಪಬೇಕಾದ ಸಂಗತಿಯಾಗಿದೆ. ಎಂದರೇನು? ಜಗತ್ತಿನಲ್ಲಿ 'ಒಂದು ಇಂಗ್ಲೀಶ್' ಇಲ್ಲ. 'ಇಂಗ್ಲಿಶ್‌ಗಳು' ಇವೆ. ಅಮೆರಿಕದವರ ಇಂಗ್ಲಿಶ್. ಬಾಂಗ್ಲಾದೇಶದವರ ಇಂಗ್ಲಿಶ್. ಆಫ್ರಿಕಾದ ಇಂಗ್ಲಿಶ್ ಎಂದು ಹಲವು ಹತ್ತು ಭೇದಗಳು ಈಗ ಗೋಚರಿಸುತ್ತಿವೆ. ದಶಕಗಳು ಉರುಳಿದಂತೆ ಇವು ಬೇರೆ ಬೇರೆ ಭಾಷೆಗಳೇ ಆಗಿಬಿಡುವುದನ್ನು ತಳ್ಳಿಹಾಕುವಂತಿಲ್ಲ. ಜಗತ್ತಿನಲ್ಲಿ ಭಾಷಾವೈವಿಧ್ಯ ಹೇಗೆ ಉಂಟಾಯಿತೆಂದು ಬಲ್ಲವರಿಗೆ ಇಂಗ್ಲಿಶ್ ಭಾಷೆಯ ಒಡಲಿನಿಂದಲೇ ಹತ್ತಾರು ದೇಶೀಯ ಭಾಷೆಗಳು ಮೈದಳೆಯಲಿರುವುದನ್ನು ಒಪ್ಪಬೇಕಾಗುತ್ತದೆ. ಅಂದರೆ ಒಂದೇ ಭಾಷೆ ಇರಲಿ ಎನ್ನುವ ಕಾರ್ಯಕ್ರಮವೇ

ಸೋಲೊಪ್ಪಿದಂತಾಗುತ್ತದೆ. ಈ ಎರಡು ಕಾರಣಗಳಿಂದಾಗಿ ಜಾಗತೀಕರಣ ಮೈದುಂಬಿಕೊಂಡಾಗ ಇದ್ದ ಇಂಗ್ಲಿಶ್ ಪರವಾದ ಆವೇಶ ಈಗ ಕಡಿಮೆಯಾಗತೊಡಗಿದೆ.

ಜಗತ್ತಿನ ಸಾವಿರಾರು ಭಾಷೆಗಳು ಅವಸಾನದ ಅಂಚಿನಲ್ಲಿವೆ. ಇದಕ್ಕೆ ಹಲವಾರು ಕಾರಣಗಳಿವೆ. ಜಾಗತೀಕರಣ ಈ ಅವಸಾನದ ಪ್ರಕ್ರಿಯೆಯನ್ನು ತ್ವರಿತಗೊಳಿಸುತ್ತಿದೆ. ಹೀಗೆ ಅವಸಾನದ ಅಂಚಿಗೆ ಬಂದು ನಿಂತಿರುವ ಅಥವಾ ನಿಲ್ಲಲಿರುವ ಭಾಷೆಗಳ ಪಟ್ಟಿಯಲ್ಲಿ ಕನ್ನಡವೂ ಸೇರಿದೆಯೋ? ಅವಸಾನಮುಖಿಯಾಗಿರುವ ಭಾಷೆಗಳನ್ನು ಗೊತ್ತುಮಾಡಲು ಭಾಷಾಶಾಸ್ತ್ರಜ್ಞರು ಒಂದು ಪ್ರಶ್ನಾವಳಿಯನ್ನು ತಯಾರಿಸಿದ್ದಾರೆ. ಆ ಪ್ರಶ್ನಾವಳಿಗೆ ದೊರಕುವ ಉತ್ತರಗಳ ಮೂಲಕ ಆ ಭಾಷೆಗೆ ಅವಸಾನ ಬರಲಿದೆಯೋ ಇಲ್ಲವೋ ಎಂಬುದನ್ನು ಬಹುಮಟ್ಟಿಗೆ ಕರಾರುವಾಕ್ಕಾಗಿ ಹೇಳಲು ಸಾಧ್ಯವಿದೆ. ಕನ್ನಡದ ಮಟ್ಟಿಗೆ ಹೇಳುವುದಾದರೆ ಅದಿನ್ನೂ ಅಂಥ ಆತಂಕದ ಹಂತವನ್ನು ಮುಟ್ಟಿಲ್ಲ. ಆದರೆ ಹಾಗೆಂದು ನಾವು ನಿರಾತಂಕವಾಗಿ ಕುಳಿತಿರುವಂತೆಯೂ ಇಲ್ಲ. ಈ ಮಾತು ಕುರಿತು ಮುಂದೆ ಹೇಳುವುದಿದೆ. ಈಗ ಹೀಗೆ ಅವಸಾನಸನ್ನದ್ಧ ಸ್ಥಿತಿಗೆ ಬಂದಿರುವ ಭಾಷೆಗಳು ಜಗತ್ತಿನಿಂದ ಮಾಯವಾದರೆ ಆಗುವ ನಷ್ಟವೇನು? ಇದರ ಪರಿಣಾಮಗಳೂ ಮುಖ್ಯವಾಗಿ ಮೂರು. ಒಂದು: ಭಾಷೆಗಳು ಅವಸಾನಗೊಳ್ಳಲಿವೆ ಎಂದರೆ ಆ ಭಾಷೆಯನ್ನು ಆಡುತ್ತಿರುವ ಜನಸಮುದಾಯವೂ ನಾಶವಾಗುತ್ತದೆಯೆಂದು ತಿಳಿಯಬೇಕು. ಭಾಷೆಯ ಅವಸಾನವೆಂಬುದು ತಂತಾನೇ ಸಂಭವಿಸುವ ಘಟನೆಯಲ್ಲ. ಅದಕ್ಕೆ ಅನ್ಯಭಾಷೆಗಳ (ಅನ್ಯಭಾಷಿಕರ ಎಂದು ತಿಳಿಯಬೇಕು) ಆಕ್ರಮಣವೇ ಮುಖ್ಯ ಕಾರಣವಾಗಿರುತ್ತದೆ. ಹೀಗೆ ಆಕ್ರಮಣಕ್ಕೆ ತುತ್ತಾದ ಭಾಷೆ (ಅದನ್ನಾಡುವ ಭಾಷಿಗರು) ಆಕ್ರಮಣ ಮಾಡಿದ ಭಾಷೆಗೆ ಜಾಗ ತೆರವು ಮಾಡಿಕೊಟ್ಟು ತಾನು ಕಣ್ಮರೆಯಾಗುತ್ತದೆ. ಅದನ್ನಾಡುವ ಭಾಷಿಕರು ಆಕ್ರಮಣಕಾರರ ಭಾಷೆಯನ್ನು ತಮ್ಮ ಭಾಷೆಯನ್ನಾಗಿ ಮಾಡಿಕೊಂಡರೆ ಮಾತ್ರ ಉಳಿದುಕೊಳ್ಳುತ್ತಾರೆ. ಇಲ್ಲದಿದ್ದರೆ ನಾಶವಾಗುತ್ತಾರೆ. ಎರಡನೆಯ ಪರಿಣಾಮವೇ ಜಗತ್ತಿನಲ್ಲಿ ಹೆಚ್ಚು ಕಂಡುಬಂದಿದೆ. ಎರಡು: ಭಾಷೆಯ ವಿನಾಶವೆಂದರೆ ಆ ಭಾಷೆಯಲ್ಲಿ ಅಡಕವಾಗಿರುವ ಅಗಾಧವಾದ ತಿಳುವಳಿಕೆಯ ನಾಶ. ಪ್ರತಿಯೊಂದು ಭಾಷೆಯಲ್ಲೂ ಶತಮಾನಗಳಿಂದ ಸಂಚಯಗೊಂಡ ಮತ್ತು ಅನ್ಯಭಾಷೆಗಳಲ್ಲಿ ದುರ್ಲಭವಾದ ಸ್ಥಳೀಯ ತಿಳುವಳಿಕೆ ಅಡಕವಾಗಿರುತ್ತದೆ. ಆ ಭಾಷೆ ನಾಶವಾದರೆ ಈ ತಿಳುವಳಿಕೆಯು ಮಾನವ ಜನಾಂಗಕ್ಕೆ ಶಾಶ್ವತವಾಗಿ ಅಲಭ್ಯವಾಗುತ್ತದೆ. ಇದೊಂದು ಭಾರೀ ನಷ್ಟವೇ ಸರಿ. ಮೂರು: ಪ್ರತಿ ಭಾಷೆಗೂ ವಿಶಿಷ್ಟವಾದ ರಚನೆ ಇರುತ್ತದೆ; ಅದರದೇ ಆದ ನಿಯಮಗಳಿರುತ್ತವೆ. ಈ ನಿಯಮಗಳ ಅಭ್ಯಾಸ ಮುಖ್ಯ. ಏಕೆಂದರೆ ಇದರಿಂದ ವೈಶ್ವಿಕಭಾಷೆಯ– ಅಂದರೆ ಜಗತ್ತಿನಲ್ಲಿ ಹುಟ್ಟುವ ಪ್ರತಿಯೊಂದು ಮಗುವೂ ಕೂಡ ಹುಟ್ಟುವಾಗಲೇ ಪಡೆದುಕೊಂಡು ಬರುವ ಭಾಷಾ ಸಾಮಾರ್ಥ್ಯ– ಲಕ್ಷಣವನ್ನು ತಿಳಿಯಲು ಸಾಧ್ಯವಾಗುತ್ತದೆ. ಒಂದೊಂದು ಭಾಷೆಯು ಅವಸಾನಗೊಂಡಂತೆ ಆ ಭಾಷೆಯ ಅಧ್ಯಯನದಿಂದ ದೊರಕಬಹುದಾಗಿದ್ದ ವೈಶ್ವಿಕಭಾಷೆಯ ತಿಳುವಳಿಕೆಯೂ ಕೂಡ ಊನಗೊಳ್ಳುತ್ತದೆ.

ಭಾಷಾವಿನಾಶದ ಹಲವು ಪರಿಣಾಮಗಳಲ್ಲಿ ಮೂರನ್ನು ಮೇಲೆ ಹೇಳಲಾಗಿದೆ. ಈ ಪರಿಣಾಮಗಳು ಗಂಭೀರ ಸ್ವರೂಪದ್ದವೆಂಬ ಅರಿವು ಈಗ ಮೂಡತೊಡಗಿದೆ. ಆದ್ದರಿಂದ ಜಗತ್ತಿನ ಭಾಷಾವೈವಿಧ್ಯವನ್ನು ಕಾಪಾಡಿಕೊಳ್ಳಬೇಕೆಂಬುದು ಬರಲಿರುವ ದಿನಗಳ ಮುಖ್ಯ ಕಾರ್ಯಯೋಜನೆಯಾಗಲಿದೆ. ಹೀಗಾಗಿ ಕನ್ನಡದಂಥ ಭಾಷೆಗಳು ತೀವ್ರ ಆತಂಕದ ದಿನಗಳನ್ನು ಎದುರಿಸಬೇಕಾಗುವುದಿಲ್ಲವೇನೋ.

ಈ ಮಾತಿಗೆ ಒತ್ತಾಸೆಯಾಗಿ ಇನ್ನೊಂದು ಸಂಗತಿಯನ್ನು ಗಮನಿಸಬಹುದು. ಜಗತ್ತಿಗೆಲ್ಲ ಒಂದೇ ಭಾಷೆ. ಪ್ರತಿ ವ್ಯಕ್ತಿಗೂ ಒಂದೇ ಭಾಷೆ ಎಂಬ ಕಲ್ಪನೆಯನ್ನು ಪೋಷಿಸಿದವರು ಬಹುಮಟ್ಟಿಗೆ ಏಕಭಾಷಿಕರಾದ ಅಮೆರಿಕನ್ನರು. ಈ ದೇಶದ ಭಾಷಾಶಾಸ್ತ್ರಜ್ಞರು ಕಟ್ಟಿಕೊಟ್ಟ ಸಿದ್ಧಾಂತದ ಪ್ರಕಾರ ಏಕಭಾಷಿಕ ಸಮುದಾಯಗಳು ಹೆಚ್ಚು ಸುರಳೀತ ಜೀವನವನ್ನು ನಡೆಸುತ್ತವೆ. ಹೆಚ್ಚು ಸಂಪತ್ತನ್ನು ಉತ್ಪಾದಿಸುತ್ತವೆ. ಬಹುಭಾಷಿಕ ಸಮುದಾಯಗಳ ಜೀವನ ಸಂಕ್ಲಿಷ್ಟವಾದುದು. ಅವು ಬಡತನದಿಂದ. ಅನಭಿವೃದ್ಧಿಯಿಂದ ನರಳುತ್ತವೆ. ತಮ್ಮ ವಾದವನ್ನು ಸಮರ್ಥಿಸಲು ಭಾರತವನ್ನು ಉದಾಹರಣೆಯನ್ನಾಗಿ ತೆಗೆದುಕೊಳ್ಳಲು ಈ ವಿದ್ವಾಂಸರು ಹಿಂಜರಿಯಲಿಲ್ಲ. ಭಾರತದಲ್ಲಿ ಬಡತನ, ಅಂತಃಕಲಹ, ವಿಭಜನಾತ್ಮಕ ಪ್ರವೃತ್ತಿಗಳಿರುವುದಕ್ಕೂ ಇಲ್ಲಿನ ಸಮುದಾಯಗಳು ಬಹುಭಾಷಿಕವಾಗಿರುವುದಕ್ಕೂ ಸಂಬಂಧವನ್ನು ಕಲ್ಪಿಸಿದರು. ಕೆಲವು ಕಾಲ ಈ ವಾದಕ್ಕೆ ಮನ್ನಣೆಯೂ ದೊರಕಿತ್ತು. ನಮ್ಮಂತಹ ದೇಶಗಳು ತಮ್ಮ ದೇಶಕ್ಕೆ ಈಗ ಏಕಭಾಷಿಕವಾಗುವುದೊಂದೇ ಉಳಿದಿರುವ ಮಾರ್ಗವೆಂದು ತಿಳಿದು ಅದಕ್ಕೆ ತಕ್ಕ ಭಾಷಾನೀತಿಯನ್ನು ರೂಪಿಸಿಕೊಂಡವು. ಆದರೆ ಭಾಷಾಶಾಸ್ತ್ರಜ್ಞರ ಈ ವಾದವೇ ಬುಡವಿಲ್ಲದ್ದು. ಆರ್ಥಿಕ ನೆಲೆಗಳಿಗೂ ಬಹುಭಾಷಿಕತೆಗೂ ಇರುವ ಸಂಬಂಧ ಅನುಷಂಗಿಕವಾದುದು. ಒಂದು ಇನ್ನೊಂದನ್ನು ಪ್ರಭಾವಿಸಲಾರವು ಎಂಬುದೀಗ ನಮಗೆ ಗೊತ್ತಾಗುತ್ತಿದೆ. ಅಲ್ಲದೆ ಒಂದಕ್ಕಿಂತ ಹೆಚ್ಚು ಭಾಷೆಗಳು ಗೊತ್ತಿರುವುದೇ ಹೆಚ್ಚು ಸಹಜವಾದ ಸನ್ನಿವೇಶ. ಏಕಭಾಷಿಕರಾಗಿರುವುದೇ ಅಪಾಯಕಾರಿ ಎನ್ನುವುದೀಗ ಸ್ಪಷ್ಟಗೊಳ್ಳತೊಡಗಿದೆ. ಈ ತಿಳುವಳಿಕೆಯಿಂದಾಗಿ ಜಗತ್ತಿಗೆಲ್ಲ ಒಂದೇ ಭಾಷೆ ಇರಬೇಕೆನ್ನುವ, ಪ್ರತಿ ವ್ಯಕ್ತಿಗೂ ಒಂದೇ ಭಾಷೆ ಎನ್ನುವ ವಾದಗಳು ಹಿಂದೆಬಿದ್ದಿವೆ. ಇದೂ ಕೂಡ ಜಾಗತೀಕರಣದ ದಾಪುಗಾಲು ಅಳಿಸಿ ಹಾಕಲಾಗದ ಹುಲ್ಲಿನ ದಳಗಳಂತೆ ಈಗ ನಮ್ಮ ಎದುರು ನಿಂತಿವೆ.

ಹೀಗೆ ಯೋಚಿಸಲು ಇನ್ನೂ ಕೆಲವು ಕಾರಣಗಳಿವೆ. ಒಂದು ಪ್ರಸಂಗವನ್ನು ಗಮನಿಸಿ. ಕಳೆದ ಕೆಲವು ವಾರಗಳ ಹಿಂದೆ ಜಾಗತಿಕ ಮಾರುಕಟ್ಟೆಯಲ್ಲಿ ಬಿಡುಗಡೆಗೊಂಡ ಮೈಕ್ರೋಸಾಫ್ಟ್ ಸಂಸ್ಥೆಯ ವಿಂಡೋಸ್ ಕಾರ್ಯವಾಹಿಯ ಹೊಸ ಆವೃತ್ತಿಯಲ್ಲಿ ಇದನ್ನು ವಿಂಡೋಸ್ ಎಕ್ಸ್ ಪಿ ಎನ್ನುತ್ತಾರೆ. ಕನ್ನಡ ಭಾಷೆಯನ್ನು ಬಳಸಲು ಅವಕಾಶವನ್ನು ಕಲ್ಪಿಸಿಕೊಡಲಾಗಿದೆ. ಜಗತ್ತಿನ ಈ ಮಹಾದೈತ್ಯ ಸಂಸ್ಥೆ ಕನ್ನಡಕ್ಕೆ ಪೋಷಕವಾಗುವ ಕಾರ್ಯವಾಹಿಯನ್ನು ಏಕೆ ರೂಪಿಸಿತು? ಇದನ್ನು ಕನ್ನಡದ ಹೆಗ್ಗಳಿಕೆ ಎಂದು ಹೇಳಿಕೊಳ್ಳಬಹುದು. ಆದರೆ ವಾಸ್ತವ ಬೇರೆಯೇ ಇದೆ. ಇಂಗ್ಲಿಶನ್ನು ಮಾತ್ರ ಪೋಷಿಸುವ

ಕಾರ್ಯವಾಹಿಯನ್ನು ಅವಲಂಬಿಸಿದರೆ ಅಥವಾ ಅದನ್ನು ಮಾತ್ರ ಮಾರುಕಟ್ಟೆಯಲ್ಲಿ ಕೊಟ್ಟರೆ ಜಾಗತಿಕವಾಗಿ ಗ್ರಾಹಕರ ಸಂಖ್ಯೆಯಲ್ಲಿ ಭಾರಿ ಪ್ರಮಾಣದ ಇಳಿಕೆಯಾಗಲಿದೆ ಎನ್ನುವ ತಿಳುವಳಿಕೆ ಆ ಸಂಸ್ಥೆಗೆ ಬಂದಿದೆ. ಕೇವಲ ಇಂಗ್ಲಿಶ್ ಮಾತ್ರ ಇರುವ ಆವೃತ್ತಿಯೆಂದರೆ ಅದನ್ನು ಬಳಸುವವರೆಲ್ಲ ಇಂಗ್ಲಿಷನ್ನು ಕಲಿಯುವುದು ಅನಿವಾರ್ಯ. ಆದರೆ ಇಷ್ಟು ಪ್ರಮಾಣದ ಇಂಗ್ಲಿಶ್ ಕಲಿಕೆ ಸಾಧ್ಯವಾಗಿ ಆನಂತರ ಜನರು ಈ ಕಾರ್ಯವಾಹಿಯನ್ನು ಬಳಸುವುದೆಂದರೆ ಅದು ಆಗಿಹೋಗದ ಮಾತು. ಇದರಿಂದ ಮಾರುಕಟ್ಟೆಯ ಕುಸಿತವನ್ನೇ ಎದುರಿಸಬೇಕಾಗುತ್ತದೆ. ಅಪಾರ ಪ್ರಮಾಣದಲ್ಲಿರುವ ಇಂಗ್ಲಿಶ್ ಬಾರದ ಗ್ರಾಹಕರನ್ನು ತನ್ನ ತೆಕ್ಕೆಗೆ ತೆಗೆದುಕೊಳ್ಳಲು ಈ ಸಂಸ್ಥೆಗೆ ಇದ್ದ ಮಾರ್ಗವೆಂದರೆ ತನ್ನ 'ಇಂಗ್ಲಿಶ್ ಮಾತ್ರ' ಎನ್ನುವ ನಿಲುವನ್ನೇ ಬಿಟ್ಟುಕೊಡುವುದು. ಈ ಬದಲಾವಣೆಯನ್ನು ನಾವು ಕುತೂಹಲದಿಂದ ಗಮನಿಸಬೇಕು. ಇಲ್ಲಿಯೂ ಕೂಡ ಕನ್ನಡದಂಥ ಭಾಷೆ ತನ್ನ ಅಸ್ತಿತ್ವವನ್ನು ಕಾಯ್ದುಕೊಳ್ಳುವ ಅವಕಾಶಗಳು ಹೆಚ್ಚಾಗಿವೆ.

ಕನ್ನಡಕ್ಕೀಗ ಇಂಗ್ಲಿಶಿನಿಂದ, ಪರೋಕ್ಷವಾಗಿ ಜಾಗತೀಕರಣದಿಂದ ಕುತ್ತುಗಳಿವೆ ಎಂದು ಚಿಂತಿಸುವುದು ಈಗ ಅರೆಸತ್ಯವಾಗಿ ಕಾಣತೊಡಗಿದೆ. ನಮ್ಮ ಭಾಷಾ ಸಂದರ್ಭದ ಮಾಹಿತಿಯಿಂದ, ತೋರ್ಕೆಯಿಂದ ನಾವು ಇಡೀ ಸನ್ನಿವೇಶದ ಸಂಕೀರ್ಣತೆಯನ್ನು ತಿಳಿಯುವುದು ಸಾಧ್ಯವಿಲ್ಲ. ಆಕ್ರಮಣಶೀಲ ಭಾಷೆಯಾದ ಇಂಗ್ಲಿಶಿನ ಸಂದರ್ಭದಲ್ಲಿ ಆಗುತ್ತಿರುವ ಬದಲಾವಣೆಗಳನ್ನು ನಾವೀಗ ನೋಡಿದ್ದೇವೆ. ಅದರಿಂದಾಗಿ ಕನ್ನಡಕ್ಕೆ ನಿರಾಳವಾಗಿರುವ ಸಾಧ್ಯತೆಗಳು ದೊರಕಿವೆ. ಈ ನಿರಾಳತೆಗೆ ಕನ್ನಡದ ಸಂದರ್ಭವಾಗಲೀ. ಕನ್ನಡ ಭಾಷಿಕರ ಯತ್ನಗಳಾಗಲೀ ಕಾರಣವಲ್ಲ. ಜಾಗತೀಕರಣ ಪ್ರಕ್ರಿಯೆಯಲ್ಲಿ ಆಗುತ್ತಿರುವ ಬದಲಾವಣೆಯ ಪರಿಣಾಮಗಳ ಪ್ರಯೋಜನಗಳು ಕನ್ನಡಕ್ಕೆ ಅನಾಯಾಸವಾಗಿ ದೊರಕಿವೆ. ಆದರೆ ಈ ಅವಕಾಶವನ್ನು ಕೆಲವು ಹುನ್ನಾರಗಳನ್ನು ರೂಪಿಸಲು ನಾವು ಬಳಸಿಕೊಳ್ಳಬೇಕು. ಈ ಹುನ್ನಾರಗಳು ಏಕೆ? ಇದು ಸಿದ್ಧತೆಯ ಕಾಲ. ಇಂಗ್ಲಿಶ್ ಭಾಷೆಯಲ್ಲಿ ಈಗ ಆಗುತ್ತಿರುವ ಹೊಂದಾಣಿಕೆಯ ಅನಂತರದ ದಿನಗಳಲ್ಲಿ ಯಾವ ಹೊಸ ಕುತ್ತುಗಳು ಒದಗಿಬರುತ್ತವೆಯೋ ಗೊತ್ತಿಲ್ಲ. ಕೆಲವನ್ನು ಊಹಿಸಲು ಸಾಧ್ಯವಿದೆ.

ಕನ್ನಡದಂಥ ಭಾಷೆಗಳಿಗೆ ತಂತ್ರಜ್ಞಾನದಲ್ಲಿ ಅವಕಾಶಗಳನ್ನು ಒದಗಿಕೊಡುತ್ತಿರುವ ಉದಾಹರಣೆಗಳನ್ನು ನಾವು ಗಮನಿಸಿದ್ದೇವೆ. ಹೀಗೆ ಅವಕಾಶ ನೀಡುವಾಗ ಕನ್ನಡದ ಸ್ವರೂಪ ಹೇಗಿರಬೇಕು ಎನ್ನುವುದನ್ನು ನಿರ್ಧರಿಸುವ ಅವಕಾಶ ಕನ್ನಡಿಗರಿಗೆ ಇಲ್ಲ. ವಿಂಡೋಸ್ ಎಕ್ಸ್‌ಪಿಯಲ್ಲಿರುವ ಕನ್ನಡದ ಸ್ವರೂಪವನ್ನು ಮೈಕ್ರೋಸಾಫ್ಟ್ ಕಂಪೆನಿ ತನ್ನಿಂದ ತಾನೇ ನಿರ್ಧರಿಸಿದೆ. ಕನ್ನಡಿಗರೊಡನೆ ಸಮಾಲೋಚಿಸುವುದು ಅವಶ್ಯವೆಂದು ತಿಳಿದಿಲ್ಲ. ಇನ್ನೊಂದು ಉದಾಹರಣೆಯನ್ನು ಗಮನಿಸಿ. ಅಂತರ್ಜಾಲವನ್ನು ಬಳಸುವವರಿಗೆ ಗೂಗಲ್ ಎಂಬ ಶೋಧಕದ ಪರಿಚಯವಿರುತ್ತದೆ. ಇದು ನಿಮಗೆ ಬೇಕಾದ ಮಾಹಿತಿಯು ಎಲ್ಲಿ ದೊರಕುತ್ತದೆ ಎಂಬುದನ್ನು ಕೆಲವೇ ಸೆಕೆಂಡುಗಳಲ್ಲಿ ತೋರಿಸಬಲ್ಲುದು. ಈ ಶೋಧಕದಲ್ಲಿ ಈವರೆಗೆ ಇಂಗ್ಲಿಶ್ ಭಾಷೆಯ ಮೂಲಕ ಮಾತ್ರ ಹುಡುಕಾಟ ನಡೆಸಬೇಕಾಗಿತ್ತು. ಆದರೆ ಈಗ ಜಗತ್ತಿನ ಸುಮಾರು ಅರವತ್ತು ಭಾಷೆಗಳ ಮೂಲಕ

ಹುಡುಕಲು ಅವಕಾಶವನ್ನು ಕಲ್ಪಿಸಲಾಗಿದೆ. ಆ ಭಾಷೆಗಳಲ್ಲಿ ಕನ್ನಡವೂ ಒಂದು. ಆದರೆ ನೀವು ಕನ್ನಡವನ್ನು ಹೇಗೆ ಬಳಸಬೇಕೆಂಬುದನ್ನೂ ಆ ಶೋಧಕದ ನಿಯಂತ್ರಕರೇ ನಿರ್ಧರಿಸಿದ್ದಾರೆ. ಅಂದರೆ ನೀವು ಕನ್ನಡವನ್ನು ಇಂಗ್ಲಿಶ್ (ಅಂದರೆ ರೋಮನ್) ಲಿಪಿಯಲ್ಲಿ 'ಬರೆದು' ಹುಡುಕಲು ಹೇಳಬೇಕಾಗುತ್ತದೆ. ಅಂದರೆ ಕನ್ನಡಕ್ಕೆ ಅವಕಾಶ ಕಲ್ಪಿಸುವಾಗಲೂ ಆಟದ ನಿಯಮಗಳನ್ನು ನಿರೂಪಿಸುವವರು ಜಾಗತೀಕರಣದ ನಿಯಂತ್ರಕ ಪ್ರಭುಗಳೇ ಆಗಿರುತ್ತಾರೆ. ಈ ಅಂಶದ ಕಡೆ ನಾವೀಗ ಹೆಚ್ಚು ಗಮನ ಹರಿಸಬೇಕಾಗುತ್ತದೆ. ಜಗತ್ತಿನ ಭಾಷೆಗಳ ವೈವಿಧ್ಯವನ್ನು ಕಾಯ್ದುಕೊಳ್ಳಬೇಕೆಂಬ ತಿಳುವಳಿಕೆಯನ್ನು ಅರಗಿಸಿಕೊಳ್ಳುತ್ತಿರುವ ಇಂಗ್ಲಿಶ್ ತನ್ನ ಹೊಸ ಹುನ್ನಾರಗಳನ್ನು ರೂಪಿಸುತ್ತಿದೆ. ಈ ಹುನ್ನಾರಗಳು ಕನ್ನಡದಂಥ ಭಾಷೆಗಳ ಒಳಗಿರುವ ವೈವಿಧ್ಯಕ್ಕೆ ಕುತ್ತಾಗಬಹುದು. ಜಾಗತಿಕವಾಗಿ ಮಾನ್ಯತೆ ಪಡೆದ ಕನ್ನಡದ ರೂಪವೊಂದಕ್ಕೆ ಮಾತ್ರ ಮನ್ನಣೆ ಸಿಕ್ಕು ಕನ್ನಡದ ಉಳಿದ ಪ್ರಭೇದಗಳು ಹಿನ್ನೆಲೆಗೆ ಸರಿಯುವಂತಾಗುತ್ತದೆ. ಅಲ್ಲದೆ ಕನ್ನಡದ ಅಧಿಕೃತ ರೂಪವನ್ನು ಗುರುತಿಸುವ ಕೆಲಸವನ್ನು ತಂತ್ರಜ್ಞಾನದ ನಿಯಂತ್ರಕರು ಮಾಡುತ್ತಿರುತ್ತಾರೆ.

ಈ ಸನ್ನಿವೇಶವನ್ನು ನಾವು ಹೇಗೆ ನಿಭಾಯಿಸಬೇಕು? ಜಾಗತಿಕವಾದ ಪಾಠವೊಂದನ್ನು ಮತ್ತೆ ನೆನಪಿಸಿಕೊಳ್ಳೋಣ. 'ಇಂಗ್ಲಿಶ್ ಮಾತ್ರ' ಎನ್ನುವ ನೆಲೆಯಿಂದ 'ಇಂಗ್ಲಿಶ್ ಜತೆಗೆ' ಎನ್ನುವ ನೆಲೆಗೆ ಮುಕ್ತಮಾರುಕಟ್ಟೆಯ ಹುನ್ನಾರಗಳು ಬದಲಾಗಿವೆ. ನಾವು ಈ ಪಾಠವನ್ನು ಅರಗಿಸಿಕೊಳ್ಳಬೇಕು. ಕನ್ನಡ ಮತ್ತು ಇಂಗ್ಲಿಶಿನ ಸಂಬಂಧಗಳನ್ನು ಮರುವ್ಯಾಖ್ಯಾನಕ್ಕೆ ಗುರಿಪಡಿಸುವುದು ಹಾಗಾಗಿ ಅತ್ಯವಶ್ಯಕವಾಗಿದೆ. ನಾವೂ ಈಗ 'ಕನ್ನಡ ಮಾತ್ರ' ಎಂಬ ನೆಲೆಯಲ್ಲಿ ನಿಲ್ಲುವುದನ್ನು ಬಿಟ್ಟು 'ಕನ್ನಡದ ಜತೆಗೆ ಇಂಗ್ಲಿಶ್' ಎಂಬ ನೆಲೆಗೆ ಸರಿಯಬೇಕಾಗಿದೆ. ಇದು ಇಲ್ಲಿ ಹೇಳಿದಷ್ಟು ಸರಳವಾದ ಸಲಹೆಯಲ್ಲ.

ಕನ್ನಡ ಇಂಗ್ಲಿಶಿನೊಡನೆ ಇರಲು ತನ್ನದೇ ಆದ ಕೆಲವು ತಂತ್ರಗಳನ್ನು ಯೋಜಿಸಿಕೊಂಡು ಜಾರಿಗೆ ತರುವುದು ಅವಶ್ಯ. ಆ ಬಗೆಗೆ ಕೆಲವು ಮಾತುಗಳನ್ನು ಹೇಳಬೇಕಾಗಿದೆ. ಕನ್ನಡವನ್ನು ಇಂಗ್ಲಿಶಿನೊಡನೆ ಬಳಸುವ ಕ್ರಮವನ್ನು ಈಗಲೂ ಬೇರೊಂದು ರೀತಿಯಲ್ಲಿ ಜಾರಿಯಲ್ಲಿ ಇರಿಸಲಾಗಿದೆ. ನಮ್ಮ ಕಚೇರಿಯ ಅರ್ಜಿ ನಮೂನೆಗಳು. ಬ್ಯಾಂಕ್ ನಮೂನೆಗಳು. ರೈಲ್ವೆಯಲ್ಲಿ ಬಳಸುವ ನಮೂನೆಗಳು. ಅಂಚೆಯವರು ಬಳಸುವ ಪ್ರಪತ್ರಗಳು ಕನ್ನಡ ಮತ್ತು ಇಂಗ್ಲಿಶ್‌ಗಳೆರಡರಲ್ಲೂ ಮಾಹಿತಿಯನ್ನು ಒದಗಿಸುತ್ತವೆ. ಆದರೂ ಅಲ್ಲೆಲ್ಲಾ ಕನ್ನಡಕ್ಕೆ ಅಧಿಕೃತತೆಯ ಪಟ್ಟವಿಲ್ಲ. ಹಾಗಾಗಿ ಇದು ಸರಿಯಾದ ಮಾರ್ಗವಲ್ಲ. ಇನ್ನೊಂದು ವಿಧಾನವನ್ನು ಕನ್ನಡ ಹಲವಾರು ಶತಮಾನಗಳಿಂದ ಬಳಸಿ ನೋಡಿದೆ. ಸಂಸ್ಕೃತದೊಡನೆ ಮುಖಾಮುಖಿಯಾದಾಗ ಕನ್ನಡದ ಅಧಿಕೃತತೆಯನ್ನು ಕಾಯ್ದುಕೊಳ್ಳಲು ಒಂದು ಹೊಸ ಪರಿಕ್ರಮವನ್ನು ಕನ್ನಡ ರೂಪಿಸಿಕೊಂಡಿತು. ಅದರಂತೆ ಸಂಸ್ಕೃತ ಭಾಷೆಯನ್ನು ಕನ್ನಡ ಲಿಪಿಯಲ್ಲೂ ಬರೆಯಲು ತೊಡಗಿದರು. ಅದಕ್ಕಾಗಿ ಕನ್ನಡ ಲಿಪಿಯಲ್ಲೇ ಕೆಲವು ಬದಲಾವಣೆಗಳನ್ನು

ಮಾಡಿಕೊಳ್ಳಲಾಯಿತು. ಇದೆಲ್ಲಾ ನಡೆದು ಸಾವಿರಾರು ವರ್ಷಗಳು ಕಳೆದಿವೆ. ಈಗ ನಾವು ಸಂಸ್ಕೃತವನ್ನು ದೇವನಾಗರಿ ಲಿಪಿಯಲ್ಲಿ ಓದುವ ಅನಿವಾರ್ಯತೆ ಇಲ್ಲ. ಇದರಿಂದೇನಾಯ್ತು? ಕನ್ನಡದೊಳಗೆ ಸೇರಿರುವ ಸಾವಿರಾರು ಸಂಸ್ಕೃತದ ಮಾತುಗಳು ಬರವಣಿಗೆಯಲ್ಲಿ ಕನ್ನಡವೆಂದೇ ತೋರತೊಡಗಿವೆ. ಸಂಸ್ಕೃತದೊಡನೆ ಇದ್ದ ದೂರ ಇಲ್ಲವಾಗಿದೆ. ತಿಳಿದವರೂ ಕೂಡ ಸಂಸ್ಕೃತ ಶಬ್ದಗಳನ್ನು ಕನ್ನಡವೆಂದೇ ವ್ಯವಹರಿಸುತ್ತಾರೆ. ಇದು ತಪ್ಪಲ್ಲ. ಇಂಗ್ಲಿಶ್ ಭಾಷೆಯ ವಿಚಾರದಲ್ಲೂ ನಾವು ಇಂಥದೇ ತಂತ್ರವನ್ನು ಬಳಸಬೇಕು. ಇಂಗ್ಲಿಶನ್ನು ಕನ್ನಡ ಲಿಪಿಯಲ್ಲಿ ಬರೆಯಲು ತೊಡಗಬೇಕು. ಇದರ ದೂರಗಾಮಿ ಪರಿಣಾಮಗಳನ್ನು ಈಗ ಊಹಿಸಲು ಸಾಧ್ಯವಿಲ್ಲ. ಇಂಗ್ಲಿಶಿನ ಬಗೆಗೆ ನಮ್ಮ ಮಕ್ಕಳಲ್ಲಿ ಇರುವ ಭಯ ಇದರಿಂದ ದೂರವಾಗುತ್ತದೆ. ಏಕೆಂದರೆ ಕಲಿಕೆಯ ಹಂತಗಳಲ್ಲಿ ಅವರು ಇಂಗ್ಲಿಶಿನ ಬರವಣಿಗೆ ರೂಪವನ್ನು ಮಾತ್ರ ಎದುರಿಸುತ್ತಾರೆ. ಆಡುರೂಪ ಅವರನ್ನು ಅಷ್ಟು ಕಾಡಿಸುವುದಿಲ್ಲ. ಕನ್ನಡ ಲಿಪಿಯಲ್ಲಿರುವ ಇಂಗ್ಲಿಶ್ ಅವರಿಗೆ ದೂರದ. ಹೆದರಿಕೆಯ ಭಾಷೆಯೆನಿಸುವುದಿಲ್ಲ. ಇದರಿಂದ ನಮ್ಮ ಶಿಕ್ಷಣದ ಸಮಸ್ಯೆಗಳು ಸಾಕಷ್ಟು ಕಡಿಮೆಯಾಗುತ್ತವೆ.

ಎರಡನೆಯ ತಂತ್ರವನ್ನೂ ಕನ್ನಡ ಈಗಾಗಲೇ ಬಳಸಿದೆ. ಇದು ತದ್ಭವಗಳಿಗೆ ಮನ್ನಣೆ ನೀಡುವ ವಿಧಾನ. ಸಂಸ್ಕೃತದ ನೂರಾರು ಪದಗಳ ತದ್ಭವ ರೂಪಗಳನ್ನು ಕನ್ನಡದಲ್ಲಿ ಬಳಸುತ್ತೇವೆ. ತದ್ಭವಗಳು ಬಹುಮಟ್ಟಿಗೆ ಕನ್ನಡದ ಉಚ್ಚಾರಣೆಗೆ ಅನುಗುಣವಾಗಿ ಸಂಸ್ಕೃತದ ಪದಗಳ ಉಚ್ಚಾರಣೆಯಲ್ಲಿ ಮಾಡಿಕೊಂಡ ಬದಲಾವಣೆಯನ್ನು ಸೂಚಿಸುತ್ತವೆ. ತದ್ಭವಗಳನ್ನು ರೂಪಿಸಿಕೊಂಡದ್ದು ಮಾತ್ರವಲ್ಲದೆ ಅವುಗಳನ್ನು ಅಧಿಕೃತವಾಗಿ ಬಳಸಲು ಕನ್ನಡಿಗರು ಹಿಂಜರಿಯಲಿಲ್ಲ. ಇದರಿಂದ ಸಂಸ್ಕೃತವನ್ನು ಎದುರಿಸಲು ಎರಡನೆಯ ತಂತ್ರವನ್ನು ಯಶಸ್ವಿಯಾಗಿ ಕನ್ನಡ ಬಳಸಿದಂತಾಯಿತು. ಇಂಗ್ಲಿಶಿನ ವಿಚಾರದಲ್ಲೂ ಈ ವಿಧಾನವನ್ನು ಬಳಸಲು ಮುಂದಾಗಬೇಕು. ಇಂಗ್ಲಿಶ್ ಪದಗಳನ್ನು ಕನ್ನಡಿಗರು ಉಚ್ಚರಿಸುವಾಗ ಕನ್ನಡದ ಜಾಯಮಾನಕ್ಕೆ ಅನುಗುಣವಾಗಿ ಯಾವ ಯಾವ ಬದಲಾವಣೆಗಳನ್ನು ಮಾಕೊಳ್ಳುತ್ತಾರೋ ಆ ಬದಲಾವಣೆಗಳಿರುವ ತದ್ಭವ ರೂಪಗಳಿಗೆ ಬರೆಹದಲ್ಲೂ ನಾವು ಅವಕಾಶ ಮಾಡಿಕೊಡಬೇಕು. ಈ ಸಲಹೆಯನ್ನು ಓದಿದ ಹಲವರು ಹೌಹಾರಬಹುದು. ಆದರೆ ಕೊಂಚ ತಾಳ್ಮೆಯಿಂದ ಪರಿಸ್ಥಿತಿಯನ್ನು ಗ್ರಹಿಸುವುದು ಅವಶ್ಯ. ನಾವೀಗ ನಾವು ಅಧಿಕೃತವೆಂದು ತಿಳಿದಿರುವ ಇಂಗ್ಲಿಶ್ ರೂಪಗಳನ್ನು ಬರೆಹದಲ್ಲೂ ಅವುಗಳ ತದ್ಭವಗಳನ್ನು ಆಡುಮಾತಿನಲ್ಲೂ ಬಳಸುತ್ತಿದ್ದೇವೆ. ಬರೆಹದಲ್ಲಿ ಈ ತದ್ಭವಗಳು ಬಂದರೆ ಅದು ತಮಾಷೆಗಾಗಿ ಇಲ್ಲವೇ ಗೇಲಿ ಮಾಡಲು ಬಳಕೆಯಾಗಿರುತ್ತವೆ. ಅಧಿಕೃತ ರೂಪಗಳ ಜತೆಗೆ ತದ್ಭವಗಳನ್ನೂ ಬರೆಹದಲ್ಲಿ ಕನ್ನಡ ಲಿಪಿಯಲ್ಲಿ ಬರೆಯುವುದು ಸೂಕ್ತ. ಇದರಿಂದ ಕನ್ನಡದ ಹಲವು ಕೀಳರಿಮೆಗಳಿಂದ ಹೊರಬರುವುದು ಸಾಧ್ಯ. ಈಗಾಗಲೇ ಸಂಸ್ಕೃತದ ಜತೆಗೆ ಈ ಬಗೆಯ ಅನುಸಂಧಾನವನ್ನು ಕನ್ನಡ ಮಾಡಿ ಇದು ಸಾಧ್ಯವೆಂದು ತೋರಿಸಿಕೊಟ್ಟಿದೆ. ಇಂಗ್ಲಿಶಿನ ವಿಷಯದಲ್ಲೂ ಈ ಯೋಜನೆಯನ್ನು ಮುಂದುವರೆಸಬೇಕು.

ಇನ್ನೊಂದು ತಂತ್ರ ಇದಕ್ಕೆ ವಿರುದ್ಧ ದಿಕ್ಕಿನಲ್ಲಿ ನಡೆಯಬೇಕು. ಅಸಾಧಾರಣ ವೇಗದಲ್ಲಿ ಮುನ್ನಡೆಯುತ್ತಿರುವ ತಂತ್ರಜ್ಞಾನದೊಡನೆ ಹೆಗಲೆಣೆಯಾಗಿ ನಡೆಯಲು ಕನ್ನಡ ಒಂದು ನಿರ್ಣಯವನ್ನು ಮಾಡಬೇಕು. ಕನ್ನಡವನ್ನು ಅವಶ್ಯ ಬಿದ್ದಲ್ಲಿ ರೋಮನ್ (ಅಂದರೆ ಇಂಗ್ಲಿಶ್) ಲಿಪಿಯಲ್ಲಿ ಬರೆಯುವುದನ್ನು ನಾವು ಒಪ್ಪಬೇಕು. ಕನ್ನಡ ಭಾಷೆಗೆ ರೋಮನ್ ಒಂದು ಪರ್ಯಾಯ ಲಿಪಿ ಎಂದು ಪರಿಗಣಿಸಬೇಕು. ಇದರಿಂದ ಕನ್ನಡಕ್ಕೆ ಅವಶ್ಯವಾದ ತಂತ್ರಜ್ಞಾನವನ್ನು ಕಾರ್ಯವಾಹಿಗಳನ್ನು ಸಿದ್ಧಪಡಿಸುವವರೆಗೆ ಕಾಯುತ್ತ ಕುಳಿತಿರಬೇಕಾಗಿಲ್ಲ. ಇಂಗ್ಲಿಶಿನ ಜೊತೆಗೆ ಕನ್ನಡ ಬಳಕೆಯಾಗುವ ಅವಕಾಶ ಇದರಿಂದ ಕಲ್ಪಿತವಾಗುತ್ತದೆ. ಸಂವಹನ ಕ್ಷೇತ್ರದಲ್ಲಿ ಇದು ತೆರೆಯುವ ಅವಕಾಶಗಳು ಅನೇಕ. ಇ-ಮೇಲ್ ಕಳುಹಿಸುವಾಗ ಕನ್ನಡವನ್ನು ಇಂಗ್ಲಿಷ್ ಲಿಪಿಯಲ್ಲಿ 'ಬರೆದು' ಕಳುಹಿಸಲು ಸಾಧ್ಯವಷ್ಟೆ. ಇದರಿಂದ ತಂತ್ರಜ್ಞಾನ ಒದಗಿಸುವ ಸೌಲಭ್ಯಗಳು ಕನ್ನಡಕ್ಕೆ ಸುಲಭವಾಗಿ ಲಭಿಸುತ್ತವೆ. ಕನ್ನಡ ಲಿಪಿಯ ಸೌಂದರ್ಯ, ಅದರ ಪ್ರಾಚೀನತೆ ಮುಂತಾದ ಸಂಗತಿಗಳನ್ನು ಬಿಟ್ಟುಕೊಡದೆಯೂ ಈ ಮಾರ್ಗವನ್ನು ಅನುಸರಿಸಬಹುದು. ಏಕೆಂದರೆ ಕನ್ನಡ ಪಿಲಿಗೆ ಪರ್ಯಾಯವಾಗಿ ಇಂಗ್ಲಿಶ್ ಪಿಲಿಯನ್ನು ಬಳಸಬೇಕೆಂದು ಇಲ್ಲಿ ಹೇಳುತ್ತಿಲ್ಲ. ಅವೆರಡೂ ಸಮಾನಾಂತರ ಲಿಪಿಗಳಾಗಿರಬೇಕೆಂದು ಸೂಚಿಸಲಾಗುತ್ತಿದೆ. ಅಲ್ಲದೆ ಈಗ ಒಂದು ಲಿಪಿಯಿಂದ ಇನ್ನೊಂದು ಲಿಪಿಗೆ ಪರಿವರ್ತಿಸುವ ಹಲವಾರು ಕಾರ್ಯವಾಹಿಗಳು ಕೈಗೆಟುಕುವಂತಿವೆ. ಹಾಗೆ ನೋಡಿದರೆ ನೀವೀಗ ಓದುತ್ತಿರುವ ಲೇಖನವನ್ನು ಮೂಲದಲ್ಲಿ 'ಬರೆದದ್ದು' ರೋಮನ್ ಲಿಪಿಯಲ್ಲಿ. ಆದರೆ ನೀವೀಗ ಇದನ್ನು ಕನ್ನಡ ಲಿಪಿಯಲ್ಲಿ ಓದುತ್ತಿದ್ದೀರಿ. ಆದ್ದರಿಂದ ಮೇಲಿನ ಸಲಹೆಯಲ್ಲಿ ಅಸಹಜವಾದುದೇನೂ ಇಲ್ಲ. ಇವು ಕೇವಲ ವ್ಯಕ್ತಿಗತ ಸೌಲಭ್ಯಗಳಾಗದೇ ನಮ್ಮ ಭಾಷಾನೀತಿಯ ಭಾಗವಾಗಬೇಕು. ಕನ್ನಡಿಗರಿಗೆ ಅದು ಸಹಜವಾದ ನೆಲೆ ಎಂದು ತೋರಬೇಕು. ಆಗಲೇ ಇಂಗ್ಲಿಶ್ ಗುಮ್ಮನನ್ನು ನಾವು ಎದುರಿಸಲು ಸಾಧ್ಯವಾಗುತ್ತದೆ.

ಕನ್ನಡದ ಬಗೆಗೆ ಅಭಿಮಾನವಿರುವುದು ತಪ್ಪಲ್ಲ. ಆದರೆ ಅದು ಯಾವುದೋ ಕಾಲದ, ಯಾವುದೋ ವ್ಯಕ್ತಿಯ ಸಾಧನೆಗಳ ಬೆನ್ನ ಹಿಂದೆ ನಿಂತು ಸುರಕ್ಷಿತ ಭಾವನೆಯನ್ನು ಅನುಭವಿಸುವುದಲ್ಲ. ಹಾಗೆಯೇ ಕನ್ನಡಕ್ಕೆ ಬಂದಿರುವ ಕುತ್ತುಗಳನ್ನು ಕುರಿತು ಯೋಚಿಸುವುದರಲ್ಲೂ ತಪ್ಪಿಲ್ಲ. ಆದರೆ ಅದು ಹಳಹಳಿಕೆಯ, ನಿಸ್ಸಹಾಯಕತೆಯ ಸ್ಥಿತಿಗೆ ನಮ್ಮನ್ನು ತಳ್ಳಬಾರದು. ಕುತ್ತುಗಳನ್ನು ಪರಿಹರಿಸಿಕೊಳ್ಳಲು ಇರುವ ಮಾರ್ಗೋಪಾಯಗಳನ್ನು ಕಂಡುಕೊಳ್ಳಲು ನಮ್ಮನ್ನು ಪ್ರೇರೇಪಿಸಬೇಕು. ಕನ್ನಡದ ಸ್ಥಾನಮಾನಗಳಲ್ಲಿ ಪರಿವರ್ತನೆಯಾಗಬೇಕಾದರೆ ಸಮಾಜದ ಬೇರೆ ಬೇರೆ ವಲಯಗಳಲ್ಲಿ, ಅದರಲ್ಲೂ ಕನ್ನಡಿಗರ ಆರ್ಥಿಕ ಸ್ಥಿತಿಯಲ್ಲಿ ಬದಲಾವಣೆಗಳಾಗಬೇಕೆಂದೂ, ಹಾಗಾದಾಗ ಮಾತ್ರ ಕನ್ನಡಕ್ಕೆ ಬಂದಿರುವ ಆತಂಕಗಳು ನಿವಾರಣೆಯಾಗುತ್ತವೆ ಎಂದು ವಾದಿಸುವುದರಲ್ಲೂ ದೋಷವಿಲ್ಲ. ಆದರೆ ಇವೆಲ್ಲದರ ಜೊತೆಗೆ ಬಾಷಿಕರು ತಮ್ಮ

ಭಾಷೆಯ ಅವಸ್ಥೆಯನ್ನು ಅರಿತು ಅದರ ಅಸ್ಮಿತೆಯನ್ನು ಕಾಯ್ದುಕೊಳ್ಳಲು ಭಾಷಿಕವಾದ ತಂತ್ರಗಳನ್ನು ರೂಪಿಸಿಕೊಳ್ಳುವುದು ಕೂಡ ಅತ್ಯವಶ್ಯ. ಇದಕ್ಕಾಗಿ ನಮ್ಮ ಮೇಲೆ ಆಕ್ರಮಣ ನಡೆಸುತ್ತಿರುವ ಇಂಗ್ಲಿಶಿನಿಂದಲೂ ಪಾಠಗಳನ್ನು ಕಲಿಯಬೇಕಾಗಬಹುದು; ನಮ್ಮ ಭಾಷೆ ಸಾಗಿಬಂದ ಹಾದಿಯಲ್ಲೂ ನಮಗೆ ಅವಶ್ಯವಾದ ಸೂಚನೆಗಳು ಸಿಗಬಹುದು. ಇದು ಮುಖಾಮುಖಿಯ ಕಾಲವಲ್ಲ; ಅನುಸಂಧಾನಗಳ ಕಾಲ. ನಮಗೆ ದತ್ತವಾಗುವ ಸಿದ್ಧಾಂತಗಳನ್ನು ನಮ್ಮ ಅನುಭವಗಳ ಬೆಳಕಿನಲ್ಲಿ ಪರೀಕ್ಷಿಸಿಕೊಳ್ಳಬೇಕಾದ ಕಾಲ. ಜಾಗತೀಕರಣದ ಒತ್ತಡಗಳಲ್ಲೂ ಕನ್ನಡದಂಥ ಭಾಷೆ ಹೇಗೆ ತನ್ನ ತಾಳಿಕೆಯ ಗುಣಗಳನ್ನು ಬೆಳೆಸಿಕೊಳ್ಳಬಹುದು ಎಂಬುದನ್ನು ಕಂಡುಕೊಳ್ಳಬೇಕಾಗಿದೆ.

## ಎಫ್.ಎಂ. ವಾಹಿನಿಗಳ ಕನ್ನಡ

ಎಫ್.ಎಮ್ ವಾಹಿನಿಗಳಲ್ಲಿ ರೇಡಿಯೋ ಜಾಕಿಗಳು ಬಳಸುತ್ತಿರುವ ಕನ್ನಡ ಭಾಷೆಯನ್ನು 'ಕುಲಗೆಟ್ಟ ಕನ್ನಡ'ವೆಂದು ಬಣ್ಣಿಸುವುದು ವಾಡಿಕೆಯಾಗಿದೆ. ಈ ರೇಡಿಯೋ ಜಾಕಿಗಳು ತಾವು ಮಾತನಾಡುವ ಕನ್ನಡದಲ್ಲಿ ಹೆಚ್ಚಾಗಿ ಇಂಗ್ಲಿಶ್ ಭಾಷೆಯ ಪದಗಳನ್ನು ಬೆರೆಸುವುದು ಮತ್ತು 'ಅಷ್ಟು ಸಭ್ಯವಲ್ಲದ' ಪದಗಳನ್ನು ಬಳಸುವುದು ಕೆಲವರಿಗೆ ಅವರ ಭಾಷೆ ಕುಲಗೆಟ್ಟಂತೆ ತೋರಲು ಕಾರಣವಾಗಿದೆ. ಕೊಂಚ ಎಚ್ಚರದಿಂದ ಗಮನಿಸಿದರೆ ಎಲ್ಲ ಎಫ್.ಎಮ್ ವಾಹಿನಿಗಳ ರೇಡಿಯೋ ಜಾಕಿಗಳೂ ಒಂದೇ ಬಗೆಯ ಕನ್ನಡವನ್ನು ಬಳಸುತ್ತಿಲ್ಲವೆಂಬುದು ಗೊತ್ತಾಗುತ್ತದೆ. ಕೆಲವು ವಾಹಿನಿಗಳು 'ಏನನ್ನೂ ಬೆರೆಸದ ಕನ್ನಡ'ಕ್ಕೆ ಒಲಿದರೆ( ಉದಾ.ರೇನ್ ಬೋ), ಮತ್ತೆ ಕೆಲವು ಹೆಚ್ಚು ಇಂಗ್ಲಿಶ್‌ಗೆ ಒಲುವೆ ತೋರುತ್ತವೆ (ಎಫ್.ಎಮ್.104.4). ಉಳಿದ ಹಲವು ಕನ್ನಡದಲ್ಲಿ ಇಂಗ್ಲಿಶ್ ಬೆರಸುವ ಹಲವು ಮಾದರಿಗಳನ್ನು ಅನುಸರಿಸುತ್ತವೆ. ಅಂದರೆ ಕೆಲವು ವಾಹಿನಿಗಳಲ್ಲಿ ಹೀಗೆ ಒಂದು ವಿಶಿಷ್ಟ ಬಗೆಯ ಕನ್ನಡವನ್ನು ಬಳಸುತ್ತಿರುವುದಕ್ಕೆ ಗೊತ್ತಾದ ಕಾರಣಗಳಿರಬೇಕು.

ರೇಡಿಯೊ ಜಾಕಿಗಳು ಮಾತಾಡುತ್ತಿರುತ್ತಾರೆ. ತಾವು ಯಾರೊಡನೆ ಮಾತಾಡುತ್ತಿದ್ದೇವೆ ಅಥವಾ ಯಾರು ತಮ್ಮ ಮಾತನ್ನು ಕೇಳಿಸಿಕೊಳ್ಳುತ್ತಿದ್ದಾರೆ ಎಂಬುದು ಅವರಿಗೆ ಗೊತ್ತಿರುವುದಿಲ್ಲ. ಒಂಟಿಯಾಗಿ ಕೊಠಡಿಯಲ್ಲಿ ಕುಳಿತು ಬಿಡುವಿಲ್ಲದಂತೆ ಮಾತಾಡುವುದು ಅವರ ಕೆಲಸ. ಹೀಗೆ ಮಾತಾಡಲು ಅನುಕೂಲವಾಗುವಂತಹ ಸ್ಕ್ರಿಪ್ಟ್ ಅವರಿಗೆ ಲಭ್ಯವಿರುವುದಿಲ್ಲ. ಇದ್ದರೂ ಅದನ್ನೇ ನೇರವಾಗಿ ಮಾತಾಡಿದಂತೆ ಓದುವುದು ಸಾಧ್ಯವಿಲ್ಲ. ಹಾಗಾಗಿ ಈ ರೇಡಿಯೋ ಜಾಕಿಗಳು ತಮ್ಮದೇ ಆದ ಕನ್ನಡ ಮಾತಿನ ಬಗೆಯೊಂದನ್ನು ರೂಪಿಸಿಕೊಳ್ಳಬೇಕಾಗುತ್ತದೆ. ತಮಗೆ ಗೊತ್ತಿಲ್ಲದ ಕೇಳುಗರನ್ನು 'ಗೊತ್ತು ಮಾಡಿಕೊಳ್ಳಬೇಕಾಗುತ್ತದೆ'. ಹೆಚ್ಚು ಸಂದರ್ಭಗಳಲ್ಲಿ ಈ ರೇಡಿಯೊ ಜಾಕಿಗಳು ಕೇಳುವವರು ತಮ್ಮ ಮಾತನ್ನು ಕೇಳಿಸಿಕೊಳ್ಳುವುದರ ಜೊತೆಗೆ ಭಾಗವಹಿಸುವಂತೆಯೂ ಮಾಡಬೇಕಾಗುತ್ತದೆ. ನಿಜದಲ್ಲಿ ಅವರು 'ಮಾರುವವರು' ತಮಗೆ ನೀಡಲಾದ ಸಮಯದಲ್ಲಿ ಮಾತಾಡುವ ಜೊತೆಗೆ ವಾಹಿನಿಗೆ ಬೇಕಾಗಿರುವ ಹಣಗಳಿಕೆಗೂ (ಎಸ್.ಎಮ್.ಎಸ್ ಮೂಲಕ) ನೆರವಾಗಬೇಕು. 'ಮಾರುವವರು' ಅಥವಾ 'ಸಾರುವವರು' ಬಳಸುವ ಕನ್ನಡವನ್ನು ನಾವೆಲ್ಲ ಬಲ್ಲೆವು. ಮಾರುವವರಿಗೆ ತಾವು ಮಾರುತ್ತಿರುವುದೇನು ಮತ್ತು ಅದನ್ನು ಕೊಳ್ಳುವವರು ಯಾರು ಎನ್ನುವುದು ಗೊತ್ತಿರುತ್ತದೆ. ಬೀದಿಯಲ್ಲಿ ಅದನ್ನು

ಸಾರಿಕೊಂಡು ಹೋಗುವಾಗ ಕೊಳ್ಳುವವರಿಗೆ ಮಾಹಿತಿ ಕೊಡುವ ಜೊತೆಗೆ 'ಕೊಳ್ಳಬಲ್ಲವರನ್ನು" ಹುಡುಕುವ ಇರಾದೆ ಕೂಡ ಇರುವುದಷ್ಟೆ. ರೇಡಿಯೋ ಜಾಕಿಗಳ ಕನ್ನಡಕ್ಕೂ ಹೀಗೆ ಕೇಳುಗರನ್ನು ಸೆಳೆದುಕೊಳ್ಳುವ ಇರಾದೆ ಇರುತ್ತದೆ. ಹೀಗೆ ಕೇಳುವವರೂ 'ಕಿವಿಗೊಟ್ಟು' ಇದನ್ನೇ ಕೇಳುತ್ತಿರುವುದಿಲ್ಲ. ಹತ್ತು ಕೆಲಸಗಳ ನಡುವೆ ಕೇಳುತ್ತಿರುತ್ತಾರೆ. ಸಂವಹನದ ಈ ವಿಶಿಷ್ಟ ಸಂದರ್ಭವೇ ಅದಕ್ಕೆ ತಕ್ಕ ಕನ್ನಡವನ್ನು ಬಯಸುತ್ತದೆ.

ರೇಡಿಯೋ ಜಾಕಿಗಳ ಕನ್ನಡವನ್ನು ಇನ್ನೊಂದು ನಿಟ್ಟಿನಲ್ಲಿ ನೋಡಿ. ಅದರ ಪದಕೋಶದಲ್ಲಿ ಹೆಚ್ಚಿನ ವೈವಿಧ್ಯವಿರುವುದಿಲ್ಲ. ತುಂಬ ಕಡೆ ಹೇಳಿದ್ದನ್ನೇ ಹೇಳುವುದುಂಟು. ಆದರೆ ಹೀಗೆ ಮಿತಿಯಿರುವ ಪದಕೋಶವನ್ನು ಬಳಸಿಯೂ ಅದಕ್ಕೊಂದು ಸೆಳೆತವನ್ನು ತರಲು ರೇಡಿಯೊ ಜಾಕಿಗಳು ಯತ್ನಿಸುತ್ತಾರೆ. ಒಂದೆರಡು ಗಂಟೆಗಳ ಕಾಲ ನೀವು ಒಬ್ಬ ರೇಡಿಯೋ ಜಾಕಿಯ ಮಾತುಗಳನ್ನು ಕೇಳಿಸಿಕೊಂಡರೆ ಅವರ ಪದಕೋಶದ ವ್ಯಾಪ್ತಿ ಗೊತ್ತಾಗಿಬಿಡುತ್ತದೆ. ಜೊತೆಗೆ ಅವರ ಮಾತಿನ ಬಳಕೆಗೆ ಇರುವ ವಿಶಿಷ್ಟ ಲಯಗಾರಿಕೆ ಕೂಡ ಪರಿಚಿತವಾಗುತ್ತದೆ. ಮತ್ತೆ ಮಾರುವವರ ಮಾತಿನ ಬಳಕೆಯನ್ನು ಗಮನಿಸಿ. ಅಲ್ಲಿಯೂ ಪದಕೋಶದ ವೈವಿಧ್ಯವಿಲ್ಲ. ಆದರೆ ಮಾತುಗಳ ಜೋಡಣೆಯಲ್ಲಿ ಬೇರೆಕಡೆ ಕಾಣದ ಲಯವೊಂದಿರುತ್ತದೆ. ಅದನ್ನು ನೀವು ಮತ್ತೆಲ್ಲೂ ಕೇಳಲು ಸಾಧ್ಯವಿಲ್ಲ. ರೇಡಿಯೊ ಜಾಕಿಗಳೂ ಕೂಡ ತಮ್ಮ ಕನ್ನಡಕ್ಕೆ ಒಂದು ವಿಶಿಷ್ಟ ಲಯವನ್ನು ತರಲು ಯತ್ನಿಸುತ್ತಿರುತ್ತಾರೆ. ಆ ಲಯದಲ್ಲಿ ಮಾತುಗಳನ್ನು "ಕೇಳಿಸಿ"ಕೊಳ್ಳಬಹುದೇ ಹೊರತು ಹಾಗೆ 'ಮಾತಾಡುವುದು' ಆಗದ ಮಾತು. ಅಥವಾ ಹಾಗೆ ಮಾತಾಡಿದರೆ ಅದು ನಗೆಗೆ ಕಾರಣವಾಗಬಹುದು. ರೇಡಿಯೊ ಜಾಕಿಗಳ ಸಂದರ್ಭದಲ್ಲಿ ಮಾತ್ರ ಅದು ಹೊಂದಿಕೊಳ್ಳುವಂತಿರುತ್ತದೆ. ಆದ್ದರಿಂದ ಈ ಕನ್ನಡ ಹೀಗಿರಲು ಸಂದರ್ಭವೇ ಕಾರಣ. ಹಾಗಿಲ್ಲದೆ ಬೇರೊಂದು ಬಗೆಯಲ್ಲಿ ಕನ್ನಡವನ್ನು ಬಳಸಿದರೆ ಸಂದರ್ಭದ ಉದ್ದೇಶವೇ ಪೂರೈಸದೇ ಹೋಗುತ್ತದೆ. ಆದ್ದರಿಂದ ನಮ್ಮ ವಿರೋಧವೇನಾದರೂ ಇದ್ದರೆ 'ಮಾರುವ' ಸಂದರ್ಭವನ್ನು ಕುರಿತು ಇರಬೇಕೇ ಹೊರತು, ಅಲ್ಲಿ ಬಳಕೆಯಾಗುತ್ತಿರುವ ಕನ್ನಡದ ಬಗೆಗೆ ಅಲ್ಲ.

ಹೋಗಲಿ, ಇನ್ನೂ ಒಂದು ನಿಟ್ಟಿನಿಂದ ಈ ಕನ್ನಡವನ್ನು ನೋಡೋಣ. ಇಲ್ಲಿ ಇಂಗ್ಲಿಶ್ ಪದಗಳು ಬೆರೆತುಕೊಳ್ಳುವುದು ನಮಗೆ ಇಷ್ಟವಾಗದ ವಿಷಯ. ಹಾಗೆ 'ಬೆರೆಸದ ಕನ್ನಡ'ವನ್ನು ಬಳಸುವ ವಾಹಿನಿಗಳ ಕನ್ನಡವನ್ನು ಎಚ್ಚರದಿಂದ ಗಮನಿಸಿದರೆ, ಅಲ್ಲಿ ಹೆಚ್ಚು ಸಂಸ್ಕೃತ ಪದಗಳು ಕನ್ನಡದಲ್ಲಿ ಬೆರೆತಿರುತ್ತವೆ ಎನ್ನುವುದು ಗೊತ್ತಾಗುತ್ತದೆ. ನಮಗೆ ಅದು 'ಶುದ್ಧ ಕನ್ನಡ' (ಕೆಲವರಿಗೆ 'ಅಚ್ಚಗನ್ನಡ')ದಂತೆ ತೋರುತ್ತದೆ. 'ಮೆಸೇಜ್ ಮಾಡಿ' ಎನ್ನುವುದರ ಬದಲು 'ಸಂದೇಶ ಕಳಿಸಿ' ಎನ್ನುವುದು ನಮಗೆ ಸರಿಯಾಗಿ ತೋರುವುದೇಕೇ? ನಮ್ಮ ವಿರೋಧ ಇಂಗ್ಲಿಶ್ ಬಗೆಗೆ ಇರುವಂತಿದೆ. ಹೀಗೆ ಕನ್ನಡವನ್ನು 'ಕುಲಗೆಡಿಸುತ್ತಿರುವವರು', ನಾವೇನೇ ಹೇಳಲಿ ಕನ್ನಡವನ್ನೇ ಮಾತಾಡುತ್ತಿರುತ್ತಾರೆ. ಅಂದರೆ ಕನ್ನಡದ ವ್ಯಾಕರಣದ ನಿಯಮಗಳನ್ನು ಅವರು ಮೀರುತ್ತಿರುವುದಿಲ್ಲ. ಆ ನಿಯಮಗಳು ಒದಗಿಸುವ ವ್ಯಾಪ್ತಿಯಲ್ಲೇ ಕನ್ನಡವನ್ನು ಮಾತಾಡುತ್ತಿರುತ್ತಾರೆ. ಏನೇ ಆದರೂ ಅದು ಕನ್ನಡವೇ ಹೊರತು, ಇಂಗ್ಲಿಶ್ ಆಗುವುದಿಲ್ಲ. ಸಂಕಥನದ ಕೆಲವು ನಿಯಮಗಳನ್ನು ಬಿಡದೆ ಅವರು ಪಾಲಿಸುತ್ತಿರುತ್ತಾರೆ. ಆ ನಿಯಮಗಳನ್ನು ನಾವೆಲ್ಲರೂ

ಸಹಜವೆಂಬಂತೆ ಪಾಲಿಸುವವರೆ ಆಗಿದ್ದೇವೆ. ಉದಾಹರಣೆಗೆ ಒಂದು ಸಂಕಥನ ನಿಯಮವನ್ನು ಗಮನಿಸಿ. ಬಹುಪಾಲು ಸಂದರ್ಭಗಳಲ್ಲಿ ದೂರವಾಣಿ ಕರೆಗಳಿಗೆ ನಮ್ಮ ಉತ್ತರ 'ಹಲೋ' ದಿಂದ ಪ್ರಾರಂಭವಾಗುವುದೇಕೆ? ಬೇರೇನೇ ಹೇಳಿದರೂ ಅದು ವಿನಾಯತಿಯಂತೆ ತೋರುವುದೇ ಹೊರತು ನಿಯಮದಂತೆ ತೋರದು.

ರೇಡಿಯೊ ಜಾಕಿಗಳು ಮಾತಾಡುವಾಗ ಎಚ್ಚರ ತಪ್ಪದೆ ಕನ್ನಡದ ವ್ಯಾಕರಣದ ನಿಯಮಗಳನ್ನು ಪಾಲಿಸಲೇಬೇಕು. ಇಲ್ಲವಾದಲ್ಲಿ ಅವರ ಮಾತು ಯಾರಿಗೂ ಅರ್ಥವಾಗದು. ಇಂಗ್ಲಿಶ್ ಪದಗಳನ್ನು ಎರ್ರಾಬಿರ್ರಿಯಾಗಿ ಬೆರಸುವಂತೆ ತೋರಿದರೂ ಅದರಲ್ಲೂ ಕೆಲವು ಆಯ್ಕೆ ಮತ್ತು ನಿಯಮಗಳಿರುತ್ತವೆ. ಸಂಖ್ಯಾವಾಚಕ, ದಿಕ್ಕು ಸೂಚಕ, ಪ್ರಮಾಣಸೂಚಕ ಪದಗಳು ಮತ್ತು ಗುಣವಾಚಕಗಳು ಹೆಚ್ಚಾಗಿ ಇಂಗ್ಲಿಶ್ ಪದಕೋಶದಿಂದ ಬಂದಿರುತ್ತವೆ. ಹಾಗೆಯೇ ಕ್ರಿಯಾವಿಶೇಷಣಗಳು, ಕೆಲವು ವಿಶಿಷ್ಟ ನಾಮಪದಗಳು ಸೇರಿಕೊಳ್ಳುತ್ತವೆ. ಕೈಲಾಸಂ ಊಹಿಸಿದಂತೆ ಇಡೀ ವಾಕ್ಯಾಂಗಗಳು(ಇಂಗ್ಲಿಶ್ ವ್ಯಾಕರಣದಿಂದ ರಚಿತವಾದ ವಾಕ್ಯಾಂಗಗಳು) ಕನ್ನಡ ವಾಕ್ಯದೊಳಗೆ ಬರುವುದಿಲ್ಲ. ಅಲ್ಲದೆ ಇಂಗ್ಲಿಶ್ ಕ್ರಿಯಾಪದಗಳನ್ನು ಕನ್ನಡದಲ್ಲಿ ಬೆರೆಸುವಾಗ ವಿಶೇಷ ನಿಯಮವೊಂದು ಪಾಲನೆಯಾಗುವಂತೆ ತೋರುತ್ತದೆ. ಯಾವುದೇ ಇಂಗ್ಲಿಶ್ ಕ್ರಿಯಾಪದವಿರಲಿ (ಸಕರ್ಮಕ,ಅಕರ್ಮಕ) ಕನ್ನಡಕ್ಕೆ ಬಂದ ಕೂಡಲೇ ಅದು ಸಕರ್ಮಕವಾಗುತ್ತದೆ. ಅಲ್ಲದೆ ಎಲ್ಲ ಕ್ರಿಯಾಪದಗಳೂ ನಿರ್ದಿಷ್ಟ ಕ್ರಿಯೆಯನ್ನು ಸೂಚಿಸತೊಡಗುತ್ತವೆ. ಮೂಲದಲ್ಲಿ ಅವು ಒಂದು ಮಾನಸಿಕ ಅವಸ್ಥೆಯನ್ನು ಸೂಚಿಸುತ್ತಿದ್ದರೂ ಕನ್ನಡಕ್ಕೆ ಬಂದಾಗ ಗೊತ್ತಾದ ಕ್ರಿಯೆಯೊಂದನ್ನು ಮಾತ್ರ ಸೂಚಿಸತೊಡಗುತ್ತವೆ. ಉದಾಹರಣೆಗೆ 'ಎಂಜಾಯ್' ಎನ್ನುವ ಇಂಗ್ಲಿಶ್ ಪದವನ್ನು ನೋಡಿ. ಅದು ಇಂಗ್ಲಿಶ್‌ನಲ್ಲಿ ಏನೇ ಆಗಿರಲಿ, ಕನ್ನಡಕ್ಕೆ ಬಂದಾಗ 'ಎಂಜಾಯ್ ಮಾಡು' ಎಂದೇ ಬಳಕೆಯಾಗಬೇಕು. ಇಲ್ಲಿ 'ಎಂಜಾಯ್' ಎನ್ನುವುದು ಕೂಡ ಒಂದು ನಿರ್ವಹಿಸಬೇಕಾದ ಕೆಲಸವೆಂಬ ವಿಶೇಷ ಅರ್ಥವನ್ನು ಪಡೆದುಕೊಳ್ಳುತ್ತದೆ. ಈ ಎಲ್ಲ ವಿವರಗಳನ್ನೂ ನಾವಿನ್ನೂ ಗಮನಿಸಿಲ್ಲ. ಇದೇ ಮಾತನ್ನು ಇಲ್ಲಿ ಬಳಕೆಯಾಗುವ 'ಅಷ್ಟು ಸಭ್ಯವಲ್ಲದ' ಪದಗಳ ಬಗೆಗೂ ಹೇಳಬೇಕಾಗುತ್ತದೆ. ಆ ಪದಗಳು ಕನ್ನಡದಲ್ಲಿ ವಿವಿಧ ಸಾಮಾಜಿಕ ವಲಯಗಳಲ್ಲಿ ವಿವಿಧ ಸಾಮಾಜಿಕ ಸಂದರ್ಭದಲ್ಲಿ ಬಳಕೆಯಾಗುತ್ತಿವೆ. ಇಲ್ಲಿಯೂ ಕೇಳುಗರ ಸ್ವರೂಪದ ಬಗೆಗೆ ಈ ವಾಹಿನಿಗಳಿಗೆ ಮತ್ತು ಅವರನ್ನು ಪ್ರತಿನಿಧಿಸುವ ರೇಡಿಯೋ ಜಾಕಿಗಳಿಗೆ ಒಂದು ನಿರ್ದಿಷ್ಟ ಕಲ್ಪನೆ ಇರುತ್ತದೆ. ಆದ್ದರಿಂದ ಅದಕ್ಕೆ ತಕ್ಕ 'ಸಹಜ' ಕನ್ನಡವನ್ನು ಬಳಸುತ್ತಿರುತ್ತಾರೆ.

ಒಟ್ಟಾರೆ ಒಂದು ಮಾತಂತೂ ನಿಜ. ರೇಡಿಯೋ ಜಾಕಿಗಳ ಕನ್ನಡ, ಕನ್ನಡದ ಒಂದು ಸಾಧ್ಯತೆಯೇ ಹೊರತು ಅದು 'ಕುಲಗೆಟ್ಟ ಕನ್ನಡ'ವಲ್ಲ. ಅದರಲ್ಲಿ ಕನ್ನಡ ವ್ಯಾಕರಣದ ನಿಯಮಗಳು ಬಲವಾಗಿರುತ್ತವೆ. ಕನ್ನಡ ವಾಕ್ಯದ ಹೊಸ ಸಾಧ್ಯತೆಗಳನ್ನು ಕೂಡ ಅಲ್ಲಿ ಹುಡುಕುತ್ತಿರುವುದುಂಟು. 'ಲೈಫ್ ನಿಮ್ಮದಾಗಿಸಿ', 'ನೀವು ಕೇಳ್ತಿರೋದು..." ಮುಂತಾದ ವಾಕ್ಯಗಳಲ್ಲಿ ಈ ಹೊಸ ಸಾಧ್ಯತೆಗಳು ಗೋಚರಿಸುತ್ತವೆ. ಇಂತಹವನ್ನು ನಾವಿನ್ನೂ ಸರಿಯಾಗಿ ಗಮನಿಸಿಲ್ಲ. ಅಲ್ಲದೆ ಆ ಕನ್ನಡ ನಿರ್ದಿಷ್ಟ ಸಾಮಾಜಿಕ ಸಂದರ್ಭದ ಫಲಿತ. ಹಾಗಾಗಿ ಆ ಕನ್ನಡವನ್ನು ನಾವು ನೋಡಬೇಕಾದ ನೆಲೆಯನ್ನು ಖಚಿತಪಡಿಕೊಳ್ಳುವ ಅಗತ್ಯವಿದೆ.

# ಕನ್ನಡ: ಈ ಶತಮಾನದ ಹೊಸ ಸವಾಲುಗಳು

ಇಪ್ಪತ್ತನೇ ಶತಮಾನದ ಆರಂಭ ಕಾಲದಲ್ಲಿ ವಸಾಹತು ಆಡಳಿತಕ್ಕೆ ಒಳಗಾಗಿದ್ದ ಚಿಕ್ಕಪುಟ್ಟ ದೇಶಗಳಲ್ಲಿ ದೇಶೀಯ ಭಾಷೆಗಳು ವಸಾಹತುಗಾರರ ಭಾಷೆಯ ಪ್ರಭಾವಗಳಿಂದ ಬಿಡುಗಡೆ ಪಡೆದು ತಮ್ಮ ಸ್ವಂತಿಕೆಯನ್ನು ಹೇಗೆ ಕಾಯ್ದುಕೊಳ್ಳಬೇಕೆಂದು ಅರಿತುಕೊಳ್ಳುವ ವ್ಯವಸ್ಥಿತ ಪ್ರಯತ್ನಗಳು ಜರುಗಿದ್ದನ್ನು ನೋಡುತ್ತೇವೆ. ಈ ಇಕ್ಕಟ್ಟನ್ನು ಅನುಭವಿಸುತ್ತಿದ್ದ ಬಹುಪಾಲು ಭಾಷಾ ಸಮುದಾಯಗಳು ತಮ್ಮ ತಮ್ಮ ಭಾಷೆಗಳನ್ನಾಡುವ ಜನರ ಮೊದಲ ಸಮ್ಮೇಳನಗಳನ್ನು ಆ ಸಂದರ್ಭದಲ್ಲಿ ಆಯೋಜಿಸಿದ್ದಕ್ಕೆ ದಾಖಲೆಗಳಿವೆ. ಭಾರತದಲ್ಲೂ ಪ್ರಾಂತೀಯ ಭಾಷೆಗಳನ್ನು ಮುಂದಿರಿಸಿಕೊಂಡು ಈ ಬಗೆಯ ಸಮ್ಮೇಳನಗಳು ನಡೆದವು. ಇಂತಹ ಸಮ್ಮೇಳನಗಳು ನಡೆಯುವ ಮೊದಲಿಗೆ ಹಲವು ವರ್ಷಗಳ ಕಾಲ ಭಾಷಾ ಸಮುದಾಯಗಳಲ್ಲಿ ಈ ಕುರಿತ ಚರ್ಚೆಗಳು ವಿವಿಧ ವೇದಿಕೆಗಳಲ್ಲಿ ನಡೆದಿರುವುದನ್ನು ಕಾಣುತ್ತೇವೆ. ಕನ್ನಡದ ಮಟ್ಟಿಗೆ ಈ ಎಚ್ಚರ 19ನೇ ಶತಮಾನದ ಕೊನೆಕೊನೆಗೆ ಕಂಡುಬಂದಿತು. ನಾಡಿನ ಹಲವು ಕಡೆಗಳಲ್ಲಿ ಭಾಷೆಯ ಒಳಿತಿಗಾಗಿ ಶ್ರಮಿಸುವ ಸಂಸ್ಥೆಗಳು ರೂಪುಗೊಂಡವು. ಮೈಸೂರಿನ ಭಾಷೋಜ್ಜೀವಿನಿ ಸಭಾ, ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಸ್ಥೆಗಳು ಇದಕ್ಕೆ ನಿದರ್ಶನಗಳು. ಈ ಸಂಸ್ಥೆಗಳು ಕನ್ನಡದ ಸ್ಥಿತಿಗತಿಗಳನ್ನು ಕುರಿತು ವಿವಿಧ ಸ್ತರದ ಚರ್ಚೆಗಳನ್ನು ಹುಟ್ಟು ಹಾಕಿದವು. ಮೈಸೂರಿನ ಸಂಸ್ಥೆ 1896ರಲ್ಲಿ, ಧಾರವಾಡದ ಸಂಸ್ಥೆ 1911ರಲ್ಲಿ ಸಮ್ಮೇಳನಗಳನ್ನು ನಡೆಸಿದವು. ಇವೆಲ್ಲ ಪ್ರಯತ್ನಗಳು ಹುರಿಗಟ್ಟಿಕೊಂಡು ಫಲಕೊಟ್ಟಂತೆ ಕರ್ನಾಟಕ ಸಾಹಿತ್ಯ ಪರಿಷತ್ತು (ಈಗ ಕನ್ನಡ ಸಾಹಿತ್ಯ ಪರಿಷತ್ತು) ಸ್ಥಾಪನೆಯಾಗಿ ಕನ್ನಡ ಸಾಹಿತ್ಯ ಸಮ್ಮೇಳನಗಳು 1916ರಿಂದ ಮೊದಲಾದವು. ಈ ಎಲ್ಲ ವಿವರಗಳನ್ನು ನೀಡಿದ್ದರ ಹಿಂದಿನ ಉದ್ದೇಶವಿಷ್ಟೆ: ಸರಿಸುಮಾರು ಒಂದು ನೂರು ವರ್ಷಗಳು ಕಳೆಯುವ ಹೊತ್ತಿಗೆ ಕನ್ನಡ ಈಗ ಬೇರೊಂದು ಬಗೆಯ ಇಕ್ಕಟ್ಟನ್ನು ಅನುಭವಿಸುತ್ತಿರುವುದನ್ನು ನಾವು ನೋಡುತ್ತಿದ್ದೇವೆ. ಕನ್ನಡದ ಅಳಿವು ಉಳಿವಿನ ಪ್ರಶ್ನೆಗಳನ್ನೆತ್ತಿಕೊಂಡು ವಿವಿಧ ವಲಯಗಳಲ್ಲಿ ಚರ್ಚೆಗಳು ವಾದವಿವಾದಗಳು ಮೊದಲಾಗಿವೆ. ಈ ಸಂದರ್ಭದ ಹೊಸ ಸವಾಲುಗಳು ಈ ಹಿಂದಿನ ಶತಮಾನದ ಸವಾಲುಗಳಿಗಿಂತ ಹೇಗೆ ಭಿನ್ನ ಮತ್ತು ಆ ಕಾರಣದಿಂದ ಆಗ ನಾವು ಕಂಡುಕೊಂಡ ಉತ್ತರಗಳಿಗಿಂತ ಭಿನ್ನವಾದ ಉತ್ತರಗಳನ್ನು ಕಂಡುಕೊಂಡು ಜಾರಿಗೆ ಅನುವುಮಾಡಿಕೊಡುವುದು ಎಷ್ಟು ಅಗತ್ಯ ಎನ್ನುವುದನ್ನು ನಾವು ಅರಿತುಕೊಳ್ಳಬೇಕಾಗಿದೆ.

1911ರಲ್ಲಿ ಧಾರವಾಡದ ಕರ್ನಾಟಕದ ವಿದ್ಯಾವರ್ಧಕ ಸಂಸ್ಥೆಯಲ್ಲಿ ನಡೆದ ಸಭೆಯಲ್ಲಿ ಪ್ರೊ. ಬಿ.ಎಂ. ಶ್ರೀಕಂಠಯ್ಯನವರು ಕನ್ನಡ ಮಾತು ತಲೆ ಎತ್ತುವ ಬಗೆ ಎನ್ನುವ ವಿಷಯ ಕುರಿತು ಉಪನ್ಯಾಸ ಮಾಡಿದ್ದಾರೆ. ಅಲ್ಲಿ ಅವರು ನಿರೂಪಿಸಿದ ಸಮಸ್ಯೆಗಳು ಮತ್ತು ಮಂಡಿಸಿದ ಪರಿಹಾರಗಳು ಹೀಗಿವೆ.

ಕನ್ನಡದ ಆಡುಮಾತಿನ ವೈವಿಧ್ಯಗಳು ಅದರ ಬೆಳವಣಿಗೆಗೆ ಅಡ್ಡಿಯಾಗಬಾರದು. ಪ್ರಮಾಣ ಕನ್ನಡವೊಂದನ್ನು ಬರೆಹದ ಭಾಷಾರೂಪವಾಗಿ ಬೆಳೆಸುವ ಅಗತ್ಯವಿದೆ. ಹೀಗೆ ಮಾಡುವ ಮೂಲಕ ಸದ್ಯ ಕನ್ನಡದ ಬೆಳವಣಿಗೆಗೆ ಇರುವ ತೊಡಕುಗಳನ್ನು ಬಿಡಿಸಿಕೊಳ್ಳಬಹುದು.

ಕನ್ನಡದೊಡನೆ ಸಂಸ್ಕೃತ ಮತ್ತು ಇಂಗ್ಲಿಶ್ ಭಾಷೆಗಳು ಹೊಂದಿರುವ ಸಂಬಂಧವನ್ನು ನಾವು ಯೋಗ್ಯ ರೀತಿಯಲ್ಲಿ ನಿರ್ವಹಿಸಬೇಕಾಗಿದೆ. ಸಂಸ್ಕೃತದ ಪೆಡಸು ಶೈಲಿಯಿಂದ ಕನ್ನಡವನ್ನು ಬಿಡುಗಡೆಗೊಳಿಸಬೇಕು. ಇಂಗ್ಲಿಶ್ ಭಾಷಾಸಾಹಿತ್ಯದ ಅಧ್ಯಯನದ ಮೂಲಕ ಕನ್ನಡದ ಹೊಸ ಶೈಲಿಗೆ ಅಗತ್ಯವಾದ ವಿನ್ಯಾಸಗಳನ್ನು ರೂಪಿಸಿಕೊಳ್ಳುವ ಅವಕಾಶವಿದೆ. ಈ ಚಾರಿತ್ರಿಕ ಸನ್ನಿವೇಶದ ಸಾಧ್ಯತೆಗಳನ್ನು ನಾವು ಯುಕ್ತ ರೀತಿಯಲ್ಲಿ ಬಳಸಿಕೊಳ್ಳಬೇಕಾಗಿದೆ.

ಬಿ.ಎಂ.ಶ್ರೀಯವರು ಹೀಗೆ ಚಿಂತಿಸಿದ್ದು ಮಾತ್ರವಲ್ಲ; ಇದೇ ಹುನ್ನಾರಗಳನ್ನು ತಮ್ಮ ಸಾಹಿತ್ಯ ರಚನೆಯಲ್ಲಿ ಬಳಸಿದರು. ಕನ್ನಡ ಭಾಷೆಗೆ ಆಗ ಅಗತ್ಯವಿದ್ದ ಎಲ್ಲ ನಮನಶೀಲ ಮುಂಗಾಣ್ಕೆಯನ್ನು ಒದಗಿಸಿದರು. ಶ್ರೀಯವರ ಚಿಂತನೆ ಮತ್ತು ಕ್ರಿಯಾಶೀಲತೆಗಳ ಗುಣಾವಗುಣಗಳ ಚರ್ಚೆಗೆ ಇಲ್ಲಿ ಅವಕಾಶವಿಲ್ಲ. ಆದರೆ ಸುಮಾರು ಒಂದು ಶತಮಾನದ ಅನಂತರ ಕನ್ನಡ ಬೇರೆ ಬೇರೆ ಕಾರಣಗಳಿಂದಾಗಿ ಮತ್ತೊಂದು ಪರಿವರ್ತನೆಯ ಅಪೇಕ್ಷೆಯಲ್ಲಿದೆ ಎಂಬುದನ್ನು ಗಮನಿಸಲು ಶ್ರೀಯವರ ಉಲ್ಲೇಖ ಅಗತ್ಯವಾಯಿತು.

ಕನ್ನಡ ಹಾಗೂ ಕನ್ನಡದಂತಹ ಭಾಷೆಗಳು ತಂತಮ್ಮ ಸಮುದಾಯಗಳ ಚಹರೆಯಾಗಿ ಉಳಿದುಕೊಳ್ಳಬಲ್ಲವೇ? ಈ ಭಾಷೆಗಳು ಈಗ ಎದುರಿಸುತ್ತಿರುವ ಸವಾಲುಗಳಲ್ಲಿ ಕೆಲವು ಭಾಷಿಕ ನೆಲೆಯಲ್ಲಿದ್ದರೆ ಮತ್ತೆ ಕೆಲವು ರಾಜಕಾರಣದ ಫಲಿತಗಳಾಗಿವೆ; ಮೇಲಾಗಿ ತಂತ್ರಜ್ಞಾನದ ಪರಿಣಾಮಗಳೂ ಇಲ್ಲಿ ಕಾಣತೊಡಗಿದೆ. ಈ ಹಿನ್ನೆಲೆಯಲ್ಲಿ ಕೆಲವು ಸಂಗತಿಗಳನ್ನು ನಾವು ಪರಿಶೀಲಿಸುವ ಅಗತ್ಯವಿದೆ.

### ಯಜಮಾನ ಭಾಷೆಯಾಗಿ ಕನ್ನಡ

ನಾವೀಗ ಭಾಷೆಗಳ ಅಸ್ಮಿತೆಯನ್ನು ಕುರಿತು ಮಾತನಾಡುತ್ತಿದ್ದೇವೆ. ಭಾಷಾವಾರು ಪ್ರಾಂತ್ಯಗಳ ರಚನೆಯಾದ ಮೇಲೆ ಸಹಜವಾಗಿಯೇ ಭಾರತದಲ್ಲಿರುವ ಎಲ್ಲ ಭಾಷಾ ಸಮುದಾಯುಗಳಿಗೂ ಒಂದೊಂದು ಆಡಳಿತ ಪ್ರದೇಶವನ್ನು ನೀಡುವುದು ಅಸಾಧ್ಯವೆಂಬುದು ಗೊತ್ತಾಗುವಂತಿತ್ತು. ಅಂದರೆ ಕೆಲವು ಆಯ್ದ ಭಾಷೆಗಳನ್ನು ಗಮನಿಸಿ

ಅವುಗಳನ್ನು ಪ್ರಧಾನವಾಗಿಸಿ ಪ್ರಾಂತ್ಯಗಳನ್ನು ರಚಿಸಲಾಗಿದೆ. ಚಾರಿತ್ರಿಕವಾಗಿ ಕೆಲವು ಸೌಲಭ್ಯವನ್ನು ಪಡೆದಿದ್ದ ಭಾಷೆಗಳು, ಲಿಪಿಯಿದ್ದ ಭಾಷೆಗಳು ಈ ಅವಕಾಶವನ್ನು ಸಹಜವಾಗಿಯೇ ಪಡೆದುಕೊಂಡವು. ಆವರೆಗಿನ ಭಾರತದ ರಾಜಕೀಯ ಚರಿತ್ರೆಯ ಪ್ರಾಂತ್ಯ ವಿಭಜನ ಕ್ರಮ ಕೂಡ ಈ ಪ್ರಾಂತ್ಯಗಳ ರಚನೆಗೆ ಅಗತ್ಯವಾದ ಪರಾಮರ್ಶನ ಬಿಂದುವನ್ನು ಒದಗಿಸಿದೆ. ಹೀಗೆ ಭಾಷಾವಾರು ಪ್ರಾಂತ್ಯಗಳ ರಚನೆಯಾದ ಮೇಲೆ ಪ್ರತಿ ಪ್ರಾಂತ್ಯದಲ್ಲೂ ಪ್ರಧಾನ ಭಾಷೆಯೊಂದನ್ನು ಬಿಟ್ಟು ಬೇರೆ ಭಾಷೆಗಳನ್ನಾಡುವ ಹಲವು ಸಮುದಾಯಗಳು ಸೇರಿಹೋಗಿದ್ದವು. ಈ ಭಾಷಾ ಸಮುದಾಯಗಳಲ್ಲಿ ಮುಖ್ಯವಾಗಿ ಎರಡು ಬಗೆಗಳಿವೆ. ಒಂದು: ಈ ಗುಂಪಿಗೆ ಸೇರಿದ ಸಮುದಾಯಗಳು ಆಡುತ್ತಿದ್ದ ಭಾಷೆಗಳಿಗೆ ಪ್ರತ್ಯೇಕವಾದ ಭಾಷಾವಾರು ಪ್ರಾಂತ್ಯಗಳು ಭಾರತದಲ್ಲಿ ಇದ್ದವು. ತಮಿಳು, ತೆಲುಗು, ಮರಾಠಿ, ಹಿಂದಿ ಮುಂತಾದವು ಈ ಬಗೆಯ ಭಾಷೆಗಳು. ಅಂದರೆ ಈ ಭಾಷೆಗಳಿಗೆ ಮೀಸಲಾದ ಪ್ರಾಂತ್ಯಗಳಿದ್ದವು, ಆದರೆ ಈ ಭಾಷೆಗಳನ್ನಾಡುವ ಜನರು ಬೇರೆ ಪ್ರಾಂತ್ಯಗಳಲ್ಲೂ ಹರಡಿ ಹೋಗಿದ್ದರು. ಎರಡು: ಈ ಗುಂಪಿನ ಭಾಷೆಗಳನ್ನು ಆಡುವ ಜನರು ಬಹುಮಟ್ಟಿಗೆ ಒಂದು ಪ್ರಾಂತ್ಯಕ್ಕೆ ಮಾತ್ರ ಸೀಮಿತರಾಗಿದ್ದರು. ಕೆಲವು ಭಾಷಾ ಸಮುದಾಯಗಳು ಒಂದಕ್ಕಿಂತ ಹೆಚ್ಚು ಪ್ರಾಂತ್ಯಗಳಲ್ಲಿ ಇದ್ದುದಕ್ಕೂ ನಿದರ್ಶನಗಳಿವೆ. ಕೊಡಗು, ತುಳು ಮೊದಲ ಬಗೆಯ ಭಾಷೆಗಳಾದರೆ, ಕೊಂಕಣಿ, ಲಂಬಾಣಿ ಎರಡನೆಯ ಬಗೆಯ ಭಾಷೆಗಳು. ಈ ನಿದರ್ಶನಗಳು ಕರ್ನಾಟಕಕ್ಕೆ ಸೇರಿವೆಯಾದರೂ ಈ ಮಾದರಿಯ ನಿದರ್ಶನಗಳು ಎಲ್ಲ ಭಾಷಾ ಪ್ರಾಂತ್ಯಗಳಲ್ಲೂ ಭಿನ್ನ ಪ್ರಮಾಣದಲ್ಲಿ ಕಾಣಸಿಗುತ್ತವೆ.

ಭಾಷಾವಾರು ಪ್ರಾಂತ್ಯ ರಚನೆಯ ಮೊದಲ ಹಂತದಲ್ಲಿ ನಿರೀಕ್ಷಿಸಲು ಸಾಧ್ಯವಾಗದಿದ್ದ ಕೆಲವು ವೈರುಧ್ಯಗಳು ಈಗ ಈ ಭಾಷೆಗಳ ನಡುವಣ ಸಂಬಂಧದಲ್ಲಿ ಮುಂಚೂಣಿಗೆ ಬರತೊಡಗಿವೆ. ಒಂದೇ ಪ್ರಾಂತ್ಯದಲ್ಲಿ ಆ ಪ್ರಾಂತ್ಯ ಭಾಷೆಯು ಅಲ್ಲಿಯ ಜನಸಮುದಾಯದ ಇತರ ಭಾಷೆಗಳಿಗೆ ಯಜಮಾನ ಭಾಷೆಯಾಗಿ ಸ್ಥಾಪಿತವಾಗಿರುವುದೇ ಈ ವೈರುಧ್ಯ. ಕರ್ನಾಟಕದಲ್ಲಿ ಕನ್ನಡ ಈ ಪಾತ್ರವನ್ನು ನಿರ್ವಹಿಸುತ್ತಿದೆ. ತುಳು, ಕೊಡಗು, ಕೊಂಕಣಿ, ಕೊರಗ, ಲಂಬಾಣಿ ಮೊದಲಾದ ಭಾಷೆಗಳು ಈಗ ಕನ್ನಡದ ಯಾಜಮಾನ್ಯವನ್ನು ಅನುಭವಿಸತೊಡಗಿವೆ. ತಮ್ಮ ಪ್ರತ್ಯೇಕ ಅಸ್ತಿತ್ವಕ್ಕಾಗಿ ಕೆಲವು ಭಾಷಾ ಸಮುದಾಯಗಳು ಹೋರಾಟದ ಹಾದಿಯನ್ನು ತುಳಿದಿವೆ. ಶಿಕ್ಷಣ, ಆಡಳಿತ, ಸಮೂಹ ಮಾಧ್ಯಮಗಳಲ್ಲಿ ಕನ್ನಡದ ಜೊತೆಗೆ ಈ ಭಾಷೆಗಳು ತಮ್ಮ ಇರುವಿಕೆಗಾಗಿ ಹುಡುಕಾಟ ನಡೆಸಬೇಕಾಗಿದೆ. ಮಾತೃಭಾಷೆಯಲ್ಲಿ ಶಿಕ್ಷಣವನ್ನು ಪಡೆಯುವುದು ಎಲ್ಲ ರೀತಿಯಲ್ಲೂ ವಿದ್ಯಾರ್ಥಿಗಳಿಗೆ ಆರೋಗ್ಯಕರ ಎಂಬ ತತ್ವವನ್ನು ಕನ್ನಡದ ಮಟ್ಟಿಗೆ ಪಾಲಿಸಲು ಸಿದ್ಧವಿದ್ದೇವಾದರು ಅಲ್ಪಸಂಖ್ಯಾತ ಭಾಷೆಗಳ ವಿಷಯದಲ್ಲಿ ಈ ತರ್ಕವನ್ನು ಒಪ್ಪಲು ನಾವು ಸಿದ್ಧರಿರುವುದಿಲ್ಲ. ಇನ್ನೊಂದು ರಾಜ್ಯದ ಭಾಷೆಯನ್ನು ಆಡುವ ಸಮುದಾಯಗಳು ತಮ್ಮ ರಾಜ್ಯದಲ್ಲಿರುವಾಗ ಆ ಸಮುದಾಯಗಳ ಭಾಷಾ ಹಕ್ಕನ್ನು ಕಾಯ್ದುಕೊಳ್ಳಲು ನಾವು ಒತ್ತಾಸೆಯನ್ನು ನೀಡುತ್ತೇವೆ. ಹಾಗಿಲ್ಲದ ಭಾಷೆಗಳಿಗೆ ಆ ಸೌಲಭ್ಯವನ್ನು ಒದಗಿಸುವುದು ಈಗಂತೂ ಸಾಧ್ಯವಾಗಿಲ್ಲ. ಬರಲಿರುವ ದಶಕಗಳಲ್ಲಿ ಪ್ರಾಂತೀಯ ಭಾಷೆಗಳ ಈ ಯಾಜಮಾನ್ಯಕ್ಕೆ

ಹಾಕಿದ ಸವಾಲುಗಳು ಮುಂಚೂಣಿಗೆ ಬರುವುದು ಅನಿವಾರ್ಯವಾಗಿದೆ. ಕನ್ನಡ ಎದುರಿಸಬೇಕಾಗಿರುವ ಹೊಸ ಸವಾಲುಗಳಲ್ಲಿ ಇದೂ ಒಂದಾಗಿದೆ.

ರಾಜ್ಯಾಂಗ ಕರ್ತೃಗಳಿಗೆ ಈ ಸಮಸ್ಯೆಯ ಸುಳಿವು ಇರಲಿಲ್ಲವೆಂದಲ್ಲ. ಪ್ರತಿರಾಜ್ಯವೂ ತನ್ನ ಭೌಗೋಳಿಕ ಪ್ರದೇಶದಲ್ಲಿರುವ ಜನಸಮುದಾಯದ ಭಾಷೆಗಳ ಕಲಿಕೆ ಮತ್ತು ಬಳಕೆಗೆ ಅಗತ್ಯವಾದ ಪರಿಸರವನ್ನು, ಸೌಲಭ್ಯಗಳನ್ನು ಕಲ್ಪಿಸಿಕೊಡಬೇಕೆಂಬ ಶರತ್ತನ್ನು ವಿಧಿಸಲಾಗಿದೆ. ಆದರೆ ಈ ಶರತ್ತಿನ ಪಾಲನೆ ಆಗುತ್ತಿದೆಯೇ ಎಂಬುದನ್ನು ಪರಿಶೀಲಿಸಿ ಸೂಚನೆ ನೀಡುವ ವ್ಯವಸ್ಥೆಯೊಂದು ಈಗ ಇಲ್ಲವಾಗಿದೆ. ಸಾಂಸ್ಕೃತಿಕವಾಗಿ ಈ ಭಾಷೆಗಳಿಗೆ ಆಯಾ ರಾಜ್ಯದಲ್ಲಿ ಪ್ರಾತಿನಿಧ್ಯವನ್ನು ಒದಗಿಸುವ ಪ್ರಯತ್ನಗಳನ್ನು ಮಾಡಲಾಗುತ್ತಿದೆ. ಆಕಾಶವಾಣಿ, ದೂರದರ್ಶನಗಳಲ್ಲಿ ಈ ಅಲ್ಪಸಂಖ್ಯಾತ ಭಾಷೆಗಳ ಕಾರ್ಯಕ್ರಮಗಳನ್ನು ರಾಜ್ಯ ಸರ್ಕಾರ ಹಮ್ಮಿಕೊಂಡಿದೆ. ಆದರೆ ಇವು ಒಟ್ಟಾರೆಯಾಗಿ ಆಯಾ ಭಾಷಾ ಸಮುದಾಯಗಳ ಸಾಮಾನ್ಯ ಜನರ ಪ್ರಾತಿನಿಧ್ಯವನ್ನು ಒದಗಿಸಿಕೊಟ್ಟಿಲ್ಲವೆಂದೇ ಹೇಳಬಹುದು.

ಲಿಪಿಗಳೇ ಇಲ್ಲದ ಹತ್ತಾರು ಭಾಷೆಗಳನ್ನು ಆಧುನಿಕ ಜೀವನ ಕ್ರಮಕ್ಕೆ ಸನ್ನದ್ಧಗೊಳಿಸುವ ಉದ್ದೇಶದಿಂದ ಈ ಅಲ್ಪಸಂಖ್ಯಾತ ಭಾಷೆಗಳಿಗೆ ಅಗತ್ಯವಾದ ಮೂಲ ಸೌಲಭ್ಯ ರೂಪಿಸಿಕೊಡುವುದು ರಾಜ್ಯಗಳಿಗೆ ಸಾಧ್ಯವಾಗಿಲ್ಲ. ಇದರಿಂದ ಕನ್ನಡದ ಯಾಜಮಾನ್ಯವನ್ನು ಅಲ್ಪಸಂಖ್ಯಾತ ಭಾಷೆಗಳು ಅನುಭವಿಸುತ್ತಿವೆ. ಮುಂಬರುವ ದಶಕಗಳು ಪ್ರಾಂತೀಯ ಭಾಷೆಯಾಗಿ ಕನ್ನಡ ಈ ಅಧೀನ ಭಾಷೆಗಳ ಹಕ್ಕೊತ್ತಾಯಗಳನ್ನು ಈಡೇರಿಸಲು ಯಾವ ಪ್ರಯತ್ನಗಳನ್ನು ಕೈಕೊಳ್ಳಬೇಕೆಂಬುದನ್ನು ಯೋಚಿಸಬೇಕಾಗುತ್ತದೆ. "ಒಳಗೊಳ್ಳುವ" ವಿಧಾನವನ್ನು ಕನ್ನಡದಂತಹ ಭಾಷೆಗಳು ಪಾಲಿಸುವುದು ಅನಿವಾರ್ಯ. ಹತ್ತಿಕ್ಕುವ, "ಹೊರಗಿಡುವ" ವಿಧಾನವನ್ನು ಅನುಸರಿಸಿದರೆ ಈ ಭಾಷೆಗಳು ತೀವ್ರ ಕನ್ನಡವಿರೋಧವನ್ನು ಪಾಲಿಸಿದರೆ ಅಚ್ಚರಿಯಿಲ್ಲ. ಕನ್ನಡವನ್ನು ಎಚ್ಚರಿಕೆಯಿಂದ ಯೋಜಿಸಿದರೆ ಮಾತ್ರ ಅದರ ವ್ಯಾಪಕ ಬಳಕೆಗೆ ಅವಕಾಶಗಳು ದೊರಕುತ್ತವೆ. ಇಲ್ಲದಿದ್ದರೆ ಕನ್ನಡ ತನ್ನ ಅಸ್ತಿತ್ವಕ್ಕಾಗಿ ಹೋರಾಟ ಮುಂದುವರೆಸುವಾಗ ಇನ್ನಷ್ಟು ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ.

**ದ್ವಿಭಾಷಿಕತೆ, ಬಹುಭಾಷಿಕತೆ**

ಕನ್ನಡವೀಗ ಕರ್ನಾಟಕವೆಂಬ ಭೌಗೋಳಿಕ ಪ್ರದೇಶದಲ್ಲಿ ಸಾರ್ವಭೌಮ ಭಾಷೆಯಾಗಿಲ್ಲ. ಕನ್ನಡ ಮಾತನಾಡುವವರು ಇನ್ನೊಂದು ಭಾಷೆಯಲ್ಲಿ ಪರಿಣತಿಯನ್ನು ಪಡೆಯುವುದು, ಅನ್ಯಭಾಷಿಕರು ಕನ್ನಡವನ್ನು ಕಲಿತು ದ್ವಿಭಾಷಿಕರಾಗುವುದು ಹೆಚ್ಚಾಗುತ್ತಿದೆ. ಕರ್ನಾಟಕ ಭೌಗೋಳಿಕವಾಗಿ ತಮಿಳು, ತೆಲುಗು, ಮರಾಠಿ, ಮಲಯಾಳಂ, ಕೊಂಕಣಿ, ಭಾಷೆಗಳನ್ನಾಡುವ ರಾಜ್ಯಗಳಿಗೆ ತೆರೆದುಕೊಂಡಿದೆ. ಅಲ್ಲದೆ ಈಗಾಗಲೇ ಹೇಳಿದಂತೆ ಹಿಂದಿ, ಉರ್ದು, ಪಂಜಾಬಿ, ಕಾಶ್ಮೀರಿ ಮುಂತಾದ ರಾಜ್ಯಾಂಗದ ಮಾನ್ಯತೆ ಪಡೆದ ಭಾಷೆಗಳನ್ನಾಡುವ ಜನರು ಬಹುಕಾಲದಿಂದಲೂ ಇಲ್ಲಿ ವಾಸಿಸುತ್ತಿದ್ದಾರೆ. ತುಳು, ಕೊಡಗು ಮುಂತಾದ ಈ ಭೌಗೋಳಿಕ ಪ್ರದೇಶಕ್ಕೆ ಸೀಮಿತವಾದ ಭಾಷೆಗಳನ್ನಾಡುವ ಜನರು ಇಲ್ಲಿದ್ದಾರೆ. ಇದೆಲ್ಲವೂ ಕಾರಣವಾಗಿ ಈ ರಾಜ್ಯದಲ್ಲಿ ದ್ವಿಭಾಷಿಕ ಮತ್ತು

ಬಹುಭಾಷಿಕ ಸಮುದಾಯಗಳು ಅಧಿಕ ಪ್ರಮಾಣದಲ್ಲಿವೆ. ಈ ಸಮುದಾಯಗಳ ಪ್ರಮಾಣ ಕೂಡ ಹೆಚ್ಚಾಗುತ್ತಿದೆ. ಶೈಕ್ಷಣಿಕ ಕಾರಣಗಳಿಂದ ಇಂಗ್ಲಿಶನ್ನು ಕಲಿಯುವವರ ಸಂಖ್ಯೆಯೂ ಹೆಚ್ಚಾಗುವುದು ಅನಿವಾರ್ಯವಾಗಿದೆ. ಇದರಿಂದಲೂ ಹೊಸ ಬಗೆಯ ದ್ವಿಭಾಷಿಕರು ರೂಪುಗೊಳ್ಳುತ್ತಿದ್ದಾರೆ. ಈ ದ್ವಿಭಾಷಿಕ, ಬಹುಭಾಷಿಕರಲ್ಲಿ ಕನ್ನಡ ಮೊದಲ ಭಾಷೆಯಾಗಿರುವವರು ಮತ್ತು ಕನ್ನಡ ಎರಡನೆಯ ಅಥವಾ ಅನಂತರದ ಭಾಷೆಯಾಗಿರುವವರು ಎಂದು ಎರಡು ಗುಂಪು ಮಾಡಬಹುದು. ಈ ಎರಡು ಗುಂಪುಗಳ ಕನ್ನಡದ ಬಳಕೆಯ ಸ್ವರೂಪದಲ್ಲಿ ವ್ಯತ್ಯಾಸಗಳಿವೆ. ಈ ವ್ಯತ್ಯಾಸ ಕೇವಲ ತೋರಿಕೆಯದ್ದು ಮಾತ್ರವಲ್ಲ; ಗುಣಾತ್ಮಕವಾದ ವ್ಯತ್ಯಾಸಗಳು ಇಲ್ಲಿವೆ. ಇದರಿಂದಾಗಿಯೂ ಕನ್ನಡದ ಎದುರಿಗೆ ಹೊಸ ಸಮಸ್ಯೆಗಳು ಬಂದು ನಿಲ್ಲತೊಡಗಿವೆ.

ಯಾವುದೇ ದ್ವಿಭಾಷಿಕರಲ್ಲಿ ಕನ್ನಡ ಒಂದು ಭಾಷೆಯಾಗಿದ್ದರೆ ಅವರು ಅದನ್ನು ಬಳಸುವವರು ಎಂದು ತಿಳಿಯಬಹುದು. ಪ್ರತಿಯೊಬ್ಬರ ಬಳಕೆಯ ಸ್ವರೂಪ ಮತ್ತು ಪ್ರಮಾಣಗಳಲ್ಲಿ ವ್ಯತ್ಯಾಸವಿರಬಹುದು. ಆದರೆ ಕನ್ನಡ ಒಂದಿಲ್ಲೊಂದು ಬಗೆಯಲ್ಲಿ ಈ ದ್ವಿಭಾಷಿಕತೆಯ ಪ್ರಯೋಜನವನ್ನು ಪಡೆಯುವ ಭಾಷೆಯಾಗಿರುತ್ತದೆ. ಆದರೆ ಹೊಸ ಸಾಧ್ಯತೆಗಳು ಈಗ ಮೈದಳೆಯುತ್ತಿವೆ. ಪ್ರಬಲ ಭಾಷೆಗಳನ್ನಾಡುವವರು ಕನ್ನಡವನ್ನು ಬೈಪಾಸ್ ಮಾಡಿ ತಮ್ಮ ಭಾಷೆ ಮತ್ತು ಇಂಗ್ಲಿಶ್‌ನಲ್ಲಿ ದ್ವಿಭಾಷಿಕರಾಗುವ ದಾರಿಯನ್ನು ಹಿಡಿದಿದ್ದಾರೆ. ಇದರಿಂದಾಗಿ ಶಿಕ್ಷಿತರ ಒಂದು ವಲಯ ಈಗ ಕನ್ನಡದ ಯಾವ ಕೌಶಲವನ್ನೂ ಪಡೆಯದಿರುವುದು ಸಾಧ್ಯವಾಗಿದೆ. ಒಂದುವೇಳೆ ಅಂತಹ ಸಾಮರ್ಥ್ಯವನ್ನು, ಕೌಶಲವನ್ನು **'ಪಡೆದುಕೊಳ್ಳುವ'** ಒತ್ತಾಯಕ್ಕೆ ಒಳಗಾಗಿದ್ದರೂ ಆ ಕೌಶಲದ **'ಬಳಕೆಯ'** ಸನ್ನಿವೇಶಗಳು ಈಗ ಇಲ್ಲವಾಗುತ್ತಿವೆ. ಹೀಗೆ ಕನ್ನಡವನ್ನು ಮೀರಿ ನಿಭಾಯಿಸುವವರು ನಗರಗಳಿಗೆ ಸೀಮಿತವಾಗಿದ್ದಾರೆಂದು ಅನ್ನಿಸುತ್ತದೆಯಾದರೂ ಬರಲಿರುವ ದಿನಗಳಲ್ಲಿ ಈ ಬಗೆಯ ಜನರ ಸಂಖ್ಯೆ ಮತ್ತು ವ್ಯಾಪ್ತಿ ಅಧಿಕಗೊಳ್ಳುವ ಸಾಧ್ಯತೆ ಇದೆ.

ಕನ್ನಡವನ್ನು ಮೊದಲ ಭಾಷೆಯಾಗಿ ಹೊಂದಿರುವ ಆದರೆ ಇಂಗ್ಲಿಶ್ ಭಾಷೆಯನ್ನು ಕಲಿತು ದ್ವಿಭಾಷಿಕರಾಗಿರುವವರು ಕನ್ನಡದ ಬಳಕೆಯನ್ನು ಕೇವಲ ಮೌಖಿಕ ನೆಲೆಗೆ ಸೀಮಿತಗೊಳಿಸಿಕೊಳ್ಳುವುದು ಹೆಚ್ಚಾಗುತ್ತಿದೆ. ಅಂದರೆ ಕನ್ನಡವನ್ನು ಮಾತನಾಡಿದರೂ ಅದನ್ನು ತಮ್ಮ ಬರವಣಿಗೆಯ ನೆಲೆಗೆ ತರುವುದು ನಿಧಾನವಾಗಿ ಕಡಿಮೆಯಾಗುತ್ತಿದೆ. ಈ ಸಂಕೀರ್ಣ ಪರಿಸ್ಥಿತಿಯಲ್ಲಿ ಕನ್ನಡ-ಇಂಗ್ಲಿಶ್ ದ್ವಿಭಾಷಿಕರು ಮತ್ತು ಕನ್ನಡೇತರ ಭಾಷೆ, ಇಂಗ್ಲಿಶ್ ದ್ವಿಭಾಷಿಕರು ಜತೆಯಾಗಿಯೇ ಕನ್ನಡದ ಬಳಕೆಯ ವಲಯವನ್ನು ಸೀಮಿತಗೊಳಿಸುತ್ತಿದ್ದಾರೆ. ಈ ವಲಯದಲ್ಲಿ ಕನ್ನಡದ ಬಳಕೆ ಹೆಚ್ಚಲು ಯಾವ ಕ್ರಮಕೈಗೊಳ್ಳಬೇಕು ಎಂಬುದು ಮುಂದಿನ ದಶಕಗಳಲ್ಲಿ ಒಂದು ಸವಾಲಾಗಲಿದೆ.

**ಭಾಷೆ: ಕಲ್ಪನೆಗಳು**

ಎಲ್ಲ ಕಾಲದಲ್ಲೂ ಭಾಷೆಯನ್ನು ಕುರಿತು ಸಾಮಾನ್ಯ ಜನರಲ್ಲಿ, ಕೆಲವೊಮ್ಮೆ ತಿಳಿದವರ ಅರಿವಿನಲ್ಲಿ ಹಲವು ಕೊರತೆಗಳಿರುತ್ತವೆ. ಪ್ರಚಲಿತವಿರುವ ಅಪಕಲ್ಪನೆಗಳನ್ನು

ಇವರು ಸಮರ್ಥಿಸುತ್ತಿರುತ್ತಾರೆ. ಈ ಬಗೆಯ ಚಿಂತನೆಗಳು ವ್ಯಕ್ತಿಗತ ಹಂತದಲ್ಲಿರುವುದರ ಜೊತೆಗೆ ಸಾಮುದಾಯಿಕ ನೆಲೆಗಳಲ್ಲಿ, ಸಾಂಸ್ಥಿಕ ನೆಲೆಗಳಲ್ಲಿ ಕೂಡ ಇರುತ್ತದೆ. ಅಂತಹ ಕೆಲವು ಅಪಕಲ್ಪನೆಗಳನ್ನು ನಾವೀಗ ಗಮನಿಸಬಹುದು.

**ಒಂದು:** ಭಾಷೆಯ ಶುದ್ಧತೆಯ ಪರಿಕಲ್ಪನೆ. ಭಾಷೆಯನ್ನು ಮಾತನಾಡುವಾಗ ಮತ್ತು ಬರೆಯುವಾಗ ಅದರ ಶುದ್ಧರೂಪವನ್ನು ಬಳಸಬೇಕು ಎಂಬ ನಿಲುವು ಎಲ್ಲ ಕಾಲದಲ್ಲೂ ಎದ್ದು ಕಾಣುವ ನೆಲೆಯಾಗಿರುತ್ತದೆ. ಆದರೆ ಯಾವುದು ಶುದ್ಧ ಎಂಬುದು ಕಾಲದಿಂದ ಕಾಲಕ್ಕೆ ಬದಲಾಗುವ ನೆಲೆಯಾಗಿದೆ. ಶುದ್ಧತೆಯನ್ನು ಮಾತು ಮತ್ತು ಬರವಣಿಗೆಯಲ್ಲಿ ಗ್ರಹಿಸುವ ಈಗಿನ ಕೆಲವು ನೆಲೆಗಳನ್ನು ಗಮನಿಸೋಣ. ಮಾತಿನಲ್ಲಿ ಉಚ್ಚಾರಣಾ ದೋಷಗಳು, ಅಪಪದ ಬಳಕೆ, ಅಶುದ್ಧ ಭಾಷಾ ಪ್ರಯೋಗ ಎಂಬ ನೆಲೆಗಳಿವೆ. ಉಚ್ಚಾರಣಾ ದೋಷಗಳಲ್ಲಿ ಸಾಮಾನ್ಯವಾಗಿ ಮೂರು ಬಗೆಗಳನ್ನು ಸಾಮಾನ್ಯವಾಗಿ ಗುರುತಿಸಲಾಗುತ್ತದೆ. 1. ಮಹಾಪ್ರಾಣಗಳನ್ನು ಅಲ್ಪಪ್ರಾಣಗಳನ್ನಾಗಿ ಉಚ್ಚರಿಸುವುದು, 2. ಸ, ಶ ಮತ್ತು ಷಗಳ ಉಚ್ಚಾರಣೆಯಲ್ಲಿ ಗೊಂದಲವನ್ನುಂಟು ಮಾಡಿಕೊಳ್ಳುವುದು. ಅಥವಾ ಸಾಮಾನ್ಯವಾಗಿ ಈ ಮೂರೂ ಧ್ವನಿಗಳನ್ನು ಸಕಾರವಾಗಿಯೇ ಉಚ್ಚರಿಸುವುದು ಮತ್ತು 3. ಪದದಲ್ಲಿರುವ ಅದರಲ್ಲೂ ಪದಾದಿಯಲ್ಲಿರುವ ಹಕಾರವನ್ನು ಲೋಪಗೊಳಿಸಿ ಉಚ್ಚರಿಸುವುದು.

ಈ ಮೂರೂ ಉಚ್ಚಾರಣಾ ದೋಷಗಳನ್ನು 'ಭಾಷಾ ಅಶುದ್ಧತೆ' ಎಂದು ತಿಳಿಯಲಾಗುತ್ತದೆ. ಕೆಲವು ಉಪಭಾಷೆಗಳಲ್ಲಿ ಕಂಡುಬರುವ ಇನ್ನಿತರ ಉಚ್ಚಾರಣಾ ವಿಕಲ್ಪಗಳನ್ನು ಹೇಗೆ ಭಾಷಾ ಶುದ್ಧಿಯ ನೆಲೆಯಲ್ಲಿ ಗಮನಿಸುವುದಿಲ್ಲ ಎನ್ನುವುದನ್ನೂ ಇಲ್ಲಿ ಸ್ಪಷ್ಟಪಡಿಸಿಕೊಳ್ಳುವುದು ಸೂಕ್ತ. ಉದಾಹರಣೆಗೆ ಉತ್ತರ ಕರ್ನಾಟಕದ ಕೆಲವು ಪ್ರಾದೇಶಿಕ ಮತ್ತು ಸಾಮಾಜಿಕ ಉಪಭಾಷೆಗಳಲ್ಲಿ ಅಲ್ಪಪ್ರಾಣವಿರುವಲ್ಲಿ ಮಹಾಪ್ರಾಣಗಳನ್ನು ಉಚ್ಚರಿಸುವುದು ಸಾಮಾನ್ಯ ಸಂಗತಿಯಾಗಿದೆ. ಇದು ಮರಾಠಿಯ ಪ್ರಭಾವದಿಂದ ಆಗಿರುವ ಉಚ್ಚಾರಣ ವಿಕಲ್ಪ ಎನ್ನುವುದು ಒಂದು ವಿವರಣೆಯಾಗಿದೆ. ಆದರೆ ಹೀಗೆ ಕನ್ನಡವನ್ನು ಮಾತನಾಡುವಾಗ ಕಂಡುಬರುವ ಈ ಬಗೆಯ ಉಚ್ಚಾರಣಾ ವ್ಯತ್ಯಯಗಳನ್ನು ಅಶುದ್ಧ ಉಚ್ಚಾರಣೆ ಎಂದು ಪರಿಗಣಿಸುವುದಿಲ್ಲ.

ಮೊದಲಲ್ಲಿ ಹೇಳಿದ ಉಚ್ಚಾರಣಾ ವ್ಯತ್ಯಯಗಳನ್ನು ಅಶುದ್ಧ ಭಾಷಾ ಬಳಕೆಗೆ ನಿದರ್ಶನವನ್ನಾಗಿ ನೀಡುವುದು ಮಾತ್ರವಲ್ಲದೆ ಹೀಗೆ ಉಚ್ಚರಿಸುವವರ ಬಗೆಗೆ ನಿರ್ದಿಷ್ಟವಾದ ಸಾಮಾಜಿಕ ವ್ಯಾಖ್ಯೆಯನ್ನೂ ಮಾಡಲಾಗುತ್ತದೆ. ಅಂದರೆ ಈ ಉಚ್ಚಾರಣೆಯ ವಿಕಲ್ಪಗಳು ಸಾಮುದಾಯಿಕ ನೆಲೆಯಲ್ಲಿ ಕಂಡುಬರದೆ ಕೇವಲ ವ್ಯಕ್ತಿಗತ ನೆಲೆಯಲ್ಲಿ ಕಂಡುಬರುತ್ತದೆ ಎಂದು ತಿಳಿದಿರುವುದು ಇದರಿಂದ ಗೊತ್ತಾಗುತ್ತದೆ. ಇದೊಂದು ಅಪಕಲ್ಪನೆ.

ಬರವಣಿಗೆಯಲ್ಲಿ ಅಶುದ್ಧತೆಯನ್ನು ಗುರುತಿಸಲು ಕಾಗುಣಿತ ಮತ್ತು ವ್ಯಾಕರಣ ದೋಷಗಳನ್ನು ಆಧರಿಸಲಾಗುವುದು. ಈ ದೋಷಗಳು ಏಕೆ ಉಂಟಾಗುತ್ತವೆ ಎಂಬುದನ್ನು ಅರಿತುಕೊಳ್ಳಲು ವ್ಯವಸ್ಥಿತವಾದ ಅಧ್ಯಯನಗಳಾಗಬೇಕು. ಏಕೆಂದರೆ ಬರವಣಿಗೆಯ

ದೋಷಗಳಲ್ಲಿ, ಅದರಲ್ಲೂ ಕಾಗುಣಿತದ ದೋಷಗಳಲ್ಲಿ ವ್ಯಕ್ತಿಗತ ನೆಲೆ ಸೀಮಿತವಾದ ಕೆಲವು ಇದ್ದರೆ ಬಹಳ ಜನರಲ್ಲಿ ಸಾಮಾನ್ಯವಾಗಿ ಕಾಣುವ ದೋಷಗಳೂ ಇರುತ್ತವೆ. ಉದಾಹರಣೆಗೆ ಪದ ಮಧ್ಯದಲ್ಲಿ 'ದ' ಕಾರವನ್ನು 'ಧ' ಎಂದು ಬರೆಯುವುದು. ದಕಾರವು ವ್ಯಂಜನದೊಡನೆ ಸೇರಿದ್ದರಂತೂ ಈ ತಪ್ಪು ಬಹಳ ಕಡೆ ನಡೆಯುವುದುಂಟು. ವಿದ್ಯಾರ್ಥಿ, ಹಾರ್ಧಿಕ, ಸಧ್ಯ, ಜನಾರ್ಧನ ಇತ್ಯಾದಿ. ಈ ತಪ್ಪುಗಳಿಗೆ ಕೇವಲ ಕಲಿಕೆಯ ಕೊರತೆಯನ್ನು ಮಾತ್ರ ಕಾರಣವಾಗಿ ಹೇಳಲು ಬರುವುದಿಲ್ಲ. ಕನ್ನಡದಲ್ಲಿ ನಡೆಯುತ್ತಿರುವ ಧ್ವನಿ ಬದಲಾವಣೆಯೊಂದು ಈ ಬಗೆಯ ಬರವಣಿಗೆಯ ದೋಷಗಳಿಗೆ ಕಾರಣವಾಗುತ್ತಿರುವ ಸಾಧ್ಯತೆಗಳಿವೆ. ಇದನ್ನು ಅಧ್ಯಯನಗಳಿಂದ ಗುರುತಿಸುವ ಅಗತ್ಯವಿದೆ.

ವ್ಯಾಕರಣ ದೋಷಗಳಲ್ಲಿ ಹಲವು ಬಗೆಗಳಿವೆ. ಅವೆಲ್ಲವನ್ನೂ ಇಲ್ಲಿ ಪಟ್ಟಿ ಮಾಡುವುದು ಸಾಧ್ಯವಿಲ್ಲ. ಈಗ ಕನ್ನಡವನ್ನು ಬರೆಯುತ್ತಿರುವವರ ಸಂಖ್ಯೆ ಹೆಚ್ಚಾಗಿದೆ. ಅವರ ಸಾಮಾಜಿಕ ಮತ್ತು ಭೌಗೋಳಿಕ ಸ್ವರೂಪದಲ್ಲೂ ವೈವಿಧ್ಯವಿದೆ. ಇವರೆಲ್ಲರೂ ಬರೆಯಲು ಕಲಿತಿರುವ ಭಾಷಾರೂಪಕ್ಕೂ ದಿನನಿತ್ಯ ಅವರು ಆಡುತ್ತಿರುವ ಭಾಷಾರೂಪಕ್ಕೂ ಹತ್ತಾರು ವ್ಯತ್ಯಾಸಗಳಿವೆ. ಈ ವ್ಯತ್ಯಾಸಗಳು ಕ್ರಿಯಾಶೀಲವಾಗಿ ಅವರ ಬರವಣಿಗೆಯನ್ನು ಪ್ರಭಾವಿಸುತ್ತಿರುವ ಸಾಧ್ಯತೆಗಳಿವೆ. ಹಾಗಾಗಿ ಬರವಣಿಗೆ ದೋಷಯುಕ್ತ ಎನಿಸತೊಡಗಿದೆ.

ಈ ಮೇಲಿನ ವಿವರಣೆಯಿಂದ ಖಚಿತವಾಗುವುದಿಷ್ಟು: ಕನ್ನಡದ ಶುದ್ಧತೆಯ ಬಗ್ಗೆ ನಮ್ಮ ತಿಳುವಳಿಕೆಯನ್ನು ನಾವು ಮರು ಪರಿಶೀಲಿಸಿಕೊಳ್ಳಬೇಕು. ಬದಲಾಗುತ್ತಿರುವ ಸಾಮಾಜಿಕ, ಸಾಂಸ್ಕೃತಿಕ ಸಂದರ್ಭವನ್ನು ಗಣನೆಗೆ ತೆಗೆದುಕೊಂಡು ಕನ್ನಡದ ಕೌಶಲ (ಅಭಿವ್ಯಕ್ತಿ ಕೌಶಲ)ಗಳ ಬಳಕೆಯನ್ನು ಸೂಕ್ತ ರೀತಿಯಲ್ಲಿ ನಿರ್ವಹಿಸಬೇಕಾಗುತ್ತದೆ. ಇದು ಕನ್ನಡವನ್ನು ಹೆಚ್ಚು ವಲಯಗಳಲ್ಲಿ ಬಳಸಬೇಕೆಂಬ ಅಪೇಕ್ಷೆ ಕೈಗೂಡಬೇಕಾದರೆ ಅತ್ಯಗತ್ಯವಾಗಿ ಆಗಬೇಕಾದ ಬದಲಾವಣೆಯಾಗಿದೆ.

**ತಂತ್ರಜ್ಞಾನ ಮತ್ತು ಕನ್ನಡ**

ಹತ್ತೊಂಬತ್ತನೆಯ ಶತಮಾನದ ಆದಿಯಲ್ಲಿ ಮುದ್ರಣ ಯಂತ್ರದ ನೆರವಿನಿಂದ ಕನ್ನಡದ ಮೊದಲ ಪುಸ್ತಕವನ್ನು ಮುದ್ರಿಸಲಾಯಿತು. ಅನಂತರ ಕನ್ನಡ ಬರವಣಿಗೆಯ ಸ್ವರೂಪವೇ ಬದಲಾಗಿಬಿಟ್ಟಿತು. ಬರವಣಿಗೆಯ ಪ್ರಸಾರದಲ್ಲೂ ಹಿಂದೆಂದೂ ಕಾಣದ ಅಪೂರ್ವ ವ್ಯತ್ಯಾಸಗಳು ಕಾಣತೊಡಗಿದವು. ಬರೆಹದ ಬಹುಪ್ರತಿಗಳನ್ನು ಪಡೆದುಕೊಳ್ಳುವುದು ಈಗ ಸಾಧ್ಯವಾಯಿತು. ಬರವಣಿಗೆಯ ಪ್ರಸಾರ ತೀವ್ರತೆ ಅಧಿಕವಾಯಿತು. ಮುದ್ರಣದ ಅನಂತರ ಕನ್ನಡ ಬರವಣಿಗೆಯನ್ನು ಪ್ರಭಾವಿಸಿದ ತಂತ್ರಜ್ಞಾನವೆಂದರೆ ಬೆರಳಚ್ಚು ಯಂತ್ರ. ಇದರ ಪ್ರಭಾವ ಕೆಲವು ದಶಕಗಳ ಕಾಲ ಇದ್ದಿತು. ಆದರೆ ಇದರ ಪ್ರಭಾವದ ಪಳೆಯುಳಿಕೆಗಳು ಇನ್ನೂ ಇವೆ. ಸರಕಾರಿ ಕಚೇರಿಗಳ ಈ ಪಳಿಯುಳಿಕೆಗಳನ್ನು ನೋಡಲು ಸಾಧ್ಯ. ಮುದ್ರಣವಾಗಲೀ ಬೆರಳಚ್ಚಾಗಲಿ ಬರವಣಿಗೆ ಎನ್ನುವ ಪರಿಕಲ್ಪನೆಯನ್ನೇ ಮರುವ್ಯಾಖ್ಯಾನಿಸಿದವು. ಮುದ್ರಣದಲ್ಲಿ ಬೆರಳುಗಳನ್ನು ಬಳಸಿ ಬರೆಯುವ ಸಾಧ್ಯತೆಯೇ ಇಲ್ಲ. ಬೆರಳಚ್ಚು ಮಾಡುವಾಗ ಬೆರಳುಗಳ ಚಲನೆ ಇರುತ್ತದೆ. ಆದರೆ ಅದು ಅಕ್ಷರಗಳನ್ನು ರೂಪಿಸುವ ವಿಧಾನ ಸಂಪೂರ್ಣವಾಗಿ ಬೇರೆ.

ಅಲ್ಲದೆ ಇದರಿಂದ ಅಕ್ಷರ ಮತ್ತು ಅಕ್ಷರ ಸಂಯೋಜನೆಯನ್ನು ಗ್ರಹಿಸುವ ವಿಧಾನದಲ್ಲೇ ಬಹುಮುಖ್ಯ ಬದಲಾವಣೆಯಾಯಿತು. ಕೈಬರೆಹದ ಪ್ರತಿಗಳನ್ನು ನೋಡಿದರೆ ಅವುಗಳ ಅಕ್ಷರ ಸಂಯೋಜನೆ ಮತ್ತು ವಿನ್ಯಾಸಗಳು ಪರಿಣತಿಯುಳ್ಳ ಓದುಗರನ್ನು ಬಯಸುತ್ತವೆ. ಆದರೆ ಮುದ್ರಣ ಮತ್ತು ಬೆರಳಚ್ಚುಗಳು ಬರೆಹ ವಿನ್ಯಾಸವನ್ನು ಪ್ರಮಾಣೀಕರಿಸಿದುದರ ಪರಿಣಾಮವಾಗಿ ಓದುವುದು ವಿಶೇಷ ತಜ್ಞತೆಯ ಕೆಲಸವಾಗಿ ಉಳಿಯಲಿಲ್ಲ.

ಬರವಣಿಗೆ ಮತ್ತು ಅದರ ಓದು ಹೀಗೆ ತಂತ್ರಜ್ಞಾನದ ಪ್ರಭಾವದಿಂದ ಸಾಮಾಜೀಕರಣಗೊಂಡದ್ದು ಕನ್ನಡದ ಬಳಕೆಯ ಮೇಲೆ ಅಗಾಧವಾದ ಪರಿಣಾಮವನ್ನು ಬೀರಿದೆ. ಮುದ್ರಣದ ವಿನ್ಯಾಸದಲ್ಲಿ ಪದಗಳ ನಡುವಣ ತೆರಪನ್ನು ಸೂಚಿಸುವುದು ಸಾಧ್ಯವಾಯಿತು. ಮೊದಲ ಮಾದರಿಯ ಬರವಣಿಗೆಯಲ್ಲಿ ಪದಗಳನ್ನು ತೆರಪಿಲ್ಲದೆ ಬರೆಯುವುದು ರೂಢಿಯಲ್ಲಿತ್ತು. ಈಗ ಪ್ರಮಾಣಬದ್ಧ ಅಕ್ಷರವಿನ್ಯಾಸದಲ್ಲಿ ಪದಗಳ ನಡುವೆ ತೆರಪನ್ನು ಕಣ್ಣು ನೋಡುವುದು ಸಾಧ್ಯವಾದದ್ದರಿಂದ ಓದಿನ ವೇಗ ಹೆಚ್ಚಾಗುವ ಅವಕಾಶಗಳು ಒದಗಿಬಂದವು. ಇದು ಶಿಕ್ಷಣದ ವಿಸ್ತಾರಕ್ಕೆ ನೆರವಾಗುವ ಸಂಗತಿಯಾಗಿದೆ. ಓದುವವರು ಹೆಚ್ಚು ಶ್ರಮವಿಲ್ಲದೆ ಮತ್ತು ಹೆಚ್ಚು ವೇಗವಾಗಿ ಓದುವುದು ಸಾಧ್ಯವಾದುದರಿಂದ ಓದಿನ ಸಾಮರ್ಥ್ಯವನ್ನು ಪಡೆದುಕೊಳ್ಳುವುದು ಮತ್ತು ಬಳಸುವುದು ಯಾರಿಗೆ ಬೇಕಾದರೂ ಲಭ್ಯವಾಗಬಹುದಾದ ಸಂಗತಿಯಾಯಿತು. ಓದಿನ ವೇಗ ಹೆಚ್ಚಾದುದರ ಪರಿಣಾಮವೆಂದರೆ ಹೆಚ್ಚು ಮಾಹಿತಿಯನ್ನು ಕಡಿಮೆ ಕಾಲದಲ್ಲಿ ಪಡೆಯುವ ಅವಕಾಶ ಒದಗಿ ಬಂದದ್ದು. ಹೆಚ್ಚು ವಿಷಯಗಳನ್ನು ಕಡಿಮೆ ಕಾಲದಲ್ಲಿ ಯಾರು ಬೇಕಾದರೂ ತಿಳಿಯುವ ಅವಕಾಶ ಒದಗಿದ್ದು, ಹೀಗಾಗಿ ತಂತ್ರಜ್ಞಾನವು ಭಾಷೆಯ ಅಭಿವೃದ್ಧಿಗೆ ನೀಡಿದ ಕೊಡುಗೆಯಾಗಿದೆ. ಇದರ ಅಡ್ಡ ಪರಿಣಾಮಗಳು ನಿಧಾನವಾಗಿ ಗೋಚರಿಸತೊಡಗಿದವು. ಮುಖ್ಯವಾಗಿ ಲಿಖಿತವಾದದ್ದು ಹೆಚ್ಚು ಶಾಶ್ವತವಾಗಿ ಉಳಿಯಬೇಕೆಂಬ ತಿಳುವಳಿಕೆಯಲ್ಲಿ ಪಲ್ಲಟ ಉಂಟಾಯಿತು. ಅಂದರೆ ಬರೆದದ್ದು ಕೂಡಲೇ ಪ್ರಸಾರವಾಗುವುದು ಮತ್ತು ಬಹುಪ್ರತಿಗಳಲ್ಲಿ ಲಭ್ಯವಾಗುವುದು ಸಂಭವಿಸಿದ್ದರಿಂದ ಹಾಗೂ ಓದುವಿಕೆಗೆ ಯಾರು ಬೇಕಾದರೂ ತೆರೆದುಕೊಳ್ಳುವುದು ಸಾಧ್ಯವಾದದ್ದರಿಂದ ಲಿಖಿತ ದಾಖಲೆಗಳು ಓದಿಗಾಗಿಯೇ, ಮನನ ಮಾಡಿಕೊಳ್ಳುವುದಕ್ಕಾಗಿಯೇ ಶತಮಾನಗಟ್ಟಲೆ ಕಾಯಬೇಕಾದ ಅಗತ್ಯ ಈಗ ಇಲ್ಲವಾಗಿದೆ. ಇದರಿಂದ ಲಿಖಿತವಾದದ್ದು ಹೆಚ್ಚು ಶಾಶ್ವತವಾಗಿರಬೇಕಾಗಿಲ್ಲ. ಈ ತ್ವರಿತ ನಾಶಕ್ಕೆ ನಾವು ಲೇಖನಕ್ಕಾಗಿ ಬಳಸಿದ ಸಾಮಗ್ರಿಗಳ ಸ್ವರೂಪ ಕೂಡ ತನ್ನ ಕೊಡುಗೆಯನ್ನು ನೀಡಿದೆ. ಮೊದಲು ಶಿಲೆಯ ಮೇಲೆ ಅಥವಾ ತಾಳೆಯ ಗರಿಗಳ ಮೇಲೆ ಬರೆದಾಗ ಅವು ಬಹುಕಾಲ ಉಳಿಯಬೇಕೆಂಬ ಅಪೇಕ್ಷೆ ಇರುತ್ತಿತ್ತು. ಹಾಗಲ್ಲದೆ ಅವು ಹೆಚ್ಚು ಕಾಲ ಉಳಿಯಬಲ್ಲ ಮಾಧ್ಯಮಗಳೂ ಆಗಿದ್ದವು. ಈಗ ಬಳಸಲಾದ ಕಾಗದಕ್ಕೆ ಜೀವಿತಾವಧಿಯೇ ಕಡಿಮೆ. ಬೇಗ ಮರೆಯಾಗುವುದಕ್ಕೆ ಹೀಗೆ ಮಾಧ್ಯಮವೂ ಕೂಡ ಪರೋಕ್ಷವಾಗಿ ಕೊಡುಗೆಯನ್ನು ನೀಡಿದೆ. ಇದು ಒಂದು ಮುಖ್ಯ ಸಂಗತಿಯಾಗಿದೆ. ಏಕೆಂದರೆ ಈ ಅಂಶವೇ ತಂತ್ರಜ್ಞಾನದ ಮುಂದಿನ ಸ್ವರೂಪವನ್ನು ನಿರ್ದೇಶಿಸಿದೆ.

ಈವರೆಗೆ ನಾವು ಬರೆಹದ ದಾಖಲಾತಿಯನ್ನು ಕುರಿತು ಮಾತ್ರ ಪರಿಗಣನೆಗೆ ತೆಗೆದುಕೊಂಡಿದ್ದೇವೆ. ಮೌಖಿಕವಾಗಿದ್ದುದು ನೆನಪಿನ ಶಕ್ತಿಯನ್ನು ಅವಲಂಬಿಸಿ ಕೆಲವರ ಮೂಲಕ ಮಾತ್ರ ಹೆಚ್ಚು ಕಾಲದವರೆಗೆ ತಲೆಮಾರಿನಿಂದ ತಲೆಮಾರಿಗೆ ದಾಟಿ ಬರುವುದು ಸಾಧ್ಯವಾಗಿತ್ತು. ಈ ಆವರ್ತನೆ ಕೂಡ ಸೇರ್ಪಡೆ ಬೇರ್ಪಡೆಗಳಿಗೆ ಹೊರತಾಗಿರಲಿಲ್ಲ. ಆದರೆ ಧ್ವನಿಮುದ್ರಣದ ಸಾಧ್ಯತೆಯಿಂದಾಗಿ ಈಗ ಆಡಿದ ಮಾತುಗಳನ್ನು ದೀರ್ಘಕಾಲ ಕಾಯ್ದಿರಿಸುವುದು ಈಗ ಸಾಧ್ಯ. ಹೀಗಾಗಿ ಆಡು ಮಾತಿಗೆ ಇದ್ದ ಕಾಲದೇಶಗಳ ಮಿತಿಯ ಚೌಕಟ್ಟನ್ನು ಮೀರುವುದು ಸಾಧ್ಯವಾಗಿದೆ. ಈ ಸೌಲಭ್ಯದ ಅವಕಾಶವು ಕನ್ನಡದ ಅಭಿವೃದ್ಧಿಗೆ ಹೇಗೆ ನೆರವಾಗಿದೆ ಎನ್ನುವುದನ್ನು ಪರಿಶೀಲಿಸುವುದು ಅಗತ್ಯ. ಕನ್ನಡದ ಉಪಭಾಷೆಗಳು ಲಿಖಿತ ಮಾಧ್ಯಮಕ್ಕೆ ಪರಿವರ್ತನೆಯಾಗುವ ಸಾಧ್ಯತೆಗಳು ಕಡಿಮೆ. ಹೀಗಾಗಿ ಈ ಉಪಭಾಷೆಯ ಪ್ರಭೇದಗಳು ಹೆಚ್ಚು ಜನರಿಗೆ ಪರಿಚಿತವಾಗುವ ಸಂದರ್ಭಗಳು ಕಡಿಮೆಯಾಗಿರುತ್ತವೆ. ಆಯಾ ಪ್ರದೇಶಗಳಲ್ಲಿ, ಆಯಾ ಸಾಮಾಜಿಕ ವಲಯಗಳಲ್ಲಿ ಮಾತ್ರ ಪ್ರಚಲಿತವಿದ್ದ ಉಪಭಾಷಿಕ ಪ್ರಭೇದಗಳು ಇಡಿ ಭಾಷಿಕ ಸಮುದಾಯಕ್ಕೆ ಪರಿಚಿತವಾದ ಹೊರತು ತಮ್ಮದಲ್ಲದ ಉಪಭಾಷೆಯ ಮಾದರಿಗಳನ್ನು ಕೇಳಿ ಅರ್ಥ ಮಾಡಿಕೊಳ್ಳುವ ಸಾಮರ್ಥ್ಯ ಬೆಳೆಯುವುದು ಕಷ್ಟ. ಈಗ ಧ್ವನಿ ದಾಖಲಾತಿಯ ಸೌಲಭ್ಯದಿಂದಾಗಿ ಈ ಉಪಭಾಷಾ ಪ್ರಭೇದಗಳು ತಮ್ಮ ಪರಿಸರದ ಆಚೆಗೂ ಇರುವ ಭಾಷಿಕರ ಕಿವಿಯ ಮೇಲೆ ಬೀಳುವುದು ಸಾಧ್ಯವಾಗಿದೆ. ಬೀದರ ಕನ್ನಡವನ್ನು ಚಾಮರಾಜನಗರದವರೂ ಕೇಳಿ ಅರ್ಥಮಾಡಿಕೊಳ್ಳುವುದು ಸಾಧ್ಯವಾಗಿದೆ. ಉಪಭಾಷಿಕ ಬಾಹುಳ್ಯವು ಭಾಷಿಕರ ಸಾಮರ್ಥ್ಯವನ್ನು ಬೆಳೆಸುವುದಕ್ಕೆ ಅನುಕೂಲಕರವಾದ ವಾತಾವರಣ ತಂತ್ರಜ್ಞಾನದಿಂದಾಗಿ ಸಾಧ್ಯವಾಗಿದೆ. ಆಕಾಶವಾಣಿ, ದೂರದರ್ಶನ ಮತ್ತು ಇತರ ದೃಶ್ಯ ಮಾಧ್ಯಮಗಳು(ನಾಟಕ, ಸಿನೆಮಾ) ಹೀಗೆ ಕನ್ನಡದ ವ್ಯಾಪಕ ಗ್ರಹಿಕೆಗೆ ಅನುಕೂಲವಾದ ಪರಿಸರವನ್ನು ನಿರ್ಮಿಸಿಕೊಟ್ಟಿವೆ.

ಮತ್ತೆ ಬರೆಹಕ್ಕೆ ಬರೋಣ. ಮುದ್ರಣ ಮತ್ತು ಬೆರಳಚ್ಚು ಸೌಲಭ್ಯಗಳು ಕನ್ನಡದ ಲಿಖಿತ ದಾಖಲಾತಿಯ ಮೇಲೆ ಬೀರಿದ ಪರಿಣಾಮಗಳ ಸ್ವರೂಪವನ್ನು ಈಗಾಗಲೇ ಗಮನಿಸಿದ್ದೇವೆ. ಇಪ್ಪತ್ತನೆಯ ಶತಮಾನದ ಕೊನೆಯ ಭಾಗಕ್ಕೆ ಬಂದಾಗ ಇನ್ನೊಂದು ವೈಜ್ಞಾನಿಕ ಆವಿಷ್ಕಾರ ಬೇರೊಂದು ಬಗೆಯ ಪರಿಣಾಮಕ್ಕೆ ಕಾರಣವಾಯಿತು. ಕಂಪ್ಯೂಟರ್‌ನ ವ್ಯಾಪಕ ಬಳಕೆಯಿಂದಾಗಿ ಕನ್ನಡವನ್ನು ಆ ಯಂತ್ರದ ಮೂಲಕ ಪ್ರಸಾರ ಮಾಡುವ ಸಂದರ್ಭ ಒದಗಿ ಬಂದಿದೆ. ಕಂಪ್ಯೂಟರ್ ಮತ್ತು ಭಾಷೆಯ ಸಂಬಂಧವನ್ನು ಆಮೂಲಾಗ್ರವಾಗಿ ಅರಿಯಲು ತೊಡಗುವುದಕ್ಕೆ ಇಲ್ಲಿ ಅವಕಾಶವಿಲ್ಲ. ಕನ್ನಡವನ್ನು ಕಂಪ್ಯೂಟರ್ ಅಲ್ಲಿ ಬರೆಯುವುದು ಎಂದರೇನು? ಈಗಾಗಲೇ ಕೈ ಬರೆಹದಲ್ಲಿ ಬರೆದದ್ದನ್ನು ಕಂಪ್ಯೂಟರ್ ನೆನಪಿಗೆ ವರ್ಗಾಯಿಸುವುದು ಒಂದು ಕ್ರಮ. ಇದಲ್ಲದೆ ಲಿಖಿತ ರೂಪವೊಂದರಲ್ಲಿ ಮೈತಳೆಯುವ ಮೊದಲೇ ಕಂಪ್ಯೂಟರ್‌ಗೆ ಹೋಗಿ ಸೇರಿಕೊಳ್ಳುವುದು ಇನ್ನೊಂದು ಬಗೆ. ಮೊದಲ ಬಗೆಯಲ್ಲಿ ಕಂಪ್ಯೂಟರ್ ಮುದ್ರಣ ಯಂತ್ರದ ಕೆಲಸವನ್ನು ಹೆಚ್ಚು ವೃತ್ತಿಪರವಾಗಿ ನಿರ್ವಹಿಸುತ್ತವೆ.

ಈಗೀಗ ಬರೆಯುವುದು ಎಂದರೆ ನೇರವಾಗಿ ಕಂಪ್ಯೂಟರ್‌ನಲ್ಲಿ ಬರೆಯುವುದು ಎಂದಾಗುತ್ತಿದೆ. ಕನ್ನಡದ ವೃತ್ತಿಪರ ಪತ್ರಿಕೋದ್ಯೋಗಿಗಳು ದಿನವೂ ತಮ್ಮ ಪತ್ರಿಕಾ ಬರೆಹಗಳನ್ನು ಕೈಬರೆಹದಲ್ಲಿ ರೂಪಿಸುವುದಿಲ್ಲ; ನೇರವಾಗಿ ಕಂಪ್ಯೂಟರ್‌ನಲ್ಲಿ ಮೂಡಿಸುತ್ತಾರೆ. ಅಂತರ್ಜಾಲದ ಅಂಚೆಯಲ್ಲಿ ಪತ್ರ (ಇ-ಮೇಲ್) ಬರೆಯುವವರೂ ಕೂಡ ನೇರವಾಗಿ ಕಂಪ್ಯೂಟರ್ ಮೇಲೆ ಬರೆಯುತ್ತಿರುವುದು ಒಂದು ಗಮನಾರ್ಹ ಬದಲಾವಣೆಯಾಗಿದೆ. ಹೀಗೆ ತಂತ್ರಜ್ಞಾನ ನಮ್ಮ ಭಾಷಾ ಕೌಶಲವೊಂದನ್ನು ಬುಡಸಹಿತ ಬದಲಾಯಿಸಲು ಸನ್ನದ್ಧವಾಗಿದೆ. ಈ ತುರ್ತು ಮತ್ತು ನೇರ ಬರೆಹ ಭಾಷೆಯ ಸ್ವರೂಪದ ಮೇಲೆ ಸಾಕಷ್ಟು ಪ್ರಭಾವ ಬೀರಿದೆ. ಯೋಚಿಸುತ್ತ ಹಾಳೆಯ ಮೇಲೆ ಲೇಖನಿಯಿಂದ ಬರೆಯುವಾಗ ಆಕಾರ ಪಡೆಯುವ ಭಾಷಾರೂಪಕ್ಕೂ ಕಂಪ್ಯೂಟರ್ ತೆರೆಯ ಮೇಲೆ ನೇರವಾಗಿ ಮೈ ತಳೆಯುವ ಭಾಷಾರೂಪಕ್ಕೂ ಅಗಾಧವಾದ ವ್ಯತ್ಯಾಸಗಳಿವೆ. ಇಂಗ್ಲಿಶ್‌ನಂತಹ ಭಾಷೆಗಳ ಮೇಲೆ ಈ ತಂತ್ರಜ್ಞಾನದ ಸಂದರ್ಭವು ಉಂಟು ಮಾಡಿರುವ ಪ್ರಭಾವಗಳನ್ನು ಕುರಿತು ಅಧ್ಯಯನಗಳು ಮೊದಲಾಗಿವೆ. ಕನ್ನಡದ ಮಾಹಿತಿಯನ್ನು ನಾವಿನ್ನೂ ಈ ನೆಲೆಯ ವಿಶ್ಲೇಷಣೆಗೆ ಬಳಸಿಕೊಂಡಿಲ್ಲ.

ಈ ಹೊಸ ಶತಮಾನದಲ್ಲಿ ಕನ್ನಡ ಈ ಹಿಂದಿನಿಂದಲೂ ಎದುರಿಸುತ್ತಿರುವ ಕೆಲವು ಸಮಸ್ಯೆಗಳ ಭಾರದೊಡನೆ ಹೊಸದಾದ ಕೆಲವು ಸವಾಲುಗಳನ್ನು ಎದುರಿಸಬೇಕಾಗಿದೆ ಎಂಬುದನ್ನು ಮೇಲೆ ವಿವರಿಸಲು ಯತ್ನಿಸಲಾಗಿದೆ. ಈ ಸವಾಲುಗಳ ಬಗ್ಗೆ ಅರಿವನ್ನೂ ಪಡೆಯುವುದು ನಿವಾರಣೆಗಾಗಿ ಚಿಂತಿಸುವುದಕ್ಕಿಂತಲೂ ಮುಖ್ಯವಾದ ಸಂಗತಿ. ಏಕೆಂದರೆ ಎಷ್ಟೋ ವೇಳೆ ಸಮಸ್ಯೆಗಳ ಸ್ವರೂಪವನ್ನು ಅರಿಯುವುದೆಂದರೇ, ಆ ಸಮಸ್ಯೆಯನ್ನು ಬಹುಪಾಲು ಬಿಡಿಸಿದಂತೆಯೇ ಸರಿ.

# ನಮಗೆಷ್ಟು ಕನ್ನಡ ಬೇಕು?

ವಿಚಿತ್ರ ಪ್ರಶ್ನೆ. ನಮಗೇಕೆ ಕನ್ನಡ ಬೇಕು ಎಂದು ಕೇಳುತ್ತಿರುವ ಈ ಕಾಲದಲ್ಲಿ ನಮಗೆಷ್ಟು ಕನ್ನಡ ಬೇಕು ಎಂದು ಕೇಳುವುದು ಸಹಜವಾಗಿಯೇ ವಿಚಿತ್ರ ಎನಿಸುತ್ತದೆ. ಆದರೆ ಈ ಪ್ರಶ್ನೆಯನ್ನು ಕೇಳಿಕೊಳ್ಳುವುದಕ್ಕೆ ಕಾರಣಗಳಿವೆ. ಕನ್ನಡವನ್ನು ಬಳಸುವವರಲ್ಲಿ ಬಹುಪಾಲು ಜನ ಕನ್ನಡವನ್ನು ಮೊದಲ ಭಾಷೆಯನ್ನಾಗಿ ಕಲಿತವರು. ಕನ್ನಡವನ್ನು ಎರಡನೆಯ ಅಥವಾ ಮೂರನೆಯ ಕೆಲವೊಮ್ಮೆ ನಾಲ್ಕನೆಯ ಭಾಷೆಯನ್ನಾಗಿ ಕಲಿತವರ ಸಂಖ್ಯೆ ಸಾಕಷ್ಟಿದೆ. ಸುಮಾರು ಅಂದಾಜಿನ ಪ್ರಕಾರ ಈಗ ಕನ್ನಡವನ್ನು ಬಳಸುತ್ತಿರುವವರಲ್ಲಿ ನೂರಕ್ಕೆ ಹದಿನೈದು ಜನ ಹೀಗೆ ಕನ್ನಡವನ್ನು ತಮ್ಮ ಮೊದಲ ಭಾಷೆಯನ್ನಾಗಿ ಕಲಿತವರಲ್ಲ. ಆದರೆ ಕನ್ನಡವನ್ನು ಆಡುವ, ಕೇಳಿ ಅರಿಯುವ ಜನರಲ್ಲಿ ನೂರಕ್ಕೆ ಮೂವತ್ತು ಜನ ಮಾತ್ರ ಆ ಭಾಷೆಯನ್ನು ಓದಬಲ್ಲವರು, ಬರೆಯಬಲ್ಲವರು. ಈ ಅಂಕಿಗಳನ್ನು ಅಷ್ಟಿಷ್ಟು ಆಚೀಚೆ ಸರಿಸುವುದು ಸಾಧ್ಯವಿದೆ. ಇಷ್ಟು ಜನ ಓದಿ ಬರೆಯುವ ಕನ್ನಡದಲ್ಲಿ ಬಹುಮಟ್ಟಿಗೆ ಸಮಾನ ಲಕ್ಷಣಗಳಿರುತ್ತವೆ. ಓದಿ ಬರೆಯದ ಉಳಿದವರ ಕನ್ನಡದಲ್ಲಿ ಹಲವು ಬಗೆಯ ವ್ಯತ್ಯಾಸಗಳಿರುತ್ತವೆ. ಓದಿ ಬರೆಯುವವರು ಶಾಲೆಯಲ್ಲಿ ಕಲಿತ ಕನ್ನಡ ಹಾಗೂ ಮನೆಬಳಕೆಯಲ್ಲಿ ಕಲಿತ ಕನ್ನಡ ಯಾವಾಗಲೂ ಒಂದೇ ಆಗಿರುವುದಿಲ್ಲ. ಅವರಲ್ಲಿ ಬಹುಪಾಲು ಜನ ಕೊನೆಯ ಪಕ್ಷ ಎರಡು ಬಗೆಯ ಕನ್ನಡಗಳನ್ನು ಬಳಸುತ್ತಿರುತ್ತಾರೆ. ಅವುಗಳಲ್ಲಿ ಓದಿ ಬರೆಯುವ ಕನ್ನಡಕ್ಕೆ ಮೊದಲ ಮಣೆ. ಉಳಿದವು ಹಿಂದಿನ ಸಾಲಿನಲ್ಲಿರುತ್ತವೆ.

ಈಗ ಒಂದು ಸಮಸ್ಯೆಯನ್ನು ಕುರಿತು ಹಲವರು ಚರ್ಚಿಸುತ್ತಿದ್ದಾರೆ. ಕನ್ನಡವನ್ನು ಶಾಲೆಯಲ್ಲಿ ಕಲಿಯುವ ಮಕ್ಕಳು ಯಾವ ಕನ್ನಡವನ್ನು ಕಲಿಯಬೇಕು ಎಂಬ ಪ್ರಶ್ನೆಯನ್ನೆತ್ತಿಕೊಂಡು ಈ ಚರ್ಚೆ ಮೊದಲಾಗಿದೆ. ಕನ್ನಡದಲ್ಲಿ ಹತ್ತಾರು ಪ್ರಭೇದಗಳಿವೆ. ಒಂದೊಂದು ಪ್ರದೇಶದಲ್ಲಿ ಬಳಸುವ ಕನ್ನಡವೂ ಇನ್ನೊಂದು ಪ್ರದೇಶದಲ್ಲಿ ಬಳಸುವ ಕನ್ನಡಕ್ಕಿಂತ ಅಷ್ಟಿಷ್ಟು ಬೇರೆಯಾಗಿರುತ್ತದೆ. ಕೆಲವೊಮ್ಮೆ ಒಂದು ಪ್ರದೇಶದ ಕನ್ನಡ ಇನ್ನೊಂದು ಪ್ರದೇಶದ ಕನ್ನಡವನ್ನು ಬಳಸುವವರಿಗೆ ಪೂರ್ಣವಾಗಿ ಅರ್ಥವಾಗದೆಯೂ ಇರಬಹುದು. ಅಥವಾ ಅರ್ಥಮಾಡಿಕೊಳ್ಳಲು ಸಾಕಷ್ಟು ಕಷ್ಟಪಡಬೇಕಾಗುವ ಪರಿಸ್ಥಿತಿ ಇದೆಯೆನ್ನೋಣ. ಇದಲ್ಲದೆ ಒಂದೇ ಪ್ರದೇಶದಲ್ಲಿ ಬಳಸುವ ಕನ್ನಡದಲ್ಲಿಯೇ ಹಲವಾರು ವ್ಯತ್ಯಾಸಗಳಿರುತ್ತವೆ. ಹೀಗಿರುವಾಗ ಮಕ್ಕಳು ಯಾವ ಕನ್ನಡವನ್ನು ಕಲಿಯಬೇಕು?

ಏಕೀಕರಣದ ಅನಂತರದಲ್ಲಿ ಈ ಸಮಸ್ಯೆ ಗಾಢವಾಗಿತೊಡಗಿದೆ. ಅದಕ್ಕೆ ಮೊದಲು ಕನ್ನಡ ಮಾತನಾಡುವ ಪ್ರದೇಶಗಳು ವಿವಿಧ ಆಡಳಿತಗಳಲ್ಲಿ ಹಂಚಿಹೋಗಿದ್ದವು. ಆಯಾ ಆಡಳಿತಗಳು ತಮ್ಮ ಪ್ರದೇಶದ ಮುಖ್ಯಭಾಷೆಗಳಲ್ಲಿ ಒಂದಾಗಿದ್ದ ಕನ್ನಡವನ್ನು ಕಲಿಸಲು ತಮ್ಮದೇ ಆದ ವಿಧಾನವನ್ನು ಬಳಸಿದ್ದವು. ಕೆಲವು ಪ್ರದೇಶಗಳಲ್ಲಿ ಕನ್ನಡವನ್ನು ಕಲಿಸುತ್ತಲೇ ಇರಲಿಲ್ಲ. ಕನ್ನಡ ಮಾತನಾಡುವ ಬಹುಪಾಲು ಜನರು ಒಂದೇ ಆಡಳಿತದ ವ್ಯಾಪ್ತಿಗೆ ಬಂದ ಮೇಲೆ ಏರುಪೇರುಗಳು ಕಣ್ಣಿಗೆ ರಾಚತೊಡಗಿದವು. ಏಕರೂಪದ ಪಠ್ಯಪುಸ್ತಕಗಳನ್ನು ಸರಕಾರವೇ ರಚಿಸಿ ಬಳಸುವ ಮೂಲಕ ಈ ಏರುಪೇರನ್ನು ಸರಿಪಡಿಸಬಹುದೆಂಬ ತರ್ಕ ಸಹಜವಾಗಿಯೇ ಆಗಿನ ಶೈಕ್ಷಣಿಕ ಆಡಳಿತಗಾರರಿಗೆ ತೋಚಿದೆ. ಅದಕ್ಕನುಗುಣವಾಗಿ ಯೋಜನೆಗಳನ್ನು ರೂಪಿಸಿ ಜಾರಿಗೊಳಿಸಿದ್ದಾರೆ. ಇದು ಸುಲಭದ ದಾರಿಯಾಗಿಲ್ಲ. ಪರ್ಯಾಯವಾದ ಮಾರ್ಗಗಳನ್ನು ಆಗಾಗ ಹುಡುಕುವ ಪ್ರಯತ್ನಗಳು ನಡೆದಿವೆ. ಉದಾಹರಣೆಗೆ ಕನ್ನಡದ ಒಂದು ಪ್ರಭೇದವನ್ನು ಮಾತನಾಡುವ ಸೋಲಿಗರು. ಜೇನುಕುರುಬರು ಮುಂತಾದ ಗಿರಿಜನರಿಗೆ ಅವರ ಕನ್ನಡವನ್ನು ಹೊರತುಪಡಿಸಿ ಬೇರೆ ಯಾವ ಕನ್ನಡದ ಪ್ರಭೇದವೂ ಪರಿಚಿತವಲ್ಲ. ಅವರ ಮಕ್ಕಳಿಗೆ ಶಾಲೆಗಳಲ್ಲಿ ಇಡೀ ಕರ್ನಾಟಕಕ್ಕೆ ಏಕರೂಪದಲ್ಲಿ ಬಳಕೆಯಿರುವ ಪಠ್ಯವನ್ನು ಬಳಸುವುದು ಸರಿಯಲ್ಲವೆಂದು ತಿಳಿದು ಅವರ ಕನ್ನಡದಲ್ಲಿ ಪಠ್ಯಪುಸ್ತಕಗಳನ್ನು ತಯಾರಿಸಿ ಮೊದಲ ಕೆಲವು ತರಗತಿಗಳಲ್ಲಿ ಬಳಸುವ ಪ್ರಯತ್ನಗಳು ನಡೆದಿವೆ. ಆ ಪ್ರದೇಶಗಳಲ್ಲಿ ಸಾಮಾನ್ಯ ಶಿಕ್ಷಣ ಹೆಚ್ಚಿನ ವ್ಯಾಪಕತೆಯನ್ನು ಇನ್ನೂ ಪಡೆದಿಲ್ಲ. ಹಾಗಾಗಿ ಈ ಪರ್ಯಾಯ ಯತ್ನ ಯೋಗ್ಯವೇ ಅಲ್ಲವೇ ಎಂಬುದನ್ನು ತೀರ್ಮಾನಿಸಿ ಹೇಳುವುದು ಸಾಧ್ಯವಿಲ್ಲ.

ಇದಲ್ಲದೆ ವಯಸ್ಕರ ಸಾಕ್ಷರತೆಯ ಕಾರ್ಯಕ್ರಮಗಳಲ್ಲಿ ಏಕರೂಪದ ಪಠ್ಯಪುಸ್ತಕಗಳನ್ನು ಬಳಸಿಲ್ಲ. ಒಂದೊಂದು ಜಿಲ್ಲೆಯಲ್ಲೂ ಬೇರೆಬೇರೆ ಪಠ್ಯಪುಸ್ತಕಗಳನ್ನು ತಯಾರಿಸಿ ಕಲಿಕೆಯ ಕಾರ್ಯಕ್ರಮಕ್ಕೆ ಒದಗಿಸಿದ್ದಾರೆ. ಈ ಬೇರೆಬೇರೆ ಪಠ್ಯಗಳಲ್ಲಿ ಆಯಾ ಜಿಲ್ಲೆಗಳಿಗೆ ಸಂಬಂಧಿಸಿದ ಭಾಷಿಕ ವೈವಿಧ್ಯಗಳಿಗೆ ಅಥವಾ ಕನ್ನಡದ ಬೇರೆ ಬೇರೆ ಬಗೆಯ ಪ್ರಭೇದಗಳಿಗೆ ಅವಕಾಶ ಸಿಕ್ಕಿದೆಯೆನ್ನುವಂತಿಲ್ಲ. ಪಠ್ಯಪುಸ್ತಕ ತಯಾರಿಕೆ ಮಾತ್ರ ವಿಕೇಂದ್ರಿಕರಣಗೊಂಡಿದೆ. ಉಳಿದಂತೆ ಕಲಿಕೆಯಲ್ಲಿ ಬಳಸುವ ಭಾಷಿಕ ಸಾಮಗ್ರಿಯಲ್ಲಿ ವಿಕೇಂದ್ರೀಕರಣವಾಗಿಲ್ಲ. ಸಾಕ್ಷರತಾ ಕಾರ್ಯಕ್ರಮದ ವ್ಯಾಪ್ತಿಯಲ್ಲಿ ಬರುವ ಲಕ್ಷಾಂತರ ಜನರಿಗೆ ಅವರು ಈಗಾಗಲೇ ಬಳಸುತ್ತಿರುವ ಕನ್ನಡದ ಪ್ರಭೇದಗಳನ್ನು ಓದಿ ಬರೆಯಲು ಈ ಕಲಿಕೆಯಲ್ಲಿ ಅವಕಾಶಗಳಿಲ್ಲ.

ಈಗ ಇನ್ನೊಂದು ಪ್ರಸಂಗ ಎದುರಾಗಿದೆ. ಕರ್ನಾಟಕದ ಪ್ರಾಥಮಿಕ ಶಾಲೆಗಳಲ್ಲಿ ಓದುವ ಮಕ್ಕಳಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಮಕ್ಕಳು ಓದುವ ಪಠ್ಯಪುಸ್ತಕಗಳು ಬೇರೆ. ಇತರ ಜಿಲ್ಲೆಯ ಮಕ್ಕಳು ಓದುವ ಪುಸ್ತಕಗಳು ಸಾಮಾನ್ಯ ರೀತಿಯಲ್ಲಿ ಸಿದ್ಧಗೊಂಡಿವೆ. ಆದರೆ ದಕ್ಷಿಣ ಕನ್ನಡದ ಮಕ್ಕಳು ಓದುವ ಪುಸ್ತಕಗಳನ್ನು ಸಿದ್ಧಪಡಿಸಿದವರು ಶಿವರಾಮ ಕಾರಂತರು. ಅವರು ಬಹುವರ್ಷಗಳ ಹಿಂದೆ ಸಿದ್ಧ ಮಾಡಿದ ಪಠ್ಯಪುಸ್ತಕಗಳನ್ನು ಈಗ ಓದಿಗೆ ನಿಗದಿ ಪಡಿಸಲಾಗಿದೆ. ಈ ಪುಸ್ತಕಗಳನ್ನು ಮಕ್ಕಳಿಗೆ ಓದಲು ಕೊಟ್ಟದ್ದು

ಸರಿಯೇ ಎಂಬ ಬಗೆಗೆ ಚರ್ಚೆಗಳು ನಡೆಯುತ್ತಿವೆ. ಅಲ್ಲಿನ ಪಾಠಗಳ ಸಾಮಾಜಿಕ ಧೋರಣೆಗಳನ್ನು ಹಲವು ರೀತಿಗಳಲ್ಲಿ ಪ್ರಶ್ನಿಸಲಾಗುತ್ತಿದೆ. ಅದೇನೇ ಇರಲಿ ಆ ಪುಸ್ತಕಗಳು ಮಕ್ಕಳಲ್ಲಿ ಭಾಷೆಯ ಕಲಿಕೆಯ ವಿಧಾನವನ್ನು ಚುರುಕುಗೊಳಿಸುತ್ತವೆ ಎಂದು ಹೇಳಲಾಗಿದೆ. ಅದಕ್ಕೆ ತಕ್ಕಂತೆ ಪಾಠಗಳನ್ನು ರಚಿಸಲಾಗಿದೆಯೆಂದೂ ವಾದಿಸಲಾಗಿದೆ. ಆದರೆ ಮಕ್ಕಳು ಯಾವ ಕನ್ನಡವನ್ನು ಕಲಿಯಬೇಕು ಎಂಬ ಪ್ರಶ್ನೆ ಮಾತ್ರ ಹಾಗೇ ಉಳಿದಂತಿದೆ. ಅಂದರೆ ಈವರೆಗೆ ಪಾಠಗಳ ವಸ್ತು ಮತ್ತು ಪಾಠಗಳ ರಚನೆಗಳನ್ನು ಮಾತ್ರ ಹಲವು ರೀತಿಗಳಲ್ಲಿ ಚರ್ಚಿಸಲಾಗಿದೆ; ವಿವಿಧ ಪ್ರಯೋಗಗಳನ್ನು ಮಾಡಲಾಗಿದೆ. ಆದರೆ ಪಾಠಗಳ ಭಾಷೆಯನ್ನು ಕುರಿತು ನಾವಿನ್ನೂ ಹೆಚ್ಚು ಯೋಚಿಸಿದಂತಿಲ್ಲ.

ಈ ಪರಿಸ್ಥಿತಿಯ ಪರಿಣಾಮಗಳೇನು? ಬೀದರ್. ಚಾಮರಾಜನಗರ, ಸಿರಗುಪ್ಪ, ಅಂಕೋಲಾ ಹೀಗೆ ಊರು ಯಾವುದೇ ಇರಲಿ ಮಕ್ಕಳು ಶಾಲೆಯಲ್ಲಿ ಓದಿ ಬರೆಯಲು ಕಲಿಯುವ ಕನ್ನಡ ಮಾತ್ರ ಏಕರೂಪದ್ದು. ಹಾಗೆ ಕಲಿತ ಮಕ್ಕಳು ಮುಂದೆ ತಮ್ಮ ಪರಿಸರದಲ್ಲಿ ಆಡುವ ಕನ್ನಡವನ್ನು ಸೀಮಿತ ವಲಯಗಳಲ್ಲಿ ಮಾತ್ರ ಬಳಸತೊಡಗುತ್ತಾರೆ. ಒಂದು ಬಗೆಯ ಭಾಷಾದ್ವಿಸ್ತರತೆ ರೂಪುಗೊಳ್ಳುತ್ತದೆ. ಇದನ್ನೇ ಮೊದಲಲ್ಲಿ ಎರಡು ಕನ್ನಡಗಳಿಗೆ ಹಕ್ಕುದಾರರಾಗುತ್ತಾರೆಂದು ಹೇಳಿದ್ದು. ಕಲಿತ ಕನ್ನಡಿಗರಲ್ಲಿ ರೂಪುಗೊಳ್ಳುವ ಎರಡು ಕನ್ನಡಗಳ ನಡುವಣ ಸಂಬಂಧ ಸಾಮಾಜಿಕವಾದ ಹಲವು ಪರಿಣಾಮಗಳಿಗೆ ಕಾರಣವಾಗುತ್ತದೆ. ಪರಿಸರದ ಕನ್ನಡ ನಿಧಾನವಾಗಿ ತನ್ನ ಅಧಿಕೃತತೆಯನ್ನು ಕಳೆದುಕೊಂಡು ಬಳಕೆಯಿಂದ ಮರೆಯಾಗುತ್ತದೆ. ಆಗ ಬಳ್ಳಾರಿಯ ಹುಡುಗ 'ಜಗ್ಗಿ' ಎನ್ನುವ ಬದಲು 'ತುಂಬಾ' ಎನ್ನ ತೊಡಗುತ್ತಾನೆ. ಅಂದರೆ ಕನ್ನಡದ ಪ್ರಭೇದಗಳಲ್ಲಿರುವ ಸಾವಿರಾರು ಬಳಕೆಯ ಪದಗಳು ಮರೆಯಾಗ ತೊಡಗುತ್ತವೆ.

ಹೀಗೆ ಭಾಷೆಯ ಸಾವಿರಾರು ಪದಗಳು ಮರೆಯಾಗುವುದನ್ನು ನಿರ್ನಾಮ ದೃಷ್ಟಿಯಿಂದ ನೋಡುವವರೂ ಇದ್ದಾರೆ. ಹಾಗೆ ಹೋದರೇನಂತೆ; ಭಾಷಿಕರು ಅವುಗಳ ಬದಲು ಬೇರೆಬೇರೆ ಪದಗಳನ್ನು ಬಳಕೆಗೆ ತರುತ್ತಾರೆ ಎನ್ನುವುದು ಅವರ ಸಮಾಧಾನದ ಮಾತು ನಿಜ. ಭಾಷಿಕರು ದಿನದಿನವೂ ತಮಗೆ ಬೇಕಾದ ಹತ್ತಾರು ಪದಗಳನ್ನು ಹೇಗೋ ರೂಪಿಸಿಕೊಂಡು ಬಳಸಿ ಅಂದಂದಿನ **ದಂದುಗವನ್ನು** ಪೂರೈಸಿಕೊಳ್ಳುತ್ತಾರೆ. ಆದರೆ ಹೀಗೆ ಪದಗಳನ್ನು ರೂಪಿಸಿ ಬಳಸಿಕೊಳ್ಳಲು ಬಳಸುವ ತಂತ್ರ ಮಾತ್ರ ಕನ್ನಡದಲ್ಲಿ ತಲೆಕೆಳಗಾಗಿದೆ. ಮಡಿಲಿನಲ್ಲಿರುವ ಪದಗಳನ್ನು ಅಟ್ಟದಲ್ಲಿ ದೂಳು ತಿನ್ನಲು ಬಿಟ್ಟು ಸಂಸ್ಕೃತ ಮತ್ತು ಇಂಗ್ಲಿಶ್‌ನ ಪದಗಳಿಗೆ ಅನುವು ಮಾಡಿಕೊಡುತ್ತಿದ್ದೇವೆ. ಇದು ಕೇವಲ ಭಾಷೆಯ ಅಭಿಮಾನದ ಮಾತಲ್ಲ. ಇಂಥ ಆಯ್ಕೆಯಿಂದ ನಮ್ಮ ಭಾಷೆಯನ್ನು ಬಳಸುವ ಕೋಟ್ಯಂತರ ಭಾಷಿಕರನ್ನು ಕನ್ನಡದಿಂದ ದೂರ ಮಾಡುತ್ತಿದ್ದೇವೆ. ದಿನ ಕಳೆದಂತೆ ನಮ್ಮ ಪ್ರಮಾಣ ಕನ್ನಡ ಅದನ್ನು ಕೇಳುವ ಕನ್ನಡಿಗರಿಗೆ ಸಂಸ್ಕೃತದಂತೆ ತೋರಿದರೆ ಅಚ್ಚರಿ ಪಡಬೇಕಾಗಿಲ್ಲ.

ಇನ್ನೂ ಗಮನಿಸಬೇಕಾದ ಮಾತೊಂದಿದೆ. ಕನ್ನಡದ ನೂರಾರು ಪದಗಳು ಬಳಕೆಯಲ್ಲಿ ಕೇವಲ ವಾಚ್ಯಾರ್ಥದ ಜತೆಗೆ ಲಕ್ಷಣಾರ್ಥವನ್ನು ಹೊಂದಿರುತ್ತವೆ. ಮಡಕೆ

ಕೇವಲ ಮಣ್ಣಿನಿಂದ ತಯಾರಿಸಿದ ಪಾತ್ರೆ ಎನ್ನುವ ಅರ್ಥದಲ್ಲಿ ಮಾತ್ರ ಕನ್ನಡದಲ್ಲಿ ಬಳಕೆಯಾಗುವುದಿಲ್ಲ. ವಿವಿಧ ಸನ್ನಿವೇಶದಲ್ಲಿ ಆ ಪದವನ್ನು ವಿಭಿನ್ನಾರ್ಥದಲ್ಲಿ ಕನ್ನಡಿಗರು ಬಳಸಿಕೊಳ್ಳುತ್ತಾರೆ. ಆದರೆ ಒಂದು ಪದವನ್ನು ಅದರ ವಾಚ್ಯಾರ್ಥವನ್ನು ಬಳಸುವುದನ್ನೇ ನಾವು ನಿಲ್ಲಿಸಿದೆವೆಂದರೆ ಅದರ ಲಕ್ಷಣಾರ್ಥಗಳೂ ನಿಧಾನವಾಗಿ ಬಳಕೆಯಿಂದ ಜಾರಿಹೋಗುತ್ತವೆ. ಭಾಷೆಯ ಸಮೃದ್ಧತೆಗೆ ಇದರಿಂದ ಧಕ್ಕೆ ಒದಗುತ್ತದೆ. ಕನ್ನಡದ ವಿವಿಧ ಪ್ರಭೇದಗಳಲ್ಲೆ ರೂಪುಗೊಳ್ಳುವ ಸಂಕಥನಗಳನ್ನು ಎಚ್ಚರಿಕೆಯಿಂದ ಗಮನಿಸಿದವರಿಗೆ ಆ ಪ್ರಭೇದಗಳ ಸಮೃದ್ಧತೆಯ ಪರಿಚಯವಾಗುತ್ತದೆ; ಆ ಪ್ರಭೇದಗಳ ಸಾಧ್ಯತೆ, ಸಾಮರ್ಥ್ಯಗಳು ಅರಿವಿಗೆ ಬರುತ್ತವೆ. ಜೊತೆಗೆ ಪ್ರಮಾಣ ಕನ್ನಡದ ಪೇಲವತೆ ರಾಚತೊಡಗುತ್ತದೆ.

ಕನ್ನಡ ಹಿಂದೆಯೂ ಇಂಥ ಪರಿಸ್ಥಿತಿಯನ್ನು ಎದುರಿಸಿದೆ, ಅದನ್ನು ನಿಭಾಯಿಸುವ ತಂತ್ರಗಳನ್ನು ಬೆಳೆಸಿಕೊಂಡಿದೆ. ನಾವು ಮತ್ತೆ ಅದೇ ತಂತ್ರಗಳನ್ನೆ ಅಲ್ಲದಿದ್ದರೂ ತಕ್ಕ ಇನ್ನಿತರ ತಂತ್ರಗಳನ್ನು ಹುಡುಕಿಕೊಳ್ಳಬೇಕು. ಅದರ ಮೊದಲ ಹೆಜ್ಜೆ ಎಂದರೆ ನಮ್ಮ ಮಕ್ಕಳು ಕಲಿಯುವ ಕನ್ನಡದಲ್ಲಿ ಅವರ ಪರಿಸರದ ಕನ್ನಡದ ರೂಪಗಳು ಧಾರಾಳವಾಗಿ ಬಳಕೆಯಾಗಬೇಕು. ಅವರು ತಮ್ಮ ಕನ್ನಡದ ಬಗೆಗೆ ನಾಚಿಕೊಳ್ಳುವಂಥ ಸ್ಥಿತಿ ಇನ್ನಾದರೂ ಇಲ್ಲವಾಗಬೇಕು. ಕಲಿಯುವ ಕನ್ನಡಿಗರು ಕನ್ನಡದ ಎಲ್ಲ ಪ್ರಭೇದಗಳ ಸಾವಿರಾರು ಪದಗಳ ಹಕ್ಕುದಾರರಾಗಬೇಕು. ಆಗ ಮಾತ್ರ ಕನ್ನಡದ ಸಾಧ್ಯತೆಗಳು ನಮಗೆ ದಕ್ಕುತ್ತವೆ.

# ಕನ್ನಡ ಮತ್ತು ತಂತ್ರಜ್ಞಾನ

ಆಧುನಿಕ ಸಂದರ್ಭದಲ್ಲಿ ಭಾಷೆ ಮತ್ತು ತಂತ್ರಜ್ಞಾನಗಳ ಸಂಬಂಧ ಹಿಂದೆಂದಿಗಿಂತಲೂ ಹೆಚ್ಚಿನ ಪ್ರಮಾಣದಲ್ಲಿ ಕಾಣತೊಡಗಿದೆ. ಅಲ್ಲದೆ ಭಾಷೆಯ ಬಳಕೆಯ ಹೆಚ್ಚು ವಲಯಗಳನ್ನು ತಂತ್ರಜ್ಞಾನ ಈಗ ಪ್ರಭಾವಿಸುತ್ತಿದೆ. ಇವೆರಡರ ಸಂಬಂಧಗಳ ಬೆಳವಣಿಗೆ ಚಾರಿತ್ರಿಕವಾಗಿ ಹೇಗೆ ನಡೆದಿದೆ ಎಂಬ ಬಗೆಗೆ ಹಿನ್ನೆಲೆಯಾಗಿ ಕೆಲವು ಮಾತುಗಳು ಅಗತ್ಯ

ಹಿಂದಿನಿಂದಲೂ ಬರೆಹದ ಭಾಷೆಗೂ ತಾಂತ್ರಿಕತೆಗೂ ಸಂಬಂಧ ಏರ್ಪಡುತ್ತಾ ಬಂದಿದೆ. ಆದರೆ ಈ ಸಂಬಂಧ ಸೀಮಿತ ನೆಲೆಯದಾಗಿತ್ತು. ಉದಾ.ಗೆ ಕಲ್ಲಿನ ಮೇಲೆ ಅಕ್ಷರಗಳನ್ನು ಕೆತ್ತಬೇಕಾದರೆ ಅಗತ್ಯವಾದ ಉಪಕರಣಗಳು ಒಂದು ಬಗೆಯವಾದರೆ, ಲೋಹದ ಪಟ್ಟಿಗಳ ಮೇಲೆ ಅಕ್ಷರಗಳನ್ನು ಮೂಡಿಸಲು ಬಳಸುವ ಉಪಕರಣಗಳೇ ಬೇರೆ. ಈ ತಾಂತ್ರಿಕ ನೆರವು ಒಮ್ಮೆ ದೊರಕಿತೆಂದರೆ ಹಲವಾರು ದಶಮಾನಗಳ ಕಾಲ ಹೆಚ್ಚಿನ ಅಗತ್ಯ ಮತ್ತು ಅವಿಷ್ಕಾರಗಳಿಲ್ಲದೆ ಬರವಣಿಗೆ ಸಾಗುವುದು ಸಾಧ್ಯವಾಗಿತ್ತು. ಆದರೆ ತಾಳೆಎಲೆಗಳ ಮೇಲೆ ಬರೆಯತೊಡಗಿದಾಗ ಬರೆಯುವ ಉಪಕರಣ, ಬರೆದ ಮೇಲೆ ಅಕ್ಷರಗಳು ಮೂಡಿಬರಲು ಅಗತ್ಯವಾದ ಮಸಿ, ಮತ್ತು ಬರೆಯಬೇಕಾದ ತಾಳೆಎಲೆಗಳನ್ನು ಸರಿಯಾಗಿ ಸಂಸ್ಕರಿಸಿ ಸಿದ್ಧಪಡಿಸಿದ ಕೃತಿಗಳನ್ನು ಬಹುಕಾಲ ಹಾಳಾಗದಂತೆ ಕಾಯ್ದಿರಿಸುವ ಉಪಾಯಗಳು ಇವೆಲ್ಲವೂ ಹೊಸ ತಂತ್ರಜ್ಞಾನವನ್ನು ಬಯಸುತ್ತಿದ್ದವು. ಕಡತಗಳ ಆಗಮನದ ಅನಂತರದ ಕಾಗದದ ಬಳಕೆ ಬರಹದ ತಾಂತ್ರಿಕತೆಯಲ್ಲಿ ಇನ್ನಷ್ಟು ಬದಲಾವಣೆಯನ್ನು ತಂದವು. 19ನೇ ಶತಮಾನದ ಆದಿಯಲ್ಲಿ ಕನ್ನಡಕ್ಕೆ ಪರಿಚಿತವಾದ ಮುದ್ರಣಯಂತ್ರ ಮತ್ತೊಂದು ತಾಂತ್ರಿಕ ನೆಲೆಯ ಜಗಿತಕ್ಕೆ ಕಾರಣವಾಯಿತು. ಏಕೀಕರಣದ ವೇಳೆಗೆ ಮುದ್ರಣದ ಅನಂತರ ಬಂದ ಕಲ್ಲಚ್ಚಿನ ಬಳಕೆ ಮತ್ತೆ ಕನ್ನಡ ಬರವಣಿಗೆಗೆ ಸೇರಿಕೊಂಡ ಹೊಸ ಅವಿಷ್ಕಾರ. ಈ ಎಲ್ಲಾ ಹಿನ್ನೆಲೆಯಿಂದ ನಮ್ಮ ಏಕೀಕರಣದ ಅವಧಿ ಮೊದಲಾಗುತ್ತವೆ.

ಕಳೆದ ಐವತ್ತು ವರ್ಷಗಳಲ್ಲಿ ಈ ಮೊದಲಿನ ಎಲ್ಲಾ ಅವಿಷ್ಕಾರಗಳಿಗಿಂತಲೂ ಗುಣಾತ್ಮಕವಾಗಿ ಬೇರೆಯೇ ಆದ ತಾಂತ್ರಿಕತೆ ಜಗತ್ತಿನ ಹಲವು ಭಾಷೆಗಳನ್ನು ಪ್ರಭಾವಿಸಿದಂತೆ ಕನ್ನಡವನ್ನೂ ಪ್ರಭಾವಿಸಿತ್ತು. ನಾವು ಅಧ್ಯಯನದ ನೆಲೆಯಲ್ಲಿ ಎರಡು ದಿಕ್ಕಿನಿಂದ ಈ ಕ್ಷೇತ್ರದ ಸಮೀಕ್ಷೆಯನ್ನು ಮಾಡಬಹುದು. ಒಂದು: ಆಡುಮಾತಿನ ವಲಯ. ಎರಡು:

ಬರೆಹದ ವಲಯ. ಕೆಲವು ತಾಂತ್ರಿಕ ಅವಿಷ್ಕಾರಗಳು ಈ ಎರಡೂ ವಲಯಗಳನ್ನು ಬೇರೆ ಬೇರೆಯಾಗಿ ಪ್ರಭಾವಿಸಿವೆ ಎಂಬುದು ನಿಜವಾದರೂ ಇಲ್ಲಿ ಈ ಎರಡು ನೆಲೆಗಳನ್ನು ಒಂದಾದ ಮೇಲೆ ಒಂದರಂತೆ ಪರಿಶೀಲನೆಗೆ ಎತ್ತಿಕೊಳ್ಳಲಾಗಿದೆ.

**ಆಡುಮಾತಿನ ವಲಯ :** ಈ ಮೊದಲು ಹೇಳಿದಂತೆ ಆಡುಮಾತಿನ ಮೇಲೆ ತಂತ್ರಜ್ಞಾನದ ಪ್ರಭಾವ ಕಡಿಮೆ. ಆದರೆ ಕಳೆದ ಶತಮಾನದ ಕೆಲವು ವೈಜ್ಞಾನಿಕ ಅವಿಷ್ಕಾರಗಳು ಆಡುಮಾತನ್ನು ತಮ್ಮ ಪ್ರಭಾವವಲಯಕ್ಕೆ ಸೆಳೆದುಕೊಂಡಿವೆ. ಆಡು ಮಾತಿನ ಕೆಲವು ಮುಖ್ಯ ಲಕ್ಷಣಗಳು ಹೀಗಿವೆ. 1. ಅದು ರೂಪುಗೊಳ್ಳುತ್ತಿರುವಂತೆಯೇ ಮರೆಯಾಗಿ ಹೋಗುತ್ತವೆ. ಹಾಗಾಗಿ ಅದರದು ಅತ್ಯಂತ ನಶ್ವರ ರೂಪ, 2. ಕೇಳಿಸಿಕೊಳ್ಳುವ ದೂರ ಮತ್ತು ಕಾಲದೇಶಗಳಿಗೆ ಬದ್ಧವಾದ ಭೌತಿಕ ಸನ್ನಿವೇಶವನ್ನು ಅವಲಂಬಿಸಿ ಬಹುಮಟ್ಟಿಗೆ ಆಡುಮಾತು ನಿಕಟ ಪರಿಸರದಲ್ಲಿ ಇರುವವರ ವ್ಯಾಪ್ತಿಗೆ ಮಾತ್ರ ದಕ್ಕುವಂಥದ್ದು. ತಂತ್ರಜ್ಞಾನವು ಆಡುಮಾತಿಗಿರುವ ಈ ಎರಡೂ ಲಕ್ಷಣಗಳನ್ನು ನಿವಾರಿಸಲು ನೆರವಾಗಿದೆ. ಅದು ಸೃಷ್ಟಿಯಾದ ಕೂಡಲೇ ಕಳೆದು ಹೋಗಬೇಕಾದ ಅಪಾಯ ಈಗ ಉಳಿದಿಲ್ಲ. ಮಾತನ್ನು ಬಹುಕಾಲ ಹಿಡಿದಿಡುವ ತಂತ್ರಜ್ಞಾನ ಈಗ ಲಭ್ಯವಿದೆ. ಸಾಮಾನ್ಯವಾಗಿ ಧ್ವನಿಮುದ್ರಣ ಎಂಬ ಮಾತಿನಲ್ಲಿ ಈ ತಾಂತ್ರಿಕತೆಯನ್ನು ಸೂಚಿಸುತ್ತೇವೆ. ಬರೆಹದ ಏಕವ್ಯಕ್ತಿರಚಿತ ರೂಪವನ್ನು ಬಹು ಜನರಿಗೆ ತಲುಪಿಸಲು ನೆರವಾಗುವ ಮುದ್ರಣ ಎಂಬ ಮಾತನ್ನೇ ಧ್ವನಿಮುದ್ರಣ ಎಂಬಲ್ಲಿ ಬಳಸಿಕೊಂಡಿರುವುದು ಅಚ್ಚರಿಯ ಸಂಗತಿಯಾಗಿದೆ.

ಈಗ ಆಡಿದ ಮಾತನ್ನು ಹೆಚ್ಚು ಕಾಲ ರಕ್ಷಿಸಿ ಇಡಲು ಸಾಧ್ಯ. ಈ ತಂತ್ರಜ್ಞಾನದಲ್ಲೂ ಕಳೆದ ಐವತ್ತು ವರ್ಷಗಳಲ್ಲಿ ಹೆಚ್ಚಿನ ಬದಲಾವಣೆಗಳು ನಡೆದಿವೆ. ಈಗ ಧ್ವನಿಸಂಗ್ರಹಕ್ಕಾಗಿ ಮೊದಲಿನ ಮಾರ್ಗವನ್ನು ಬಿಟ್ಟು ಡಿಜಿಟಲ್ ವಿಧಾನದಲ್ಲಿ ಸಂಗ್ರಹಿಸುವ ಅವಕಾಶ ಸಿದ್ಧವಾಗಿದೆ. ಕನ್ನಡದ ಮಟ್ಟಿಗೆ ಈ ತಂತ್ರಜ್ಞಾನ ದೂರಗಾಮಿಯಾದ ಪರಿಣಾಮಗಳನ್ನು ಬೀರಿದೆ. ಧ್ವನಿಯನ್ನು ಮುದ್ರಿಸಿಕೊಂಡಿದ್ದರಿಂದ ಅದನ್ನು ಮುಂದೆಯೂ ಬಳಸಲು ಸಾಧ್ಯವಾಗುತ್ತದೆ. ಹೀಗೆ ಬಳಕೆಯಾಗುವಾಗ ಆ ವಾಕ್ಯಗಳನ್ನು ಉಚ್ಚರಿಸಿದ ವ್ಯಕ್ತಿ ಭೌತಿಕವಾಗಿ ಅಲ್ಲಿ ಇರಬೇಕಾಗಿಲ್ಲ. ಇದರಿಂದ ನಾವು ಮೇಲೆ ಹೇಳಿದ ಎರಡನೇ ಮಿತಿ ಕೂಡ ಸಾಕಷ್ಟು ಪರಿಹಾರವಾಗಿದೆ. ಈಗ ಮುದ್ರಿತ ಮಾತನ್ನು ವ್ಯಕ್ತಿಯ ಗೈರುಹಾಜರಿನಲ್ಲೂ ಬಳಸಬಹುದು. ಅಂದರೆ ಕೇಳುಗರು ಹೇಳುವವರ ಸಮೀಪದಲ್ಲೇ ಇರಬೇಕೆಂಬ ಮೇಲೆ ಹೇಳಿದ ಶರತ್ತು ಈಗ ಇಲ್ಲವಾಗಿದೆ. ಯಾರು ಎಲ್ಲಿ ಬೇಕಾದರೂ ಆಡಿದ ಮಾತುಗಳನ್ನು ಯಾರು ಎಲ್ಲಿ ಬೇಕಾದರೂ ಕೇಳಿಸಿಕೊಳ್ಳಲು ಸಾಧ್ಯ. ಈ ಬಗೆಯ ತಂತ್ರಜ್ಞಾನ ಭಾಷೆಯ ಬಳಕೆಯ ಮೇಲೆ ಮತ್ತು ಸ್ವಲ್ಪ ಮಟ್ಟಿಗೆ ರಚನೆಯ ಮೇಲೆ ಕೂಡ ಪರಿಣಾಮವನ್ನು ಬೀರಿದೆ.

ಆಡುಮಾತಿನ ಬಳಕೆಯಲ್ಲಿ ನಾವು ಎರಡು ನೆಲೆಗಳನ್ನು ಗುರುತಿಸಬಹುದು. ಒಂದು : ಕೇಳುಗರು ಮಾತಾಡುವವರ ಮಾತನ್ನು ಮಾತಾಡಿದ ಕೂಡಲೇ ಕೇಳಿಸಿಕೊಳ್ಳುವ ನೆಲೆ. ಎರಡು: ಕೇಳುಗರು ಮತ್ತು ಮಾತಾಡುವವರು ಬೇರೆ ಬೇರೆ ಕಾಲದೇಶಗಳಲ್ಲಿ

ಇರುವ ನೆಲೆ. ತಂತ್ರಜ್ಞಾನವು ಎರಡನೆಯ ನೆಲೆಯ ಬಳಕೆಗೆ ಪೂರ್ಣ ಅವಕಾಶವನ್ನು ಕಲ್ಪಿಸಿಕೊಟ್ಟಿದೆ. ಮೊದಲ ನೆಲೆಯಲ್ಲೂ ಕೂಡಾ ಕೇಳುಗರು ಮಾತನಾಡುವವರು ಇರುವ ಜಾಗದಿಂದ ಬಹುದೂರ ಇರಬಹುದಾದ ಸಂದರ್ಭದಲ್ಲೂ ಆಡುಮಾತು ಬಳಕೆಯಾಗಲು ನೆರವಾಗಿದೆ. ಉದಾ.ಗೆ ದೂರವಾಣಿ. ಒಟ್ಟಾರೆ ಆಡುಮಾತಿನ ಬಳಕೆಯ ವಲಯವನ್ನು ತಾಂತ್ರಿಕತೆ ಆಗಾಧ ಪ್ರಮಾಣದಲ್ಲಿ ಹೆಚ್ಚಿಸಿದೆ ಎನ್ನಲಡ್ಡಿಯಿಲ್ಲ. ಮೊದಲ ನೆಲೆಯ ಭಾಷೆಯ ಬಳಕೆಯಲ್ಲಿ ಮಾತಾಡುವವರು ತಮ್ಮ ವಾಕ್ಯಗಳನ್ನು ರೂಪಿಸುವಾಗ ಹೆಚ್ಚು ಕಾಲಾವಕಾಶ ಇರುವುದಿಲ್ಲ. ಆದರೆ ಎರಡನೆಯ ನೆಲೆಯ ಭಾಷಾಬಳಕೆಯಲ್ಲಿ ಅದು ಆಡುಮಾತಿನ ಲಕ್ಷಣಗಳನ್ನು ಪಡೆದಿದ್ದರೂ ಬರೆಹದ ಭಾಷೆಯಂತೆ ಹೆಚ್ಚು ಎಚ್ಚರದ ನೆಲೆಯಲ್ಲಿ ರೂಪಗೊಳ್ಳಬಹುದು. ಅಂದರೆ ಮಾತಾಡುವವರು ತಮ್ಮ ಭಾಷಿಕ ರಚನೆಯನ್ನು ಅವಕಾಶವಿರುವ ಎಲ್ಲಾ ತಿದ್ದುಪಡಿಗಳೊಡನೆ ನಿಧಾನವಾಗಿ ರೂಪಿಸಬಹುದು. ಏಕೆಂದರೆ ಅವರ ಮಾತು ರೂಪುಗೊಳ್ಳುವಾಗಲೇ ಕೇಳುಗರಿಗೆ ತಲುಪಬೇಕೆಂಬ ಸಂದರ್ಭ ಇರುವುದಿಲ್ಲ. ಅಂತಹ ಒತ್ತಡಗಳಿಗೆ ಸಿಲುಕಿ ಅವರು ತಮ್ಮ ಮಾತನ್ನು ರೂಪಿಸಬೇಕಾಗಿಲ್ಲ. ಕನ್ನಡದ ಮಟ್ಟಿಗೆ ಈ ಬಗೆಯ ಆಡುಮಾತಿನ ಬಳಕೆಯ ಸಾಧ್ಯತೆ ರೂಪಗೊಂಡದ್ದು ಕಳೆದ ಐದು ದಶಕದಲ್ಲೇ ಎಂಬುದನ್ನು ಗಮನಿಸಬೇಕು. ಸಮೂಹಮಾಧ್ಯಮಗಳಲ್ಲಿ ಹೀಗೆ ಆಡುಮಾತನ್ನು ಬಳಸುವ ಅಗತ್ಯ ಮತ್ತು ಅವಕಾಶಗಳು ಹೆಚ್ಚಾಗಿವೆ. ತಂತ್ರಜ್ಞಾನವು ಆಡುಮಾತಿನ ಈ ಎರಡು ಸಾಧ್ಯತೆಗಳನ್ನೂ ರೂಪಿಸಿಕೊಟ್ಟರೂ ಬಳಸುವವರು ಅದೆಲ್ಲವನ್ನೂ ಉಪಯೋಗಿಸಿಕೊಳ್ಳಲು ಸಿದ್ಧರಿದ್ದಾರೆ ಎಂದು ತಿಳಿಯುವಂತಿಲ್ಲ. ಅದಕ್ಕೆ ತಕ್ಕ ತರಬೇತಿಗಳು ಕನ್ನಡದ ಸಂದರ್ಭದಲ್ಲಿ ರೂಪುಗೊಂಡಿಲ್ಲ.

ತಂತ್ರಜ್ಞಾನವು ಆಡುಮಾತಿಗೆ ಸಂಬಂಧಿಸಿದಂತೆ ತಂದುಕೊಟ್ಟ ಇನ್ನೊಂದು ಹೊಸ ಆಯಾಮವೆಂದರೆ ಆಡುವ ವ್ಯಕ್ತಿ ಮತ್ತು ಆಡಿದ ಮಾತು ಈ ಎರಡನ್ನೂ ಬೇರ್ಪಡಿಸಲು ಸಾಧ್ಯವಾದುದು. ತಾಂತ್ರಿಕ ಪರಿಭಾಷೆಯಲ್ಲಿ ಇದನ್ನು ಡಬ್ಬಿಂಗ್ ಎನ್ನುತ್ತಾರೆ. ಚಲನಚಿತ್ರಗಳ ಅಗತ್ಯಕ್ಕಾಗಿ ಈ ತಾಂತ್ರಿಕತೆ ರೂಪುಗೊಂಡಿತ್ತು. ಆದರೆ ಅದರ ಸಾಧ್ಯತೆಗಳು ಅಗಾಧ ಪ್ರಮಾಣದಲ್ಲಿ ಈಗ ಕಾಣತೊಡಗಿವೆ. ದೃಕ್, ಶ್ರವಣ ಮಾಧ್ಯಮಗಳಲ್ಲಿ ಇದು ಹಿಂದೆಂದಿಗಿಂತಲೂ ಹೆಚ್ಚಿನ ಸಾಧ್ಯತೆಗಳನ್ನು ತೆರೆದುಕೊಟ್ಟಿದೆ. ಚಲನಚಿತ್ರಗಳಲ್ಲಿ ಮೊದಲು ಗಾಯನ ಸೌಲಭ್ಯಕ್ಕಾಗಿ ಈ ತಾಂತ್ರಿಕತೆ ಉಪಯೋಗವಾಗುತ್ತಿದ್ದರೂ ಈಗ ಆಡುಮಾತಿಗೂ ಅದರ ವ್ಯಾಪ್ತಿ ಹೆಚ್ಚಾಗಿದೆ. ನಟನಟಿಯರು ಅವರ ಮಾತನ್ನು ಅವರೇ ಆಡಿದಂತೆ ನಮಗೆ ಭಾಸವಾದರೂ ನಾವು ಕೇಳಿಸಿಕೊಳ್ಳುವ ಧ್ವನಿ ಅವರದಾಗಿರುವುದಿಲ್ಲ. ನಟನೆಯ ಸಂದರ್ಭದಲ್ಲಿ ಪಡೆದುಕೊಂಡ ಚಿತ್ರಪಟ್ಟಿಕೆಗಳ ಮೇಲೆ ಬೇರೊಂದು ಸಂದರ್ಭದಲ್ಲಿ ಬೇರೆ ಯಾರೋ ಆಡಿದ ಮಾತುಗಳನ್ನು ಲೇಪಿಸಿ ಹೊಸ ಭ್ರಮೆಯೊಂದನ್ನು ಈಗ ಸೃಷ್ಟಿಸಬಹುದಾಗಿದೆ. ಕನ್ನಡ ಚಲನಚಿತ್ರಗಳಲ್ಲಿ ಮತ್ತು ದೂರದರ್ಶನದ ಕಾರ್ಯಕ್ರಮಗಳಲ್ಲಿ ಈ ಬಗೆಯ ಸಾಧ್ಯತೆಗಳು ಕಾಣಬರುತ್ತಿವೆ.

ತಂತ್ರಜ್ಞಾನದ ಈ ಸಾಧ್ಯತೆ ಆಡುಮಾತನ್ನು ಯಾರೋ ಮಾತಾಡುವಾಗಲೇ ರೂಪಿಸಬೇಕೆಂಬ ಶರತ್ತನ್ನು ಕಿತ್ತು ಹಾಕಿದೆ. ಅಂದರೆ ನಮಗೆ ಆಡುಮಾತಿನಂತೆ ಅಥವಾ ಆಡಿದ ಮಾತಿನಂತೆ ತೋರುವ ಭಾಷೆಯೂ ವಾಸ್ತವವಾಗಿ ಯಾರೋ ಬರೆದದ್ದು ಆಗಿರುತ್ತದೆ. ಹಾಗೆ ಬರೆದದ್ದನ್ನು ನಾವು ಓದುವುದಿಲ್ಲ. ಓದಲು ಅದು ನಮಗೆ ಲಭಿಸುವುದೂ ಇಲ್ಲ. ಅದರ ಆಡಿದ ರೂಪವನ್ನು ಮಾತ್ರ ನಾವು ಕೇಳಿಸಿಕೊಳ್ಳುತ್ತೇವೆ. ಚಲನಚಿತ್ರವೊಂದನ್ನು ಗಮನಿಸಿದರೆ ಈ ಅಂಶ ಗೊತ್ತಾಗುತ್ತದೆ. ಒಂದು ದೃಶ್ಯದಲ್ಲಿ ಪಾತ್ರಗಳು ಮಾತಾಡುವುದನ್ನು ನಾವು ನೋಡುತ್ತೇವೆ ಮತ್ತು ಕೇಳುತ್ತೇವೆ. ಹೀಗೆ ನಾವು ಕೇಳಿದ ಮಾತನ್ನು ಆ ಪಾತ್ರಗಳು ಆಡಿರಲೇಬೇಕೆಂಬ ಶರತ್ತಿಲ್ಲ. ಅಲ್ಲದೆ, ಅವರಿಗಾಗಿ ಮಾತಾಡಿದ ಬೇರೆಯವರು ಕೂಡಾ ತಾವೇ ರೂಪಿಸಿಕೊಂಡ ಮಾತನ್ನು ಆಡುತ್ತಿರುವುದಿಲ್ಲ. ಅವರು ಉಚ್ಚರಿಸಲು ನೆರವಾಗುವ ಮಾತುಗಳನ್ನು ಮತ್ತೊಬ್ಬರು ಬರೆದು ಕೊಡಬೇಕಾಗುತ್ತದೆ. ಈ ವಿವರಣೆ ತುಂಬಾ ಸರಳವಾಗಿ ಕಂಡರೂ ಅತ್ಯಂತ ಸಂಕೀರ್ಣವಾದ ಸಂಬಂಧವೊಂದು ಇಲ್ಲಿ ಮೈದೋರಿದೆ.

ಆಡುಮಾತಿನಂತೆ ತೋರುವ ಭಾಷೆಯನ್ನು ಬರೆಯುವುದು ವಿಶೇಷ ತರಬೇತನ್ನು ಮತ್ತು ಸಿದ್ಧತೆಯನ್ನು ಬಯಸುತ್ತದೆ. ಹಾಗೆ ಬರೆಯುವವರು ಕೇವಲ ವಿಷಯ ತಜ್ಞತೆಯನ್ನು ಹೊಂದಿದ್ದರೆ ಸಾಲದು. ಅದರೊಡನೆ ಭಾಷೆಯ ಹಲವಾರು ಸೂಕ್ಷ್ಮಗಳನ್ನು ಚೆನ್ನಾಗಿ ಅರಿತವರಾಗಿರಬೇಕಾಗುತ್ತದೆ. ಹಾಗೆ ಗ್ರಹಿಸಿದ ಸೂಕ್ಷ್ಮಗಳನ್ನು ತಮ್ಮ ಬರವಣಿಗೆಯಲ್ಲಿ ಅಳವಡಿಸಬೇಕಾಗುತ್ತದೆ. ಹೀಗೆ ಸಿದ್ಧಗೊಂಡ ಭಾಷೆಯು ಬರಹ ರೂಪದಲ್ಲಿದ್ದರೂ ಅದನ್ನು ಕೇಳಿಸಿಕೊಂಡವರಿಗೆ ಅದು ಮಾತಿನಂತೆ ತೋರಬೇಕು. ಬರೆದುದನ್ನು ಓದಿದಂತೆ ಅನ್ನಿಸಬಾರದು. ಇದು ಕನ್ನಡ ಭಾಷಾಬಳಕೆಯ ಅತ್ಯಂತ ಈಚಿನ ಹೊಸ ಸವಾಲು.

ನಮ್ಮ ಭಾಷಾರಚನಕಾರರು ಈ ಹೊಸ ಸಾಧ್ಯತೆಯ ಭಾಷಾರೂಪವನ್ನು ಸೃಷ್ಟಿಸಲು ಪೂರ್ಣಪ್ರಮಾಣದಲ್ಲಿ ಸಿದ್ಧರಾಗಿದ್ದಾರೆ ಎನ್ನುವಂತಿಲ್ಲ. ಅಲ್ಲಲ್ಲಿ ಸ್ವಂತ ಪ್ರತಿಭೆಯಿಂದ ಇದನ್ನು ಸಾಧಿಸಿಕೊಂಡವರು ಕಂಡರೂ ಅದನ್ನು ಸಿದ್ಧತೆಯನ್ನಾಗಿ ಪಡೆದುಕೊಳ್ಳಲು ಹೆಚ್ಚಿನ ಜನರಿಗೆ ಅವಕಾಶಗಳೇ ಇಲ್ಲವಾಗಿವೆ. ಆಡುಮಾತಿನ ಲಯಕ್ಕೂ ಬರೆಹದ ವಾಕ್ಯಗಳ ಲಯಕ್ಕೂ ಅಗಾಧವಾದ ವ್ಯತ್ಯಾಸಗಳಿವೆ. ಈ ವ್ಯತ್ಯಾಸ ರಾಚನಿಕವಾಗಿಯೂ ಗೋಚರಿಸುವಂತಹುದು. ಲಯ ವಿನ್ಯಾಸಗಳ ವ್ಯತ್ಯಾಸದ ಗ್ರಹಿಕೆ ಸರಿಯಾಗಿಲ್ಲದಿದ್ದರೆ ಬರೆದ ಮಾತು ಆಡಿದಾಗ ಕಿವಿಗೆ ವಿಚಿತ್ರವಾಗಿ ಕೇಳತೊಡಗುತ್ತದೆ. ತುಂಬ ಸಂದರ್ಭಗಳಲ್ಲಿ ಇಂತಹದೊಂದು ಸಮಸ್ಯೆ ಇದೆ ಎನ್ನುವ ಅರಿವು ಕೂಡ ಈ ಬರಹಗಾರರಿಗೆ ಇರುವಂತೆ ತೋರುವುದಿಲ್ಲ. ಕನ್ನಡದ ಮಟ್ಟಿಗೆ ತಂತ್ರಜ್ಞಾನ ತಂದಿಟ್ಟ ಈ ಹೊಸ ಭಾಷಾಬಳಕೆಯ ಸಾಧ್ಯತೆಗಳು ಬಲವಾಗಿ ಬೇರೂರಿವೆ ಎಂದು ಹೇಳುವುದು ಕಷ್ಟ.

ಈ ಮೇಲೆ ಹೇಳಿದ ಸಾಧ್ಯತೆಯು ಇನ್ನೊಂದು ನೆಲೆಯತ್ತ ನಮ್ಮನ್ನು ಒಯ್ಯಲು ಶಕ್ತವಾಗಿದೆ. ಅದೆಂದರೆ. ಆಡುಮಾತಿನ ಭಾಷಾಂತರದ ನೆಲೆ. ಈಗಾಗಲೇ ನಾವು ಗಮನಿಸಿದಂತೆ ವ್ಯಕ್ತಿಯು ಆಡುತ್ತಿರುವುದಕ್ಕೂ ನಾವು ಕೇಳಿಸಿಕೊಳ್ಳುತ್ತಿರುವುದಕ್ಕೂ ಸಮಾನ

ನೆಲೆ ಇರಬೇಕೆಂದಿಲ್ಲ. ಈ ವಿಘಟನೆ ತಂತ್ರಜ್ಞಾನದ ಕೊಡುಗೆ. ಈ ಸಾಧ್ಯತೆಯನ್ನು ಬಳಸಿಕೊಂಡು ದೃಕ್, ಶ್ರವಣ ಮಾಧ್ಯಮದಲ್ಲಿ ಭಾಷಾಂತರದ ಅವಕಾಶಗಳನ್ನು ಕಲ್ಪಿಸಿಕೊಳ್ಳಲಾಗಿದೆ. ಚಿತ್ರಪಟ್ಟಿಕೆಯನ್ನು ಒಂದು ಮೂಲವಸ್ತುವನ್ನಾಗಿ ಇರಿಸಿಕೊಂಡು ಅದಕ್ಕೆ ಔಚಿತ್ಯ ಮೀರದಂತೆ ನಮಗೆ ಬೇಕೆಂದ ಭಾಷೆಯ ಧ್ವನಿ ಲೇಪನವನ್ನು ಮಾಡಬಹುದಾಗಿದೆ. ಇದರಿಂದ ಏಕಕಾಲಕ್ಕೆ ಹಲವು ಭಾಷೆಗಳ ಚಿತ್ರ ಅವತರಣಿಕೆಗಳು ಸಿದ್ಧವಾಗುತ್ತವೆ. ಭಾರತದಂತಹ ಬಹುಭಾಷಿಕ ದೇಶದಲ್ಲಿ ಇದು ಸಂವಹನದ ಹೊಸ ಮಾರ್ಗಗಳನ್ನು ತೆರೆದು ಕೊಟ್ಟಿದೆ. ಈ ತಾಂತ್ರಿಕ ಸಾಧ್ಯತೆಯನ್ನು ಎರಡು ಮುಖ್ಯ ರೀತಿಗಳಲ್ಲಿ ಬಳಸಬಹುದು. ಒಂದು: ತತ್‌ಕ್ಷಣದ ಭಾಷಾಂತರ. ಎರಡು: ತಡೆದು ನೀಡುವ ಅನುಕ್ರಮದ ಭಾಷಾಂತರ. ಮೊದಲ ಬಗೆಯು ಈಗ ಹಲವು ಕಡೆಗಳಲ್ಲಿ ಬಳಕೆಯಾಗುತ್ತಿದೆ. ಕನ್ನಡದಲ್ಲಿ ಇದು ಇನ್ನೂ ಶೋಧಿತವಾಗಬೇಕಾದ ಸಾಧ್ಯತೆಯಾಗಿದೆ. ಆದರೆ ಪ್ರಾಯೋಗಿಕವಾಗಿ ಕೆಲವೆಡೆ ಅದನ್ನು ಬಳಸಿ ನೋಡಲಾಗಿದೆ. ಉದಾ.ಗೆ ಲೋಕಸಭೆಯಲ್ಲಿ ಸದಸ್ಯರೊಬ್ಬರು ಹಿಂದಿಯಲ್ಲಿ ಮಾತನಾಡುತ್ತಿದ್ದರೆ ಅದೇ ಸದನದಲ್ಲಿರುವ ಬೇರೊಬ್ಬ ಸದಸ್ಯರು ಆ ಭಾಷಣವನ್ನು ಕನ್ನಡದಲ್ಲಿ ಕೇಳಿಸಿಕೊಳ್ಳಬಹುದು. ಅಂದರೆ ಹಿಂದಿಯಲ್ಲಿ ನಿರೂಪಣೆ ಆಗುತ್ತಿರುವಂತೆಯೇ ಅದರ ಕನ್ನಡ ಆಡುರೂಪ ಸಿದ್ಧವಾಗಿ ಕೇಳುಗರಿಗೆ ದೊರಕುತ್ತದೆ. ಅತಿವೇಗವಾಗಿ ನಡೆಯಬೇಕಾದ ಈ ಕ್ರಿಯಾವರ್ತದಲ್ಲಿ ಹಲವಾರು ತೊಂದರೆಗಳಿವೆ. ಮುಖ್ಯವಾಗಿ ವೇಗವಾಗಿ ಅನುವಾದಿಸಿ ಅದನ್ನು ಧ್ವನಿರೂಪದಲ್ಲಿ ಒದಗಿಸುವ ಸಾಮರ್ಥ್ಯವುಳ್ಳ ಮಾನವ ಸಂಪನ್ಮೂಲ ಅಗತ್ಯ ಅಲ್ಲದೆ ಅವರು ಭಾಷಾಸೂಕ್ಷ್ಮಗಳನ್ನು ಪದಕೋಶದ ಸೂಕ್ಷ್ಮಬಳಕೆಯನ್ನು ಮಾಡಲು ತರಬೇತು ಪಡೆದವರಾಗಿರಬೇಕು. ಇಲ್ಲಿಯೂ ಕೂಡ ಕನ್ನಡದ ಸಾಧನೆ ವ್ಯಕ್ತಿಗಳ ಹಂತದ ಸಾಧನೆಯನ್ನು ಮೀರಿ ನಿಲ್ಲುತ್ತಿಲ್ಲ.

ಅನುಕ್ರಮ ಭಾಷಾಂತರದ ಸಾಧ್ಯತೆಗಳನ್ನು ಹೇಳಲಾಯಿತು. ಇಂತಹ ಕಡೆ ಒಂದು ಭಾಷೆಯಲ್ಲಿ ಸಿದ್ಧಗೊಂಡ ಅವತರಣಿಕೆಯ ಧ್ವನಿವಾಹಿನಿಯನ್ನು ಅಳಿಸಿ ಅದೇ ಜಾಗದಲ್ಲಿ ಮತ್ತೊಂದು ಭಾಷೆಯ ಧ್ವನಿಸರಣಿಯನ್ನು ಲೇಪಿಸುವ ಕೆಲಸವಿದೆ. ಕನ್ನಡದ ಮಟ್ಟಿಗೆ ಇದು ಸಾಧ್ಯವಾಗುವ ಅವಕಾಶವಿರುವುದು ದೃಕ್‌ಶ್ರವಣ ಮಾಧ್ಯಮಗಳಲ್ಲಿ ಮಾತ್ರ. ಅದರಲ್ಲೂ ಚಲನಚಿತ್ರ ಮತ್ತು ಟೆಲಿಕಾರ್ಯಕ್ರಮಗಳಲ್ಲಿ. ಕನ್ನಡವು ಈ ಅವಕಾಶವನ್ನು ವಿಚಿತ್ರ ರೀತಿಯಲ್ಲಿ ನಿರ್ವಹಿಸುತ್ತಿದೆ. ಏಕೀಕರಣದ ಮೊದಲ ದಿನಗಳಿಂದಲೂ ಚಲನಚಿತ್ರಗಳಲ್ಲಿ ಹೀಗೆ ಅನ್ಯಭಾಷಾ ಧ್ವನಿಯ ಬದಲು ಕನ್ನಡ ಧ್ವನಿಲೇಪನವನ್ನು ಮಾಡುವ ಕ್ರಮಕ್ಕೆ ವಿರೋಧವನ್ನು ವ್ಯಕ್ತಪಡಿಸಲಾಗುತ್ತಿದೆ. ಈ ಬಗೆಗೆ ಕನ್ನಡ ಚಳುವಳಿಗಳನ್ನು ಕುರಿತ ಅಧ್ಯಾಯದಲ್ಲಿ ಚರ್ಚೆಯನ್ನು ಮಾಡಲಾಗುತ್ತದೆ. ನಮಗಿಲ್ಲಿ ಅದರ ತಾಂತ್ರಿಕ ಸಾಧ್ಯತೆಯಷ್ಟೇ ಮುಖ್ಯ. ಹಾಗೆಂದು ಅನ್ಯಭಾಷಾ ಧ್ವನಿಲೇಪನವನ್ನು ಪೂರ್ಣವಾಗಿ ಕನ್ನಡದ ಸಂದರ್ಭ ನಿರಾಕರಿಸಿದೆ ಎಂದು ಹೇಳುವಂತೆಯೂ ಇಲ್ಲ. ಏಕೆಂದರೆ ನಾವು ಈ ದೃಕ್‌ಶ್ರವಣ ಮಾಧ್ಯಮಗಳಲ್ಲಿ ನೋಡುವ ನೂರಕ್ಕೆ ನೂರು ಜಾಹೀರಾತುಗಳು ಇದೇ ತಂತ್ರವನ್ನು ಅನುಸರಿಸಿವೆ. ದೂರದರ್ಶನದಲ್ಲಿ

ಸರಕಾರದ ಇಲಾಖೆಗಳ ಎಷ್ಟೋ ಕಾರ್ಯಕ್ರಮಗಳು ಹೀಗೆ ಕನ್ನಡ ಧ್ವನಿಲೇಪನದೊಂದಿಗೆ ಪ್ರಸಾರವಾಗುತ್ತಿವೆ. ಒಟ್ಟಾರೆ ಕನ್ನಡ ಸಂದರ್ಭ ಭಾಷಾಂತರ ನೆಲೆಯ ಧ್ವನಿಲೇಪನ ಕೆಲಸಕ್ಕೆ ಒಂದೆಡೆ ವಿರೋಧವನ್ನೂ, ಮತ್ತೊಂದೆಡೆ ಸದ್ದಿಲ್ಲದ ಸಮ್ಮತಿಯನ್ನೂ ನೀಡಿದೆ ಎನ್ನುವುದು ಗಮನಿಸಬೇಕಾದ ವಿಷಯ.

ತಂತ್ರಜ್ಞಾನದ ಈ ಹೊಸ ಅವಕಾಶ ಭಾಷಾಬಳಕೆಗೆ ಎಂದೂ ಇಲ್ಲದ ಹೊಸ ಸವಾಲನ್ನು ಇರಿಸಿದೆ. ಇಲ್ಲಿ ಹಲವು ಬಗೆಯ ಎಚ್ಚರಗಳನ್ನು ಭಾಷಾಬಳಕೆದಾರರು ಇರಿಸಿಕೊಳ್ಳಬೇಕಾಗುತ್ತದೆ. ಈಗಾಗಲೇ ಸಿದ್ಧಗೊಂಡ ಧ್ವನಿವಾಹಿನಿಯ ಭಾಷೆಯನ್ನು ಇನ್ನೊಂದು ಭಾಷೆಗೆ ರವಾನಿಸುವ ಕೆಲಸವಿದೆ. ಇಲ್ಲಿ ಎರಡು ನಿಯಂತ್ರಕ ಅಂಶಗಳಿವೆ. ಒಂದು: ಕಾಲಮಿತಿ; ಎರಡು: ಮೂಲ ಧ್ವನಿವಾಹಿನಿಯು ಯಾವುದೋ ಒಂದು ನಿರ್ದಿಷ್ಟ ವಸ್ತುವನ್ನು ಹೊಂದಿರುವುದರಿಂದ ಅದನ್ನು ಒಪ್ಪಿಯೇ ನಮ್ಮ ಭಾಷೆಯ ಧ್ವನಿವಾಹಿನಿಯನ್ನು ಸಿದ್ಧಪಡಿಸಬೇಕಾಗುತ್ತದೆ. ಕಾಲಮಿತಿ ಎಂದರೆ ಮೂಲರೂಪವನ್ನು ಉಚ್ಚರಿಸಲು ಎಷ್ಟು ಅವಧಿಯನ್ನು ತೆಗೆದುಕೊಳ್ಳಲಾಗಿತ್ತೋ ಅಷ್ಟೇ ಅವಧಿಯಲ್ಲಿ ಮಾತಾಡಿ ಮುಗಿಸಬಲ್ಲ ಪದಕೋಶದ ಸಂಖ್ಯೆಯನ್ನು ಕಾಯ್ದುಕೊಳ್ಳುವ, (ಉದಾ.ಗೆ ಮೂಲ ವಾಕ್ಯದಲ್ಲಿ ಹತ್ತು ಪದಗಳಿದ್ದರೆ ಭಾಷಾಂತರದ ರೂಪದಲ್ಲೂ ಅಷ್ಟೇ ಪದಗಳಿರಬೇಕಾಗುತ್ತದೆ.) ಲಯವನ್ನು ಮತ್ತು ಭಾವವನ್ನು ಕಾಯ್ದುಕೊಳ್ಳುವ ಹೊಣೆ ಇರುತ್ತದೆ.

ತಾಂತ್ರಿಕವಾಗಿ ಬಲು ಕ್ಲಿಷ್ಟವಾದ ಕೆಲಸವಿದು. ಮೊದಲೇ ಹೇಳಿದಂತೆ ಈ ಬಗೆಯ ಭಾಷಾಬಳಕೆಗೆ ಕೇವಲ ಎರಡು ಭಾಷೆಗಳ ಸಾಮಾನ್ಯ ಕೌಶಲ್ಯಗಳು ಇದ್ದರೆ ಸಾಲದು. ಭಾಷೆಗಳ ಸೂಕ್ಷ್ಮಗಳನ್ನು ಅರಿಯಬಲ್ಲ ಮತ್ತು ತಾಂತ್ರಿಕ ಅಗತ್ಯಗಳಿಗೆ ತಕ್ಕಂತೆ ಮಾತನ್ನು ಬರೆಯಬಲ್ಲ ತರಬೇತು ಅಗತ್ಯ. ಇಲ್ಲಿಯೂ ಕೂಡ ಕನ್ನಡದ ಸಾಧನೆ ಹೇಳಿಕೊಳ್ಳುವಂತಿಲ್ಲ. ಎಲ್ಲೆಲ್ಲಿ ನಾವು ಈ ಬಗೆಯ ಮರುಧ್ವನಿ ಲೇಪನ ಪ್ರಕ್ರಿಯೆಯನ್ನು ಒಪ್ಪಿಕೊಂಡಿದ್ದೇವೆಯೋ ಅಲ್ಲೆಲ್ಲ ಬಹುಮಟ್ಟಿಗೆ ಕನ್ನಡ ಭಾಷೆಯ ಅಪ್ರಬುದ್ಧ ಬಳಕೆಯನ್ನು ಗುರುತಿಸುವುದು ಸುಲಭ. ಕಿವಿ ತೆರೆದು ಕೇಳಿದ ಕೂಡಲೇ ಅಲ್ಲಿರುವ ಅಸಹಜತೆ ರಾಚುವಂತಿರುತ್ತದೆ.

ದೃಕ್‌ಶ್ರವಣ ಮಾಧ್ಯಮಗಳಲ್ಲಿ ತಂತ್ರಜ್ಞಾನವು ತಂದಿತ್ತಿರುವ ಭಾಷಾಸಂಬಂಧಿಯಾದ ಇನ್ನೊಂದು ಅವಿಷ್ಕಾರವನ್ನು ನಾವು ಗಮನಿಸಬೇಕು. ಅದೆಂದರೆ ಒಂದು ಸಂದರ್ಭದಲ್ಲಿ ನಾವು ಕೇಳಿಸಿಕೊಳ್ಳುತ್ತಿರುವ ಭಾಷೆಯು ಒಂದಾಗಿದ್ದರೆ ಅದರ ಲಿಖಿತ ದೃಶ್ಯರೂಪವನ್ನು ಇನ್ನೊಂದು ಭಾಷೆಯಲ್ಲಿ ಓದಿಕೊಳ್ಳಲು ಸಾಧ್ಯವಾಗುತ್ತಿದೆ. ಈ ಸಾಧ್ಯತೆಗಳು ಕೂಡ ಒಂದು ದಶಕದ ಈಚೆನಿಂದ ವ್ಯಾಪಕ ಬಳಕೆಗೆ ಬಂದಿವೆ. ಒಂದು ದೃಶ್ಯಪಟ್ಟಿಕೆಯಲ್ಲಿ ನಾವು ಕಿವಿಯಿಂದ ಒಂದು ಭಾಷೆಯನ್ನು ಕೇಳುತ್ತಿದ್ದರೆ. ಆ ಪಟ್ಟಿಕೆಗಳ ಕೆಳ ತುದಿಗಳಲ್ಲಿ ಇನ್ನೊಂದು ಭಾಷೆಯ ಭಾಷಾಂತರಿತ ರೂಪವನ್ನೇ ಮುದ್ರಿತ ರೂಪದಲ್ಲಿ ಓದಿಕೊಳ್ಳಲು ಈಗ ಅವಕಾಶವಿದೆ. ಸಾಮಾನ್ಯವಾಗಿ ಈ ತಂತ್ರಜ್ಞಾನವನ್ನು ಸಬ್ ಟೈಟಲಿಂಗ್ ಎಂದು ಕರೆಯುವುದುಂಟು. ಈ ತಾಂತ್ರಿಕತೆಯು, ಸಿದ್ಧಪಡಿಸುವವರು ಮತ್ತು ನೋಡುಗರ ಸಾಮರ್ಥ್ಯಗಳನ್ನು ನಿಕಷಕ್ಕೆ ಒಡ್ಡುತ್ತದೆ. ಸಿದ್ಧಪಡಿಸುವವರು ಆಡಿದ ಮಾತುಗಳ

ಯಥಾವತ್ತಾದ ಅನುವಾದ ಅಲ್ಲದಿದ್ದರೂ ಅದರ ಸಾರಸಂಗ್ರಹವನ್ನು ತುಂಬಾ ಕಡಿಮೆ ಪದಗಳಲ್ಲಿ ಒದಗಿಸಬೇಕಾಗುತ್ತದೆ. ಕೇಳುಗ–ನೋಡುಗರು, ಈ ತಂತ್ರಜ್ಞಾನದ ಪರಿಣಾಮದಿಂದ ಸಾಕಷ್ಟು ಹೆಚ್ಚಿನ ಜವಾಬ್ದಾರಿಯನ್ನು ತೋರಬೇಕಾಗುತ್ತದೆ. ಏಕೆಂದರೆ ಅವರು ಕಿವಿಗಳಿಂದ ಕೇಳುವ ಭಾಷೆ ಅರ್ಥವಾಗದೆ ಇರಬಹುದು. ಕಣ್ಣಿನಿಂದ ದೃಶ್ಯವನ್ನು ನೋಡುತ್ತಲೇ ಪಟ್ಟಿಕೆಗಳ ಕೆಳಭಾಗದಲ್ಲಿ ಒಂದೇ ಸಮನೇ ಪಕ್ಕಕ್ಕೆ ಸರಿಯುತ್ತಿರುವ ವಾಕ್ಯಗಳನ್ನು ಓದಬೇಕಾಗುತ್ತದೆ. ಕೆಲವು ಕಡೆ ಈ ವಾಕ್ಯಗಳು ಗೊತ್ತಾದಷ್ಟು ಅವಧಿ ತೆರೆಯ ಮೇಲಿದ್ದು ಅನಂತರ ಮಾಯವಾಗುತ್ತವೆ. ನೋಡುಗರು ಒಂದೇ ಸಮನೆ ನೋಡುತ್ತಾ ಓದುತ್ತಾ ಇರಬೇಕು. ಇದು ಅತ್ಯಂತ ಶ್ರಮದಾಯಕವಾದ ಕೆಲಸ. ಆದರೆ ಬಹುಭಾಷಾ ಸಂವಹನದ ಸಂದರ್ಭ ತಾಂತ್ರಿಕತೆಯ ನೆರವಿನಿಂದ ರೂಪಿಸಿಕೊಂಡಿರುವ ಸದ್ಯದ ಅವಕಾಶವೆಂದರೆ ಇದೇ ಆಗಿದೆ. ಕನ್ನಡದ ದೂರದರ್ಶನದ ವಾರ್ತೆಗಳ ಪ್ರಸಾರದಲ್ಲಿ ಈ ಬಗೆಯ ಭಾಷಾಬಳಕೆ ಆಗುವುದನ್ನು ನೋಡಬಹುದು. ಚಲನಚಿತ್ರಗಳಲ್ಲೂ ಇದು ಸ್ವಲ್ಪ ಪ್ರಮಾಣದಲ್ಲಿ ಬಳಕೆಯಾಗುತ್ತದೆ.

ತಂತ್ರಜ್ಞಾನವು ಆಡುಮಾತಿನ ಬಳಕೆಯ ವಲಯಗಳನ್ನು, ಬಳಕೆಯ ಸ್ವರೂಪಗಳನ್ನು, ಮತ್ತು ರಾಚನಿಕ ನೆಲೆಗಳನ್ನು ಹಿಂದೆಂದಿಗಿಂತಲೂ ಅಗಾಧ ಪ್ರಮಾಣದಲ್ಲಿ ಬದಲಾಯಿಸಿದೆ. ಕನ್ನಡ ಭಾಷೆಯ ಯೋಜಕರು ಮತ್ತು ಪ್ರವರ್ತಕರು ಈ ಸಾಧ್ಯತೆಗಳನ್ನು ಮನಗಂಡು ಅದಕ್ಕೆ ತಕ್ಕ ರೀತಿಯ ತರಬೇತಿನ ಅವಕಾಶಗಳನ್ನು ಕಲ್ಪಿಸಿಲ್ಲ. ಆಯಾ ಕ್ಷೇತ್ರದಲ್ಲಿ ಕೆಲಸ ಮಾಡುವವರು ಹೇಗೋ ತಮಗೆ ತೋಚಿದಂತೆ ತಮ್ಮ ಮಿತಿಯಲ್ಲಿ ನಿಭಾಯಿಸಿಕೊಂಡು ಹೋಗುತ್ತಿದ್ದಾರೆ. ನಮ್ಮ ಶೈಕ್ಷಣಿಕ ವಲಯವೂ ಕೂಡ ಈ ನಿಟ್ಟಿನಲ್ಲಿ ಕಾರ್ಯಪ್ರವೃತ್ತವಾಗಿಲ್ಲ. ಮಾಧ್ಯಮಗಳ ಬಳಕೆಗಾಗಿ ಉದ್ದೇಶಿತವಾದ ಶಿಕ್ಷಣ ಕೂಡ ಭಾಷೆಯ ಇಂತಹ ಇಕ್ಕಟ್ಟುಗಳನ್ನು ಉದ್ದೇಶಿಸಿದ ಪಠ್ಯಕ್ರಮವನ್ನು ರೂಪಿಸಿಲ್ಲ.

ಆಡುಮಾತಿನ ವಿಷಯ ಹೀಗಾದರೆ ಇನ್ನು ಬರೆಹದ ಭಾಷೆಯ ಮೇಲೆ ತಂತ್ರಜ್ಞಾನ ಬೀರಿದ ಪರಿಣಾಮ ಏನೆಂಬುದನ್ನು ಪರಿಶೀಲಿಸಬಹುದು. ಜೊತೆಗೆ ಕನ್ನಡವು ಈ ಸಂದರ್ಭವನ್ನು ಹೇಗೆ ನಿರ್ವಹಿಸಿದೆ ಎಂಬುದರ ಪರಿಚಯವನ್ನೂ ಇಲ್ಲಿ ಮಾಡಿಕೊಳ್ಳಲು ಯತ್ನಿಸಲಾಗುತ್ತದೆ. ಮೊದಲಲ್ಲಿ ಹೇಳಿದಂತೆ ತಂತ್ರಜ್ಞಾನ ಬರೆಹದ ಭಿತ್ತಿ, ಸಾಮಗ್ರಿ ಮತ್ತು ಸಂರಕ್ಷಣೆಗಳ ಬಗೆಗೆ ತನ್ನ ಕೊಡುಗೆಯನ್ನು ಕಾಲದಿಂದ ಕಾಲಕ್ಕೆ ನೀಡುತ್ತಾ ಬಂದಿದೆ. ಕಳೆದ ಐವತ್ತು ವರ್ಷಗಳಲ್ಲಿ ಈ ವಲಯದಲ್ಲಿ ನಡೆದ ಮೂರು ಮುಖ್ಯ ಬದಲಾವಣೆಗಳನ್ನು ಇಲ್ಲಿ ಪರಿಶೀಲಿಸಲಾಗುತ್ತದೆ. ಒಂದು: ಬೆರಳಚ್ಚು ಯಂತ್ರದ ಬಳಕೆ. ಎರಡು: ವಿದ್ಯುನ್ಮಾನ ಬೆರಳಚ್ಚು ಯಂತ್ರದ ಬಳಕೆ. ಮೂರು: ಕಂಪ್ಯೂಟರ್‌ಗಳ ಬಳಕೆ.

ಬರವಣಿಗೆ ಎಂಬುದು ಕೈಬೆರಳುಗಳ ನೆರವಿನಿಂದ ನಡೆಯುವ ಕೆಲಸ. ಮನಸ್ಸು ಮತ್ತು ದೇಹಗಳು ಪರಸ್ಪರ ಸಂಯೋಜನೆಯಿಂದ, ಸಹಕಾರದಿಂದ ಇಲ್ಲಿ ಕೆಲಸ ಮಾಡುತ್ತವೆ. ತಂತ್ರಜ್ಞಾನವು ಈ ಸಂಬಂಧವನ್ನು ಕೂಡ ಪಲ್ಲಟ ಮಾಡಲು ಮುನ್ನುಗ್ಗಿದೆ. ಉದಾ.ಗೆ ಬೆರಳಚ್ಚನ್ನೇ ಗಮನಿಸೋಣ. ಇಲ್ಲಿಯೂ ಕೈಬೆರಳುಗಳಿಗೆ ಕೆಲಸ ಇದೆ. ಆದರೆ ಕೈಬರವಣಿಗೆಯ ರೀತಿಯಲ್ಲಿ ಅಕ್ಷರಗಳು ಇಲ್ಲಿ ಮೂಡುವುದಿಲ್ಲ. ಕೀಲಿಮಣೆಯನ್ನು

ಒತ್ತುವ ಮೂಲಕ ಅಕ್ಷರದ ಆಕಾರಗಳು ಹಾಳೆಯ ಮೇಲೆ ಮೂಡುವ ಹೊಸ ತಾಂತ್ರಿಕತೆ ಇಲ್ಲಿದೆ. ಇಂಗ್ಲಿಶ್ ಮುಂತಾದ ಜಾಗತಿಕ ಭಾಷೆಗಳಿಗೆ ಈ ಉಪಕರಣ ಬಹು ಹಿಂದೆಯೇ ದೊರಕಿತ್ತು. ಎರಡನೇ ಮಹಾಯುದ್ಧದ ಸಂದರ್ಭದಲ್ಲಿ ಈ ಯಂತ್ರದ ಬಳಕೆ ಯಾವ ಪ್ರಮಾಣದಲ್ಲಿ ಆಗಿದೆ ಎಂಬ ಬಗೆಗೆ ಅಧ್ಯಯನಗಳು ನಡೆದಿವೆ. ಕನ್ನಡಕ್ಕೆ ಒಂದು ಬೆರಳಚ್ಚು ಕೀಲಿಮಣೆಯನ್ನು ಮತ್ತು ಅಚ್ಚುಮೊಳೆಗಳನ್ನು ರೂಪಿಸುವ ಪ್ರಯತ್ನ 1947ಕ್ಕಿಂತ ಹಿಂದಿನಿಂದಲೂ ಇದ್ದಿತಾದರೂ ಒಂದು ಪೂರ್ಣಪ್ರಮಾಣದ ಬೆರಳಚ್ಚು ಯಂತ್ರವೊಂದು ಸಿದ್ಧಗೊಂಡು ಪರಿಶೀಲನೆಯಾಗಿ ಸರಕಾರದ ಅಧಿಕೃತ ಮನ್ನಣೆಯನ್ನು ಪಡೆದದ್ದು ಮಾತ್ರ ಏಕೀಕರಣದ ಅನಂತರದ ದಶಕದಲ್ಲಿ. ಇದನ್ನು ರೂಪಿಸಿಕೊಟ್ಟ ಕೀರ್ತಿ ಶ್ರೀ ಅನಂತ ಸುಬ್ಬರಾವ್ ಅವರದು. ಅವರ ನೆನಪಿನಲ್ಲಿ ಆ ಕೀಲಿಮಣೆಯನ್ನು ಅವರ ಹೆಸರಿನಲ್ಲೇ ಅನಂತ ಎಂದು ಕರೆಯಲಾಗಿದೆ. ಈ ವಿವರಗಳೇನೇ ಇರಲಿ. ಈ ಬೆರಳಚ್ಚು ಯಂತ್ರಗಳು ಬಂದ ಮೇಲೆ ಕನ್ನಡ ಭಾಷಾಬಳಕೆಗೆ ದೊರೆತ ಹೊಸ ಆಯಾಮಗಳೇನು ಎಂಬುದನ್ನು ನಾವಿಲ್ಲಿ ಗಮನಿಸಬೇಕು. ಒಂದು: ಬರೆಹದ ಪ್ರತಿಯೊಂದನ್ನು ವೇಗವಾಗಿ ಹೆಚ್ಚು ಸಂಖ್ಯೆಯಲ್ಲಿ ಆದರೆ ಕಡಿಮೆ ಕಾಲದಲ್ಲಿ ಮತ್ತು ಕಡಿಮೆ ವೆಚ್ಚದಲ್ಲಿ ಸಿದ್ಧಪಡಿಸುವುದು ಸಾಧ್ಯವಾಯಿತು. ಮುದ್ರಣದಲ್ಲೂ ಈ ಸೌಲಭ್ಯವಿದ್ದರೂ ಮುದ್ರಣಕ್ಕೆ ಅಗತ್ಯವಾದ ಹಣದ ಬಂಡವಾಳ ಮತ್ತು ಕಾಲ ವಿನಿಯೋಗ ಹಾಗೂ ಮಾನವ ಸಂಪನ್ಮೂಲ ಇಲ್ಲಿ ಕಡಿಮೆ. ಎರಡು: ಬರೆಹದ ಲಿಪಿಗಳು ವ್ಯಕ್ತಿಯಿಂದ ವ್ಯಕ್ತಿಗೆ ಬದಲಾಗುತ್ತವೆ. ಅದರಿಂದ ಓದುವವರಿಗೆ ಕೆಲವೊಮ್ಮೆ ಅನಾನುಕೂಲಗಳು ಆಗುವುದುಂಟು. ಸರ್ಕಾರದ ವ್ಯವಹಾರಗಳಲ್ಲಿ ಹೀಗೆ ಓದಲು ಅನಾನುಕೂಲವಾಗುವ ಸಂದರ್ಭಗಳು ಅಷ್ಟೇನೂ ಅಪೇಕ್ಷಣೀಯವಲ್ಲ. ಬೆರಳಚ್ಚು ಯಂತ್ರದಿಂದ ಮೂಡುವ ಬರವಣಿಗೆ ಪ್ರಮಾಣಬದ್ಧವಾಗಿದ್ದು ಅದನ್ನು ಓದುವುದು ಎಲ್ಲರಿಗೂ ಸಾಧ್ಯ. ಆಗ ಬರೆದದ್ದನ್ನು ಅರ್ಥ ಮಾಡಿಕೊಳ್ಳುವಾಗಲೂ ಗೊಂದಲಗಳು ಇಲ್ಲವಾಗುತ್ತವೆ. ಈ ಅಂಶಗಳು ಬೆರಳಚ್ಚು ಯಂತ್ರದ ಪ್ರಯೋಜನದ ನೆಲೆಯನ್ನು ಸೂಚಿಸುತ್ತವೆ. ಇದಲ್ಲದೆ ಇನ್ನೊಂದು ಮುಖ್ಯವಾದ ಪರಿಣಾಮ ಬರವಣಿಗೆಯ ಕ್ರಮದಲ್ಲೇ ಉಂಟಾಯಿತು. ಅದನ್ನು ನಾವೀಗ ಗಮನಿಸಬಹುದು. ಕೈಯಿಂದ ಬರೆಯುವಾಗ ಅಕ್ಷರದ ಗೆರೆಗಳನ್ನು ಎಳೆದು ಮೂಡಿಸುವ ನಿರಂತರ ಪ್ರಕ್ರಿಯೆಯೊಂದು ಒಂದೇ ಸಮನೆ ನಡೆಯುತ್ತದೆ. ಆದರೆ ಬೆರಳಚ್ಚಿನಲ್ಲಿ ಎರಡು ಬಗೆಯ ವ್ಯತ್ಯಾಸಗಳಿವೆ. ಒಂದು: ಅಕ್ಷರ ಇಡಿಯಾಗಿ ಒಮ್ಮೆಗೆ ಮೂಡುತ್ತದೆ. ಎರಡು: ಕೈ ಬರಹದಲ್ಲಿ ಗುಣಿತಾಕ್ಷರ ಹಾಗೂ ಒತ್ತಕ್ಷರಗಳನ್ನು ಮೂಡಿಸುವ ಕ್ರಮಕ್ಕೂ ಬೆರಳಚ್ಚು ಯಂತ್ರದಲ್ಲಿ ಅವನ್ನು ಮೂಡಿಸುವ ಕ್ರಮಕ್ಕೂ ವ್ಯತ್ಯಾಸಗಳಿವೆ. ಎಂದರೆ ಅಕ್ಷರಸರಣಿಯನ್ನು ಬರೆಯುವವರು ಕಲ್ಪಿಸಿಕೊಳ್ಳುವ ರೀತಿಗೂ ಬೆರಳಚ್ಚು ಮಾಡುವವರು ರೂಪಿಸುವ ರೀತಿಗೂ ವ್ಯತ್ಯಾಸವಿದೆ. ಎಂದರೆ ಬರೆಯಲು ಕಲಿತರು ಹೊಸ ರೀತಿಯಲ್ಲೇ ಆಲೋಚಿಸುವ ಅಗತ್ಯ ಕಂಡುಬರುತ್ತದೆ. ಬೆರಳಚ್ಚು ಮಾಡುವುದು ಹೀಗೆ ನಮ್ಮ ಬರೆಹದ ಕಲ್ಪನೆಯಲ್ಲೇ ಕೆಲವು ಪಲ್ಲಟಗಳನ್ನು ಉಂಟುಮಾಡಿತು.

ಇದು ತಾತ್ವಿಕ ನೆಲೆಯ ಮಾತು. ಆದರೆ ಪ್ರಾಯೋಗಿಕವಾಗಿ ಕನ್ನಡಕ್ಕೆ ಬೆರಳಚ್ಚಿನ ಸೌಲಭ್ಯ ಪಡೆದುಕೊಳ್ಳಲು ಬೇರೆ ರೀತಿಯ ಸಿದ್ಧತೆಗಳು ಅಗತ್ಯವಾದವು. ಸರ್ಕಾರವು

ತನ್ನ ಕಛೇರಿಗಳಲ್ಲಿ ಹೆಚ್ಚಿನ ಪ್ರಮಾಣಗಳಲ್ಲಿ ಬೆರಳಚ್ಚು ಯಂತ್ರಗಳನ್ನು ಬಳಸಲು ಅವಕಾಶಗಳನ್ನು ಕಲ್ಪಿಸಬೇಕಾಗಿ ಬಂತು. ಇದರಲ್ಲಿ ಎರಡು ನೆಲೆಗಳ ಯೋಜನೆ ಇದೆ. ಒಂದು: ಯಂತ್ರಗಳನ್ನು ಒದಗಿಸುವುದು. ಎರಡು: ಈಗಾಗಲೇ ಇಂಗ್ಲಿಶ್ ಬೆರಳಚ್ಚು ಯಂತ್ರದಲ್ಲಿ ಕೆಲಸ ಮಾಡಲು ಕಲಿತಿದ್ದ ಕೆಲಸಗಾರರನ್ನು ಕನ್ನಡ ಬೆರಳಚ್ಚು ಯಂತ್ರಗಳನ್ನು ಬಳಸಲು ಸಿದ್ಧರನ್ನಾಗಿ ಮಾಡುವುದು. ಸುಮಾರು 10 ರಿಂದ 15 ವರ್ಷಗಳ ಕಾಲ ಸರ್ಕಾರದ ವಿವಿಧ ಇಲಾಖೆಗಳಲ್ಲಿ ಹೀಗೆ ಕನ್ನಡ ಬೆರಳಚ್ಚು ಯಂತ್ರಗಳನ್ನು ಕ್ರಮಾನುಗತವಾಗಿ ಬಳಸಲು ಕ್ರಮ ವಹಿಸಲಾಗಿದೆ. ಇಂಗ್ಲಿಶ್ ಬೆರಳಚ್ಚು ಯಂತ್ರಗಳನ್ನು ಬಳಸದಂತೆ ತಡೆಹಿಡಿಯುವುದು ಇನ್ನೊಂದು ಕೆಲಸ. ಆಡಳಿತ ಭಾಷೆಯಾಗಿ ಕನ್ನಡ ಅನುಷ್ಠಾನಗೊಳ್ಳುವಾಗ ಹೊಸ ತಂತ್ರಜ್ಞಾನ ಮತ್ತು ನೌಕರಶಾಹಿಯ ಪೂರ್ವನಿಶ್ಚಿತ ಮನೋಭಾವ ಹೇಗೆ ಸಂಘರ್ಷಕ್ಕೆ ಒಳಗಾಗುತ್ತದೆ ಎಂಬುದು ಇಲ್ಲಿ ಸಾಬೀತಾಗುತ್ತದೆ. ಕಳೆದ ಶತಮಾನದ ಕೊನೆಯ ದಶಕದಲ್ಲೂ ಕಛೇರಿಗಳಿಂದ ಒತ್ತಾಯ ಪೂರ್ವಕವಾಗಿ ಇಂಗ್ಲಿಶ್ ಬೆರಳಚ್ಚು ಯಂತ್ರಗಳನ್ನು ಮರಳಿ ಪಡೆಯಲಾಯಿತು ಎಂಬುದು ಸರ್ಕಾರದ ದಾಖಲೆಗಳಿಂದ ತಿಳಿದು ಬರುತ್ತದೆ. ನಮಗಿಲ್ಲಿ ತಂತ್ರಜ್ಞಾನದ ಅವಕಾಶಗಳು ಸೃಷ್ಟಿಯಾದರೂ ಅವು ನೆಲೆಗೊಳ್ಳಲು ಕನ್ನಡ ಸಂದರ್ಭ ಎಷ್ಟು ಸಿದ್ಧವಾಗಿತ್ತು ಎಂಬುದು ಮಾತ್ರ ಮುಖ್ಯ ಸಂಗತಿ.

ಬೆರಳಚ್ಚು ಯಂತ್ರಗಳನ್ನು ಸರ್ಕಾರಿ ಕಛೇರಿಗಳಲ್ಲಿ ಮಾತ್ರವಲ್ಲದೆ ಖಾಸಗಿ ವಲಯದಲ್ಲೂ ಅಧಿಕವಾಗಿ ಬಳಸುವ ಅವಕಾಶಗಳಾದವು. ದಾಖಲೆಗಳನ್ನು ಸಿದ್ಧಪಡಿಸುವ ಹೊಸ ಉದ್ಯೋಗಾವಕಾಶ ರೂಪುಗೊಂಡಿತು. ಇದರಿಂದ ಬೆರಳಚ್ಚಿನ ತರಬೇತಿ ಪಡೆಯುವ ಮತ್ತು ನೀಡುವ ವ್ಯವಸ್ಥೆಯೊಂದು ಸಾಮಾನ್ಯಶಿಕ್ಷಣದ ವಿಸ್ತರಣೆಯಾಗಿ ರಾಜ್ಯಾದ್ಯಂತ ರೂಪಗೊಂಡದ್ದನ್ನು ನಾವು ಕಾಣುತ್ತೇವೆ. ಸಾಮಾನ್ಯ ಶಿಕ್ಷಣದ ವಿಸ್ತರಣೆಯಾಗಿ ಈ ತರಬೇತನ್ನು ಪರಿಗಣಿಸಲಾಯಿತು. ಇದೇನೇ ಇರಲಿ. ಈ ಹೊಸ ತಂತ್ರಜ್ಞಾನವು ಸಾಮಾಜಿಕವಾಗಿ ತೆರೆದ ಅವಕಾಶಗಳಿಗಿಂತ ಭಾಷೆಯ ಮಟ್ಟಿಗೆ ಬೀರಿದ ಪರಿಣಾಮ ನಮಗೆ ಮುಖ್ಯವಾಗುತ್ತದೆ.

ಬರೆಹದ ದಾಖಲೆಗಳನ್ನು ರೂಪಿಸುವಲ್ಲಿ ತಂತ್ರಜ್ಞಾನವು ನೆರವಿಗೆ ಬಂದ ಮುಂದಿನ ಹಂತವೆಂದರೆ ವಿದ್ಯುನ್ಮಾನ ಬೆರಳಚ್ಚು ಯಂತ್ರಗಳ ಅವಿಷ್ಕಾರ. ಇದು ತಾಂತ್ರಿಕವಾಗಿ ಬೆರಳಚ್ಚು ಯಂತ್ರಗಳ ಮೂಲ ಮಾದರಿಯ ಅನುಕರಣೆ ಆಗಿದೆ. ಆದರೆ ಈ ಯಂತ್ರದಿಂದ ಬೆರಳಚ್ಚು ಮಾಡುವವರ ಶ್ರಮ ಕಡಿಮೆಯಾಗುವ ಸಾಧ್ಯತೆ ಉಂಟಾಯಿತು. ಅಕ್ಷರಗಳನ್ನು ಮೂಡಿಸಲು ಕೀಲಿಮಣೆಯ ಮೇಲೆ ಬೆರಳುಗಳನ್ನು ಒತ್ತುವಾಗ ಉಂಟಾಗುತ್ತಿದ್ದ ಶ್ರಮ ಈಗ ಕಡಿಮೆಯಾಗಿತ್ತು. ಹಾಗಾಗಿ ಶ್ರಮ ಉಳಿತಾಯವು ವೇಗವಾಗಿ ಬೆರಳಚ್ಚು ಮಾಡಲು ಅವಕಾಶ ಕಲ್ಪಿಸಿತ್ತು. ಕಡಿಮೆ ಕಾಲದಲ್ಲಿ ಹೆಚ್ಚಿನ ದಾಖಲೆಗಳನ್ನು ರೂಪಿಸಲು ಸಾಧ್ಯವಾಯಿತು. ಇನ್ನೊಂದು ನೆಲೆಯ ಪ್ರಯೋಜನವಿದೆ. ಮೊದಲಿನ ಬೆರಳಚ್ಚು ಯಂತ್ರದಲ್ಲಿ ಅಚ್ಚು ಮಾಡುವಾಗ ತಪ್ಪುಗಳಾದರೆ ಒಂದೋ ಅಲ್ಲಿಯವರೆಗೆ ಮಾಡಿದ ದಾಖಲಾತಿ ವ್ಯರ್ಥವಾಗುತ್ತಿತ್ತು. ಇಲ್ಲವೇ ಚಿಕ್ಕಪುಟ್ಟ ತಿದ್ದುಪಡಿಗಳನ್ನು ಮಾಡಲು

ಕಾಲ ವ್ಯಯಿಸಬೇಕಿತ್ತು. ಈ ತೊಂದರೆ ಹೊಸ ತಾಂತ್ರಿಕತೆಯಲ್ಲಿ ಇರಲಿಲ್ಲ. ಅಕ್ಷರಗಳು ಕಾಗದದ ಮೇಲೆ ಮೂಡುವ ಮೊದಲೇ ತಿದ್ದುಪಡಿಗಳನ್ನು ಮಾಡಿಕೊಳ್ಳುವ ವ್ಯವಸ್ಥೆ ಈ ಯಂತ್ರದಲ್ಲಿ ಸಾಧ್ಯವಿತ್ತು. ಇದು ಆ ಯಂತ್ರದ ನೆನಪಿನ ಸಾಮರ್ಥ್ಯಕ್ಕನುಗುಣವಾಗಿ ನಿರ್ಧಾರ ಆಗುತ್ತಿತ್ತು. ಇದರಿಂದ ಕೂಡ ದಾಖಲಾತಿಯ ವೇಗದಲ್ಲಿ ಹೆಚ್ಚಳ ಸಾಧ್ಯವಾಯಿತು.

ಕನ್ನಡದ ಮಟ್ಟಿಗೆ ಈ ಸೌಲಭ್ಯವಿದ್ದ ಯಂತ್ರವೊಂದು ಸಿದ್ಧಗೊಂಡು ಜನ ಬಳಕೆಗೆ ಲಭಿಸಿದ್ದು 1985ರ ನಂತರವೇ. ಈ ಯಂತ್ರದ ಬಳಕೆಯನ್ನು ಅಧಿಕೃತ ಗೊಳಿಸಲು ಸರ್ಕಾರ ಸಮಯಾವಕಾಶವನ್ನು ತೆಗೆದುಕೊಂಡಿದೆ. ತನ್ನ ಕಛೇರಿಗಳಲ್ಲಿ ಈ ಯಂತ್ರವನ್ನು ಬಳಸಲು ಅವಕಾಶ ಕಲ್ಪಿಸಿತು. ಇದರ ವೆಚ್ಚ ಹೆಚ್ಚಾಗಿದ್ದುದರಿಂದ ಈ ಯಂತ್ರ ಖಾಸಗಿ ಬಳಕೆಯಲ್ಲಿ ಪ್ರವೇಶ ಪಡೆಯಲಿಲ್ಲ. ಅದಕ್ಕಿಂತ ಮುಖ್ಯವಾಗಿ ಆ ಹೊತ್ತಿಗೆ ಗಣಕಗಳು ಅವಿಷ್ಕಾರಗೊಂಡು ಬಳಕೆಗೆ ಲಭಿಸುತ್ತಿದ್ದುದರಿಂದ ಈ ತಂತ್ರಜ್ಞಾನ ಅತೀ ಕಡಿಮೆ ಕಾಲದಲ್ಲೇ ನಿರುಪಯುಕ್ತವೆನಿಸಿತ್ತು. ಕನ್ನಡ ಬರವಣಿಗೆಯ ಚರಿತ್ರೆಯಲ್ಲಿ ಇದು ಅತ್ಯಂತ ಕಡಿಮೆ ಅವಧಿಯ ತಾಂತ್ರಿಕ ಅವಿಷ್ಕಾರ ಎನ್ನಿಸಿದೆ.

ಗಣಕಯಂತ್ರಗಳು ಅವಿಷ್ಕಾರಗೊಂಡು ಬರವಣಿಗೆಗೆ ನೆರವಾಗಲು ದೊರಕತೊಡಗಿದ್ದು ಕನ್ನಡ ಭಾಷೆಯಲ್ಲಿ ಅಕ್ಷರದ ನೆಲೆಯಲ್ಲಿ ಅಗಾಧ ಪ್ರಮಾಣದ ಬದಲಾವಣೆಗೆ ಕಾರಣವಾಗಿದೆ. ಈ ಬದಲಾವಣೆಗಳಿಗೆ ಹಲವು ನೆಲೆಗಳಿವೆ. ಒಂದು: ಬರವಣಿಗೆಯು ರೂಪಗೊಳ್ಳುವ ನೆಲೆ. ಎರಡು: ಬರವಣಿಗೆಯು ಸಂಗ್ರಹಗೊಳ್ಳುವ ನೆಲೆ. ಮೂರು: ಬರವಣಿಗೆಯು ಪ್ರಸಾರಗೊಳ್ಳುವ ನೆಲೆ. ಬರವಣಿಗೆಯು ರೂಪುಗೊಳ್ಳುವ ನೆಲೆಯಲ್ಲಿ ಗಣಕವು ಬಹುಮಟ್ಟಿಗೆ ಬೆರಳಚ್ಚು ಯಂತ್ರದ ಮುಂದುವರಿಕೆಯಾಗಿದೆ. ಆದರೆ ಇಲ್ಲಿ ಒದಗಿ ಬಂದ ಹೊಸ ಸೌಲಭ್ಯಗಳು ಕೆಲವಿವೆ. ಈ ತಾಂತ್ರಿಕತೆಯಲ್ಲಿ ಶ್ರಮದ ತೊಡಗುವಿಕೆ ಕನಿಷ್ಠ ಪ್ರಮಾಣಕ್ಕೆ ಬಂದಿವೆ. ಇದರಿಂದಾಗಿ ವೇಗದ ಹೆಚ್ಚಳ ಸಾಧ್ಯ. ತಿದ್ದುಪಡಿಗಳನ್ನು ಯಾವುದೇ ಸಮಯದ ಅಪವ್ಯಯವಿಲ್ಲದೆ ಮಾಡಬಹುದು. ಇಡೀ ದಾಖಲಾತಿಯನ್ನು ಬೇಕೆಂದ ಹಾಗೆ ಮರುರೂಪಿಸಿ ಅನಂತರ ಅದರ ಮುದ್ರಿತಪ್ರತಿಯನ್ನು ಪಡೆಯಬಹುದು. ಸಂಗ್ರಹಣೆಯ ನೆಲೆಯಲ್ಲಿ ಗಣಕ ತಂದುಕೊಟ್ಟ ಅವಕಾಶ ಊಹಾತೀತ. ನಾವು ಬರೆಹ ರೂಪದಲ್ಲಿ ದಾಖಲಿಸಿದ್ದು ಅಂಕೀಕರಣಗೊಂಡು ಗಣಕದ ನೆನಪಿನ ಕೋಶದಲ್ಲಿ ನಮಗೆ ಕಾಣದಂತೆ ಅಡಕಗೊಳ್ಳುತ್ತದೆ. ಇದರ ಕಣ್ಣಿನ ರೂಪವನ್ನು ನಾವು ಬೇಕೆಂದಾಗ, ಬೇಕಾದಲ್ಲಿ, ಬೇಕಾದಷ್ಟು ಪ್ರಮಾಣದಲ್ಲಿ ಪಡೆದುಕೊಳ್ಳಲು ಸಾಧ್ಯ. ಹೀಗೆ ಸಂಗ್ರಹಿಸಿಡುವ ಸಾಮರ್ಥ್ಯ ಕೂಡ ದಿನೇ ದಿನೇ ನಾವು ಕಲ್ಪಿಸಿಕೊಳ್ಳಲಾಗದಷ್ಟು ವೇಗದಲ್ಲಿ ಬದಲಾಗುತ್ತಿದೆ. ಹೀಗೆಯೇ ಪ್ರಸಾರದ ನೆಲೆಯಲ್ಲಿ ಗಣಕಗಳು ಇನ್ನೊಂದು ತಾಂತ್ರಿಕತೆಯ ನೆಲೆಯಾದ ಮುದ್ರಣ ವಲಯವನ್ನು ಪ್ರಭಾವಿಸಿದೆ. ಮುದ್ರಣದಲ್ಲಿ ಅಕ್ಷರ ಜೋಡಣೆ ಎಂಬ ಕೈಕೆಲಸವೀಗ ಇಲ್ಲವಾಗಿದೆ. ಗಣಕಗಳ ನೆನಪಿನಿಂದ ನೇರವಾಗಿ ಮುದ್ರಣಯಂತ್ರಗಳು ಮೂಲ ಪಡಿಯಚ್ಚುಗಳನ್ನು ಪಡೆದುಕೊಳ್ಳಬಲ್ಲವು. ಇದರಿಂದ ಉಂಟಾಗಿರುವ ಶ್ರಮ ಮತ್ತು ಸಮಯದ ಉಳಿತಾಯ ಗಮನಾರ್ಹವಾಗಿದೆ. ಇದಲ್ಲದೆ

ಪ್ರಸಾರದ ಇನ್ನೊಂದು ನೆಲೆ ಮುಖ್ಯವಾಗಿದೆ. ಗಣಕಗಳಿಂದ ಗಣಕಗಳಿಗೆ ಹಲವು ಬಗೆಗಳಲ್ಲಿ ಮಾಹಿತಿಯನ್ನು ರವಾನಿಸಲು ಸಾಧ್ಯವಿರುವುದರಿಂದ ಬರವಣಿಗೆಯ ದಾಖಲೆಗಳು ಮುದ್ರಿತರೂಪದಲ್ಲಲ್ಲದೆ ಕೇವಲ ಭ್ರಮಾರೂಪದಲ್ಲಿ ರವಾನೆಯಾಗಬಲ್ಲವು. ಬರೆಯುತ್ತಿರುವಂತೆಯೇ ದೂರ ದೇಶದ ಇನ್ನೊಬ್ಬ ವ್ಯಕ್ತಿ ಅದನ್ನು ಓದುವ ಅವಕಾಶ ಈಗ ಉಂಟಾಗಿದೆ. ಈ ಎಲ್ಲ ತಾಂತ್ರಿಕತೆಗಳೂ ಇನ್ನೂ ಹಲವು ಸೂಕ್ಷ್ಮನೆಲೆಗಳನ್ನು ಹೊಂದಿದ್ದು ಅವೆಲ್ಲವನ್ನೂ ಇಲ್ಲಿ ವಿವರಿಸಬೇಕಾಗಿಲ್ಲ.

ಕನ್ನಡ ಭಾಷೆಗೆ ಈ ಗಣಕ ತಂತ್ರಜ್ಞಾನದ ನೆರವು ದೊರೆತದ್ದು 1990 ರಿಂದೀಚೆಗೆ. ಕೆಲವು ಉತ್ಸಾಹಿಗಳ ಆಸಕ್ತಿಯಿಂದ ಕನ್ನಡವನ್ನು ಗಣಕಕ್ಕೆ ಅಳಡಿಸಲು ಬೇಕಾದ ಕಾರ್ಯವಾಹಿಗಳು ರೂಪಗೊಂಡವು. ಇವುಗಳು ವ್ಯಕ್ತಿಗತ ನೆಲೆಯಲ್ಲಿ ರೂಪಗೊಂಡು ಬಳಕೆಗೆ ಬಂದುದರಿಂದ ಸಮಾನಾಂಶಗಳ ಕೊರತೆ ದೊಡ್ಡ ಸಮಸ್ಯೆಯಾಯಿತು. ಒಂದು ಕಾರ್ಯವಾಹಿಯನ್ನು ಬಳಸುವ ವ್ಯಕ್ತಿ ಇನ್ನೊಂದು ಕಾರ್ಯವಾಹಿಯನ್ನು ಬಳಸುವುದು ಕಷ್ಟವಾಯಿತು. ಅಲ್ಲದೆ ಒಂದು ಕಾರ್ಯ ವಾಹಿಯ ಬಳಕೆಯಲ್ಲಿ ಸಂಗ್ರಹಗೊಂಡ ದಾಖಲೆಗಳನ್ನು ಮತ್ತೊಂದು ಕಾರ್ಯ ವಾಹಿಯ ನೆರವಿನಿಂದ ಓದುವುದು, ಬಳಸುವುದು ಅಸಾಧ್ಯವಾಗತೊಡಗಿತ್ತು. ಪ್ರಮಾಣೀಕರಣದ ಕೊರತೆಯಿಂದಾಗಿ ಮೊದಲ ಕೆಲವು ವರ್ಷಗಳು ಈ ಹೊಸ  ತಂತ್ರಜ್ಞಾನದ ನೆರವು ಕನ್ನಡಕ್ಕೆ ಯಾವ ಪ್ರಮಾಣದಲ್ಲಿ ದೊರಕಬೇಕಿತ್ತೋ ಆ ಪ್ರಮಾಣದಲ್ಲಿ ದೊರಕಲಿಲ್ಲ ಎಂದೇ ಹೇಳಬೇಕು.

ಇದರ ನಡುವೆ ಕೆಲವು ಸಾಂಸ್ಥಿಕ ಪ್ರಯತ್ನಗಳು ಮೊದಲಾದವು. ಖಾಸಗೀ ವಲಯದ ಕೆಲವು ಪ್ರಯತ್ನಗಳು ವಾಣಿಜ್ಯ ಉದ್ದೇಶವನ್ನು ಹೊಂದಿದ್ದು ಸಹಜವಾಗಿತ್ತು. ಕೇಂದ್ರ ಸರಕಾರದ ವಿದ್ಯುನ್ಮಾನ ತಂತ್ರಜ್ಞಾನ ಇಲಾಖೆಯೂ ತನ್ನ ಅಂಗಸಂಸ್ಥೆಯಾದ ಪುಣೆಯ ಸಿ.ಡಾಟ್ ಮೂಲಕ ಭಾರತೀಯ ಭಾಷೆಗಳ ಗಣಕ ಬಳಕೆಗೆ ಅನುಕೂಲಕರವಾದ ಕಾರ್ಯವಾಹಿಗಳನ್ನು ರೂಪಿಸತೊಡಗಿದೆ. ಈ ಯತ್ನದ ದೊಡ್ಡ ಕೊರತೆಯೆಂದರೆ ಎಲ್ಲಾ ಭಾರತೀಯ ಭಾಷೆಗಳನ್ನೂ ಪರಿಗಣಿಸುವ ಭರದಲ್ಲಿ ಆಯಾ ಭಾಷೆಗಳ ಅಗತ್ಯಗಳನ್ನು ಗಮನಕ್ಕೆ ತಂದುಕೊಳ್ಳಲಿಲ್ಲ. ಆ ಸಂಸ್ಥೆ ರೂಪುಗೊಳಿಸಿದ ಜಿಸ್ಟ್ ತಂತ್ರಜ್ಞಾನ ಮತ್ತು ಲೀಪ್ ಕಾರ್ಯವಾಹಿ ತಾಂತ್ರಿಕವಾಗಿ ಉತ್ತಮವಾಗಿದ್ದರೂ ಕನ್ನಡದ ಬಳಕೆಗೆ ಹೆಚ್ಚು ಅನುಕೂಲಕರವಾಗಿರಲಿಲ್ಲ. ಅಲ್ಲಿ ಕೀಲಿಮಣೆ ವಿನ್ಯಾಸ ಮಾಡುವಾಗ ಕನ್ನಡ ಬರವಣಿಗೆಯಲ್ಲಿ ಯಾವ ವರ್ಣಗಳು ಯಾವ ಯಾವ ಪ್ರಮಾಣದಲ್ಲಿ ಬಳಕೆಯಾಗುತ್ತವೆ ಎಂಬ ಮಾಹಿತಿ ಇಲ್ಲದೆ ಸಿದ್ಧಗೊಂಡಿತ್ತು. ಇದರಿಂದ ಆ ಕಾರ್ಯವಾಹಿ ಬಳಸುವವರು ವೇಗವಾಗಿ ದಾಖಲಾತಿ ಮಾಡುವುದು ಕಷ್ಟವಾಗುತ್ತಿತ್ತು. ಅದೂ ಅಲ್ಲದೆ ಮೊದಲ ಹಂತದ ಗಣಕ ಮಾಹಿತಿ ದಾಖಲುದಾರರು ಕನ್ನಡದ ಬೆರಳಚ್ಚು ಯಂತ್ರದ ಕೀಲಿಮಣೆಯ ಬಳಕೆಗೆ ತಮ್ಮನ್ನು ತಾವು ಒಗ್ಗಿಸಿಕೊಂಡವರು. ಅವರಿಗೆ ಈ ಹೊಸ ಕಾರ್ಯ ವಾಹಿಯ ಕೀಲಿಮಣೆವಿನ್ಯಾಸ ಹಲವು ರೀತಿಯಲ್ಲಿ ಅಡೆತಡೆಗಳನ್ನು ಉಂಟು ಮಾಡುವಂತಿತ್ತು. ಲೀಪ್‌ನ ಕೀಲಿಮಣೆಯಲ್ಲಿ ವ್ಯಂಜನಗಳ ಕೀಲಿಗಳು ಒಂದು ಕೈನ ಬೆರಳುಗಳ ಕಡೆಗೂ ಸ್ವರಗಳ ಕೀಲಿಗಳು ಮತ್ತೊಂದು ಕೈನ ಬೆರಳುಗಳ ಕಡೆಗೂ ಇವೆ. ಇದು ಕನ್ನಡ

ಬರವಣಿಗೆಯ ಸಹಜ ಓಟಕ್ಕೆ ತಕ್ಕುದಲ್ಲದ ವಿನ್ಯಾಸವಾಗಿದೆ. ಇದರ ಜೊತೆಗೆ ಮೈಸೂರಿನ ಭಾರತೀಯ ಭಾಷಾ ಸಂಸ್ಥಾನ ಕೂಡ ತನ್ನದೇ ಆದ ಭಾಷಾ ಎಂಬ ಕಾರ್ಯವಾಹಿಯನ್ನು ರೂಪಿಸಿತ್ತು. ಇದು ಮೂಲಭೂತವಾಗಿ ಸಿ.ಡಾಟ್ ಸಂಸ್ಥೆಯ ವಿಧಾನವನ್ನೇ ಅನುಸರಿಸಿತ್ತು. ವ್ಯಾಪಕ ಪ್ರಚಾರದ ಕೊರತೆಯಿಂದ ಈ ಕಾರ್ಯವಾಹಿ ಸಂಸ್ಥೆಯ ಆಚೆಗೆ ಹೆಚ್ಚು ಪ್ರಸಾರವನ್ನು ಪಡೆಯಲಿಲ್ಲ.

ಮೊದಲಿನ ಕನ್ನಡ ಕಾರ್ಯವಾಹಿಗಳು 'ಡಾಸ್' ನಿರ್ವಹಣಾ ವ್ಯವಸ್ಥೆಯನ್ನು ಆಧರಿಸಿ ನಿರ್ಮಾಣಗೊಂಡಿದ್ದುವು. ಅತಿವೇಗದಲ್ಲಿ ಆದ ಬದಲಾವಣೆಗಳಿಂದಾಗಿ ಮೈಕ್ರೋಸಾಫ್ಟ್‌ನ ವಿಂಡೋಸ್ ನಿರ್ವಹಣಾ ವ್ಯವಸ್ಥೆ ಗಣಕಗಳಲ್ಲಿ ಅಳವಟ್ಟಿತು. ಈ ಸಂಸ್ಥೆಯೂ ಕೂಡ ತನ್ನ ನಿರ್ವಹಣಾ ವ್ಯವಸ್ಥೆಯನ್ನು ಅತಿ ವೇಗವಾಗಿ ಬದಲಿಸುತ್ತಾ ನಡೆದಿದೆ. 1995, 98, 2000 ಮತ್ತು ಅನಂತರದ ಅವಧಿಯಲ್ಲಿ ಒಮ್ಮೆ ಹೀಗೆ ಹಲವು ಹಂತಗಳಲ್ಲಿ ಹೊಸ ಮಾದರಿಗಳನ್ನು ಮಾರುಕಟ್ಟೆಗೆ ತಂದಿದೆ. ಈ ವಿವರಗಳು ನಮಗೇಕೆ ಅಗತ್ಯವೆಂದರೆ ಈ ಜಾಗತಿಕ ನೆಲೆಯ ಕಂಪನಿಗಳು ತಂತ್ರಜ್ಞಾನದಲ್ಲಿ ಅತೀವೇಗದ ಜಿಗಿತಗಳನ್ನು ಮಾಡುತ್ತಿರುವುದರಿಂದ ಕನ್ನಡದಂತಹ ಭಾಷೆಯು ಅದೇ ವೇಗದಲ್ಲಿ ತನ್ನ ಅಗತ್ಯಗಳನ್ನು ಹೊಂದಿಸಿಕೊಳ್ಳುವುದು ಕಷ್ಟವಾಗುತ್ತಿದೆ.

ಖಾಸಗೀ ವಲಯದಿಂದ ಸಾಂಸ್ಥಿಕ ವಲಯಗಳಿಗೆ ಕಾರ್ಯವಾಹಿ ಸಿದ್ಧತೆ ರವಾನೆಯಾದರೂ ಪ್ರಮಾಣೀಕರಣ ಮಾತ್ರ ಇನ್ನೂ ಸಾಧ್ಯವಾಗಿಲ್ಲ. ಕರ್ನಾಟಕ ಸರ್ಕಾರ ಕನ್ನಡ ಗಣಕ ಪರಿಷತ್ತು ಎಂಬ ಸಂಸ್ಥೆಯು ತಯಾರಿಸಿದ ನುಡಿ ಎಂಬ ಕನ್ನಡ ಕಾರ್ಯವಾಹಿಯನ್ನು ಅಧಿಕೃತಗೊಳಿಸಿದೆ. ತನ್ನ ಎಲ್ಲಾ ಕಛೇರಿಗಳಲ್ಲಿ ಅದನ್ನು ಬಳಸಬೇಕೆಂದು ಆದೇಶ ನೀಡಿದೆ. ಸರ್ಕಾರದ ಜಾಲತಾಣದಲ್ಲಿ ಈ ಕಾರ್ಯವಾಹಿಯು ಉಚಿತ ಬಳಕೆಗೆಂದು ಲಭ್ಯವಿದೆ. ಹೀಗಿದ್ದರೂ ಪ್ರಮಾಣೀಕರಣದ ಸಮಸ್ಯೆ ಪರಿಹಾರವಾಗಿಲ್ಲ. ವಿವಿಧ ವಲಯಗಳಲ್ಲಿ ಗಣಕಗಳಲ್ಲಿ ಕನ್ನಡವನ್ನು ಬಳಸುವವರು ಮತ್ತು ಹಾಗೆ ಬಳಸಲು ಬೇಕಾದ ಕಾರ್ಯವಾಹಿಯನ್ನು ಸಿದ್ಧ ಮಾಡುವವರು ನುಡಿಯನ್ನು ಒಪ್ಪಿಕೊಳ್ಳಲು ಸಿದ್ಧರಿಲ್ಲ. ಕೆಲವು ವರ್ಷಗಳ ಹಿಂದೆ ಈ ಬಗೆಗೆ ಒಂದು ಸಾರ್ವಜನಿಕ ವಾಗ್ವಾದವೇ ನಡೆದು ಹೋಯಿತು. ಆದರೆ ಖಚಿತ ಫಲಿತಾಂಶ ಮಾತ್ರ ದೊರಕಲಿಲ್ಲ. ಈಗಲೂ ನುಡಿಯ ಬಳಕೆಯ ಬಗೆಗೆ ಇರುವ ಅಸಮ್ಮತಿ ಮತ್ತು ಗೊಂದಲಗಳು ಹಾಗೆಯೇ ಮುಂದುವರೆದಿವೆ.

ಜಾಗತೀಕರಣದ ಪ್ರಭಾವದಿಂದ ಗಣಕವಲಯ ಇಂಗ್ಲಿಶ್‌ಮಯವಾಗುವುದೆಂದು ಮೊದಮೊದಲು ಆತಂಕ ಉಂಟಾದುದು ನಿಜ. ಆದರೆ ಮಾರುಕಟ್ಟೆಯ ವಿಸ್ತರಣೆಯ ಅಗತ್ಯ ಕಂಡ ಬಹುರಾಷ್ಟ್ರೀಯ ಕಂಪನಿಗಳು ದೇಶೀಯ ಭಾಷೆಗಳನ್ನು ಸಂಪೂರ್ಣವಾಗಿ ಅವಗಣಿಸುವುದು ಮಾರುಕಟ್ಟೆಯ ವಿಸ್ತರಣೆಗೆ ಮಾರಕವಾಗುವ ಅಂಶವೆಂದು ಬೇಗನೆ ತಿಳಿದುಕೊಂಡವು. ಮೈಕ್ರೋಸಾಫ್ಟ್ ತನ್ನ ವಿಂಡೋಸ್‌ನ ಎಕ್ಸ್‌ಪಿ ಆವೃತ್ತಿಯಲ್ಲಿ ಕನ್ನಡವನ್ನು ಬಳಸಲು ಅನುಕೂಲವಾಗುವಂತಹ ವ್ಯವಸ್ಥೆಯನ್ನು ರೂಪಿಸಿದೆ. ಇದರಿಂದ ಮೊದಲಿದ್ದ ಆತಂಕಗಳು ಇಲ್ಲವಾದವು. ಬೃಹತ್ ಜಾಲದ ಸಂಸ್ಥೆಯೊಂದು ರೂಪಿಸಿದ ಕನ್ನಡ

ಕಾರ್ಯವಾಹಿಯೊಂದಿಗೆ ಇನ್ನುಳಿದ ಕಾರ್ಯವಾಹಿಗಳು ಪೈಪೋಟಿಗೆ ನಿಲ್ಲಬೇಕಾಯಿತು. ಆದರೆ ವೈಯಕ್ತಿಕ ಪ್ರಯತ್ನಗಳ ನೆಲೆಯಲ್ಲಿ ಈಗ ಗೊಂದಲಗಳನ್ನು ಗೋಜಲುಗಳಾಗಲು ಬಿಡದೆ ನಿವಾರಿಸುವ ಪ್ರಯತ್ನಗಳು ನಡೆಯುತ್ತಲಿವೆ. ಇದರಿಂದ ಯಾವುದಾದರೂ ಸಮಸ್ಯೆಯನ್ನು ಪರಿಹರಿಸಲು ಸಿದ್ಧರಿರುವ ಸಂಸ್ಥೆಗಳು, ವ್ಯಕ್ತಿಗಳು ಮತ್ತು ಅವರ ಜಾಲಗಳು ಸಿದ್ಧವಿವೆ. ಬರಲಿರುವ ದಶಕಗಳಲ್ಲಿ ಈ ಪ್ರಮಾಣೀಕರಣದ ಪ್ರಯತ್ನಗಳು ನಿರ್ದಿಷ್ಟ ಮತ್ತು ಖಚಿತ ನೆಲೆಯಲ್ಲಿ ನಡೆಯಬೇಕು. ಇಲ್ಲದಿದ್ದರೆ ಅಲ್ಲಲ್ಲಿ ತೇಪೆ ಹಚ್ಚುವ ಕೆಲಸದಲ್ಲಿ ಮಾತ್ರ ತೃಪ್ತರಾಗಬೇಕಾಗುತ್ತದೆ.

ಕರ್ನಾಟಕ ಸರ್ಕಾರ ತನ್ನ ಅಂಗಸಂಸ್ಥೆಗಳ ಮುಖಾಂತರವಾಗಲೀ ತಾನೇ ನೇರವಾಗಿಯಾಗಲೀ ಗಣಕಗಳಲ್ಲಿ ಕನ್ನಡದ ಬಳಕೆಗೆ ಇರುವ ಸಮಸ್ಯೆಗಳ ಪರಿಹಾರಕ್ಕೆ ಯಾವುದೇ ವ್ಯವಸ್ಥೆಯನ್ನೂ ರೂಪಿಸಿಲ್ಲ. ಭಾರತ ಸರ್ಕಾರವು ಭಾರತೀಯ ಭಾಷೆಗಳ ತಾಂತ್ರಿಕ ಸಮಸ್ಯೆಗಳನ್ನು ಪರಿಹರಿಸಲು ಅಗಾಧ ಪ್ರಮಾಣದ ಹಣದ ನೆರವಿನೊಂದಿಗೆ ಕೇಂದ್ರಗಳನ್ನು ರೂಪಿಸಿಕೊಂಡಿದೆ. ಇಲ್ಲಿ ಕನ್ನಡದ ಬಗೆಗೆ ಏನು ಕೆಲಸ ನಡೆಯುತ್ತಿದೆ, ಅದರ ಪ್ರಯೋಜನವನ್ನು ಪಡೆಯುವುದು ಹೇಗೆ ಎಂಬುದು ಯಾರಿಗೂ ಗೊತ್ತಾಗದ ಹಾಗಾಗಿದೆ. ಇದರ ಪ್ರಯೋಜನ ಈಗಂತೂ ಕಾಣುತ್ತಿಲ್ಲ.

ಗಣಕಯಂತ್ರದಲ್ಲಿ ಕನ್ನಡ ಬಳಕೆಗೆ ಇರುವ ಮುಖ್ಯ ಸಮಸ್ಯೆ ಎಂದರೆ ತಾಂತ್ರಿಕ ಪರಿಣತರು, ಭಾಷಾತಜ್ಞರು ಮತ್ತು ಬಳಕೆದಾರರು ಇವರು ಒಂದೇ ವೇದಿಕೆಯಲ್ಲಿ ಸಂವಾದಕ್ಕೆ ತೊಡಗದಿರುವುದೇ ಆಗಿದೆ. ತಾಂತ್ರಿಕ ಪರಿಣಿತರು ತಾತ್ವಿಕವಾಗಿ ಕನ್ನಡದ ಸಾಧ್ಯತೆಯನ್ನು ಹೊಂದಿರುವ ತಂತ್ರಜ್ಞಾನವನ್ನು ರೂಪಿಸಿಕೊಡುವಾಗ ಭಾಷಾತಜ್ಞರ ನೆರವನ್ನು ಪಡೆಯಬೇಕಾಗುತ್ತದೆ. ಕನ್ನಡ ಭಾಷಾರಚನೆಯ ಲಕ್ಷಣಗಳನ್ನು ಅರಿತು ಅದಕ್ಕನುಗುಣವಾಗಿ ಕಾರ್ಯವಾಹಿಯನ್ನು ರೂಪಿಸಿದರೆ ಕೆಲಸ ಹೆಚ್ಚು ಪರಿಪೂರ್ಣವಾಗುತ್ತದೆ. ಇದರೊಡನೆ ಬಳಕೆದಾರರ ಅಗತ್ಯಗಳನ್ನೂ ಮನಗಾಣಬೇಕು. ಇಲ್ಲದಿದ್ದರೆ ಸಿದ್ಧಗೊಂಡ ಕಾರ್ಯವಾಹಿ ಬಳಕೆಯಾಗದೇ ಹೋಗುವ ಸಾಧ್ಯತೆ ಇವೆ. ತಂತ್ರಜ್ಞಾನದ ಇನ್ನೊಂದು ಮುಖ್ಯ ಸಮಸ್ಯೆಯೆಂದರೆ ಅದು ಕನ್ನಡಕ್ಕಾಗಿಯೇ ವಿಶೇಷ ಕಾರ್ಯವಾಹಿಯನ್ನು ರೂಪಿಸಲಾರದು. ಹಲವು ಭಾಷೆಗಳ, ಅದರಲ್ಲೂ ಇಂಗ್ಲಿಶಿನ ಸಹಬಳಕೆಗೆ ಅನುಕೂಲವಾದಂತಹ ಕಾರ್ಯವಾಹಿಯನ್ನು ರೂಪಿಸಲಾಗುತ್ತದೆ. ಇದು ಸೌಲಭ್ಯಗಳ ದೃಷ್ಟಿಯಿಂದ ಯೋಗ್ಯವಾದ ವಿಧಾನ. ಆದರೆ ದಾಖಲಾತಿಗಳಲ್ಲಿ, ವ್ಯವಹಾರಗಳಲ್ಲಿ ಕನ್ನಡವನ್ನಷ್ಟೇ ಬಳಸಬೇಕು ಎಂಬ ನಿರೀಕ್ಷೆ ಗಣಕದ ಮೂಲಕ ನೆರವೇರುವುದು ಕಷ್ಟವೆಂದು ತೋರುತ್ತದೆ.

ಕನ್ನಡ ಬರವಣಿಗೆಯ ಚರಿತ್ರೆಯನ್ನು ಕಂಡವರು ಮೊದಲು ಶಾಸನಗಳಲ್ಲಿ ಕಾಲ, ದೇಶಬದ್ಧವಾದ ಒಂದು ಪ್ರತಿ ಮಾತ್ರ ಸಿದ್ಧಗೊಳ್ಳುತ್ತಿದ್ದುದನ್ನು ಬಲ್ಲರು. ತಾಳೆಗರಿಗಳ ಮೇಲೆ ಸಿದ್ಧಗೊಂಡಾಗ ಬಹುಪ್ರತಿಗಳು ಸಾಧ್ಯವಾದವು. ಕಾಲದೇಶಗಳ ವ್ಯಾಪ್ತಿಯನ್ನು ಹೆಚ್ಚಿಸಿಕೊಳ್ಳುವುದು ಸಾಧ್ಯವಾಗಿತ್ತು. ಬೆರಳಚ್ಚುಯಂತ್ರ ಈ ಸಾಧ್ಯತೆಯನ್ನು ಹೆಚ್ಚಿಸಿತ್ತು. ಮುದ್ರಣದಿಂದ ಅತಿ ಹೆಚ್ಚು ಪ್ರತಿಗಳು ಸಿದ್ಧಗೊಂಡು ಬಹುದೂರದ ಪ್ರಸಾರವನ್ನು

ಪಡೆದುಕೊಂಡವು. ಆದರೆ ಶಿಲೆಯಿಂದ ಕಾಗದಕ್ಕೆ ಬರುವ ಹೊತ್ತಿಗೆ ಮಾಧ್ಯಮಗಳ ಆಯಸ್ಸು ಕಡಿಮೆಯಾದುದನ್ನು ಕಾಣುತ್ತೇವೆ. ಶಿಲೆಗೆ ಅನಂತಕಾಲದ ಸಾಧ್ಯತೆ ಇದೆ. ತಾಳೆಗರಿಗಳಿಗೆ ಕೆಲವು ಶತಮಾನಗಳ ಆಯಸ್ಸು ಇದ್ದೀತು ಕಾಗದಕ್ಕೆ ನಾಲ್ಕೈದು ದಶಕಗಳಿಗಿಂತ ಹೆಚ್ಚಿನ ಆಯಸ್ಸು ಇರಲಾರದು. ಗಣಕವು ಈ ಎಲ್ಲ ಲಕ್ಷಣಗಳನ್ನೂ ಬದಲಾಯಿಸಿಬಿಟ್ಟಿದೆ. ಈಗ ಸಿದ್ಧಗೊಂಡ ದಾಖಲೆ ಕೆಲವೇ ಕ್ಷಣಗಳಲ್ಲಿ ಮಾಯವಾಗಿ ಬಿಡುವುದು. ನಶ್ವರತೆಯೇ ಅದರ ಪ್ರಮುಖ ಲಕ್ಷಣವಾಗಿದೆ. ತಂತ್ರಜ್ಞಾನವು ಹೊಸ ಸಾಧ್ಯತೆಗಳನ್ನು ರೂಪಿಸುತ್ತಿರುವಾಗಲೇ ಹೇಗೆ ಹೊಸ ಮಿತಿಯನ್ನೂ ರೂಪಿಸುತ್ತಿದೆ ಎಂಬುದು ಗಮನಿಸಬೇಕಾದ ಸಂಗತಿ.

ಬರಲಿರುವ ದಿನಮಾನಗಳಲ್ಲಿ ಕನ್ನಡದ ಮಟ್ಟಿಗೆ ಗಣಕವು ಇನ್ನೂ ಕೆಲವು ಇಕ್ಕಟ್ಟು ಮತ್ತು ಸಾಧ್ಯತೆಗಳನ್ನು ತರಲಿದೆ. ಅದರ ಸೂಚನೆಗಳು ಈಗಾಗಲೇ ದೊರಕತೊಡಗಿವೆ. ಅಂತಹ ಕೆಲವನ್ನು ಮುಂದೆ ಚರ್ಚಿಸಲಾಗುತ್ತಿದೆ. ಒಂದು ಲಿಪಿಯ ಸಮಸ್ಯೆ. ಕನ್ನಡದ ಲಿಪಿ ಕಳೆದ 20 ಶತಮಾನಗಳಲ್ಲಿ ವಿಕಾಸ ಹೊಂದುತ್ತಾ ಬಂದು ಮುದ್ರಣ ತಂತ್ರಜ್ಞಾನದ ಹೊತ್ತಿಗೆ ಒಂದು ಸಾರ್ವತ್ರಿಕ ವಿನ್ಯಾಸವನ್ನು ಪಡೆದುಕೊಂಡಿದೆ. ಈ ಹಿಂದೆಯೇ ಇದ್ದ ದಾಖಲೆಗಳ ಲಿಪಿವೈವಿಧ್ಯಗಳು ಈಗ ಇಲ್ಲ, ಮತ್ತು ಅವು ಬೇಕಾಗಿಯೂ ಇಲ್ಲ ಕೂಡ. ಗಣಕದಲ್ಲಿ ಕನ್ನಡಲಿಪೀಯು ತೆರೆಯ ಮೇಲಾಗಲೀ ಅಥವಾ ಕಾಗದದ ಮೇಲಾಗಲೀ ಮೂಡುವ ಕ್ರಮ ಸಂಕೀರ್ಣವಾಗಿದೆ. ಸದ್ಯ ಅದನ್ನೊಂದು ಚಿತ್ರವೆಂದು ತಿಳಿಯೋಣ. ಈ ಲಿಪೀಕರಣ ಕ್ರಿಯೆಯೂ ಕೂಡ ಹಲವು ಸಮಸ್ಯೆಗಳಿಗೆ ಕಾರಣವಾಗಿದೆ. ಅದರಲ್ಲೂ ಸಂವಹನದ ಸಾಧ್ಯತೆ ಮತ್ತು ವೇಗಗಳು ನಿರೀಕ್ಷೆಯನ್ನು ಮೀರಿ ಹೆಚ್ಚುತ್ತಿರುವ ಇಂದಿನ ದಿನಮಾನಗಳಲ್ಲಿ ಲಿಪಿಕರಣ ಒಂದು ಸವಾಲಾಗಿ ಪರಿಣಮಿಸಲಿದೆ. ಅಂತರ್‌ಜಾಲದಲ್ಲಿ ಬಳಕೆಯಲ್ಲಿರುವ ಇ-ಮೇಲ್ ಸೌಲಭ್ಯವನ್ನೇ ಗಮನಿಸೋಣ. ಇಲ್ಲಿ ದೂರದೂರಿನ ಜನರು ಖಾಸಗಿಯಾಗಿ ಮತ್ತು ಸಾರ್ವಜನಿಕವಾಗಿ ತಮ್ಮ ಪತ್ರಗಳನ್ನು ಸಿದ್ಧಪಡಿಸಿ ರವಾನಿಸುವ ಅವಕಾಶಗಳಿವೆ. ಈ ಸೌಲಭ್ಯವನ್ನು ಅದರ ವೇಗ ಮತ್ತು ನಿಖರತೆಗಳಿಗಾಗಿಯೇ ತರುಣ ಪೀಳಿಗೆಯವರು ಹೆಚ್ಚಿನ ಪ್ರಮಾಣದಲ್ಲಿ ಬಳಸುತ್ತಿದ್ದಾರೆ. ಇಲ್ಲಿ ಕನ್ನಡ ಭಾಷೆಯ ಬಳಕೆ ಸಾಧ್ಯ. ಆದರೆ ಲಿಪೀಕರಣ ಕನ್ನಡ ಲಿಪಿಯಲ್ಲೇ ಆಗಬೇಕೆಂಬ ಶರತ್ತು ಪಾಲನೆ ಯಾವಾಗಲೂ ಯಶಸ್ಸು ಪಡೆಯುವುದಿಲ್ಲ. ಇದಕ್ಕೆ ಹಲವು ತಾಂತ್ರಿಕ ಕಾರಣಗಳಿವೆ.

ಈ ಸಂವಹನ ವ್ಯವಸ್ಥೆಯಲ್ಲಿ ಎರಡು ತುದಿಗಳಿವೆ. ಒಂದೆಡೆ ಇರುವವರು ತಮ್ಮ ಗಣಕದಲ್ಲಿ ಕನ್ನಡ ಕಾರ್ಯವಾಹಿಯನ್ನು ಇರಿಸಿಕೊಂಡು ಅದರಿಂದ ಸಂದೇಶವನ್ನು ಕನ್ನಡ ಲಿಪಿಯಲ್ಲಿ ರವಾನಿಸಿದರೆ, ಇನ್ನೊಂದು ತುದಿಯಲ್ಲಿ ಇರುವವರು ತಮ್ಮ ಗಣಕದಲ್ಲೂ ಅದೇ ಕಾರ್ಯವಾಹಿಯನ್ನು ಹೊಂದಿದ್ದರೆ ಮಾತ್ರ ಕನ್ನಡ ಲಿಪಿಯಲ್ಲಿ ಸಂದೇಶವನ್ನು ಓದಬಹುದು, ಮರಳಿ ಕಳುಹಿಸಬಹುದು. ಆದರೆ ಈ ಸಾಧ್ಯತೆಗಳು ಕಡಿಮೆ. ಇದಕ್ಕೆ ಕಾರಣ ಈ ಕಾರ್ಯವಾಹಿಗಳ ಲಭ್ಯತೆಯ ಕೊರತೆ ಮತ್ತು ಪ್ರಮಾಣಬದ್ಧತೆಯ ಕೊರತೆ. ಈ ಸಮಸ್ಯೆಯನ್ನು ಮತ್ತಷ್ಟು ಜಟಿಲಗೊಳಿಸುವ

ಸಂದರ್ಭಗಳು ಮೈತಳೆದಿವೆ. ಅವುಗಳಲ್ಲಿ ಮುಖ್ಯವಾಗಿ ಅಂಕೀಕರಣದ ಮಾಹಿತಿಯನ್ನು ನೆನಪಿನಲ್ಲಿ ಇರಿಸಿಕೊಳ್ಳಲು ಗಣಕಗಳು ಬಳಸುವ ಹಲವು ಸಂಕೇತವ್ಯವಸ್ಥೆಗಳು ಜಾರಿಯಲ್ಲಿವೆ. ಇವುಗಳಲ್ಲಿ ಒಂದು ಸಂಕೇತ ವ್ಯವಸ್ಥೆಯ ದಾಖಲೆಗಳನ್ನು ಇನ್ನೊಂದು ಸಂಕೇತವ್ಯವಸ್ಥೆಯಲ್ಲಿ ಓದುವುದು ಆಗದು. ಇದಕ್ಕೆ ಎರಡು ಪರಿಹಾರಗಳನ್ನು ಸೂಚಿಸಲಾಗಿದೆ. ಒಂದು: ಬೇರೆ ಬೇರೆ ಸಂಕೇತ ವ್ಯವಸ್ಥೆಗಳ ನಡುವೆ ಪರಿವರ್ತನೀಯತೆಯನ್ನು ರೂಪಿಸುವುದು. ಎರಡು: ಜಾಗತಿಕವಾಗಿ ಒಂದೇ ಸಂಕೇತವ್ಯವಸ್ಥೆಯನ್ನು ರೂಪಿಸುವುದು. ಮೊದಲನೆಯದು ತಾತ್ಕಾಲಿಕ ಪರಿಹಾರವಾದರೆ ಎರಡನೆಯದು ಹೆಚ್ಚು ಶಾಶ್ವತವಾದ ಪರಿಹಾರ. ಎರಡನೆಯ ಪರಿಹಾರಕ್ಕಾಗಿ ಹಲವು ಪ್ರಯತ್ನಗಳು ಕನ್ನಡದಲ್ಲಿ ನಡೆದದ್ದಿದೆ. ಬಹುರಾಷ್ಟ್ರೀಯ ಕಂಪನಿಗಳು ಭಾಗೀದಾರರಾಗಿರುವ ಈ ಪ್ರಯತ್ನದಿಂದಾಗಿ ಯೂನಿಕೋಡ್ ಎಂದು ಕರೆಯಲಾಗುವ ಜಾಗತಿಕನೆಲೆಯ ಸಾಮಾನ್ಯ ಸಂಕೇತವ್ಯವಸ್ಥೆಯಲ್ಲಿ ಕನ್ನಡ ಲಿಪಿಗಳನ್ನು ರೂಪಿಸುವುದೂ ಸಂಗ್ರಹಿಸುವುದೂ ಸಾಧ್ಯವಾಗಿದೆ. ಅಲ್ಲಲ್ಲಿ ಕೊರತೆಗಳಿದ್ದರೂ ಹೆಚ್ಚು ಪರಿಣಾಮಕಾರಿಯಾದ ಪರಿಹಾರವಾಗಿ ಇದು ಕಾಣುತ್ತಿದೆ. ಇದರಲ್ಲಿ ಕರ್ನಾಟಕ ಸರ್ಕಾರ ಯಾವುದೇ ರೀತಿಯಲ್ಲೂ ಕ್ರಿಯಾತ್ಮಕವಾಗಿ ಪಾಲು ತೆಗೆದುಕೊಂಡಿಲ್ಲ. ತಾನು ಅಧಿಕೃತಗೊಳಿಸಿದ ನುಡಿ ಕಾರ್ಯವಾಹಿಯನ್ನು ಈ ಜಾಗತಿಕ ಸಂಕೇತವ್ಯವಸ್ಥೆಗೆ ಹೊಂದಿಸುವ ಪ್ರಯತ್ನವನ್ನು ಕೂಡ ಅರೆ ಮನಸ್ಸಿನಿಂದ ಮಾಡಿದೆ.

ಇದಲ್ಲದೆ ಇನ್ನೊಂದು ಪರಿಹಾರವನ್ನು ಗಣಕ ಬಳಕೆದಾರರು ಅನುಸರಿಸುವುದುಂಟು. ಅದರಂತೆ ಅವರು ಕನ್ನಡ ಭಾಷಾಸಂದೇಶವನ್ನು ರೋಮನ್ ಲಿಪಿಯಲ್ಲಿ ನಿರೂಪಿಸುತ್ತಾರೆ. ಸಾಮಾನ್ಯವಾಗಿ ಈಗ ಗಣಕಗಳನ್ನು ಬಳಸುತ್ತಿರುವವರು ಕನ್ನಡದ ಜೊತೆಗೆ ಇಂಗ್ಲಿಶ್ ಲಿಪಿವ್ಯವಸ್ಥೆಯನ್ನು ಬಲ್ಲವರಾದ್ದರಿಂದ ಈ ಲಿಪಿಯನ್ನು ಬಳಸುವುದು ಅವರಿಗೆ ಸುಲಭವಾಗಿದೆ. ಹೀಗೆ ಕಾರ್ಯವಾಹಿಗಳ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ರೋಮನ್ ಲಿಪಿಯನ್ನು ಕನ್ನಡ ಲಿಪಿಗೆ ಪರ್ಯಾಯವಾಗಿ ಬಳಸುವುದನ್ನು ಸಾರ್ವತ್ರಿಕವಾಗಿ ಯಾರೂ ಸಮರ್ಥಿಸಲಾರರು. ಆದರೆ ಬಳಕೆದಾರರನ್ನು ಯಾರು ನಿಯಂತ್ರಿಸುತ್ತಾರೆ? ರೋಮನ್ ಲಿಪಿಯನ್ನು ಬಳಸಿ ಕನ್ನಡವನ್ನು ಬರೆಯುವ ಅವರ ಯತ್ನ ಮುಂದುವರೆಯುತ್ತಲೇ ಇದೆ.(ಈ ಒಳಮಾರ್ಗ ಈಗ ಮೊಬೈಲ್‌ಫೋನ್‌ಗಳ ಮೂಲಕ ಕಿರುಸಂದೇಶಗಳನ್ನು ಕಳುಹಿಸುವವರಲ್ಲೂ ಹೆಚ್ಚಾಗಿ ಬಳಕೆಯಲ್ಲಿದೆ.) ಗಣಕದಲ್ಲಿ ಕನ್ನಡ ಲಿಪಿಗೆ ರೋಮನ್ ಲಿಪಿಯನ್ನು ಬಳಸಿದರೆ ಅದರಿಂದ ಬದಲಿಸಲಾಗದ ತಪ್ಪು ಆಗಿ ಹೋಗುತ್ತದೆ ಎಂದು ಕೊರಗುವ ಕಾಲ ಇದಲ್ಲ. ಏಕೆಂದರೆ ಈಗಾಗಲೇ ಒಂದು ಲಿಪಿವ್ಯವಸ್ಥೆಯಿಂದ ಇನ್ನೊಂದು ಲಿಪಿವ್ಯವಸ್ಥೆಗೆ ಲಿಪ್ಯಂತರ ಮಾಡುವ ಕಾರ್ಯವಾಹಿಗಳು ಬಳಕೆಯಲ್ಲಿವೆ. ಇದರಿಂದ ರೋಮನ್ ಲಿಪಿಯ ದಾಖಲೆಗಳನ್ನು ಕನ್ನಡ ಲಿಪಿಗೆ ಪರಿವರ್ತಿಸುವುದು ಈಗ ಅಸಾಧ್ಯವೆನ್ನುವಂತಿಲ್ಲ. ಈಗ ಹೆಚ್ಚು ಬಳಕೆಯಲ್ಲಿರುವ ಕನ್ನಡ ಕಾರ್ಯವಾಹಿಗಳಲ್ಲಿ ಒಂದಾದ 'ಬರಹ'ದಲ್ಲಿ ವಾಸ್ತವವಾಗಿ ಮೂಲ ದಾಖಲಾತಿಗಳು ರೋಮನ್ ಲಿಪಿಯಲ್ಲೇ ಆಗುತ್ತವೆ. ಅನಂತರ ಅದನ್ನು ಕನ್ನಡ ಲಿಪಿಗೆ ಬದಲಿಸಿಕೊಳ್ಳುವ

ಅವಕಾಶವನ್ನು ಆ ಕಾರ್ಯವಾಹಿಯಲ್ಲಿ ರೂಪಿಸಲಾಗಿದೆ. ಈ ಪರ್ಯಾಯ ಲಿಪಿ ಬಳಕೆ ಹೊಸದೇನೂ ಅಲ್ಲ. ಕನ್ನಡ ಹಸ್ತಪ್ರತಿಗಳ ಪರಿಚಯವಿದ್ದವರಿಗೆ ಈ ವಿಧಾನ ಬಹು ಹಿಂದಿನಿಂದಲೂ ನಡೆದಿರುವುದು ಗೊತ್ತಿದೆ. ಸಂಸ್ಕೃತ ಕೃತಿಗಳನ್ನು ಕನ್ನಡ ಲಿಪಿಯಲ್ಲಿ ಬರೆದಿರುವುದು, ಕನ್ನಡ ಕೃತಿಗಳನ್ನು ತೆಲುಗು ಲಿಪಿಯಲ್ಲಿ ಬರೆದಿರುವುದು-ಹೀಗೆ ಹಲವು ಪರ್ಯಾಯ ವಿಧಾನಗಳು ಜಾರಿಯಲ್ಲಿದ್ದವು. ಹೀಗೆ ಮಾಡಲು ಆ ಕಾಲದ ಲಿಪಿಕಾರರಿಗೆ ಇದ್ದಂತಹ ಕಾರಣಗಳೇ ಈಗಲೂ ಇವೆ ಎಂದು ಹೇಳುತ್ತಿಲ್ಲ. ಆದರೆ ನಮ್ಮ ಕಾಲದ ಅಗತ್ಯಗಳಿಗಾಗಿ ಹೀಗೆ ಲಿಪೀಕರಣಕ್ಕೆ ರೋಮನ್ ಲಿಪಿವ್ಯವಸ್ಥೆಯನ್ನು ಬಳಸುವುದು ಮಧ್ಯವರ್ತಿ ವಿಧಾನವಾಗಿ ಸೂಕ್ತವೇ ಆಗಿದೆ. ಆದರೆ ಈ ಲಿಪ್ಯಂತರಕ್ಕೆ ಎಲ್ಲರೂ ಅನುಸರಿಸಬೇಕಾದ ಒಂದು ಪರಿವರ್ತನಾ ಕೋಷ್ಟಕವನ್ನು ಸಿದ್ಧಪಡಿಸಿ ಅದನ್ನು ಅಧಿಕೃತಗೊಳಿಸಬೇಕಾಗುತ್ತದೆ.

ಇದಲ್ಲದೆ ಈ ಹೊಸ ತಂತ್ರಜ್ಞಾನ ಕನ್ನಡ ಬರವಣಿಗೆಯ ಮತ್ತೊಂದು ವಲಯವನ್ನು ಪ್ರಭಾವಿಸಿದೆ. ದಾಖಲೆಗಳ ಸಂರಕ್ಷಣೆಯ ವಲಯವಿದು. ಲಿಖಿತ ದಾಖಲೆಗಳನ್ನು ಅವು ಯಾವ ಸಾಮಗ್ರಿಯ ಮೇಲೆ, ಭಿತ್ತಿಯ ಮೇಲೆ, ಶಿಲೆಯ ಮೇಲೆ ರೂಪಗೊಂಡಿದ್ದವೋ ಅವುಗಳನ್ನು ನಮ್ಮ ಅನುಕೂಲಕ್ಕಾಗಿ ಮುದ್ರಣದ ನೆರವಿನಿಂದ ಕಾಗದಕ್ಕೆ ರವಾನಿಸಿಕೊಂಡಿದ್ದೇವೆ. 20ನೇ ಶತಮಾನವಿಡೀ ಹೀಗೆ ಮಾಧ್ಯಮ ಪರಿವರ್ತನೆಯ ಕೆಲಸ ಅಗಾಧ ಪ್ರಮಾಣದಲ್ಲಿ ನಡೆದಿದೆ. ಕಳೆದ ಐವತ್ತು ವರ್ಷದಲ್ಲಿ ಇಂತಹ ಕೆಲಸ ನಡೆಯುತ್ತಲೇ ಬಂದಿದೆ. ಆದರೆ ನಮಗೆ ಈಗ ಖಚಿತವಾಗಿರುವ ಸಂಗತಿ ಎಂದರೆ ಕಾಗದದ ಜೀವಿತಾವಧಿ ದಿನಕಳೆದಂತೆ ಕುಗ್ಗುತ್ತಿದೆ. ಮೊದಮೊದಲು ಹಲವು ದಶಕಗಳ ಕಾಲ ಹಾಳಾಗದೆ ಇರುತ್ತಿದ್ದ ಕಾಗದ ಈಗ ಒಂದು ದಶಕ ಕಾಲ ಕೂಡ ಉಳಿಯುವುದು ದುಸ್ತರವಾಗಿದೆ. ಹಾಗಾಗಿ ಕಾಗದದ ಮೇಲಿರುವ ದಾಖಲೆಗಳನ್ನು ಹೆಚ್ಚು ಸ್ಥಿರವಾದ ಮಾಧ್ಯಮಕ್ಕೆ ರವಾನಿಸುವ ಅಗತ್ಯ ಕಂಡುಬಂದಿದೆ. ಕಾಗದದ ಇನ್ನೊಂದು ಮಿತಿ ಎಂದರೆ ಅದೊಂದು ಭೌತಿಕ ವಸ್ತುವಾದ್ದರಿಂದ ಅದರಲ್ಲಿ ಆಗಿರುವ ಭಾಷಾದಾಖಲಾತಿಗಳು ಸೀಮಿತ ಕಾಲದೇಶದಲ್ಲಿ ಮಾತ್ರ ಪ್ರಸಾರವಾಗುತ್ತವೆ. ಕಾಗದದ ಈ ಎರಡು ಮಿತಿಗಳನ್ನು ಮೀರಲು ಈಗ ಗಣಕವನ್ನು ಬಳಸಲಾಗುತ್ತಿದೆ. ಲಿಖಿತ ದಾಖಲೆಗಳನ್ನು ಅವು ಇರುವಂತೆಯೇ ಗಣಕಗಳ ನೆನಪಿನಲ್ಲಿ ಇರಿಸಬಹುದು ಮತ್ತು ಯಾರಿಗಾದರೂ ಅವು ತಕ್ಷಣ ದೊರೆಯುವಂತೆ ಮಾಡಬಹುದು. ಕನ್ನಡದಲ್ಲಿ ಈ ಸಾಧ್ಯತೆಯನ್ನು ಈಗೀಗ ಬಳಸಲಾಗುತ್ತಿದೆ. ಸರ್ಕಾರವು ತನ್ನ ಬಲು ದೀರ್ಘಕಾಲದ ದಾಖಲೆಗಳನ್ನು ಹೀಗೆ ಗಣಕದಲ್ಲಿ ಕಾಯ್ದಿರಿಸುವ ಯತ್ನವನ್ನು ಮಾಡುತ್ತಿದೆ. ವಿಶ್ವವಿದ್ಯಾಲಯಗಳು, ಸಾರ್ವಜನಿಕ ಸಂಸ್ಥೆಗಳು, ಬರಹವನ್ನು ಕಾಗದದಿಂದರೆ ಕಾಗದರಹಿತ ಸ್ಥಿತಿಗೆ ಪರಿವರ್ತಿಸುವ ದಾರಿಯನ್ನು ಹಿಡಿದಿವೆ.

ತೀರಾ ಇತ್ತೀಚಿನ ವರ್ಷಗಳಲ್ಲಿ ಲಿಖಿತ ದಾಖಲೆಗಳಲ್ಲಿ ಕಾಲದೇಶ ಮೀರಿದ ಮಹತ್ವವುಳ್ಳವನ್ನು ಹೀಗೆ ಅಂಕೀಕರಣ ಮಾಡಿ ಕಾಯ್ದಿರಿಸುವ ಪ್ರಯತ್ನ ಬದಲಾಗಿದೆ.

ತಾಳೆಎಲೆ ಮೇಲಿರುವ ಗ್ರಂಥಗಳು ಹೀಗೆ ಗಣಕವನ್ನು ಸೇರುತ್ತಿವೆ. ಇಲ್ಲಿರುವ ಸೌಲಭ್ಯ ಮತ್ತು ಅಪಾಯಗಳನ್ನು ಒಟ್ಟಿಗೆ ಇರಿಸಿ ನೋಡಬೇಕು. ಸೌಲಭ್ಯವೆಂದರೆ ಸಂಗ್ರಹವು ದೀರ್ಘಕಾಲ ಉಳಿಯುವುದು ಮತ್ತು ಯಾರಿಗಾದರೂ ಎಲ್ಲೇ ಇದ್ದರೂ ಲಭ್ಯವಾಗುತ್ತದೆ. ಅಪಾಯವೆಂದರೆ ಈಗಾಗಲೇ ಹೇಳಿದಂತೆ ಗಣಕದ ನೆನಪು ಭ್ರಮಾತ್ಮಕವಾದದ್ದು. ಅದಕ್ಕೆ ಭೌತಿಕವಾದ ಚಹರೆಗಳಿಲ್ಲ. ತಾಂತ್ರಿಕವಾದ ಇಕ್ಕಟ್ಟುಗಳಲ್ಲಿ ಸಾವಿರಾರು ಪುಟಗಳಷ್ಟು ಮಾಹಿತಿ ಮರಳಿ ಪಡೆಯಲು ಸಾಧ್ಯವಾಗದಂತೆ ಅಳಿಸಿ ಹೋಗಬಹುದು. ಕನ್ನಡದಂತಹ ಭಾಷೆ ನಿಡುಕಾಲದ ಭಾಷಾದಾಖಲೆಗಳನ್ನು ಹಲವು ರೂಪಗಳಲ್ಲಿ ಹೊಂದಿದೆ. ಅವುಗಳನ್ನು ಕಾಯ್ದಿರಿಸಲು ಪ್ರಚುರಪಡಿಸಲು ಗಣಕ ತಂತ್ರಜ್ಞಾನವು ನೆರವಿಗೆ ಬರಲಿದೆ. ಕನ್ನಡದಲ್ಲಿ ಈ ಬಗೆಯ ತಂತ್ರಜ್ಞಾನದ ಬಳಕೆ ಮೊದಲಾಗಿದ್ದರೂ ಅದು ತಳೆಯುವ ಆಕಾರವಿನ್ನೂ ಸ್ಪಷ್ಟವಾಗಿಲ್ಲ.

ಜಾಗತಿಕವಾಗಿ ಗಣಕವನ್ನು ಮಾಹಿತಿ ಕಣಜವನ್ನಾಗಿ ಬಳಸಲಾಗುತ್ತಿದೆ. ಕಾಗದದ ಮೇಲೆ ಮುದ್ರಣಗೊಂಡ ಸೃಜನಾತ್ಮಕ ಕೃತಿಗಳೂ ಸೇರಿದಂತೆ ಹಲವು ಸಾವಿರ ಕೃತಿಗಳನ್ನು ಗಣಕದ ನೆನಪಿನಲ್ಲಿ ಇರಿಸುವ ಪ್ರಯತ್ನಗಳು ನಡೆದಿವೆ. ಇಂಗ್ಲಿಶ್ ಮತ್ತಿತರ ಭಾಷೆಗಳಲ್ಲಿ ಈ ಯತ್ನ ಸಾಗಿರುವ ರೀತಿಗೆ ಹೋಲಿಸಿದರೆ ಕನ್ನಡದಲ್ಲಿ ನಡೆದಿರುವ ಪ್ರಯತ್ನಗಳು ತೀರಾ ಅಲ್ಪ. ಉತ್ತರ ಅಮೆರಿಕಾದ ಫಿಲಿಡೆಲ್ಫಿಯಾದ ಕಾರ್ನಿಗಿ ಮಿಲನ್ ಪುದುವಟ್ಟು ಜಾಗತಿಕ ವ್ಯಾಪ್ತಿಯ ಒಂದು ಯೋಜನೆಯನ್ನು ರೂಪಿಸಿದೆ. ಅದರಂತೆ ಜಗತ್ತಿನ ಹಲವು ಭಾಷೆಗಳಲ್ಲಿರುವ ದಾಖಲೆಗಳನ್ನು ಅಂಕೀಕರಣ ಮಾಡಲು ಈ ಯೋಜನೆ ರೂಪಿತವಾಗಿದೆ. ಕನ್ನಡದ ಗ್ರಂಥಗಳೂ ಹೀಗೆ ಅಂಕೀಕರಣ ಪ್ರಕ್ರಿಯೆಗೆ ಒಳಗಾಗಲಿವೆ. ಇಂಥಾ ಯೋಜನೆಯನ್ನು ರೂಪಿಸುವವರಲ್ಲಿ ಕೆಲವೊಮ್ಮೆ ಮಾಹಿತಿಯ ಕೊರತೆ ಇರುತ್ತದೆ. ಕನ್ನಡದಲ್ಲಿ ಒಂದು ಲಕ್ಷ ಕೃತಿಗಳನ್ನು ಹೀಗೆ ಗಣಕದ ನೆನಪಿಗೆ ಅಳವಡಿಸಲಾಗುವುದೆಂಬ ಯೋಜನೆಯನ್ನು ಸರ್ಕಾರದ ಮಂತ್ರಿಗಳು, ಅಧಿಕಾರಿಗಳು, ಹೇಳುತ್ತಿದ್ದಾರೆ. ಕನ್ನಡದಲ್ಲಿ ಈವರೆಗೆ ಮುದ್ರಿತ ರೂಪದಲ್ಲಿ ಪ್ರಕಟಗೊಂಡಿದ್ದು ಈಗಲೂ ಓದಲು ಲಭ್ಯವಿರಬಹುದಾದ ಪುಸ್ತಕಗಳ ಸಂಖ್ಯೆ ಒಂದು ಲಕ್ಷ ತಲುಪುವುದಿಲ್ಲ ಎಂಬುದನ್ನು ಯಾರೂ ಗಮನಿಸಿದಂತೆ ತೋರುವುದಿಲ್ಲ.

ಈ ಅಂಕೀಕರಣವು ತರಲಿರುವ ಎರಡು ಸಮಸ್ಯೆಗಳನ್ನು ನಾವಿಲ್ಲಿ ಗಮನಿಸಬೇಕು. ಒಂದು: ಹೀಗೆ ಗಣಕದಲ್ಲಿ ಅಳವಟ್ಟ ಕನ್ನಡ ಪುಸ್ತಕವನ್ನು ಓದುವವರು ಯಾರು ಎಂಬುದು? ಬರೆಹ ಅನಕ್ಷರತೆಯೇ ತುಂಬಿರುವ ಈ ಸಂದರ್ಭದಲ್ಲಿ ಗಣಕ ಅನಕ್ಷರತೆಯು ಇನ್ನೂ ತೀವ್ರ ರೂಪದಲ್ಲಿದೆ. ಹಾಗಾಗಿ ಗಣಕದಲ್ಲಿ ಮರೆಯಾಗಿ ನಿಂತ ಕನ್ನಡ ಗ್ರಂಥಗಳು ಸುರಕ್ಷಿತವಾಗಿ ಉಳಿಯಬಹುದೇನೋ ನಿಜ. ಆದರೆ ಅದು ಹೆಚ್ಚು ಜನರ ಓದಿಗೆ ದೊರಕದೇ ಹೋಗಬಹುದು. ಅಲ್ಲದೇ ಮುದ್ರಿತ ಪುಸ್ತಕವೊಂದರ ಹಾಳೆಯೊಂದನ್ನು ಓದಲು ನಮ್ಮ ದೇಹದ ವಿವಿಧ ಅಂಗಾಂಗಗಳು ತರಬೇತು ಪಡೆದಂತೆ ಗಣಕದ ತೆರೆಯ ಮೇಲೆ ಓದಲು ಸಿದ್ಧವಾಗಿಲ್ಲ. ಇದು ತುಂಬಾ ಆಯಾಸದ ಕೆಲಸವಾಗಿದೆ. ಮುಂದಿನ ದಿನಗಳಲ್ಲಿ ಈ ಸಮಸ್ಯೆಗಳಿಗೆ ಪರಿಹಾರ ಸಿಕ್ಕೀತು. ಈಗಂತೂ ಕನ್ನಡ

ಗ್ರಂಥಗಳ ಅಂಕೀಕರಣ ಯೋಜನೆ ತಂತ್ರಜ್ಞಾನದ ತೆರಪಿನೊಳಗೆ ನುಗ್ಗುತ್ತಿರುವ ಪ್ರವಾಹದಂತೆ ತೋರುತ್ತದೆಯೇ ಹೊರತು ಕನ್ನಡ ಭಾಷೆಯ ಮೂಲಭೂತ ಅಗತ್ಯಗಳನ್ನು ಪೂರೈಸುವ ನಿಟ್ಟಿನಲ್ಲಿ ಇಲ್ಲ.

ಈ ಗಣಕ ಅಳವಡಿಕೆಯು ಇನ್ನೊಂದು ಸಮಸ್ಯೆಯನ್ನು ಮುಂದೆ ತರಲಿದೆ. ಪುಸ್ತಕಗನ್ನು ರಚಿಸಿದವರಿಗೆ ಸ್ವಾಮ್ಯ ಇರುತ್ತದೆ. 1958ರ ಬರ್ನ್ ಸಮ್ಮೇಳನ ರೂಪಿಸಿದ ಕಾಪಿ ರೈಟ್ ಶರತ್ತುಗಳು, ಬರೆದವರಿಗೆ ಬರೆದ ಪುಸ್ತಕದ ಮೇಲೆ ಹಕ್ಕುಗಳನ್ನು ನೀಡುತ್ತದೆ. ಗಣಕದಲ್ಲಿ ಹೀಗೆ ಪುಸ್ತಕಗಳು ಅಳವಟ್ಟಾಗ ಇಂತಹ ಹಕ್ಕುಗಳು ತೋರಿಕೆಯ ನೆಲೆಯಲ್ಲಿ ಮಾತ್ರ ಉಳಿದುಕೊಳ್ಳುತ್ತವೆ. ಏಕೆಂದರೆ ಪುಸ್ತಕವನ್ನು ಕೊಂಡು ಓದಿದಾಗ ಬರೆದವರಿಗೆ ಅದರಲ್ಲಿ ರಾಯಧನ ಸಿಗುತ್ತದೆ. ಆದರೆ ಅಂಕೀಕೃತ ಕೃತಿಗಳ ವಿಷಯದಲ್ಲಿ ಈ ಮಾತು ಹೇಳುವಂತಿಲ್ಲ. ಅಳವಡಿಸುವ ಈ ಮಹಾನ್ ಯೋಜನೆಯ ನಿರ್ಮಾತೃಗಳು ಕೂಡ ಹೊಸ ಚಿಂತನೆಯೊಂದನ್ನು ಮಂಡಿಸಿದ್ದಾರೆ. ಅದರಂತೆ ಪುಸ್ತಕ ಅಂತರ್‌ಜಾಲದಲ್ಲಿ ಪ್ರಕಟಗೊಂಡ ಕೂಡಲೇ ಬರೆದವರಿಗೆ ನಿಯಮಿತ ರಾಯಧನ ಸಿಗುವುದಿಲ್ಲ. ಮುಂದೆ ಹೀಗೆ ಸಂಗ್ರಹಗೊಂಡ ಪುಸ್ತಕಗಳನ್ನು ಯಾರಾದರೂ ತಮ್ಮ ತಮ್ಮ ಗಣಕಗಳಲ್ಲಿ ಓದಿದರೆ ಹೀಗೆ ಓದಿದ ಓದುಗರ ಸಂಖ್ಯೆಯನ್ನು ಅವಲಂಬಿಸಿ ರಾಯಧನವನ್ನು ನೀಡುವ ಹೊಸ ವ್ಯವಸ್ಥೆಯನ್ನು ಕಲ್ಪಿಸಿದ್ದಾರೆ. ಅಂದರೆ ಹೆಚ್ಚು ಜನ ಓದಿದರೆ ಲೇಖಕರಿಗೆ ಹೆಚ್ಚು ರಾಯಧನ. ಯಾರೂ ಓದದಿದ್ದರೆ ಏನು ಸಿಗುವುದಿಲ್ಲ. ಇಡೀ ಚಿಂತನಾಕ್ರಮವನ್ನೇ ಬುಡಮೇಲು ಮಾಡುವ ಇಂತಹ ವ್ಯವಸ್ಥೆಯನ್ನು ಕನ್ನಡ ಬರವಣಿಗೆಯ ಲೋಕ ಹೇಗೆ ಒಪ್ಪಿಕೊಂಡೀತು ಎಂಬುದನ್ನು ಕಾಯ್ದು ನೋಡಬೇಕಾಗಿದೆ.

ಎರಡು: ತಂತ್ರಜ್ಞಾನದ ಅವಿಷ್ಕಾರದಲ್ಲಿ ಬರೆದ ಪಠ್ಯವನ್ನು ಗಣಕಕ್ಕೆ ಅಳವಡಿಸಿ ದಾಗ ಅದನ್ನು ಓದುವ ಕಾರ್ಯವಾಹಿಗಳು ಸಿದ್ಧವಾಗುತ್ತಿವೆ. ಇಲ್ಲಿ ಓದುವ ಎಂದರೆ ಓದಿ ಹೇಳುವ ಎಂಬರ್ಥ.ಇಂಗ್ಲಿಶ್‌ನಂತಹ ಭಾಷೆಯಲ್ಲಿ ಇದು ಈಗ ಬಳಕೆಯಲ್ಲಿದೆ. ಹಾಗೆಯೇ ನಾವು ಗಣಕಕ್ಕೆ ಮಾತನ್ನು ಕೂಡಿಸಿದರೆ ಅದು ಒಂದು ಓದಿದ ಪಠ್ಯವಾಗಿ ಪರಿವರ್ತನೆ ಆಗುವ ತಾಂತ್ರಿಕತೆಯೂ ರೂಪುಗೊಳ್ಳುತ್ತಿದೆ. ಇದು ಇನ್ನೂ ಪರಿಷ್ಕಾರಗೊಳ್ಳಬೇಕಾದ ತಂತ್ರಜ್ಞಾನ. ಆದರೂ ಮಾತು ಮತ್ತು ಬರೆಹಗಳ ನಡುವೆ ಇರುವ ಗಡಿಗೆರೆಗಳನ್ನು ಇದು ಅಳಿಸಿ ಹಾಕಲಿದೆ. ಜೊತೆಗೆ ಅಕ್ಷರಸ್ಥರಾಗುವ ಪರಿಕಲ್ಪನೆಯನ್ನೇ ಬದಲಾಯಿಸಲಿದೆ. ಜನರು ತಾವೇ ಬರೆಯಲೆಂದು ಅಥವಾ ಇತರರು ಬರೆದುದನ್ನು ಓದಲೆಂದು ಅಕ್ಷರಸ್ಥರಾಗುತ್ತಾರಷ್ಟೇ. ಮಾತನ್ನು ಬರೆಹವನ್ನಾಗಿ, ಬರೆಹವನ್ನು ಮಾತನ್ನಾಗಿ ಗಣಕವೇ ಪರಿವರ್ತಿಸಿ ಬಿಟ್ಟರೆ ಆಗ ಅಕ್ಷರಸ್ಥರಾಗುವುದು ಎಂಬ ಪರಿಕಲ್ಪನೆಯೇ ಮರುವ್ಯಾಖ್ಯಾನಕ್ಕೆ ಗುರಿಯಾಗಬೇಕಾಗಿ ಬರುತ್ತದೆ. ಕನ್ನಡದಂತಹ ಭಾಷೆ ಮತ್ತು ಅದನ್ನಾಡುವ ಭಾಷಿಕರಿಗೆ ಈ ತಂತ್ರಜ್ಞಾನ ಹೊಸ ಸಾಧ್ಯತೆಗಳನ್ನು ತೆರೆಯುತ್ತದೆಯೋ, ಅಥವಾ ಸಂದರ್ಭವನ್ನು ಮತ್ತಷ್ಟು ಗೋಜಲುಗೊಳಿಸುತ್ತದೆಯೋ ಈಗಲೇ ಹೇಳಬರುವುದಿಲ್ಲ.

ಕೈಬರಹದ ದಾಖಲೆಗಳನ್ನು ಗಣಕಕ್ಕೆ ಅಳವಡಿಸುವ ಸರಳ ವಿಧಾನವೆಂದರೆ ಸ್ಕ್ಯಾನಿಂಗ್. ಹೀಗೆ ಮಾಡಿದಾಗ ಮೂಲ ಕೈಬರಹದ ದಾಖಲೆ ಒಂದು ಚಿತ್ರವಾಗಿ

ಗಣಕದಲ್ಲಿ ಉಳಿಯುತ್ತದೆ. ಈ ಮೊದಲೇ ಹೇಳಿದ ಹಳೆಗಾಲದ ದಾಖಲೆಗಳ ಗಣಕೀಕರಣವು ಇದೇ ಮಾದರಿಯಲ್ಲಿ ನಡೆಯುವುದು. ಕೈಬರಹದಲ್ಲಿಲ್ಲದಿದ್ದರೂ ಮುದ್ರಿತರೂಪದಲ್ಲಿದ್ದ ಬಿ.ಎಲ್.ರೈಸ್ ಅವರ ಸಂಪಾದಕತ್ವದಲ್ಲಿ ಪ್ರಕಟಗೊಂಡ ಕರ್ನಾಟಕದ ದಕ್ಷಿಣ ಭಾಗದ ಶಾಸನ ಸಂಪುಟಗಳ ಹಾಳೆಗಳನ್ನು ಭಾರತೀಯ ಇತಿಹಾಸ ಅನುಸಂಧಾನ ಪರಿಷತ್ತು ಸ್ಕ್ಯಾನ್ ಮಾಡುವ ಮೂಲಕ ಹೀಗೆ ಅಂಕೀಕರಿಸಿದೆ. ಇಂತಹ ಪ್ರಯತ್ನಗಳು ಕೈಬರಹದ ದಾಖಲೆಗಳಿಗೂ ಸಾಧ್ಯ. ಆದರೆ ಕೈಬರಹದ ದಾಖಲೆಗಳನ್ನು ಚಿತ್ರಗಳನ್ನಾಗಿ ಮಾಡದೆ. ಪಠ್ಯಗಳನ್ನಾಗಿ ಬದಲಿಸಲು ಬೇರೆಯೇ ತಂತ್ರಜ್ಞಾನಬೇಕು. ಆಪ್ಟಿಕಲ್ ಕ್ಯಾರೆಕ್ಟರ್ ರೆಕಗ್ನಿಷನ್ ಎಂದು ಕರೆಯಲಾಗುವ ಈ ತಂತ್ರಜ್ಞಾನ ಇಂಗ್ಲಿಶಿನಂತಹ ಭಾಷೆಗಳಿಗೆ ಲಭ್ಯವಿದೆ. ಕನ್ನಡದ ಮಟ್ಟಿಗಂತೂ ತೀರಾ ಪ್ರಾಥಮಿಕ ಹಂತದ ಕೆಲವು ಪ್ರಯತ್ನಗಳನ್ನು ಹೊರತುಪಡಿಸಿದರೆ ಈ ತಾಂತ್ರಿಕ ಸೌಲಭ್ಯ ಇನ್ನೂ ದುರ್ಲಭವಾಗಿಯೇ ಉಳಿದಿದೆ. ಇಂತಹ ತಾಂತ್ರಿಕತೆ ಕೂಡಾ ನಾವು ಬರೆಯುವ ವಿಧಾನವನ್ನು ಮತ್ತು ಹಾಗೆ ಬರೆದದ್ದು ಗಣಕದ ನೆನಪಿನಲ್ಲಿ ಸಂಗ್ರಹವಾಗುವ ಬಗೆಯನ್ನು ಈಗಿರುವ ಚೌಕಟ್ಟಿಗಿಂತ ಬೇರೆ ರೀತಿಯಲ್ಲಿ ರೂಪಿಸಬಲ್ಲುದು. ಬರಲಿರುವ ದಶಕಗಳಲ್ಲಿ ಕನ್ನಡ ಬರವಣಿಗೆ ಈ ತಂತ್ರಜ್ಞಾನದ ಪ್ರಭಾವಕ್ಕೆ ಒಳಗಾಗಲಿದೆ.

ಈ ಮೊದಲು ಬೆರಳಚ್ಚು ಯಂತ್ರದ ಮಾತು ಬಂದಾಗ ಕೈಬರಹದ ದಾಖಲೆಯೊಂದು ಈ ಯಂತ್ರದಲ್ಲಿ ಪ್ರಮಾಣ ರೂಪಕ್ಕೆ ಪರಿವರ್ತನೆಯಾಗುತ್ತದೆ ಎಂಬುದನ್ನು ನಾವು ಗಮನಿಸಿದೆವು. ಅಂದರೆ ಬೆರಳಚ್ಚು ಯಂತ್ರ ನಮಗೆ ಒದಗಿರುವ ದಾಖಲೆ. ಮೂಲವಾದ ಒಂದು ಕೈಬರಹದ ಪ್ರತಿ ಇರುತ್ತದೆ. ಅಂದರೆ ಕೈಬರಹದ ದಾಖಲೆ ಒಬ್ಬರಿಂದ ಸಿದ್ಧಗೊಂಡರೆ ಪ್ರಮಾಣಿತ ರೂಪದ ದಾಖಲೆ ಮತ್ತೊಬ್ಬರಿಂದ ಸಿದ್ಧವಾಗುತ್ತದೆ. ಈ ಮೂಲ ಕೈಬರಹದ ಪ್ರತಿಯನ್ನು ಸಿದ್ಧಪಡಿಸುವ ಹಂತವನ್ನು ಕೈಬಿಟ್ಟು ನೇರವಾಗಿ ಬೆರಳಚ್ಚು ಯಂತ್ರದಲ್ಲೇ ದಾಖಲೆ ಸಿದ್ಧಪಡಿಸುವ ಸಾಧ್ಯತೆಯು ಇತ್ತು. ಆದರೆ ಕನ್ನಡದ ಸಂದರ್ಭದಲ್ಲಿ ಈ ಸಾಧ್ಯತೆಯ ಬಳಕೆ ಹೆಚ್ಚಾಗಿ ಆಗಲಿಲ್ಲ. ಇದಕ್ಕೆ ಕೆಲವು ಕಾರಣಗಳಿವೆ. ಮೊದಲಿಗೆ ಇಂತಹ ಯಂತ್ರಗಳು ವ್ಯಾಪಕವಾಗಿ ಲಭ್ಯವಿರಲಿಲ್ಲ. ಬರೆಯುವವರಿಗೆ ಅವು ದುಬಾರಿ ಎನ್ನಿಸಿದವು. ಅಲ್ಲದೆ ಹೆಚ್ಚು ಕಾಲಾವಧಿಯಲ್ಲಿ ಈ ಯಂತ್ರಗಳು ಉಳಿಯಲಿಲ್ಲ. ಆದರೆ ಈಗ ಗಣಕ ಹೆಚ್ಚು ವ್ಯಾಪಕವಾಗಿ ಲಭ್ಯವಾಗುತ್ತಿದೆ. ಅವುಗಳನ್ನು ಬಳಸುವವರು ಕೂಡ ಹೆಚ್ಚುತ್ತಿದ್ದಾರೆ. ಇವರಲ್ಲಿ ಹಲವರು ತಾವು ರೂಪಿಸಬೇಕಾದ ಬರೆಹ ದಾಖಲೆಯನ್ನು ಮೊದಲು ಕೈಬರಹದಲ್ಲಿ ಸಿದ್ಧಪಡಿಸಿಕೊಂಡು ಅನಂತರ ಗಣಕಕ್ಕೆ ಹಾಕುವ ವಿಧಾನವನ್ನು ಕೈಬಿಟ್ಟಿದ್ದಾರೆ. ರಾಜ್ಯಮಟ್ಟದ ಪತ್ರಿಕೆಗಳ ವರದಿಗಾರರು ಈಗ ವರದಿಗಳನ್ನು ತಮ್ಮ ಕೈಯಿಂದ ಬರೆದು ರವಾನಿಸುತ್ತಿಲ್ಲ. ಅವುಗಳನ್ನು ನೇರವಾಗಿ ಗಣಕದಲ್ಲೇ ಸಿದ್ಧಪಡಿಸುತ್ತಿದ್ದಾರೆ. ಅಷ್ಟಿಷ್ಟು ಬದಲಾವಣೆಗಳೊಂದಿಗೆ ಅವು ಮುದ್ರಿತವಾಗುತ್ತವೆ. ಕೈಬರೆಹದ ಹಂತ ತೊರೆದು ಹೋಗಲಿರುವ ಈ ಪ್ರಕ್ರಿಯೆ ಕನ್ನಡ ಬರವಣಿಗೆಯ ಮೇಲೆ ಯಾವ ಪರಿಣಾಮವನ್ನು ಬೀರಿದೆ ಎಂಬುದು ಕುತೂಹಲದ ವಿಷಯ.

ಕೈಬರೆಹದಲ್ಲಿ ಬರವಣಿಗೆ ಮಾಡುವಾಗ ನಮ್ಮ ಆಲೋಚನಾ ಕ್ರಮ ಪ್ರವಹಿಸುವ ವಿಧಾನ ಎಳವೆಯಿಂದಲೇ ರೂಪಗೊಂಡಿರುತ್ತದೆ. ವಿಷಯವನ್ನು ವಾಕ್ಯಗಳಲ್ಲಿ ಅಳವಡಿಸುವಾಗ ಒಂದು ನಿಗದಿತ ಮಾದರಿಯನ್ನು ರೂಪಿಸಿಕೊಂಡಿರುತ್ತೇವೆ. ಬರೆಹದಲ್ಲಿ ವಿಚಾರಗಳ ಪ್ರವಹಿಸುವಿಕೆ ತರ್ಕಬದ್ಧವಾಗಿ ಮತ್ತು ಓದುಗರ ಗ್ರಹಿಕೆಗೆ ಅನುಕೂಲಕರವಾಗಿ ಇರಬೇಕೆಂಬ ಉದ್ದೇಶ ಮುಖ್ಯವಾಗಿರುತ್ತದೆ. ಸಾಧ್ಯವಿದ್ದಷ್ಟೂ ಈ ಎಲ್ಲಾ ಉದ್ದೇಶಗಳೂ ಒಂದೇ ಬಾರಿ ಅಂದರೆ ಒಂದೇ ಬರೆಹದಲ್ಲಿರೆ ಸಾಧಿತವಾಗಬೇಕೆಂಬ ಅಪೇಕ್ಷೆ ಇರುತ್ತದೆ. ಹೆಚ್ಚೆಂದರೆ ಒಂದೆರಡು ಬಾರಿ ಇಡೀ ಬರವಣಿಗೆಯನ್ನು ತಿದ್ದಿ ಬರೆಯಲು ಸಿದ್ಧರಿರುತ್ತೇವೆ. ಇದು ಅಪಾರ ಶ್ರಮ ಮತ್ತು ಸಮಯವನ್ನು ಕೋರುತ್ತದೆ. ಆದರೆ ಗಣಕಕ್ಕೆ ನೇರವಾಗಿ ಬರವಣಿಗೆಯನ್ನು ಅಳವಡಿಸುವಾಗ ಈ ಇಕ್ಕಟ್ಟು ಇರುವುದಿಲ್ಲ. ಎಲ್ಲವನ್ನೂ ತಿದ್ದಿಬರೆಯಬೇಕೆಂಬ ಇಚ್ಚೆ ಇದ್ದರೆ ಅದು ಇಲ್ಲಿ ಸುಲಭ. ವಿಚಾರಗಳನ್ನು ನಾವು ಬಯಸಿದ ರೀತಿಯಲ್ಲಿ ಮರಳಿ ಜೋಡಿಸಬಹುದು. ಆದ್ದರಿಂದ ಬರೆಯುವಾಗ ಅಂದರೆ ಗಣಕಕ್ಕೆ ನಮ್ಮ ವಾಕ್ಯಗಳನ್ನು ಕೂಡಿಸುವಾಗ ಹೆಚ್ಚು ನಿರಾಳವಾಗಿರುತ್ತೇವೆ. ನಮ್ಮ ಯೋಚಿಸುವ ಸಾಮರ್ಥ್ಯ ಹೆಚ್ಚು ಒತ್ತಡವಿಲ್ಲದೆ ಕಾರ್ಯಪ್ರವೃತ್ತವಾಗುತ್ತದೆ. ಇದು ಭಾಷೆಯ ರಚನೆಯ ಮೇಲೂ ಪರಿಣಾಮ ಬೀರುವುದು ಸಹಜ. ಕನ್ನಡದ ರಚನೆಯ ಮೇಲೆ ಇದರ ಪರಿಣಾಮಗಳೇನಾಗಿವೆ ಎಂಬುದನ್ನು ಅಧ್ಯಯನ ಮಾಡಲು ಇದು ಸೂಕ್ತ ಸಮಯವಾಗಿದೆ. ಏಕೆಂದರೆ ಬರಲಿರುವ ದಿನಗಳಲ್ಲಿ ಕನ್ನಡ ಬರವಣಿಗೆ ಕೈಬರೆಹದ ಹಂತವನ್ನು ಕ್ರಮಕ್ರಮವಾಗಿ ಕಡಿಮೆ ಮಾಡಿಕೊಳ್ಳಲಿದೆ.

ಅಂತರ್‌ಜಾಲದ ಮಾಧ್ಯಮದಲ್ಲಿ ಹೊಸದಾಗಿ ರೂಪಗೊಂಡಿರುವ ಸಂವಹನ ಸಾಧ್ಯತೆಯನ್ನು ಜಾಗತಿಕವಾಗಿ ಚಾಟಿಂಗ್ ಎನ್ನುತ್ತಾರೆ. ದೇಶಸ್ಥವಾಗಿ ದೂರದಲ್ಲಿರುವ ಅಥವಾ ದೂರದಲ್ಲಿದ್ದೇವೆಂದು ತಿಳಿದಿರುವ ಇಬ್ಬರು ತಮ್ಮ ತಮ್ಮ ನಡುವೆ ನಡೆಸುವ ಸಂಭಾಷಣೆಯೇ ಚಾಟಿಂಗ್. ಇದರಲ್ಲಿ ಯಾವ ವಿಷಯವನ್ನು ಕುರಿತು ಮಾತಾಡಲಾಗುತ್ತದೆ ಎಂಬುದು ನಮಗೆ ಮುಖ್ಯವಲ್ಲ. ಆದರೆ ಇದರ ತಾಂತ್ರಿಕ ನೆಲೆಗಳು ಭಾಷೆಯ ಮೇಲೆ ಬೀರುತ್ತಿರುವ ಪರಿಣಾಮಗಳು ಮಾತ್ರ ನಮಗಿಲ್ಲಿ ಮುಖ್ಯ. ಈ ಬಗೆಯ ಸಂವಹನವನ್ನು ಗಣಕದ ನೆರವಿನ ಸಂವಹನ (ಕಂಪ್ಯೂಟರ್ ಮೀಡಿಯೇಟೆಡ್ ಕಮ್ಯೂನಿಕೇಷನ್) ಎನ್ನುತ್ತಾರೆ. ಈ ಸಂವಹನವು ಭಾಷೆಯ ಮೇಲೆ ಬೀರುವ ಪರಿಣಾಮಗಳನ್ನು ಕುರಿತು ಡೇವಿಡ್ ಕ್ರಿಸ್ಟಲ್ ತನ್ನ 'ಲಾಂಗ್ವೇಜ್ ಆಂಡ್ ಇಂಟರ್‌ನೆಟ್' ಎಂಬ ಕೃತಿಯಲ್ಲಿ ವಿವರಿಸುತ್ತಾನೆ. ಆತನ ಉದಾಹರಣೆಗಳು ಇಂಗ್ಲಿಶ್ ಭಾಷೆಗೆ ಸೇರಿವೆ. ಆದರೆ ಯಾವುದೇ ಭಾಷೆಗೆ ಅನ್ವಯವಾಗುವ ಕೆಲವು ಸಂಗತಿಗಳು ಅಲ್ಲಿವೆ. ಹೀಗಾಗಿ ಆ ಕುರಿತು ಕೆಲವು ಸಂಗತಿಗಳನ್ನು ನಾವಿಲ್ಲಿ ಗಮನಿಸುವುದು ಅಗತ್ಯ.

ಚಾಟಿಂಗ್‌ನಲ್ಲಿ ಕನ್ನಡ ಬಲ್ಲ ಇಬ್ಬರು ಸಂವಾದಕ್ಕೆ ತೊಡಗಿದ್ದಾರೆ ಎಂದು ಕೊಳ್ಳೋಣ. ಈಗಿರುವಂತೆ ಅವರು ತಮ್ಮ ಮಾತಿನ ಮಾಧ್ಯಮವಾಗಿ ಕನ್ನಡವನ್ನು ಬಳಸಲು ಇಚ್ಚಿಸಿದರೆ ಬಹುಮಟ್ಟಿಗೆ ಅವರ ಆಯ್ಕೆ ರೋಮನ್ ಲಿಪಿಯಾಗಿರುತ್ತದೆ. ಲಿಪ್ಯಂತರಕ್ಕಾಗಿ ತಮ್ಮದೇ ಆದ ವ್ಯವಸ್ಥೆಯೊಂದನ್ನು ರೂಪಿಸಿ ಬಳಸುತ್ತಾರೆ. ಈ

ಮಾತು ಇಂಗ್ಲಿಶ್ ಹೊರತುಪಡಿಸಿದ ಎಲ್ಲಾ ಭಾಷೆಗಳಿಗೂ ನಿಜ. ಅಂತರ್‌ಜಾಲದಲ್ಲಿ ಇರುವ ಬ್ಲಾಗ್ ತಾಣಗಳಿಗೆ ಹೋದರೆ ಅಲ್ಲಿ ಬೇರೆ ಬೇರೆ ಭಾಷೆಗಳ ಜನರು ರೋಮನ್ ಲಿಪಿಯನ್ನು ಬಳಸುತ್ತಿರುವುದನ್ನು ಗಮನಿಸಬಹುದು. ಹೀಗೆ ಕನ್ನಡಿಗರು ಆ ಸಂದರ್ಭದ ಒತ್ತಡದಿಂದಾಗಿ ಕನ್ನಡ ಲಿಪಿಯ ಬದಲು ರೋಮನ್ ಲಿಪಿಯನ್ನೇ ಆಯ್ದುಕೊಳ್ಳುತ್ತಾರೆ.

ನಾವು ಸಂಭಾಷಣೆ ಎಂಬ ಮಾತನ್ನು ಬಳಸಿದೆವು. ಎಂದರೆ ಇಲ್ಲಿ ಭಾಷೆ ಮಾತಿನ ರೂಪದಲ್ಲಿ ಬಳಕೆಯಾಗುತ್ತದೆ ಎಂದರ್ಥ. ಆದರೆ ವಾಸ್ತವವಾಗಿ ಚಾಟಿಂಗ್‌ನಲ್ಲಿ ಯಾರೂ ಮಾತಾಡುತ್ತಿರುವುದಿಲ್ಲ. ಒಬ್ಬರ ಧ್ವನಿ ಇನ್ನೊಬ್ಬರಿಗೆ ಕೇಳಿಸುವುದಿಲ್ಲ. ಅದಕ್ಕೆ ದೂರ ಕಾರಣವಲ್ಲ. ಅವರು ಮಾತಾಡುವ ಬದಲು ಬರೆಯುತ್ತಿರುತ್ತಾರೆ. ನಾವು ಈವರೆಗೆ ಭಾಷೆಯ ಅವಿಷ್ಕಾರಕ್ಕೆ ಎರಡೇ ಸಾಧ್ಯತೆಗಳನ್ನು ಕಲ್ಪಿಸಿಕೊಂಡಿದ್ದೇವೆ. ಒಂದು ಮಾತು, ಇನ್ನೊಂದು ಬರಹ. ಇವೆರಡಕ್ಕೂ ನಿರ್ದಿಷ್ಟ ಲಕ್ಷಣಗಳಿವೆ. ಅದರಲ್ಲೂ ಸಂಭಾಷಣೆಯಲ್ಲಿ ತೊಡಗಿದಾಗ ಬಳಕೆಯಾಗುವ ಮಾತಿಗೆ ಇನ್ನಷ್ಟು ಖಚಿತವಾದ ರೂಪವಿದೆ. ಮುಖ್ಯವಾಗಿ ನಾವು ಮಾತಾಡುವಾಗ ನಮ್ಮ ಮಾತು ಅದನ್ನು ಕೇಳಿಸಿಕೊಂಡವರ ಸಾಮಾಜಿಕ ಹಿನ್ನೆಲೆ ಮತ್ತು ಸಂದರ್ಭದ ಸ್ವರೂಪಗಳನ್ನು ಅವಲಂಬಿಸಿರುತ್ತದೆ. ಕೇಳುವವರ ಮಾತಿಗೆ ಪ್ರತಿಕ್ರಿಯೆಯಾಗಿ ನಮ್ಮ ಮಾತು ಆಕಾರ ತಳೆಯುತ್ತದೆ. ಒಂದು ರೀತಿಯ ಕೊಳುಕೊಡೆಗಳು ಇಬ್ಬರ ನಡುವೆಯೂ ರೇಖಾತ್ಮಕವಾಗಿ ಚಲಿಸುತ್ತಿರಬೇಕು. ಹೀಗೆಯೇ ಬರೆಹಕ್ಕೂ ಗೊತ್ತಾದ ಲಕ್ಷಣಗಳಿವೆ. ಬರೆಹವು ಬರೆದ ಮೇಲೆ ಓದುಗರಿಗೆ ಸಿಗುವಂಥದ್ದು. ಅಲ್ಲದೆ ಅದು ಹೆಚ್ಚು ಕಾಲ ತನ್ನ ಅಸ್ತಿತ್ವವನ್ನು ಕಾಯ್ದುಕೊಳ್ಳುತ್ತದೆ. ಚಾಟಿಂಗ್‌ನಲ್ಲಿ ಇರುವುದು ಮಾತೂ ಅಲ್ಲ ಬರಹವೂ ಅಲ್ಲ. ನಾವು ಮಾತಾಡುವಾಗ ಅನುಸರಿಸಬೇಕಾದ ನಿಯಮಗಳು ಇಲ್ಲಿ ಉಲ್ಲಂಘನೆಯಾಗುತ್ತವೆ. ಎದುರುಗಡೆ ಇನ್ನೊಂದು ತುದಿಯಲ್ಲಿ ಇರುವವರ ಸಾಮಾಜಿಕ ಹಿನ್ನೆಲೆ ಮತ್ತು ಸಂದರ್ಭದ ಉದ್ದೇಶ ನಮಗೆ ಗೊತ್ತಿರುವುದಿಲ್ಲ. ಗೊತ್ತಾಗುವುದೂ ಇಲ್ಲ. ಇಲ್ಲವೇ ನಮಗೆ ಗೊತ್ತಿರುವುದು ಸತ್ಯವೇ ಆಗಿರಬೇಕಾಗಿಲ್ಲ. ಆದರೂ ಚಾಟಿಂಗ್‌ನಲ್ಲಿ ನಮ್ಮ ಮಾತುಕತೆ ನಡೆಯುತ್ತದೆ. ನಮ್ಮ ಬರಹವೂ ಎದುರು ಕುಳಿತವರ ಹಿಂದಿನ ಮಾತನ್ನು ಅವಲಂಬಿಸಿ ರೂಪುಗೊಂಡಿರುವುದಿಲ್ಲ. ಚಾಟಿಂಗ್ ಸಂದರ್ಭದ ಟ್ರ್ಯಾನ್ಸ್‌ಸ್ಕ್ರಿಪ್ಟ್‌ಗಳನ್ನು ನಾವು ಪರಿಶೀಲಿಸಿದರೆ ಈ ಅಂಶ ಗೊತ್ತಾಗುತ್ತದೆ. ಒಂದು ತುದಿಯಲ್ಲಿರುವವರು ಕೇಳಿದ ಪ್ರಶ್ನೆಗೆ ಇನ್ನೊಂದು ತುದಿಯಲ್ಲಿರುವವರು ಉತ್ತರಿಸಲು ತಡಮಾಡಬಹುದು. ಅದಕ್ಕೆ ಉತ್ತರ ಬರಲೆಂದೇ ಈ ತುದಿಯಲ್ಲಿರುವವರು ಕಾಯ್ದು ಕೂರುವುದಿಲ್ಲ. ಬೇರೆ ಏನನ್ನೋ ಬರೆಯುತ್ತಾರೆ. ಯಾವಾಗಲೋ ಕೇಳಿದ ಪ್ರಶ್ನೆಗೆ ಮತ್ತೆ ಯಾವಾಗಲೋ ಉತ್ತರ ಬರುತ್ತದೆ. ಅಥವಾ ಬರದೆಯೂ ಇರಬಹುದು. ಹಾಗೆಂದು ಸಂಭಾಷಣೆ ಕಡಿದು ಹೋಗುವುದಿಲ್ಲ. ಇದು ಅಕ್ಷರಗಳಲ್ಲಿ ರೂಪಗೊಳ್ಳುತ್ತಿದ್ದರೂ ಇದಕ್ಕೆ ಬರೆಹದ ಲಕ್ಷಣವೂ ಇಲ್ಲ. ಇದು ಭಾಷೆಯ ಅಭಿವ್ಯಕ್ತಿಯ ಮತ್ತೊಂದು ಹೊಸ ರೂಪವೆಂದು ಕ್ರಿಸ್ಟಲ್ ಭಾವಿಸುತ್ತಾನೆ. ನಾವು ಈ ಮಾದರಿಯನ್ನು **ಬರೆಮಾತು** ಎಂದು ಕರೆಯಬಹುದಾಗಿದೆ. ಕನ್ನಡ ಭಾಷೆಯು ಚಾಟಿಂಗ್‌ಗೆ ಅಲ್ಲಲ್ಲಿ ಬಳಕೆಯಾಗುತ್ತಿರುವ ನಿದರ್ಶನಗಳಿವೆ. ಬಹುಮಟ್ಟಿಗೆ ಇವು ದ್ವಿಭಾಷಿಕ ಸಂವಹನಗಳು. ಇಂಗ್ಲಿಶ್ ಮತ್ತು

ಕನ್ನಡಗಳನ್ನು ಅನುಕೂಲಕ್ಕೆ ತಕ್ಕಂತೆ ಜೋಡಿಸಿಕೊಂಡು ಮಾತಿನ ದಾರಿಗಳನ್ನು ತೆರೆಯಲಾಗುತ್ತದೆ. ಕನ್ನಡದ ಮೇಲೆ ಈ ಹೊಸ ತಾಂತ್ರಿಕತೆ ಯಾವ ರಾಚನಿಕ ಪರಿಣಾಮ ಬೀರುತ್ತದೆ ಎಂಬುದು ತಿಳಿಯದು. ಮುಖ್ಯವಾಗಿ ಅತಿ ಚಿಕ್ಕ ವಾಕ್ಯಗಳು, ಆಖ್ಯಾತ ಪ್ರತ್ಯಯಗಳ ಬಳಕೆ ಕಡಿಮೆ ಇರುವ ವಾಕ್ಯ ರಚನೆಗಳು, ಮತ್ತು ಸಂಕ್ಷೇಪಗಳು– ಇವು ಈ ಹೊಸ ಭಾಷಾಪ್ರಭೇದದ ಲಕ್ಷಣಗಳಾಗಲಿವೆ. ಸಂಕ್ಷೇಪಗಳು ಮಾತಿನಲ್ಲಿ ಬಳಕೆಯಾಗುವುದಿಲ್ಲ. ಅಥವಾ ಬಳಸಿದರೂ ಕಡಿಮೆ ಪ್ರಮಾಣದಲ್ಲಿ ನಿಯಮಬದ್ಧವಾಗಿ ಉಪಯೋಗವಾಗಿರುತ್ತವೆ. ಆದರೆ ಬರೆಹಕ್ಕೆ ಈ ಇಕ್ಕಟ್ಟು ಇಲ್ಲ.ಉದಾ.ಗೆ ಬರೆಹದಲ್ಲಿ 'ರೂ.' ಎಂದು ಬರೆಯಬಹುದು. ಆದರೆ ಬರೆದಂತೆ ಉಚ್ಚರಿಸುವುದು ಅಪೇಕ್ಷಣೀಯವಲ್ಲ. 'ರೂಪಾಯಿ' ಎಂದೇ ಉಚ್ಚರಿಸಬೇಕು. ನಾವು ಗಮನಿಸುತ್ತಿರುವ ಬರೆಮಾತಿನಲ್ಲಿ ಕನ್ನಡ ಭಾಷೆ ಯಾವ ಯಾವ ರೀತಿ ಹ್ರಸ್ವೀಕರಣ ಮತ್ತು ಸಂಕ್ಷೇಪೀಕರಣಗಳಿಗೆ ಒಳಗಾಗುತ್ತದೆ ಎಂಬುದನ್ನು ಕಾಯ್ದು ನೋಡಬೇಕು.

ತಂತ್ರಜ್ಞಾನವು, ಮುದ್ರಣದಲ್ಲಿ ಹೊಸ ಅಧ್ಯಾಯವನ್ನೇ ತೆರೆದಿದೆ; ಶ್ರಮ, ಸಮಯಗಳು ಉಳಿತಾಯವಾಗಿವೆ ಎಂದೆನೋ ಹೇಳಲಾಗುತ್ತಿದೆ. ಆದರೆ ಇಲ್ಲಿ ಹೊಸ ಸಮಸ್ಯೆಗಳು ಭಾಷೆಯ ಹಂತದಲ್ಲಿ ತಲೆ ಎತ್ತುತ್ತಿವೆ. ಅಂತಹ ಕೆಲವನ್ನು ಮುಂದೆ ಗಮನಿಸಬಹುದು. ಒಂದು: ಲಿಪಿಗಳು ಹಲವಾರಿವೆ. ಕಳೆದ ಐದಾರು ವರ್ಷಗಳಲ್ಲಿ ನಿಜವಾಗಿಯೂ ಲಿಪಿಗಳ ಸಂಖ್ಯೆ ನೂರನ್ನು ದಾಟಿದೆ. ಇಲ್ಲಿ ಲಿಪಿ ಎಂದರೆ ಲಿಪಿವಿನ್ಯಾಸ ಎಂದಷ್ಟೇ ತಿಳಿಯಬೇಕು. ಮುದ್ರಣದ ಸಂದರ್ಭದಲ್ಲಿ ಇಷ್ಟೊಂದು ಲಿಪಿಸಾಧ್ಯತೆಗಳು ಇರಲಿಲ್ಲ. ಅವುಗಳಲ್ಲಿ ಅಕ್ಷರವಿನ್ಯಾಸಕ್ಕೆ ಒಂದು ಪ್ರಮಾಣಬದ್ಧತೆ ಇಲ್ಲ ಎಂಬುದು ತಜ್ಞ ಮುದ್ರಕರ ಅಭಿಪ್ರಾಯ. ಅದರಲ್ಲೂ ದೀರ್ಘ ಪಠ್ಯಗಳನ್ನು ಮುದ್ರಿಸಲು ಬಳಸುವ ಗಣಕಲಿಪಿಗಳು ಗಾತ್ರದಲ್ಲಾಗಲೀ ವಿನ್ಯಾಸದಲ್ಲಾಗಲೀ ಪ್ರಮಾಣಬದ್ಧತೆಯನ್ನು ಕಾಯ್ದುಕೊಂಡಿಲ್ಲ ಅಥವಾ ಈ ಲಕ್ಷಣಗಳಿರುವ ಲಿಪಿಗಳು ಹೆಚ್ಚಿಲ್ಲ. ಇದು ಗಣಕದ ನೆರವಿನ ಕನ್ನಡ ಮುದ್ರಣವನ್ನು ಅಂದಗೇಡಿಯನ್ನಾಗಿಸಿದೆ. ಶ್ರಮ, ಸಮಯಗಳು ಉಳಿತಾಯವಾಗಲು ಅದಕ್ಕಾಗಿ ಗುಣವತ್ತತೆಯನ್ನು ಬಿಟ್ಟುಕೊಡಬೇಕಾಗಿ ಬಂದಿದೆ. ಇದು ಕಳೆದ ಏಳೆಂಟು ವರ್ಷಗಳಿಂದ ಮುದ್ರಕರನ್ನು ಕಾಡುತ್ತಿರುವ ಸಮಸ್ಯೆ. ದೊಡ್ಡ ಪ್ರಮಾಣದ ಮುದ್ರಣವನ್ನು ದಿನವೂ ಮಾಡುತ್ತಿರುವ ಕನ್ನಡದ ದಿನಪತ್ರಿಕೆಗಳು ತಮ್ಮ ತಮ್ಮ ಲಿಪಿವಿನ್ಯಾಸಗಳನ್ನು ಮಾಡಿಕೊಂಡಿವೆ. ತ್ವರಿತಗತಿಯಲ್ಲಿ ಮುದ್ರಣ ಸಾಧ್ಯವಾಗುತ್ತಿದೆ ಎಂಬುದನ್ನು ಬಿಟ್ಟರೆ ಲಿಪಿವಿನ್ಯಾಸ ಇನ್ನಷ್ಟು ಓದುಗಸ್ನೇಹಿ ಆಗಬೇಕಾಗಿದೆ. ವಿವಿಧ ಗಾತ್ರದ ಲಿಪಿಗಳನ್ನು ಬಳಸುವಾಗಲೂ ಕೂಡ ಪ್ರಮಾಣೀಕರಣದ ಕೊರತೆ ಕಾಣುತ್ತಿದೆ.

ತಂತ್ರಜ್ಞಾನದ ಮುಂದಿನ ಅವಿಷ್ಕಾರಗಳು ಕನ್ನಡ ಭಾಷೆಗೆ ಹೇಗೆ ನೆರವಾಗ ಬಹುದು ಎಂಬುದಕ್ಕೆ ಕೆಲವು ನಿದರ್ಶನಗಳನ್ನು ಮುಂದೆ ಚರ್ಚಿಸಲಾಗುತ್ತದೆ. ಈಗ ಗಣಕದಲ್ಲಿ ಬರೆಯುತ್ತಿರುವವರು ಭಾಷೆಯ ರಚನೆಯ ಬಗೆಗೆ ತಜ್ಞರಾದವರಲ್ಲ. ಬರೆಹಗಾರರು ಗಣಕಗಳನ್ನು ಬಳಸುತ್ತಿರುವ ಬಹುಕಡಿಮೆ ನಿದರ್ಶನಗಳು ಕನ್ನಡದಲ್ಲಿವೆ. ಹೀಗಾಗಿ ಬರೆದದ್ದನ್ನು ಗಣಕಕ್ಕೆ ಕೂಡಿಸುವ ದಾಖಲುದಾರರು ತಪ್ಪುಗಳನ್ನು ಮಾಡುವುದು

ಸಹಜ. ಇಂತಹ ತಪ್ಪುಗಳನ್ನು ಸರಿಪಡಿಸಲು ಕರಡು ತಿದ್ದುವ ಇನ್ನೊಂದು ಹಂತ ಹಿಂದಿನಂತೆಯೇ ಈಗಲೂ ಜಾರಿಯಲ್ಲಿದೆ. ಇಂಗ್ಲಿಶಿನಂತಹ ಭಾಷೆಗಳಿಗೆ ಬರೆಯುತ್ತಿರುವಾಗಲೇ ಕಾಗುಣಿತ ದೋಷಗಳನ್ನು ಎತ್ತಿ ತೋರಿಸುವ ವ್ಯವಸ್ಥೆ ಲಭ್ಯವಿದೆ. ಸಾಮಾನ್ಯವಾಗಿ ಸ್ಪೆಲ್‌ಚೆಕ್ ಎಂದು ಕರೆಯಲಾಗುವ ಈ ವ್ಯವಸ್ಥೆ ಮತ್ತೂ ಕೆಲವು ಭಾಷೆಗಳಿಗೆ ಲಭ್ಯವಿದೆ. ಆದರೆ ಕನ್ನಡಕ್ಕೆ ಇಂಥಾ ವ್ಯವಸ್ಥೆಯೊಂದನ್ನು ರೂಪಿಸಲು ಅಲ್ಲಲ್ಲಿ ಪ್ರಯತ್ನಗಳು ನಡೆದಿದ್ದರೂ ಅವು ಪ್ರಮಾಣೀಕರಣಗೊಂಡು ಅಧಿಕೃತವಾಗಿ ಬಳಕೆಗೆ ಲಭ್ಯವಿಲ್ಲ. ಇದಕ್ಕೆ ಮುಖ್ಯ ಕಾರಣ ಈ ವ್ಯವಸ್ಥೆಯ ರೂಪಣದಲ್ಲಿ ಭಾಷಾತಜ್ಞರ ಭಾಗವಹಿಸುವಿಕೆ ಕಡಿಮೆ. ಭಾಗವಹಿಸುವ ಜನರು ಕೂಡ ಆಧುನಿಕ ಕನ್ನಡದ ರಚನೆಯನ್ನು ಅಭ್ಯಾಸಮಾಡಿದವರಲ್ಲ. ಇದರಿಂದಾಗಿ ಸಮಸ್ಯೆಗಳನ್ನು ವಿಶದೀಕರಿಸಿಕೊಳ್ಳುವ ಮತ್ತು ಪರಿಹಾರಗಳನ್ನು ಕಂಡುಕೊಳ್ಳುವ ಸಾಧ್ಯತೆಗಳು ಕಡಿಮೆಯಾಗಿವೆ. ಮುಂದಿನ ದಿನಗಳಲ್ಲಿ ಈ ಸಮಸ್ಯೆ ಪರಿಹಾರವಾಗಬಹುದೆಂದು ನಾವು ಆಶಿಸಬಹುದು.

ಭಾಷೆ ಮತ್ತು ತಂತ್ರಜ್ಞಾನದ ಸಂಬಂಧಗಳ ಒಂದು ನೆಲೆಯನ್ನು ನಾವು ಗಮನಿಸಿದ್ದೇವೆ. ಇದಲ್ಲದೆ ಇನ್ನೂ ಹಲವು ನೆಲೆಗಳಲ್ಲಿ ತಂತ್ರಜ್ಞಾನವು ಕನ್ನಡಕ್ಕೆ ನೆರವಾಗಬಹುದಾಗಿದೆ. ಉದಾ.ಗೆ ಭಾಷೆಯ ಕಲಿಕೆಯ ವಲಯದಲ್ಲಿ ತಂತ್ರಜ್ಞಾನವು ಈಗ ಹೊಸ ಸಾಧ್ಯತೆಗಳನ್ನು ತೆರೆದಿದೆ. ವಯಸ್ಕ ಭಾಷಾಕಲಿಕೆಗೆ ಅನುಕೂಲವಾಗುವ ತಾಂತ್ರಿಕ ಅವಿಷ್ಕಾರಗಳು ಜಗತ್ತಿನ ಹಲವು ಭಾಷೆಗಳಿಗೆ ಲಭ್ಯವಿದೆ. ಮುಖ್ಯವಾಗಿ ವಯಸ್ಕ ಭಾಷಾಕಲಿಕೆಗೆ ಅಗತ್ಯವಾದ ಕೆಲವು ಶರತ್ತುಗಳನ್ನು ತಾಂತ್ರಿಕತೆಯ ನೆರವಿನಿಂದ ಈಗ ಪೂರೈಸಬಹುದಾಗಿದೆ. ಭಾಷಾ ಮಾದರಿಗಳ ಉಚ್ಚಾರಣೆಗಳ ಧ್ವನಿಲೇಖನ; ಅದನ್ನು ವ್ಯಕ್ತಿಗತವಾಗಿ ಕೇಳಿ, ಪುನರುಚ್ಚರಿಸಿ, ವಿಕಲ್ಪಗಳನ್ನು ಸರಿಪಡಿಸಿಕೊಳ್ಳಲು ಅನುಕೂಲ ಮಾಡಿಕೊಡುವ ಉಪಕರಣಗಳು; ಪಾಠ ಹೇಳುವವರ ಕನಿಷ್ಠ ಭಾಗವಹಿಸುವಿಕೆಗೆ ಕಾರಣವಾಗುವ ಹೆಚ್ಚು ಕಡಿಮೆ ಸ್ವಯಂಪೂರ್ಣವಾದ ಬೋಧನಾ ಸಾಮಗ್ರಿಯನ್ನು ದೃಕ್ ಶ್ರವಣ ರೂಪದಲ್ಲಿ ಸಿದ್ಧಪಡಿಸುವುದು– ಇವೆಲ್ಲ ಕನ್ನಡದಲ್ಲೂ ಈಗ ಸಾಧ್ಯವಾಗಿದೆ. ಭಾರತೀಯ ಭಾಷೆಗಳ ಕೇಂದ್ರ ಸಂಸ್ಥೆ ತನ್ನ ಒಂದು ಮಹತ್ವಾಕಾಂಕ್ಷಿ ಯೋಜನೆಯಲ್ಲಿ ಹೀಗೆ ಕನ್ನಡವನ್ನು ಅಂತರ್‌ಜಾಲದ ಮೂಲಕ ಕಲಿಸುವ ವ್ಯವಸ್ಥೆಯನ್ನು ಮಾಡುತ್ತಿದೆ. ಇವೆಲ್ಲವೂ ತಾಂತ್ರಿಕತೆಯ ಅವಿಷ್ಕಾರ ಭಾಷೆಯ ಅಭಿವೃದ್ಧಿಗೆ ನೆರವಾಗುವ ನೆಲೆಗಳಾಗಿವೆ.

# ಕನ್ನಡ ಭಾಷೆಯ ಅಧ್ಯಯನಗಳು

ಕನ್ನಡ ಭಾಷೆಯನ್ನು ಒಂದು ಅಧ್ಯಯನ ವಸ್ತುವಾಗಿ ಆಯ್ದುಕೊಂಡು ಹಲವಾರು ಶತಮಾನಗಳೇ ಕಳೆದಿವೆ. ಕಳೆದ ಐವತ್ತು ವರ್ಷಗಳಲ್ಲಿ ಈ ಅಧ್ಯಯನ ಪರಂಪರೆ ಹೇಗೆ ಸಾಗಿ ಬಂದಿದೆ ಎಂಬುದನ್ನು ಈ ಅಧ್ಯಾಯದಲ್ಲಿ ಪರಿಗಣಿಸಲಾಗುತ್ತದೆ.

ಕಳೆದ ಶತಮಾನದ ಆರಂಭಕಾಲದಿಂದ ಕನ್ನಡ ಭಾಷೆಯ ಪ್ರಾಚೀನತೆಯನ್ನು ಅಧ್ಯಯನ ಮಾಡುವ ಆಸಕ್ತಿ ಬೇರೂರಿದೆ. ಸ್ವಾತಂತ್ರ್ಯ ಚಳುವಳಿ ಮತ್ತು ಏಕೀಕರಣ ಚಳುವಳಿಯ ಇಂಥಾ ಒತ್ತಾಸೆಗಳು ಸಹಜವಾಗಿಯೇ ಕಂಡು ಬಂದಿದೆ. ಏಕೀಕರಣದ ಅನಂತರದಲ್ಲಿ ಹಾಗೆ ನೋಡಿದರೆ ಈ ಪ್ರಾಚೀನತೆಯ ಹುಡುಕಾಟಕ್ಕೆ ಹೆಚ್ಚಿನ ಒತ್ತಾಸೆ ಸಿಕ್ಕಿಲ್ಲ. ಆ ಹೊತ್ತಿಗೆ ಲಭ್ಯವಿದ್ದ ಆಕರ ಸಾಮಗ್ರಿ ಮತ್ತು ಅದನ್ನು ಬಳಸಿ ನಡೆಸಿದ ಸಂಶೋಧನೆಗಳ ಫಲಿತವನ್ನು ಒಪ್ಪಿಕೊಳ್ಳಲಾಗಿದೆ. ಆ ಸಾಂಸ್ಥಿಕ ನೆಲೆಯ ಯತ್ನಗಳಲ್ಲಿ ಇರಬಹುದಾದ ಪ್ರಶ್ನೆಗಳನ್ನು ಬಿಡಿಸುವ ಯತ್ನಕ್ಕೆ ಹೋಗದೆ ಅವು ಇರುವಂತೆಯೇ ಒಪ್ಪಿಕೊಳ್ಳಲಾಗಿದೆ ಅಥವಾ ನಿರ್ಲಕ್ಷಿಸಲಾಗಿದೆ. ಆದರೆ ಮೇಲಿಂದ ಮೇಲೆ ಆಗಾಗ ಕನ್ನಡ ಅಭಿಮಾನದ ಮಾತು ಬಂದಾಗ ಅದರ ಪ್ರಾಚೀನತೆಯನ್ನು ಕುರಿತು ವಿವರಗಳು ಮತ್ತೆ ಮುಂಚೂಣಿಗೆ ಬರುತ್ತವೆ. ತೀರ ಈಚೆಗೆ ತಮಿಳನ್ನು ಜೀವಂತ ಶಾಸ್ತ್ರೀಯ ಭಾಷೆಯೆಂದು ಪರಿಗಣಿಸಿದಾಗ ಕನ್ನಡದ ಪ್ರಾಚೀನತೆಯ ಬಗ್ಗೆ ಮರಳಿ ಚಿಂತನೆಗಳು ಮೊದಲಾದವು. ಈ ದಿಕ್ಕಿನಲ್ಲಿ ಹೊಸ ಆಕರಗಳನ್ನು ಪತ್ತೆ ಮಾಡುವುದು ಸಾಧ್ಯವಾಗಿಲ್ಲ. ಆದರೆ ಈವರೆಗೆ ಲಭ್ಯವಿದ್ದ ಆಕರ ಸಾಮಗ್ರಿಗಳ ನಡುವೆ ಇರುವ ಸಂಬಂಧವನ್ನು ಹೊಸ ದಿಕ್ಕಿನಲ್ಲಿ ನೋಡಿ ಪ್ರಾಚೀನತೆಯನ್ನು ಸ್ಥಾಪಿಸಲು ಯತ್ನಿಸಲಾಗಿದೆ.

ಭಾಷೆಯ ಪ್ರಾಚೀನತೆ ಯಾಕೆ ಮುಖ್ಯ? ಅದರ ಅಂತಸ್ಥ ಘನತೆಗೂ ಅದರ ಪ್ರಾಚೀನತೆಗೂ ಸಂಬಂಧ ಏನಾದರೂ ಇದೆಯೇ? ಆದರೆ ಈ ಪ್ರಾಚೀನತೆಯ ನಿರ್ಧಾರ ಮಾಡಲು ಹೊರಡುವವರು ಕೆಲವು ಲಿಪಿ ಪರಂಪರೆಯುಳ್ಳ ಭಾಷೆಗಳನ್ನು ಮಾತ್ರ ತಮ್ಮ ಅಧ್ಯಯನ ಗುರಿಗಳನ್ನಾಗಿ ಇರಿಸಿಕೊಂಡಿದ್ದಾರೆ. ಲಿಪಿ ಇಲ್ಲದ ಭಾಷೆಗಳಿಗೆ ಲಿಖಿತ ಚಾರಿತ್ರಿಕ ದಾಖಲೆಗಳು ಇರುವುದಿಲ್ಲ. ಹಾಗಾಗಿ ಆ ಭಾಷೆಗಳ ಮಟ್ಟಿಗೆ ಪ್ರಾಚೀನತೆಯ ನಿರ್ಧಾರ ಅಸಾಧ್ಯ. ಹೀಗೆ ಒಂದು ಭಾಷೆಗೆ ಪ್ರಾಚೀನತೆಯನ್ನು ನಿರ್ಧರಿಸಲು ಸಾಧ್ಯವಿಲ್ಲವೆಂದರೆ ಆ ಭಾಷೆಯು ಪ್ರಾಚೀನವಲ್ಲ ಎಂದು ವಾದಿಸಲು ಬರುತ್ತದೆ ಏನು? ಹೆಚ್ಚೆಂದರೆ ಆ ಬಗ್ಗೆ ನಮಗೇನೂ ತಿಳಿದಿಲ್ಲ ಎಂದು ಮಾತ್ರ ಹೇಳಬಹುದು. ಕನ್ನಡದ

ಪ್ರಾಚೀನತೆಯನ್ನು ಲಿಖಿತ ದಾಖಲೆಗಳಿಗೆ ಸೀಮಿತಗೊಳಿಸಿಕೊಳ್ಳುವುದರಿಂದ ಆಗುವ ಇಕ್ಕಟ್ಟನ್ನು ನಾವು ಮೇಲಿನ ಮಾತುಗಳ ಹಿನ್ನೆಲೆಯಲ್ಲಿ ಗಮನಿಸಬೇಕು.

ಪ್ರಾಚೀನತೆಯ ಕಲ್ಪನೆಯು ಚರಿತ್ರೆಯ ಕಲ್ಪನೆಯೊಡನೆ ಹೆಣೆದುಕೊಂಡಿದೆ. ಕನ್ನಡ ಭಾಷೆಯ ಚರಿತ್ರೆಯನ್ನು ಬರೆಯುವ ಇಪ್ಪತ್ತನೇ ಶತಮಾನದ ಮೊದಲ ಭಾಗದಲ್ಲೇ ಕನ್ನಡದಲ್ಲಿ ಇಂಥ ಚರಿತ್ರೆಗಳನ್ನು ಕಟ್ಟಲು ಪ್ರಾರಂಭಿಸಿದರೂ ಬಹುಮಟ್ಟಿಗೆ ಇಲ್ಲಿ ಚರಿತ್ರೆಯೆಂಬುದು ರೇಖಾತ್ಮಕ ಚಲನೆಯಲ್ಲಿರುವ ಘಟನಾವಳಿಗಳ ಜೋಡಣೆಯಾಗಿದೆ. ಹಿಂದಿನ ಒಂದು ಭಾಷಾಸ್ಥಿತಿಯು ತನ್ನ ಒಡಲಿನಿಂದ ಇನ್ನೊಂದು ಭಾಷಾರೂಪವನ್ನು ತೆರೆದಿಡುತ್ತದೆಂಬ, ಹೀಗೆ ಕಾಲಾನುಕ್ರಮಣಿಕೆಯಲ್ಲಿ ಒಂದು ಭಾಷೆಯ ಚರಿತ್ರೆ ನಿರ್ಮಾಣವಾಗುತ್ತದೆ ಎಂಬ ನಂಬಿಕೆ ಬಲವಾಗಿ ಬೇರೂರಿದೆ. ಚರಿತ್ರೆಯ ಸಾಂಪ್ರದಾಯಿಕ ದೃಷ್ಟಿಕೋನ ಕಳೆದ ಐವತ್ತು ವರ್ಷದಲ್ಲೂ ಬೇರೆ ಬೇರೆ ಪ್ರಮಾಣದಲ್ಲಿ ಇಂಥಾ ಚರಿತ್ರೆಗಳನ್ನು ನಡೆಸಿಕೊಂಡು ಬಂದಿದೆ. ಈ ನಿಟ್ಟಿನಲ್ಲಿ ಕನ್ನಡ ಭಾಷೆಯ ಅತಿ ಪ್ರಾಚೀನ ರೂಪ, ಪೂರ್ವದ ರೂಪ, ಮಧ್ಯಕಾಲೀನ ರೂಪ ಮತ್ತು ಹೊಸಗನ್ನಡ ಅಥವಾ ಆಧುನಿಕ ಕನ್ನಡ ಎಂಬ ಸರಣಿಯನ್ನೇ ಮುಂದೆ ಇಡುತ್ತಾ ಬರಲಾಗಿದೆ. ಈ ವಾದ ಅಥವಾ ನಿರ್ಣಯ ಬಹುಶೃತವಾಗಿದ್ದು ಯಾರೂ ಇದರ ವಿಶ್ವಾಸಾರ್ಹತೆಯನ್ನು ಪ್ರಶ್ನಿಸಿಲ್ಲ. ಮುಖ್ಯವಾಗಿ ಈ ವಿವರಣೆಗಳಲ್ಲಿ ಕೊರತೆ ಇರುವ ಮುಖ್ಯ ನೆಲೆ ಎಂದರೆ ಈ ಪ್ರಭೇದಗಳ ನಡುವಣ ಗೆರೆ ಎಲ್ಲಿದೆ ಎಂಬುದು. ಒಂದು ಕಾಲಘಟ್ಟದಲ್ಲಿ ಈ ಗೆರೆಯನ್ನು ಎಳೆಯುವುದು ಸಾಧ್ಯವೇ ಆಗಿಲ್ಲದಿದ್ದಲ್ಲಿ ಚರಿತ್ರೆಯ ತಾರ್ಕಿಕ ಕಲ್ಪನೆಯನ್ನೇ ಬದಲಾಯಿಸಬೇಕಲ್ಲವೆ? ಅದೂ ಅಲ್ಲದೇ ಈ ಕಾಲಾನುಕ್ರಮಣಿಯ ನಿರ್ಣಯಕ್ಕೆ ಆಯ್ದುಕೊಳ್ಳುವುದು ಲಿಖಿತ ದಾಖಲೆಗಳನ್ನು. ಈ ಲಿಖಿತ ದಾಖಲೆಗಳು ನಿರ್ದಿಷ್ಟ ಕಾಲಘಟ್ಟದಲ್ಲಿ ರೂಪಗೊಂಡಿವೆ ಎಂದು ಹೇಳಿದರೂ ಅವು ಬಳಸಿದ ಕನ್ನಡಕ್ಕೆ ಅಂಥ ಕಾಲದ ಕಟ್ಟು ಸಾಧ್ಯವಾಗುವುದಿಲ್ಲ. ಉದಾ: ಹನ್ನೆರಡು–ಹದಿಮೂರನೆಯ ಶತಮಾನಗಳಲ್ಲಿ ರಚನೆಯಾದ ದಾಖಲೆಗಳು ವಚನಗಳು. ಅದೇ ಸುಮಾರಿನಲ್ಲಿ ಕೊಂಚ ಅದರ ಅನಂತರವೂ ರಚನೆಯಾದ ಕೃತಿಗಳಲ್ಲಿ ಈ ವಚನಗಳಿಗಿಂತ ಬೇರೆಯದೇ ಆದ ಮತ್ತು ಕಾಲದ ದೃಷ್ಟಿಯಿಂದ ಇನ್ನೂ ಹಿಂದಿನದ್ದು ಎಂದು ಹೇಳಬಹುದಾದ ಕನ್ನಡ ಕಾಣಿಸುತ್ತದೆ. ಅಂದರೆ ಈ ದಾಖಲೆಗಳ ಬಳಕೆಯಿಂದ ಹೇಗೆ ಭಾಷೆಯ ಕಾಲಾನುಕ್ರಮಣಿ ಚರಿತ್ರೆಯನ್ನು ಬರೆಯುವುದು ಸಾಧ್ಯ? ಎಲ್ಲಕ್ಕಿಂತ ಮುಖ್ಯವಾಗಿ ಈ ಚರಿತ್ರೆ ರಚನೆಯ ತರ್ಕ ಮುಂದಿಡುವ ಪ್ರಶ್ನೆ ಎಂದರೆ ಇದು ಹೀಗಿದೆ ಎಂಬ ವಿವರಣೆ ಮಾತ್ರ, ಆದರೆ ಇದು ಏಕೆ ಹೀಗಿದೆ ಎಂಬ ಪ್ರಶ್ನೆ ನಮ್ಮ ಭಾಷೆಯ ಚರಿತ್ರೆಗೆ ಮುಖ್ಯವಾಗಿಯೇ ಇಲ್ಲ. ಉದಾ: ನಡುಗನ್ನಡದಲ್ಲಿ ಪದಮಧ್ಯದ ವಿಜಾತಿಯ ದ್ವಿತ್ವಾಕ್ಷರಗಳ ನಡುವೆ 'ಉ'ಕಾರವನ್ನು ಸೇರಿಸಿದರು ಎಂದು ಹೇಳಿದರೆ ಅದು ವಿವರಣೆ. ಹಾಗೆಯೇ ಹಳೆಗನ್ನಡದ ಸಬಂಧುಕ ಪದಗಳಲ್ಲಿ ಒಂದು ಲಘುವಾಯಿತು ಎಂದು ಹೇಳಿದರೆ ಅದು ವಿವರಣೆ. ಆದರೆ ಈ ಬದಲಾವಣೆಗಳು ಏಕೆ ಉಂಟಾದವು ಎಂಬ ಪ್ರಶ್ನೆಯನ್ನು ಹಾಕಿಕೊಳ್ಳುವುದಿಲ್ಲ. ಅಥವಾ ಅಂಥ ಪ್ರಶ್ನೆಯನ್ನು ಹಾಕಿಕೊಂಡರೂ ಅದಕ್ಕೆ ಭಾಷೆಯ ನೆಲೆಯ ಉತ್ತರವನ್ನು ನೀಡುವ ಬದಲು ಭಾಷೇತರವಾದ ಉತ್ತರವನ್ನು ನೀಡಿ ಸುಮ್ಮನೆ ಇರುತ್ತಾರೆ. ಉದಾ:

ಸಬಂಧುಕಗಳು ಅಬಂಧುಕಗಳಾಗಿದ್ದು ಉಚ್ಚಾರಣೆಯ ಸೌಲಭ್ಯಕ್ಕಾಗಿ ಎನ್ನುವ ವಿವರಣೆ ಭಾಷಿಕವಲ್ಲ. ಅದು ಭಾಷೇತರವಾದುದ್ದು. ಅಲ್ಲದೇ ಈ ಸೌಲಭ್ಯ ಬೇಕೆಂಬ ಬಯಕೆ ಒಂದು ಕಾಲದ ಭಾಷಿಕರಿಗೆ ಮಾತ್ರ ಏಕೆ ಬರುತ್ತದೆ? ನಮ್ಮ ಚರಿತ್ರಕಾರರು ಈ ಪ್ರಶ್ನೆಯನ್ನು ಕೂಡಾ ಹೊರಗಿಟ್ಟಿದ್ದಾರೆ. ಅಂದರೆ ಕನ್ನಡ ಭಾಷೆಯ ಚರಿತ್ರೆಯನ್ನು ರಚಿಸುವಲ್ಲಿ ನಾವು ಹೊಸ ಪ್ರಶ್ನೆಗಳನ್ನು ಎತ್ತಿಕೊಂಡಿಲ್ಲ. ಇದಕ್ಕೆ ಒಂದು ಪ್ರಮುಖ ವಿನಾಯಿತಿ ಎಂದರೆ ಡಾ. ಡಿ.ಎಂ ಶಂಕರ ಭಟ್ ಅವರ ಕನ್ನಡ ಭಾಷೆಯ ಕಲ್ಪಿತ ಚರಿತ್ರೆ.

ಡಾ ಭಟ್ ಅವರು ಮೂವತ್ತು ವರ್ಷಗಳ ಅವಧಿಯಲ್ಲಿ ಈ ನಿಟ್ಟಿನಲ್ಲಿ ತಮ್ಮ ಚಿಂತನೆಯನ್ನು ವಿಸ್ತರಿಸಿದ್ದಾರೆ. ಭಾಷೆಯ ಚರಿತ್ರೆಯನ್ನು ರಚಿಸುವಾಗ ಲಿಖಿತ ದಾಖಲೆಗಳನ್ನು ಮಾತ್ರ ಅವಲಂಬಿಸದೆ ಇಂದಿನ ಆಡುರೂಪಗಳನ್ನು ಕೂಡ ಪರಿಗಣಿಸಬೇಕೆಂದು ವಾದಿಸುತ್ತಾರೆ. ನಾವು ಪ್ರಾದೇಶಿಕ ಇಲ್ಲವೇ ಸಾಮಾಜಿಕ ಪ್ರಭೇದಗಳು ಎಂದು ಗುರುತಿಸುತ್ತಿರುವ ಕನ್ನಡದ ವಿವಿಧ ಮಾದರಿಗಳು ಈಗ ಸಮಕಾಲೀನವಾಗಿ ಒಂದೇ ಕಾಲದಲ್ಲಿ ಬಳಕೆಯಲ್ಲಿರುವಂತೆ ಕಂಡರೂ ಅವು ಬೇರೆ ಬೇರೆ ಕಾಲಘಟ್ಟದಲ್ಲಿ ರೂಪುಗೊಂಡುತ್ತವೆ. ತಾವು ರೂಪುಗೊಂಡ ಕಾಲದ ಕನ್ನಡದ ಲಕ್ಷಣಗಳನ್ನು ಆಯಾ ಪ್ರಭೇದಗಳು ತಮ್ಮಲ್ಲಿ ಅಡಗಿಸಿಕೊಂಡಿರುತ್ತವೆ. ಆ ಪ್ರಭೇದಗಳನ್ನು ಸಮಕಾಲೀನ ಮಾದರಿಯ ಎಂದಷ್ಟೇ ವಿಶ್ಲೇಷಿಸದೆ ಅವುಗಳಲ್ಲಿ ಅಡಗಿರುವ ಚಾರಿತ್ರಿಕ ಪದರಗಳನ್ನು ಹೊರತೆಗೆಯಬೇಕು. ಆಗ ಮಾತ್ರ ಭಾಷೆ ಬೆಳೆದುಬಂದ ರೀತಿ ನಮಗೆ ಗೊತ್ತಾಗಲು ಸಾಧ್ಯ. ಭಾಷೆಯ ಚರಿತ್ರೆಯನ್ನು ಆಡುಮಾತಿನ ಬಗೆಗಳನ್ನು ಆಧರಿಸಿಯೂ ನಿರ್ಮಿಸಬಹುದು. ಮತ್ತು ಹಾಗೆ ಮಾಡುವ ಮೂಲಕವೇ ಆ ಚರಿತ್ರೆಗೆ ಸಮಗ್ರತೆ ಸಾಧ್ಯ ಎಂಬ ಈ ವಾದವನ್ನು ಡಾ. ಭಟ್ ಕನ್ನಡದ ನಿದರ್ಶನಗಳ ಮೂಲಕ ಸ್ಪಷ್ಟ ಪಡಿಸುತ್ತಾರೆ.

ಇದಲ್ಲದೆ ಈ ವ್ಯಾಖ್ಯೆಯ ಮೂಲಕ ಅವರು ಈ ಸಮಸ್ಯೆಗೆ ಬೇರೊಂದು ನೆಲೆಯನ್ನು ನೀಡಿದ್ದಾರೆ, ಈವರೆಗೆ ಕನ್ನಡ ಭಾಷೆಯೂ ಮೊದಲು ಉತ್ತರ ಮತ್ತು ದಕ್ಷಿಣ ಪ್ರದೇಶಗಳ ಪ್ರಭೇದವಾಗಿ ವಿಭಜನೆಗೊಂಡಿತ್ತು. ಎಂದು ನಿರೂಪಿಸುತ್ತಾ ಬಂದಿದ್ದೇವೆ. ಕವಿರಾಜ ಮಾರ್ಗಕಾರನ ದಕ್ಷಿಣೋತ್ತರ ಮಾರ್ಗಗಳ ಚಿಂತನೆಯನ್ನು ಒಪ್ಪಿಕೊಂಡಿದ್ದೇವೆ. ಈಗಲೂ ಈ ವಿಭಜನೆ ಧ್ವನಿರಚನೆ ಮತ್ತು ಪದಕೋಶಗಳ ನೆಲೆಯಲ್ಲಿ ತೋರಿಕೆಗೆ ಸರಿ ಎಂದು ಅನಿಸುತ್ತದೆ. ನಡುವೆ ಹರಿಯುವ ತುಂಗಭದ್ರಾ ನದಿಯು ನಡುಗೆರೆಯಾಗಿ ಕನ್ನಡದ ಎರಡು ಪ್ರಭೇದಗಳು ಮೈದೆಳೆದಿರುವುದನ್ನು ಒಪ್ಪಿದ್ದೇವೆ. ಆದರೆ ಈ ವಿಭಜನೆ ಆಗುವ ಮೊದಲೇ ಕನ್ನಡ ಪೂರ್ವ ಪಶ್ಚಿಮ ಪ್ರಭೇದವಾಗಿ ವಿಭಜನೆಗೊಂಡಿದೆ. ಎಂಬ ಸಾಧ್ಯತೆಯನ್ನು ಡಾ. ಭಟ್ ಮುಂದಿಡುತ್ತಾರೆ. ಕನ್ನಡದ ಅತೀ ಪ್ರಾಚೀನ ಧ್ವನಿ ರೂಪಗಳು ಪದರೂಪಗಳು ಕರಾವಳಿಯ ಇಂದಿನ ಕೆಲವು ಪ್ರಭೇದಗಳಲ್ಲಿ ಉಳಿದಿರುವುದನ್ನು ಅವರು ಗುರುತಿಸುತ್ತಾರೆ. ಈ ಮೂಲಕ ಕನ್ನಡ ಭಾಷಾ ಚರಿತ್ರೆಯ ಇನ್ನೊಂದು ಘಟ್ಟವನ್ನು ಅವರು ನಿರೂಪಿಸಿದ್ದಾರೆ.

ಭಟ್ಟ ಅವರ ಈ ಚರಿತ್ರೆ, ಕಲ್ಪಿತ ಚರಿತ್ರೆ ಏಕೆಂದರೆ ಭಾಷಾ ಚರಿತ್ರೆಯನ್ನು ನಾವು ಪುನಾರಚಿಸುತ್ತೇವೆ. ಹೀಗೆ ಆಗಿದೆ ಎಂದು ಹೇಳಲು ನಮ್ಮಲ್ಲಿ ಆಧಾರಗಳಿರುವುದಿಲ್ಲ. ಹೀಗೆ ಆಗಿರಲು ಸಾಧ್ಯ. ಎಂದು ನಾವು ಊಹಿಸುತ್ತೇವೆ. ಆದ್ದರಿಂದ ಇದು ರಚಿತ ಮತ್ತು ಕಲ್ಪಿತ. ಡಾ. ಭಟ್ ಅವರು ಕನ್ನಡ ಭಾಷಾ ಚರಿತ್ರೆಯ ಅಧ್ಯಯನಕ್ಕೆ ಈ ದೃಷ್ಟಿಯಿಂದ ತಾತ್ವಿಕವಾಗಿ ಮತ್ತು ಪ್ರಾಯೋಗಿಕವಾಗಿ ಹೊಸ ರೂಪವನ್ನು ನೀಡಿದ್ದಾರೆ.

ಕಳೆದ ಐವತ್ತು ವರ್ಷಗಳಲ್ಲಿ ಕನ್ನಡ ಭಾಷೆಯನ್ನು ವಿವರಿಸುವ ಹಲವು ಪ್ರಯತ್ನಗಳು ನಡೆದಿವೆ. 1957ರಲ್ಲಿ ಪುಣೆಯ ಡೆಕ್ಕನ್ ಕಾಲೇಜಿನಲ್ಲಿ ಅಮೇರಿಕಾದ ಲಿಂಗ್ವಿಸ್ಟಿಕ್ ಸೊಸೈಟಿ ಆಫ್ ಅಮೇರಿಕಾ ಇವರು ನಡೆಸಿದ ಭಾಷಾ ಶಾಸ್ತ್ರದ ಬೇಸಿಗೆ ಶಾಲೆಯಲ್ಲಿ ಭಾಗವಹಿಸಿದ ಕನ್ನಡದ ಅಂದಿನ ಹಲವು ವಿದ್ವಾಂಸರು ಮತ್ತು ತರುಣರು ಕನ್ನಡವನ್ನು ವಿಶ್ಲೇಷಿಸುವ ಮಾರ್ಗಗಳನ್ನು ಕಂಡುಕೊಂಡರು. ಆಗ ಪ್ರಚಲಿತವಿದ್ದ ಭಾಷಾಶಾಸ್ತ್ರದ ಸಿದ್ಧಾಂತಗಳನ್ನು ಅನ್ವಯಿಸುವ ಪ್ರಯತ್ನಗಳನ್ನು ಮಾಡಿದರೂ ಮುಖ್ಯವಾಗಿ ವರ್ಣನಾತ್ಮಕ ಭಾಷಾ ಶಾಸ್ತ್ರ, ಚಾರಿತ್ರಿಕ ಭಾಷಾ ಶಾಸ್ತ್ರ ಮತ್ತು ತೌಲನಿಕ ಭಾಷಾ ಶಾಸ್ತ್ರದಲ್ಲಿ ಆಸಕ್ತಿಗಳು ಬೆಳೆದವು. ಇದರ ಪರಿಣಾಮವಾಗಿ ಹಲವು ಅಧ್ಯಯನಗಳು ನಡೆದಿವೆ. ವರ್ಣನಾತ್ಮಕ ಭಾಷಾ ಶಾಸ್ತ್ರದ ನೆಲೆಯಲ್ಲಿ ಕನ್ನಡದ ಹಲವು ಪ್ರಬೇದಗಳನ್ನು ವಿಶ್ಲೇಷಿಸುವ ಪ್ರಯತ್ನಗಳು ಮುಂದುವರೆದವು. ಮುಖ್ಯವಾಗಿ ಸಮಕಾಲೀನ ಪ್ರಾದೇಶಿಕ ಮತ್ತು ಸಾಮಾಜಿಕ ಪ್ರಭೇದಗಳನ್ನು ವಿವರಿಸಲು ಕೆಲವರು ಆಸಕ್ತರಾದರೆ ಮತ್ತೆ ಕೆಲವರು ಕನ್ನಡದ ವಿವಿಧ ಚಾರಿತ್ರಿಕ ಪ್ರಭೇದಗಳನ್ನು ವಿವರಿಸುವ ಪ್ರಯತ್ನಗಳನ್ನು ಮಾಡಿದರು. ಚಾರಿತ್ರಿಕ ಪ್ರಭೇದಗಳನ್ನು ವಿಶ್ಲೇಷಿಸಲು ಸಾಹಿತ್ಯ ಕೃತಿಗಳನ್ನು ಮತ್ತು ಶಾಸನಗಳನ್ನು ಭಾಷಿಕ ಆಕರಗಳೆಂದು ಬಳಸಿಕೊಂಡಿದ್ದಾರೆ. ಈ ಎಲ್ಲ ಪ್ರಯತ್ನಗಳಿಂದ ಕನ್ನಡವನ್ನು ಆಧುನಿಕ ಭಾಷಾ ಶಾಸ್ತ್ರದ ಪರಿಕರಗಳ ಅನ್ವಯ ನೋಡುವ ಪ್ರಯತ್ನಗಳು ನೆಲೆಗೊಂಡವು.

ಈ ಎಲ್ಲಾ ಅಧ್ಯಯನಗಳು ಸ್ವತಂತ್ರವಾಗಿ ಪರಿಪೂರ್ಣ ಎನ್ನಿಸಲು ಯತ್ನಿಸುತ್ತಿದ್ದವು. ಅವುಗಳ ನಡುವೆ ಒಂದು ಸಂವಾದವನ್ನು ಬೆಳೆಸುವ ಆಸಕ್ತಿಯನ್ನು ಅಧ್ಯಯನಕಾರರು ತೋರಲಿಲ್ಲ. ಇದಕ್ಕೆ ಮುಖ್ಯವಾದ ಕಾರಣವೆಂದರೆ ಇಂಥ ಅಧ್ಯಯನಗಳನ್ನು ಬಹುಮಟ್ಟಿಗೆ ಮಂಡಿಸಿದ್ದು ಇಂಗ್ಲಿಶ್ ಭಾಷೆಯಲ್ಲಿ ಅವುಗಳು ಅಂತರಾಷ್ಟ್ರೀಯ ವ್ಯಾಪ್ತಿಯ ಆಸಕ್ತಿಯನ್ನು ಉಳಿಸಿಕೊಂಡರು ಕನ್ನಡ ಭಾಷಾಧ್ಯಯನಗಳಲ್ಲಿ ಆಸಕ್ತರಾದವರ ವಲಯವನ್ನು ಮುಟ್ಟಲಿಲ್ಲ. ಅಥವಾ ಅವರು ತಮ್ಮ ಆಸಕ್ತಿಯ ವಲಯದೊಳಗೆ ಇಂಥಹ ಅಧ್ಯಯನಗಳನ್ನು ಸೇರಿಸಿಕೊಳ್ಳಲಿಲ್ಲ. ಈ ಕಾರಣದಿಂದ ಮೇಲೆ ಹೇಳಿದ ಅಧ್ಯಯನಗಳ ಶೈಕ್ಷಣಿಕ ಪ್ರಭಾವ ತುಂಬಾ ಕಡಿಮೆ ಎಂದೇ ಹೇಳಬೇಕು. ಇದರಿಂದಾಗಿ ಭಾಷೆಯ ಅಧ್ಯಯನದ ಹಳೆಯ ಪರಂಪರೆಯೊಂದು ಯಾವ ಅಡೆತಡೆಯೂ ಇಲ್ಲದೆ ಮುಂದುವರೆಯುತ್ತಾ ಹೋಯಿತು. ಡಾ.ಎಸ್.ಎಸ್. ಬಿಳಿಗಿರಿಯವರು ಆಧುನಿಕ ಭಾಷಾಶಾಸ್ತ್ರದ ತರಬೇತನ್ನು ಪಡೆದವರಾಗಿದ್ದು, ಈ ಮೇಲೆ ಹೇಳಿದ ಸಂವಾದದ ಕೊರತೆಯನ್ನು ನಿವಾರಿಸಲು ಏಳನೆಯ ದಶಕದ ಸುಮಾರಿನಲ್ಲಿ ಕೇಶಿರಾಜನ ಶಬ್ದಮಣಿ ದರ್ಪಣವನ್ನು ಹೊಸ ಶಾಸ್ತ್ರೀಯ ನೆಲೆಗಟ್ಟಿನಲ್ಲಿ ವಿಶ್ಲೇಷಿಸ ತೊಡಗಿದರು. ಅವರ ಆ ಲೋಕ ಈ ನಿಟ್ಟಿನಲ್ಲಿ ಹೆಚ್ಚು ಪ್ರಭಾವಶಾಲಿಯಾದ

ಗ್ರಂಥವಾಯಿತು. ಆದರೆ ಕೇಶಿರಾಜನ ಶಬ್ದಮಣಿದರ್ಪಣದ ಎಲ್ಲ ಪ್ರಕರಣಗಳನ್ನು ಹೀಗೆ ವಿಶ್ಲೇಷಿಸುವ ಅವರ ಯತ್ನ ಪೂರ್ಣಗೊಳ್ಳಲಿಲ್ಲ. ಬೇರೆ ಯಾರೂ ಆ ಮಾರ್ಗವನ್ನು ತುಳಿದು ಮುಂದುವರೆಯಲೂ ಇಲ್ಲ. ಡಾ. ಬಿಳಿಗಿರಿಯವರ ವಿಧಾನ ಕೇವಲ ಟೀಕಾಕಾರನ ನೆಲೆಯಲ್ಲಿ ಇಲ್ಲ. ಕೇಶೀರಾಜನ ವಿಚಾರಗಳು ಆಧುನಿಕ ಚಿಂತನೆಗಳ ಹಿನ್ನೆಲೆಯಲ್ಲಿ ಎಷ್ಟು ಮಾನ್ಯ ಅಥವಾ ಅಮಾನ್ಯ; ಅವನು ಎತ್ತಿಕೊಂಡ ಸಮಸ್ಯೆಗಳನ್ನು ಇಂದಿನ ಪರಿಕರಗಳಿಂದ ನೋಡಿದಾಗ ಯಾವ ಫಲಿತಾಂಶ ದೊರೆಯುತ್ತದೆ ಎನ್ನುವುದನ್ನು ವಿವರಿಸಲು ಯತ್ನಿಸಿದ್ದರು.

ಆಧುನಿಕ ಭಾಷಾ ಶಾಸ್ತ್ರದ ವರ್ಣನಾತ್ಮಕ ನೆಲೆಗಳು ಕನ್ನಡದ ಪ್ರಭೇದಗಳನ್ನು ವಿವರಿಸಿದ್ದರೂ ಆ ಶಾಸ್ತ್ರದ ಒಳಗೆ ಇದ್ದ ಕೆಲವು ಮಿತಿಗಳಿಂದಾಗಿ ಹೆಚ್ಚು ಪರಿಣಾಮ ಬೀರುವುದು ಸಾಧ್ಯವಾಗಲಿಲ್ಲ. ಮುಖ್ಯವಾಗಿ ಭಾಷೆಯನ್ನು ಅದರ ಅಂಶಗಳನ್ನು ವಿವರಿಸುವಾಗ ಇದು ಹೀಗಿದೆ ಎಂದು ಹೇಳುವುದು ಮುಖ್ಯವಾಯಿತೇ ಹೊರತು ಇದು ಏಕೆ ಹೀಗಿದೆ ಎಂಬುದನ್ನು ವಿವರಿಸುವ ಆಸಕ್ತಿಯನ್ನು ತೋರಲಿಲ್ಲ. ಉದಾ: ಉತ್ತರ ಕರ್ನಾಟಕದ ಹಲವು ಉಪಭಾಷೆಗಳಲ್ಲಿ ನಾಮಪದಗಳು ಪ್ರಮಾಣ ಕನ್ನಡದ 'ಎ' ಕಾರಾಂತದ ಬದಲು 'ಇ' ಕಾರಾಂತವಾಗುತ್ತವೆ ಎಂಬುದು ಒಂದು ವಿವರಣೆ. ಅಂದರೆ ಪ್ರಮಾಣ ಕನ್ನಡದ ಮನೆ, ತಲೆ, ಬಲೆ ಮುಂತಾದ ಪದಗಳು ಮನಿ, ತಲಿ, ಬಲಿ, ಎಂದಾಗುತ್ತವೆ. ಇದು ವಸ್ತು ಸ್ಥಿತಿಯ ವಿವರಣೆ. ಆದರೆ ಏಕೆ ಹೀಗಾಗುತ್ತದೆ ಎಂಬ ಪ್ರಶ್ನೆಯನ್ನು ಹಾಕಿಕೊಳ್ಳಲು ಇಲ್ಲ. ಉತ್ತರಿಸಲು ಹೋಗಲಿಲ್ಲ. ವರ್ಣನಾತ್ಮಕ ಭಾಷಾ ಶಾಸ್ತ್ರದ ಜೊತೆಗೆ ಚಾರಿತ್ರಿಕ ಭಾಷಾಶಾಸ್ತ್ರದ ಪರಿಕರಗಳನ್ನು ಬೆರೆಸುವ ಪ್ರಯತ್ನವನ್ನು ಮಾಡಿದರೆ ಇನ್ನಷ್ಟು ಪ್ರಮುಖವಾದ ವಿಶ್ಲೇಷಣೆಗಳು ದೊರಕಬಹುದಿತ್ತು.

ಕನ್ನಡವನ್ನು ಕುರಿತು ಅಧ್ಯಯನಗಳು ಮುಖ್ಯವಾಗಿ ಎರಡು ದಿಕ್ಕಿನಲ್ಲಿ ಸಾಗಿವೆ. ಒಂದು ಕನ್ನಡವನ್ನೇ ಕೇಂದ್ರದಲ್ಲಿ ಇರಿಸಿಕೊಂಡು ನಡೆಸಿದ ಅಧ್ಯಯನಗಳು. ಎರಡು ಕನ್ನಡವನ್ನು ನಿದರ್ಶನವಾಗಿ ತೆಗೆದುಕೊಂಡು ಆ ಮೂಲಕ ಭಾಷಾ ಅಧ್ಯಯನದ ತಾತ್ವಿಕ ನೆಲೆಗಳನ್ನು ವಿಸ್ತರಿಸುವ ಪ್ರಯತ್ನಗಳನ್ನು ಮಾಡುವುದು. ಹಾಗೆ ನೋಡಿದರೆ ಭಾರತದ ಹಲವು ಭಾಷೆಗಳಲ್ಲಿ ಭಾಷಾಧ್ಯಯನ ಹೀಗೆ ಇಳಿಮುಖವಾಗಿ ನಡೆದಿರುವುದು ಗೊತ್ತಾಗುತ್ತದೆ. ಎರಡನೆಯ ನೆಲೆಯ ಅಧ್ಯಯನಗಳು ಸಹಜವಾಗಿಯೇ ಅಂತರಾಷ್ಟ್ರೀಯ ಚೌಕಟ್ಟನ್ನು ಪಡೆದಿವೆ. ಮತ್ತು ಜಾಗತಿಕ ನೆಲೆಯ ಹಲವು ವಿದ್ವಾಂಸರು ಇಂಥ ಅಧ್ಯಯನಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಇಂಥಾ ಅಧ್ಯಯನಗಳು ಕನ್ನಡವನ್ನು ಮಾಹಿತಿಯನ್ನಾಗಿ ಬಳಸಿಕೊಂಡಿದೆ. ಮತ್ತು ಬಹುಮಟ್ಟಿಗೆ ಇಂಗ್ಲಿಶ್ ಭಾಷೆಯಲ್ಲಿದೆ. ಇಂಥ ಎಷ್ಟೋ ಅಧ್ಯಯನಗಳು ಕನ್ನಡ ವಿದ್ವತ್ ಜಗತ್ತಿಗೆ ಅಪರಿಚಿತವಾಗಿಯೇ ಉಳಿದುಬಿಟ್ಟಿವೆ. ಉದಾ: ಉಲ್ ರೀಚ್, ಅವರು ನಡೆಸಿದ ಹವ್ಯಕ ಭಾಷೆಯ ಅಧ್ಯಯನಗಳು ಸೂಸನ್ ಬಿನ್ ನಡೆಸಿದ ಕನ್ನಡ ಸಂಬಂಧ ಸೂಚಕಗಳ ಅಧ್ಯಯನಗಳು ಇಂಥವು. ಮತ್ತೆ ಕೆಲವೊಮ್ಮೆ ಕನ್ನಡವನ್ನು ಮಾಹಿತಿಯ ನೆಲೆಯಲ್ಲಿ ಬಳಸಿಕೊಂಡ ಕೆವಲರು ತೌಲನಿಕ ಭಾಷಾ ಶಾಸ್ತ್ರದ ನಿಟ್ಟಿನಲ್ಲಿ ಅಧ್ಯಯನಗಳನ್ನು ಮುಂದುವರೆಸಿದ್ದರೆ

ಇಂಥವು ಕುಡಾ ಶೈಕ್ಷಣಿಕವಾಗಿ ಕನ್ನಡ ಅಧ್ಯಯನ ವಲಯದಿಂದ ದೂರವುಳಿದಿವೆ. ಉದಾ: ದ್ರಾವಿಡ ಭಾಷೆಗಳನ್ನು ಅಧ್ಯಯನ ಮಾಡುತ್ತಾ ಬಂದ ಎಂಬಿ ಎಮೆನೋ ಅವರು ರಚಿಸಿದ ದ್ರಾವಿಡಿಯನ್ ಎಟಿಮೆನೋಲಾಜಿಕಲ್ ಡಿಕ್ಷನರಿ ಎಂಬ ಗ್ರಂಥವನ್ನು ಉಲ್ಲೇಖಿಸಬಹುದು. ಹಾಗೆಯೇ ಅವರು ಈ ಸರಿಸುಮಾರಿನಲ್ಲಿಯೇ ಬರೆದ ಇಂಡಿಯಾ ಎ ಲಿಂಗ್ವಿಸ್ಟಿಕ್ ಏರಿಯಾ ಎಂಬ ಲೇಖನವನ್ನು ಉಲ್ಲೇಖಿಸಬಹುದು. ಇವು ಯಾವುವು ಹೆಚ್ಚಿನ ಅಧ್ಯಯನಗಳಿಗೆ ಪ್ರೇರಣೆಯನ್ನು ನೀಡಲಿಲ್ಲ. ಮೊದಲು ಹೇಳಿದ ಡಿಕ್ಷನರಿಗೆ ಎಮಿನೋ ಮತ್ತು ಬರೋ ಅವರು ಕನ್ನಡದ ಮಾಹಿತಿಗಾಗಿ ಆ ಹೊತ್ತಿಗೆ ಮುಖ್ಯವಿದ್ದ ಕಿಟಲ್ ನಿಘಂಟನ್ನು ಅದು ಇಂಗ್ಲಿಶ್ ಅರ್ಥಗಳನ್ನು ನೀಡುತ್ತದೆ ಎಂಬ ಕಾರಣಕ್ಕಾಗಿ ಬಳಸಿದರು ಆದರೆ ಕನ್ನಡದ ಮಾಹಿತಿ ಮತ್ತಷ್ಟು ಪರಿಷ್ಕೃತ ರೂಪದಲ್ಲಿ ಎಮಿನೋ ಅವರು ಅಧ್ಯಯನ ಮಾಡುವ ವೇಳೆಗೆ ಲಭ್ಯವಿತ್ತು. ಅದು ಕನ್ನಡ ಭಾಷೆಯಲ್ಲಿ ಇದ್ದುದರಿಂದ ಅವರು ಅದನ್ನು ಬಳಸಿಕೊಳ್ಳಲಾಗಲಿಲ್ಲ. ಕನ್ನಡ ವಿದ್ವಾಂಸರು ಈ ಮಾಹಿತಿಯನ್ನು ಬಳಸಿ ಬರೋ ಎಮೆನೋ ಅವರ ಕೃತಿಯನ್ನು ಪರಿಷ್ಕರಿಸುವ ಕೆಲಸಕ್ಕೆ ಕೈ ಹಾಕಲಿಲ್ಲ. ಇದೇ ಮಾತನ್ನು ಮೇಲೆ ಉಲ್ಲೇಖಿಸಿದ ಇನ್ನೊಂದು ಲೇಖನಕ್ಕೂ ಅನ್ವಯಿಸಬಹುದು. ಭಾಷಾ ಸಂಯೋಜನೆ ಮೂಲಕ ಭಾರತದ ಬೇರೆ ಬೇರೆ ಭಾಷಾ ವಂಶದ ಭಾಷೆಗಳು ಹೇಗೆ ಕೆಲವು ಸಾಮಾನ್ಯ ಲಕ್ಷಣಗಳನ್ನು ಬೆಳೆಸಿಕೊಳ್ಳುವುದು ಸಾಧ್ಯವಾಗಿದೆ. ಎಂಬುದನ್ನು ಆ ಲೇಖಕ ವಿವರಿಸುತ್ತದೆ. ಆದರೆ ಇದು ಕೂಡಾ ತಾನು ಬೀರಬಹುದಾದ ಶೈಕ್ಷಣಿಕ ಪರಿಣಾಮಗಳನ್ನು ಬೀರಲಿಲ್ಲ.

ಇದೇ ಸರಣಿಗೆ 1968ರ ಜಾನ್ ಗುಂಫರ್ಜ್ ಅವರ ಕುಪವಾರ್ ಅಧ್ಯಯನವನ್ನು ಸೇರಿಸಬಹುದು. ಇದು ಕರ್ನಾಟಕದ ಗಡಿ ಪ್ರದೇಶದ ಒಂದು ಊರು ಕುಪವಾರ್‌ನಲ್ಲಿ(ಸಾಂಗ್ಲಿ ತಾಲ್ಲೂಕಿನಲ್ಲಿ)ದೆ ಕನ್ನಡ, ಮರಾಠಿ ಮತ್ತು ಉರ್ದು ಭಾಷೆಗಳು ಒಟ್ಟಾಗಿ ಇರುವುದರಿಂದ ಆ ಭಾಷೆಗಳ ಮೇಲೆ ಏನೆಲ್ಲಾ ರಾಚನಿಕ ಪರಿಣಾಮಗಳಾಗಿವೆ. ಎನ್ನುವುದನ್ನು ವಿಶ್ಲೇಷಿಸುತ್ತದೆ. ಜಾಗತಿಕವಾಗಿ ಈವರೆಗೆ ಇನ್ನೂರಕ್ಕೂ ಹೆಚ್ಚು ಬಾರಿ ಉಲ್ಲೇಖಿತವಾಗಿರುವ ಈ ಅಧ್ಯಯನ ಕನ್ನಡದ ಸಂದರ್ಭದಲ್ಲಿ ಒಮ್ಮೆಯೂ ತಲೆ ಹಾಕಿಲ್ಲ. ಇದೆಲ್ಲಾ ವಿವರಣೆಯ ಉದ್ದೇಶವಿಷ್ಟೇ ಕನ್ನಡವನ್ನು ಆಕರವಾಗಿ ಬಳಸುವ ಅಂತರಾಷ್ಟ್ರೀಯ ನೆಲೆಯ ಅಧ್ಯಯನಗಳು ಕರ್ನಾಟಕದಲ್ಲಿ ಹೆಚ್ಚು ಚರ್ಚಿತವೂ ಆಗುವುದಿಲ್ಲ. ಅವುಗಳ ವಿಶ್ಲೇಷಣೆಯನ್ನು ಮರು ರೂಪಿಸುವ ಪ್ರಯತ್ನಗಳನ್ನು ಯಾರು ಮಾಡುವುದಿಲ್ಲ. ಇದರಿಂದ ಆ ಅಧ್ಯಯನಗಳಿಗೂ ಮತ್ತು ಕನ್ನಡ ವಿದ್ವತ್ತಿಗೂ ಒಟ್ಟಾಗಿಯೇ ನಷ್ಟವಾಗಿತ್ತು. ಈಚಿನ ವರ್ಷಗಳಲ್ಲಿ ತಾತ್ವಿಕ ನೆಲೆಯ ಅಧ್ಯಯನಗಳು ಹೆಚ್ಚು ವ್ಯಾಪಕವಾಗುತ್ತಿವೆ. ಜಾಗತಿಕವಾಗಿ ಭಾಷೆಯ ರಚನೆಯನ್ನು ಕುರಿತು ಸಿದ್ಧಾಂತಗಳು ಮಂಡನೆಯಾಗುತ್ತಿವೆ. ಈ ಸಿದ್ಧಾಂತಗಳನ್ನು ಮುಖ್ಯವಾಗಿ ಇಂಗ್ಲಿಶ್ ಮತ್ತು ಕೆಲವು ಯುರೋಪಿಯನ್ ಭಾಷೆಗಳ ನಿದರ್ಶನಗಳಿಂದ ನಿರೂಪಿಸಲಾಗುತ್ತಿದೆ. ಈ ವಿಧಾನವನ್ನೇ ಪ್ರಶ್ನಿಸುವ ಚಿಂತನೆಗಳು ಇವೆ, ಅಂಥವರು ಹೆಚ್ಚು ಪರಿಚಿತವಲ್ಲದ ಭಾಷೆಗಳ ಉದಾಹರಣೆಗಳಿಂದ ಆ ಸಿದ್ಧಾಂತಗಳನ್ನು ಸಮರ್ಥಿಸುವ ಇಲ್ಲವೆ ನಿರಾಕರಿಸುವ ವಿಧಾನವನ್ನು ಅನುಸರಿಸುತ್ತಿದ್ದಾರೆ. ಕನ್ನಡವನ್ನು ಹೀಗೆ ನಿದರ್ಶನಗಳಿಂದ ನಿರೂಪಿಸಲಾಗುತ್ತಿದೆ. ಈ

ವಿಧಾನವನ್ನು ಅನುಸರಿಸುತ್ತಿದ್ದಾರೆ. ಕನ್ನಡವನ್ನು ಹೀಗೆ ನಿದರ್ಶನಕ್ಕಾಗಿ ಆಯ್ಕೆ ಮಾಡಿಕೊಂಡ ಉದಾಹರಣೆಗಳಿವೆ. ಇಂಥ ಅಧ್ಯಯನಗಳು ಇನ್ನಷ್ಟು ನಿಖರವಾಗುತ್ತವೆ. ಈ ದಿಕ್ಕಿನಲ್ಲಿ ಯಾವ ಪ್ರಯತ್ನಗಳು ಆಗಿಲ್ಲ. ಎಂಬುದೇ ಖೇದನೀಯ ಸಂಗತಿ.

ಇನ್ನೂ ಕನ್ನಡವನ್ನೇ ಕೇಂದ್ರವನ್ನಾಗಿರಿಸಿಕೊಂಡ ಅಧ್ಯಯನಗಳಲ್ಲೂ ಆಧುನಿಕ ತಾತ್ವಿಕತೆಯನ್ನು ಆಧರಿಸಿದ ಅಧ್ಯಯನಗಳು ಮತ್ತು ಪಾರಂಪರಿಕ ನೆಲೆಯ ಅಧ್ಯಯನಗಳು ಎಂದು ಎರಡು ಗುಂಪುಗಳನ್ನು ಮಾಡಬಹುದು. ಪಾರಂಪರಿಕ ನೆಲೆಯ ಅಧ್ಯಯನಗಳು ಹೊಸ ಪ್ರಶ್ನೆಗಳನ್ನು ಎದುರಿಸುವುದಿಲ್ಲ. ಹೊಸ ಚಿಂತನೆಗಳನ್ನು ತಾತ್ವಿಕವಾಗಿ ಮೈಮೇಲೆ ಹಾಕಿಕೊಳ್ಳುವುದಿಲ್ಲ. ಅಂಥ ಎರಡು ನಿದರ್ಶನಗಳನ್ನು ಇಲ್ಲಿ ಚರ್ಚಿಸಲಾಗುತ್ತದೆ. ಒಂದು ಗಮಕ ಸಮಾಸ ಕುರಿತ ಚರ್ಚೆ ಡಾ.ಎಚ್.ಎಸ್.ಬಿಳಿಗಿರಿಯರುವ ಗಮಕ ಸಮಾಸ ಒಂದು ಸಮಾಸವೇ ಅಲ್ಲ ಎಂಬ ಪ್ರಶ್ನೆಯನ್ನು ಮೊದಲು ಎತ್ತಿದರು. ಕೇಶಿರಾಜನು ಕನ್ನಡದ ವಿಶೇಷ ಲಕ್ಷಣಗಳನ್ನು ಹೇಳುವಾಗ ಗಮಕ ಸಮಾಸವನ್ನು ಅವುಗಳಲ್ಲಿ ಒಂದು ಎಂದು ಹೇಳಿದನಷ್ಟೇ. ಅದನ್ನು ತನ್ನ ವ್ಯಾಕರಣ ಗ್ರಾಮದಲ್ಲಿ ವಿವರವಾಗಿ ಚರ್ಚಿಸಿದ್ದಾನೆ. ಬಿಳಿಗಿರಯವರ ವಾದ ಸರಳವಾಗಿದೆ. ಕೇಶಿರಾಜ ಸಮಾಸ ಎಂದು ವಿವರಿಸುತ್ತಿರುವ ಈ ರಚನೆಯು ಒಂದು ಪದಗುಂಪನವೇ ಹೊರತು ಸಮಾಸವಲ್ಲ, ಒಂದು ಪದರಚನೆ ಸಮಾಸವೆನಿಸಬೇಕಾದರೆ ಇರಬೇಕಾದ ಲಕ್ಷಣಗಳು ಈ ರಚನೆಯಲ್ಲಿ ಇಲ್ಲ. ಹಾಗಾಗಿ ಇದನ್ನು ಒಂದು ಪದಗುಂಪನ ಎಂದು ಕರೆಯಬೇಕೆ ಹೊರತು ಸಮಾಸವೆಂದಲ್ಲ. ಅನಂತರ ನಡೆದ ಚರ್ಚೆಯಲ್ಲಿ ಭಾಗವಹಿಸಿದ ಪಾರಂಪರಿಕ ನೆಲೆಯ ವಿದ್ವಾಂಸರು ಆಧುನಿಕ ಸಿದ್ಧಾಂತಗಳನ್ನು ಮುಂದಿಟ್ಟುಕೊಂಡು ವಾದಿಸುವುದನ್ನೇ ಪ್ರಶ್ನಿಸಿದರು. ಅವರ ತರ್ಕ ಇಷ್ಟೇ, ಕೇಶಿರಾಜ ಅದನ್ನು ಕನ್ನಡದ ವಿಶೇಷ ಲಕ್ಷಣಗಳಲ್ಲಿ ಸೇರಿಸಿರುವುದರಿಂದ ಮತ್ತು ಸಂಸ್ಕೃತ ವೈಯಾಕರಣರ ಸವಾಸ ಕಲ್ಪನೆಗೆ ಅನುಗಗುಣವಾಗಿರುವುದರಿಂದ ಅದೊಂದು ಸಮಾಸವೇ ಹೊರತು ಬೇರೇನೂ ಅಲ್ಲ. ಬಿಳಿಗಿರಿಯವರನ್ನು ಸಮರ್ಥಿಸುವ ಅಧ್ಯಯನಗಳು ಮುಂದೆ ನಡೆದವು. ಗಮಕಸಮಾಸದ ಪದರಚನೆಯ ಬಂಧ ಮತ್ತು ಅರ್ಥ ರಚನೆಯ ಬಂಧ ಅದನ್ನು ಸಮಾಸವೆಂದು ಪರಿಗಣಿಸಲು ಅನುಕೂಲಕರವಾಗಿಲ್ಲ, ಎಂಬುದೇ ಆ ಅಧ್ಯಯನಗಳ ತಿರುವು ಹೀಗಾದರೂ ಪಾರಂಪರಿಕ ಚಿಂತಕರು ತಮ್ಮ ನಿಲುವನ್ನೇ ಬಿಟ್ಟುಕೊಡಲು ಸಿದ್ಧರಿಲ್ಲ. ಒಂದು ಪದ ಗುಂಪನ್ನು ನವಸಮಾಸವೆಂಬ ಹೆಸರಿನಿಂದ ಕರೆಯಲು ಸಿದ್ಧರಾಗಿದ್ದಾರೆ. ಇದು ಸರಿತಪ್ಪುಗಳ ಪ್ರಶ್ನೆಯಲ್ಲ, ತಾತ್ವಿಕತೆಯ ಪ್ರಶ್ನೆ. ವಿಶ್ಲೇಷಣೆಗೆ ಅನುಕೂಲಕರವಾದ ಚೌಕಟ್ಟುಗಳನ್ನು ಹೇಗೆ ಆಯ್ಕೆ ಮಾಡಿಕೊಳ್ಳಬೇಕು ಎಂಬುದನ್ನೇ ಈ ಚರ್ಚೆಗಳು ಹಿಂದಕ್ಕೆ ಸರಿಸುತ್ತಿವೆ.

ಇಂತಹದೇ ಇನ್ನೊಂದು ವಿವಾದ ಕನ್ನಡ ವರ್ಣಮಾಲೆಯಲ್ಲಿ ಸೇರಿಸಲಾದ 'ಋ' ಸ್ವರದ ಚಿಂತನೆಯನ್ನು ಕುರಿತಿದೆ. ಸಂಸ್ಕೃತ ಪದಗಳಲ್ಲಿ ಈ ಚಿಹ್ನೆಯ ಅಗತ್ಯ ಉಂಟಾದುದಕ್ಕೆ ಕಾರಣವಿದೆ. 'ರ' ಕಾರವು ಒಂದು ವ್ಯಂಜನವಾದರೂ ಪ್ರಸಂಗವಶಾತ್ ಅದು ಅಕ್ಷರ ರಚನೆಯ ಕೇಂದ್ರವಾದಾಗ ಅದಕ್ಕೆ ಸ್ವರದ ಲಕ್ಷಣ ಬರುತ್ತದೆ. ಹೀಗಾಗಿ ವ್ಯಂಜನ ಮತ್ತು 'ಋ'ಸ್ವರ ಒಂದೇ ಧ್ವನಿಯ ಎರಡು ನಿಯೋಗಗಳನ್ನು ಪ್ರತಿನಿಧಿಸುತ್ತವೆ.

ಕನ್ನಡದಲ್ಲಿ ಅಕ್ಷರರಚನೆಯು ಕೇಂದ್ರವಾಗಿ ಎಂದು 'ರ'ಕಾರ ಬರುವುದು ಸಾಧ್ಯವಿಲ್ಲವಾದರಿಂದ ಅದು ಯಾವಾಗಲೂ 'ರ್' ಎಂಬ ವ್ಯಂಜನವನ್ನು ಮಾತ್ರ ಒಪ್ಪಿಕೊಳ್ಳುತ್ತದೆ. ಸಹಜವಾಗಿಯೇ ಕನ್ನಡ ಧ್ವನಿರಚನೆಯಾಗಿ 'ಋ' ಎಂಬ ಸ್ವರಕ್ಕೆ ಸ್ಥಾನವಿಲ್ಲ. ಈ ವಿಶ್ಲೇಷಣೆ ನೆಲೆಯನ್ನು ಪಾರಂಪರಿಕ ವಿದ್ವಾಂಸರು ಎಷ್ಟು ಕ್ರಮವಾಗಿ ಬೆರೆಸಿದರೆಂದರೆ ತುಮಕೂರಿನಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ 'ಋ'ಕಾರವನ್ನು ಒಂದು ಲಿಪಿ ಚಿಹ್ನೆಯನ್ನಾಗಿ ಕನ್ನಡದಲ್ಲಿ ಉಳಿಸಿಕೊಳ್ಳಬೇಕು ಎಂಬ ನಿರ್ಣಯವನ್ನು ಮಾಡಲಾಯಿತು.

ಈ ಎರಡು ನಿದರ್ಶನಗಳು ನಮಗೆ ಸ್ಪಷ್ಟಪಡಿಸುತ್ತಿರುವ ಸಂಗತಿ ಎಂದರೆ ಭಾಷೆಯ ಅಧ್ಯಯನದಲ್ಲಿ ಹೊಸ ತಾತ್ವಿಕತೆಯನ್ನು ಅಳವಡಿಸಿಕೊಳ್ಳಲು ಕನ್ನಡ ಅಧ್ಯಯನ ಪರಂಪರೆ ಸಿದ್ಧವಿಲ್ಲ. ಅಷ್ಟೇ ಅಲ್ಲ ಅಂಥ ಪ್ರಯತ್ನಗಳನ್ನು ಸಾರಾಸಗಟಾಗಿ ವಿರೋಧಿಸುತ್ತವೆ. ಈ ಸಮಸ್ಯೆಯ ಮುಂದುವರಿಕೆ ಕಳೆದ ದಶಕದ ಕೆಲವು ವಾಗ್ವಾದಗಳಲ್ಲಿ ಮತ್ತಷ್ಟು ಗಟ್ಟಿಗೊಂಡಿದೆ. ಕನ್ನಡ ವ್ಯಾಕರಣಗಳನ್ನು ಮೊದಲಿನಿಂದಲೂ ಸಂಸ್ಕೃತ ಭಾಷೆಯ ರಚನೆಯ ನಿಯಮಗಳಿಗೆ ಅನುಗುಣವಾಗಿ ರೂಪಿಸಲಾಗಿದೆ. ಯಾವ ನಿಯಮಗಳು ಸಂಸ್ಕೃತಕ್ಕೆ ಸಲ್ಲುತ್ತವೆಯೋ ಅವು ಕನ್ನಡದಲ್ಲಿ ಇವೆಯೋ ಇಲ್ಲವೋ ಇದ್ದರೆ ಅವುಗಳ ಸ್ವರೂಪವೇನು? ಎನ್ನುವ ಮಾದರಿಯನ್ನು ಅನುಸರಿಸಲಾಗಿದೆ. ಕೆಲವೊಮ್ಮೆ ಸಂಸ್ಕೃತ ವ್ಯಾಕರಣದ ಚೌಕಟ್ಟಿಗೆ ಹೊಂದಿಸಲು ಕನ್ನಡ ಭಾಷೆಯಲ್ಲಿ ಇಲ್ಲದಿರುವ ರಾಚನಿಕ ನಿಯಮಗಳನ್ನು ಕಂಡುಕೊಳ್ಳುವ ವ್ಯರ್ಥ ಪ್ರಯತ್ನ ಮಾಡಲಾಗಿದೆ. ಇದರಿಂದಾಗಿ ಕನ್ನಡ ಭಾಷೆಯ ನಿಜವಾದ ಸ್ವರೂಪ ತಿಳಿಯುತ್ತಿಲ್ಲ. 19ನೇ ಶತಮಾನದಲ್ಲಿ ಕನ್ನಡಕ್ಕೆ ವ್ಯಾಕರಣ ರಚಿಸಿದ ಕ್ರಿಶ್ಚಿಯನ್ ಮಿಷನರಿಗಳು ಲ್ಯಾಟಿನ್ ಭಾಷೆಯ ನಿಯಮಗಳನ್ನು ರಚನೆಯ ಸ್ವರೂಪವನ್ನು ಕನ್ನಡದಲ್ಲಿ ಗುರುತಿಸಲು ಯತ್ನಿಸಿದರು. ಇಲ್ಲಿಯೋ ಕನ್ನಡದ ನಿಜಸ್ವರೂಪ ಪ್ರಕಟವಾಗುವ ಅವಕಾಶ ತಪ್ಪಿಹೋಯ್ತು. ಡಾ.ಡಿ.ಎನ್.ಶಂಕರ್‌ಭಟ್ ಅವರು ಈ ಪರಿಸ್ಥಿತಿಯನ್ನು ಮನಗಂಡು ಕನ್ನಡ ಭಾಷೆಯ ರಚನೆಯನ್ನು ಆ ಭಾಷೆಯ ಮೂಲಕವೇ ಕಂಡುಕೊಳ್ಳಬೇಕೆಂದು ವಾದಿಸುವ 'ಕನ್ನಡಕ್ಕೆ ಬೇಕು ಕನ್ನಡದೇ ವ್ಯಾಕರಣ' ಎಂಬ ಕೃತಿಯನ್ನು ರಚಿಸಿದರು. ಇಲ್ಲಿ ಅವರ ವಾದ ಎರಡು ನೆಲೆಯಲ್ಲಿ ಮುಂದುವರೆದಿದೆ. ಒಂದು ಸಂಸ್ಕೃತ ವ್ಯಾಕರಣದ ನಿಯಮಗಳು ಕನ್ನಡಕ್ಕೆ ಹೊಂದುವುದಿಲ್ಲ. ಎಂದು ತೋರಿಸುವುದು. ಎರಡು ಕನ್ನಡ ಭಾಷೆಯನ್ನು ವಿಶ್ಲೇಷಿಸುವ ಮೂಲಕವೇ ಆ ಭಾಷೆಯ ರಚನೆಯನ್ನು ಗ್ರಹಿಸಲು ತೊಡಗುವುದು. ಇವೆರಡು ಪೂರಕ ಪ್ರಯತ್ನಗಳು, ಕನ್ನಡದಲ್ಲಿ ಇರುವ ಪದವರ್ಗಗಳು ಎಷ್ಟು ಸಂಸ್ಕೃತದ ನಿಯಮದಂತೆ ನಾಮಪದ, ಮತ್ತು ವಿಶೇಷಣಗಳನ್ನು ಒಂದೇ ಪದವರ್ಗಕ್ಕೆ ಸೇರಿಸಿದರೆ ಆಗುವ ತೊಂದರೆಗಳೇನು, ಇವೆಲ್ಲ ಪ್ರಶ್ನೆಗಳನ್ನು ಭಟ್ ವಿವರಿಸುತ್ತಾರೆ. ಕನ್ನಡದಲ್ಲಿ ವಿಶೇಷಣಗಳು ನಾಮಪದದಿಂದ ಬೇರೆಯೇ ಆದ ಪದವರ್ಗವೆಂಬುದನ್ನು ತೋರಿಸಿಕೊಡುತ್ತಾ ಜಗತ್ತಿನ ಹಲವು ಭಾಷೆಗಳಲ್ಲಿ ಈ ಲಕ್ಷಣ ಇದೆ ಎಂಬುದನ್ನು ವಿವರಿಸಿದ್ದಾರೆ. ಹಾಗೆಯೇ ಕನ್ನಡದಲ್ಲಿ ಸಮಾಸಗಳನ್ನು ವಿವರಿಸುವಾಗ ಹೀಗಿರುವಂತೆ ಸಂಸ್ಕೃತದ ಸಮಾಸಗಳ ವ್ಯಾಖ್ಯೆಯನ್ನು ಬಳಸುವುದು

ಸೂಕ್ತವಲ್ಲ, ಕನ್ನಡದಲ್ಲಿ ಉತ್ತರ ಪದ ರಚನೆಯ ಕೇಂದ್ರವಾಗುವುದರಿಂದ ಆ ಪದವು ಯಾವ ಪದವರ್ಗಕ್ಕೆ ಉದಾ: ನಾಮಪದ, ಕ್ರಿಯಾಪದ ಮತ್ತು ಗುಣಪದ ಸೇರುತ್ತವೆ ಎಂಬುದನ್ನು ಅವಲಂಬಿಸಿ ಮೂರು ಬಗೆಯ ಸಮಾಸಗಳನ್ನು ಗುರುತಿಸಿದರೆ ಸಾಕು, ಎಂದು ವಾದಿಸುತ್ತಾರೆ. ಅವರ ಇಂಥಾ ವಾದಗಳು ಹಲವಿವೆ. ಮತ್ತೆ ಈ ಪುಸ್ತಕ ಪ್ರಕಟವಾದಾಗ ಪಾರಂಪರಿಕ ನೆಲೆಯ ಬೋಧನೆ ಮತ್ತು ಅಧ್ಯಯನಗಳಲ್ಲಿ ತೊಡಗಿದವರು ಮೊದಲನೆಯದಾಗಿ ಡಾ. ಭಟ್ ಅವರ ವಾದವನ್ನು ಒಪ್ಪುವುದು ಸಾಧ್ಯವಿಲ್ಲ. ಒಂದು ವೇಳೆ ಹಾಗೆ ಆಧುನಿಕ ಕನ್ನಡದ ಸಂದರ್ಭದಲ್ಲಿ ಒಪ್ಪಿದರು ಹಳೆಗನ್ನಡ ಅಧ್ಯಯನಕ್ಕೆ ಹಳೆಗನ್ನಡ ವ್ಯಾಕರಣಗಳೇ ಅಗತ್ಯ. ಎಂದು ವಾದಿಸಿದರು. ಈ ವಾದವನ್ನು ಗಮನಿಸಿದ ಡಾ. ಭಟ್ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಹಳೆಗನ್ನಡ ವ್ಯಾಕರಣಗಳು ಕೂಡ ಆ ಕನ್ನಡವನ್ನೂ ಸರಿಯಾಗಿ ವಿವರಿಸಿಲ್ಲವೆಂದು ತೋರಿಸಿದ್ದಾರೆ. 'ಹಳೆಗನ್ನಡ ವ್ಯಾಕರಣ ಎಷ್ಟು ಹಳೆಯದು' ಎಂಬ ಈ ಗ್ರಂಥ ಕೂಡ ಕನ್ನಡ ವಿದ್ವತ್ ಪ್ರಪಂಚದಲ್ಲಿ ಯಾವ ಎಲ್ಲವನ್ನು ತರಲಿಲ್ಲ. ಮತ್ತೆ ಶಬ್ದಮಣಿದರ್ಪಣ ಮೊದಲಾಗಿ ಕನ್ನಡ ಕೈಪಿಡಿವರೆಗಿನ ಎಲ್ಲ ಹಳೆಯ ಮಾದರಿಯ ವಿವರಣೆಗಳಿಗೆ ಹಿಂದಿರುಗಿದ್ದರು.

ಡಾ. ಭಟ್ ಅವರು ತಮ್ಮ ವಾದವನ್ನು ಸಮರ್ಥಿಸಲು ಇನ್ನೂ ಹಲವು ವಲಯಗಳಿಂದ ತಮ್ಮ ವಾದವನ್ನು ಮಂಡಿಸಿದರೂ ಮುಖ್ಯವಾಗಿ ಅವರ 'ಕನ್ನಡ ಬರಹವನ್ನು ಸರಿಪಡಿಸೋಣ' ಎಂಬ ಹೆಸರಿನ ಈ ಗ್ರಂಥ ಪ್ರಕಟವಾದುದ್ದು ತೀರಾ ಈಚೆಗೆ. ಇದರಲ್ಲಿ ಕನ್ನಡ ಬರವಣಿಗೆಯನ್ನು ಸಂಸ್ಕೃತ ಭಾಷೆ ಹಲವು ರೀತಿಯಲ್ಲಿ ನಿಯಂತ್ರಸುತ್ತಿದೆ. ಈ ನಿಯಂತ್ರಣ ತಪ್ಪಬೇಕಾದರೆ ಮಾತು ಮತ್ತು ಬರಹಗಳ ನಡುವೆ ಹೆಚ್ಚು ನಿಕಟವಾದ ಸಂಬಂಧವಿರಬೇಕು, ಬರಹದಂತೆ ಮಾತು ಇರುವುದಾದರೆ ಅದು ಕೃತಕವಾಗಿ ಬಿಡುತ್ತದೆ. ಆದ್ದರಿಂದ ಮಾತಿನಂತೆ ಬರಹ ಇರುವುದು ಸೂಕ್ತ, ಹಾಗಿಲ್ಲದಿದ್ದಲ್ಲಿ ಆಗುವ ಅಡ್ಡಿ ಆತಂಕಗಳೇನು ನಿವಾರಿಸುವುದು ಹೇಗೆ ಎಂಬ ಚರ್ಚೆಯನ್ನು ಮೊದಲು ಮಾಡುತ್ತಾರೆ ಡಾ.ಭಟ್ ತಮ್ಮ ವಾದವನ್ನು ಸಮರ್ಥಿಸಲು ಕನ್ನಡ ಬರವಣಿಗೆಯಲ್ಲಿ ಮಾತಿನ ಲಕ್ಷಣಗಳನ್ನು ಪಾಲಿಸದಿರುವ ಹಲವು ನಿದರ್ಶನಗಳನ್ನು ಪ್ರಯತ್ನಪಡುತ್ತಾರೆ. ಪದಗಳ ಆಯ್ಕೆ ಮತ್ತು ಬರವಣಿಗೆಯ ಕಾಗುಣಿತಗಳನ್ನು ಕುರಿತಂತೆ ಒಂದು ತೀವ್ರ ಪ್ರಾಯೋಗಿಕ ನೆಲೆಯನ್ನು ರೂಪಿಸಿಕೊಟ್ಟಿದ್ದಾರೆ. ಈ ಗ್ರಂಥ ಯಾವ ಪರಿಣಾಮವನ್ನು ಬೀರುತ್ತದೆ ಎಂಬುದನ್ನು ಕಾಯ್ದುನೋಡಬೇಕಾಗಿದೆ.

ಕಳೆದ ಐವತ್ತು ವರ್ಷದಲ್ಲಿ ಕನ್ನಡ ಅಧ್ಯಯನಗಳು ಚಾರಿತ್ರಿಕವಾಗಿ ಸಾಗಿರುವ ನಿದರ್ಶನಗಳು ಇವೆ. ಈ ಅಧ್ಯಯನಗಳಲ್ಲಿ ಒಂದು ಪದದ ನಿಷ್ಪತ್ತಿ, ಅರ್ಥಗಳನ್ನು ವಿವೇಚಿಸುವ ಜೊತೆಗೆ ಚಾರಿತ್ರಿಕವಾಗಿ ಏನೆಲ್ಲಾ ಬದಲಾವಣೆಗಳು ಆಗಿವೆ ಎನ್ನುವುದನ್ನು ವಿವರಿಸಲಾಗುತ್ತದೆ. ಮೈಸೂರು ವಿಶ್ವವಿದ್ಯಾಲಯದ ಪ್ರಕಟಣೆ ಪ್ರಬುದ್ಧ ಕರ್ನಾಟಕದಲ್ಲಿ 'ಕಮ್ಮಟದ ಕಿಡಿಗಳು' ಎಂಬ ಅಂಕಣ ಕರ್ನಾಟಕ ಭಾರತಿ ಪತ್ರಿಕೆಯ 'ಒರೆಗಲ್ಲು' ಈ ಅಂಕಣಗಳು ಇಂಥಾ ಅಧ್ಯಯನಗಳನ್ನು ಪ್ರಕಟಿಸಿವೆ. ಬಹುಮಟ್ಟಿಗೆ ಹಳೆಗನ್ನಡ ಕಾವ್ಯಗಳು

ಮತ್ತು ಶಾಸನಗಳನ್ನು ಅಭ್ಯಾಸ ಮಾಡುತ್ತಿದ್ದ ಅಧ್ಯಾಪಕರುಗಳು ಇಂಥಾ ಪ್ರಯತ್ನಗಳಲ್ಲಿ ತೊಡಗಿದರು ಪುನಾರಚನಾವಾದಿಗಳು ಎಂದು ಇವರನ್ನು ಕರೆಯಬಹುದು. ಈಗ ಇರುವ ಮಾಹಿತಿಯನ್ನು ಅವಲಂಬಿಸಿ ನಾವು ಬಲ್ಲ ಭಾಷಾ ನಿಯಮಗಳನ್ನು ಅನ್ವಯಿಸಿ ಹಿಂದೆ ಹೀಗಿತ್ತು ಎನ್ನುವ ತಿಳುವಳಿಕೆಯನ್ನು ನೀಡಲು ಮುಂದಾಗುತ್ತವೆ. ಈ ಪುನಾರಚನೆಯಲ್ಲಿ ಭಾಷಿಕ ಅಂಶಗಳಿಗೆ ಮತ್ತು ನಿಯಮಗಳಿಗೆ ಒತ್ತು ನೀಡಲಾಗಿದೆ. ಕಳೆದ ಎರಡು ದಶಕಗಳಲ್ಲಿ ಇಂಥ ಪ್ರಯತ್ನಗಳು ಕಡಿಮೆಯಾಗಿವೆ. ಇದನ್ನು ವಿದ್ವತ್ತಿನ ಕೊರತೆ ಎಂದು ವ್ಯಾಖ್ಯಾನಿಸಲಾಗಿದೆ. ಆದರೆ ವಿದ್ವತ್ ಶೋಧಗಳಿಗೆ ತೆತ್ತುಕೊಂಡ ಅಧ್ಯಯನಕಾರರ ಉದ್ದೇಶ ಮತ್ತು ಗುರಿಗಳು ಆಗಿವೆ. ಆದರೂ ಏಕೆ ಹಳೆಯ ಮಾದರಿಯ ವಿದ್ವತ್ತು ಕಾಣುತ್ತಿಲ್ಲವೆಂಬ ಕೊರಗು ಮೂಡುತ್ತಿದೆಯೋ ತಿಳಿಯದ್ದು. ಈಗ ಅವಧಾರಣೆ ಭಾಷೆಯ ರಚನೆಯ ವಿವರಣೆಗಿಂತ ಬಳಕೆಯ ವಿವರಣೆ ಕಡೆಗೆ ಒಲುಮೆಯನ್ನು ತೋರುತ್ತಿದೆ. ಹಾಗಾಗಿ ಪುನಾರಚನೆಯ ಮಾದರಿಗಳಿಗೆ ಅವಕಾಶ ಕಡಿಮೆಯಾಗಿದೆ.

ಕನ್ನಡ ಭಾಷೆಯ ಪುನಾರಚನೆಯ ಪ್ರಯತ್ನದ ಶಿಖರ ಸಾಧನೆಯೆಂದರೆ ಕನ್ನಡ ಸಾಹಿತ್ಯ ಪರಿಷತ್ತು ಸಿದ್ಧಪಡಿಸಿ ಪ್ರಕಟಿಸಿರುವ ಕನ್ನಡ ಕನ್ನಡ ನಿಘಂಟು. ಇದು ಕಳೆದ ಶತಮಾನದ ಐದನೇ ದಶಕದಲ್ಲೇ ಆರಂಭಗೊಂಡಿತ್ತಾದರೂ ಏಕೀಕರಣದ ಆನಂತರ ಮಾತ್ರ ಅದರ ಕಾರ್ಯ ಯೋಜನೆ ತೀವ್ರಗೊಂಡಿದೆ. ಸುಮಾರು ಮೂವತ್ತು ವರ್ಷಗಳ ಅವಧಿಯಲ್ಲಿ ಈ ನಿಘಂಟಿನ ಒಂದರಿಂದ ಎಂಟು ಸಂಪುಟಗಳು ರಚನೆಗೊಂಡು ಬಿಡುಗಡೆಯಾದವು. ಆಕ್ಸ್‌ಫರ್ಡ್ ಇಂಗ್ಲಿಶ್ ಡಿಕ್ಷನರಿಯ ಮಾದರಿಯನ್ನು ಆಧರಿಸಿರುವ ಈ ನಿಘಂಟಿನಲ್ಲಿ ಒಂದು ಪದದ ಸಮಕಾಲಿನ ಬಳಕೆಯ ವಿಶೇಷಣೆಗಿಂತ ಭಾಷೆಯ ಚಾರಿತ್ರಿಕ ವಿಕಾಸ ಮತ್ತು ವಿನ್ಯಾಸಗಳ ಕಡೆಗೆ ಹೆಚ್ಚು ಗಮನಹರಿದಿದೆ. ಹೀಗಾಗಿ ಪದದ ಬಳಕೆಯ ಚೌಕಟ್ಟಿನ ಬಗ್ಗೆ ಬೇರೆಯೇ ಚರ್ಚೆಗಳು ನಡೆಯಬೇಕಾಗುತ್ತವೆ. ಈ ನಿಘಂಟಿನಲ್ಲಿ ಪದ, ಪದರೂಪ, ವಿಕಲ್ಪಗಳು ಇವುಗಳನ್ನು ಮುಖ್ಯ ನಮೂದುಗಳನ್ನಾಗಿ ಮಾಡಿಕೊಳ್ಳಲಾಗಿದೆ. ಚಾರಿತ್ರಿಕವಾಗಿ ಆ ಪದದ ರೂಪ ಮತ್ತು ಅರ್ಥದಲ್ಲಿ ಆಗಿರುವ ಪರಿವರ್ತನೆ ಮತ್ತು ಬೆಳವಣಿಗೆಗಳನ್ನು ವಿವರವಾಗಿ ದಾಖಲಿಸಲಾಗಿದೆ ನೂರಾರು ಸಾಹಿತ್ಯ ಕೃತಿಗಳನ್ನು ಪ್ರಧಾನ ಆಕರಗಳನ್ನಾಗಿ ಮಾಡಿಕೊಳ್ಳಲಾಗಿದೆ.

ಈ ಸಂಪುಟಗಳ ಉದ್ದೇಶ ಪುನಾರಚನೆ ಎಂದರೂ ಕಳೆದ ಐವತ್ತು ವರ್ಷಗಳಲ್ಲಿ ಭಾಷೆಯನ್ನು ವಿಶ್ಲೇಷಿಸುವ ವಿಧಾನಗಳಲ್ಲಿ ತೀವ್ರತರದ ಬದಲಾವಣೆಗಳಾಗಿವೆ. ಇದರ ಪರಿಣಾಮ ನಿಘಂಟಿನ ರಚನೆಯ ಮೇಲೂ ಆಗಿದೆ. ಮೂವತ್ತು ವರ್ಷಗಳ ಅವಧಿ ಚಿಕ್ಕದೇ, ಆದರೂ ಸೂಕ್ಷ್ಮವಾಗಿ ಅಭ್ಯಾಸ ಮಾಡಿದರೆ ಒಂದನೇ ಸಂಪುಟದಿಂದ ಎಂಟನೇ ಸಂಪುಟದವರೆಗೆ ಈ ಬದಲಾವಣೆಗಳು ಅಘೋಷಿತವಾಗಿ ಕಾಣಿಸಿಕೊಂಡಿವೆ. ಮೊದಲ ಸಂಪುಟದಲ್ಲಿ ಇಂಗ್ಲಿಶಿನಿಂದ ಎರವಲು ಪಡೆದ ಪದಗಳನ್ನು ನಿಘಂಟಿನಲ್ಲಿ ಸೇರಿಸಲು ಹಿಂಜರಿಕೆ ಕಾಣುತ್ತದೆ. ಆದರೆ ಎಂಟನೆಯ ಸಂಪುಟದ ಹೊತ್ತಿಗೆ ಈ ಹಿಂಜರಿಕೆ ಮಾಯವಾಗುತ್ತದೆ.

ಮಾಹಿತಿಯ ಸಂಗ್ರಹ, ಜೋಡಣೆ, ವ್ಯಾಖ್ಯಾನ ಅಳವಡಿಕೆ ಇವುಗಳ ದೃಷ್ಟಿಯಿಂದ ಈ ನಿಘಂಟು ಅನನ್ಯವಾದುದ್ದು. ಇದಕ್ಕೆ ಸರಿದೂಗುವ ಪ್ರಯತ್ನಗಳು ಭಾರತದ ಬೇರೆಯಾವ ಭಾಷೆಯಲ್ಲೂ ಇರುವುದು ಸಂದೇಹ. ಆದರೆ ಐವತ್ತು ವರ್ಷಗಳಲ್ಲಿ ಕನ್ನಡ ಭಾಷೆ ಬಳಕೆಯ ದೃಷ್ಟಿಯಿಂದ ಪಡೆದುಕೊಂಡಿರುವ ಹೊಸ ಅರ್ಥ ವಿನ್ಯಾಸಗಳನ್ನು ನಿಯೋಗ ಪಲ್ಲಟಗಳನ್ನು ಈ ನಿಘಂಟು ಗುರುತಿಸುತ್ತಿಲ್ಲ. ಈ ಕಾರಣದಿಂದ ಈ ನಿಘಂಟಿನ ಬಳಕೆ ಅತ್ಯಂತ ಕನಿಷ್ಟ ಪ್ರಮಾಣದಲ್ಲಿದೆ. ಕನ್ನಡವನ್ನೇ ವಿಶೇಷ ವಿಷಯವನ್ನಾಗಿ ಕಲಿಯುವ ಮತ್ತು ಬೋಧಿಸುವ ಅಭ್ಯಾಸ ಮಾಡುವ ಜನರು ಈ ನಿಘಂಟನ್ನು ಬಳಸುವುದೇ ಇಲ್ಲ. ಈ ನಿಘಂಟನ್ನು ಭಾಷಾ ಅಧ್ಯಯನಕಾರರು ಪದ, ಪದಾರ್ಥಗಳ ಸಂಬಂಧದಲ್ಲಿ ನೋಡದೆ ಹೆಚ್ಚಿನ ಮಾಹಿತಿಯ ಆಕರವನ್ನಾಗಿ ಬಳಸುತ್ತಿದ್ದಾರೆ. ಈ ನಿಘಂಟು ಈಗಿರುವಂತೆ ಕನ್ನಡ ನಾಡಿನ ಭಾಷಾ ಅಧ್ಯಯನದ ಚಾರಿತ್ರಿಕ ನೆಲೆಗೆ ಒಂದು ಅತ್ಯುತ್ತಮ ಸ್ಮಾರಕವಾಗಿ ನಿಲ್ಲಬಹುದು.

ಕನ್ನಡ ಭಾಷೆಯ ಅಧ್ಯಯನಗಳು ಕಳೆದ ಐವತ್ತು ವರ್ಷದಲ್ಲಿ ಭಾಷೆಯ ಪ್ರಭೇದಗಳ ಅಧ್ಯಯನಗಳ ಕಡೆಗೂ ಗಮನ ಹರಿಸಿದೆ. ಈ ಬಗ್ಗೆ ಕೆಲವು ವಿವರಗಳು ಈಗಾಗಲೇ ಬಂದು ಹೋಗಿವೆ. ಉಪ ಭಾಷೆಗಳ ಅಧ್ಯಯನ ಈ ಹಿಂದೆ ನಡೆಯುತ್ತಿದೆ. ವಿಧಾನದ ತಾತ್ವಿಕತೆಗೂ ಈಗಿನ ತಾತ್ವಿಕತೆಗೂ ಸಾಕಷ್ಟು ವ್ಯತ್ಯಾಸಗಳಿವೆ. ಉಪಭಾಷೆಗಳು ಪ್ರಮಾಣ ಅಥವಾ ಶಿಷ್ಟ ಭಾಷೆಯ ಅಪಭ್ರಂಶಗಳು ಮುಖ್ಯ ಧಾರೆಯಿಂದ ಪಕ್ಕಕ್ಕೆ ಸರಿದು ಬೇರೆಯದೇ ಆದ ಭಾಷಿಕ ಸಮುದಾಯವನ್ನು ಪಡೆದುಕೊಂಡಿರುವ ಭಾಷಾ ಪ್ರಬೇದ ಎಂದು ವಿವರಿಸಲಾಗುತ್ತಿತ್ತು. ಅದಕ್ಕಾಗಿಯೇ ಆ ಪ್ರಭೇದಕ್ಕೂ ಪ್ರಮಾಣ ಭಾಷೆಗು ಇರುವ ವ್ಯತ್ಯಾಸಗಳನ್ನು ಒಂದೆಡೆ ಗುರುತಿಸುತ್ತಾ ಮತ್ತೊಂದೆಡೆ ಈ ಉಪಭಾಷೆಗಳು ಕೇವಲ ವಿಕಲ್ಪಗಳಾಗಿ ಉಳಿಯುವ ಬದಲು ಮುಖ್ಯಧಾರೆಗೆ ಅಂದರೆ ಪ್ರಮಾಣ ಭಾಷೆಗೆ ಹೊರಳಬೇಕು ಎಂಬುದೇ ಒಂದು ಗುರಿಯಾಗಿತ್ತು. ಉಪಭಾಷೆಯ ಹಲವು ಪರ್ಯಾಯಗಳನ್ನು ವಿವರಿಸುವಾಗ ಅದನ್ನಾಡುವ ಜನರ ಪರಿಸ್ಥಿತಿಯನ್ನು ಮುಖ್ಯ ನೆಲೆಯಾಗಿ ಇರಿಸಿಕೊಳ್ಳಲಾಗುತ್ತಿತ್ತು.

ಆದರೆ ಈಗ ಉಪಭಾಷೆಗಳನ್ನು ನೋಡುವ ಬಗೆ ಬೇರೆಯಾಗಿದೆ. ಉಪಭಾಷೆಗಳನ್ನು ಅನುಬಂಧಗಳೆಂದು ನೋಡುವ ಬದಲು ಅವು ಭಾಷೆಯ ವಿಭಿನ್ನ ಅವಸ್ಥೆಗಳನ್ನು ಪ್ರತಿನಿಧಿಸುತ್ತವೆಯೆಂದು ಅಲ್ಲದೇ ಒಂದು ಭಾಷಿಕ ಸಮುದಾಯದ ಚಹರೆಗಳನ್ನು ಹೊಂದಿರುತ್ತವೆ ಎಂದು ತಿಳಿಯಲಾಗುತ್ತಿದೆ. ಅಲ್ಲದೇ ಉಪಭಾಷೆಗಳ ನಿರ್ನಾಮ ಅಥವಾ ಏಕರೂಪೀಕರಣ ಮುಖ್ಯ ಗುರಿಯಾಗದೆ, ಭಾಷಾ ವಿನ್ಯಾಸಗಳ ಹಾಸುಹೊಕ್ಕೊಂದನ್ನು ಉಳಿಸಿಕೊಳ್ಳಬೇಕು ಎಂಬ ತರ್ಕ ಮುಂದೆ ಬಂದಿದೆ. ಇದೂ ಅಲ್ಲದೇ ಉಪಭಾಷೆ ಮತ್ತು ಪ್ರಮಾಣ ಭಾಷೆಗಳನ್ನು ತರತಮ ಭಾವದಿಂದ ನೋಡುವ ಬದಲು ಅವೆರಡರ ನಡುವೆ ಇರುವುದು ಭಿನ್ನತೆ ಮಾತ್ರವೇ ಹೊರತು ತಾರತಮ್ಯದ ನಿರೂಪಣೆಯಲ್ಲ. ಈ ದೃಷ್ಟಿಕೋನದ ವ್ಯತ್ಯಾಸ ಗಮನಾರ್ಹವಾಗಿದೆ.

ಕನ್ನಡ ಭಾಷಾ ಅಧ್ಯಯನದಲ್ಲಿ ನಡೆದಿರುವ ಮತ್ತೊಂದು ಮುಖ್ಯ ಪರಿವರ್ತನೆ ಎಂದರೆ ಭಾಷೆಯನ್ನು ಒಂದು ಸ್ವಾತಂತ್ರ ಸಾಮರ್ಥ್ಯ ಎಂದು ತಿಳಿಯದೇ ಅದನ್ನು ಸಾಮಾಜಿಕ ರಚನೆಯ ವಿನ್ಯಾಸಗಳನ್ನು ಸೂಚಿಸುವ ಒಂದು ಸಾಧ್ಯ ಎಂದು ಪರಿಗಣಿಸಬೇಕು. ಇಲ್ಲಿ ಒಂದು ಸ್ಪಷ್ಟ ವಿವರಣೆ ಅಗತ್ಯ. ಭಾಷೆಯೂ ಸಾಮಾಜಿಕ ನೆಲೆಯ ಸೂಚಕ ಎಂದರೆ ಏನು? ಸಾಮಾಜಿಕ ನೆಲೆಯಲ್ಲಿರುವ ವಿನ್ಯಾಸಗಳಿಗೆ ಘಟಕಗಳ ನಡುವಣ ಒಳಸಂಬಂಧಗಳಿಗೆ ಭಾಷೆ ಕಾರಣ ಎಂದಲ್ಲ. ಆದರೆ ಆ ಸಾಮಾಜಿಕ ವಿನ್ಯಾಸ ಭಾಷೆಯಲ್ಲಿ ಕಾಣಿಸಿಕೊಳ್ಳುತ್ತದೆ. ಅದು ಸೂಚಕದ ಕೆಲಸವನ್ನು ಮಾಡುತ್ತದೆ. ಹೀಗೆಯೇ ಸೂಚಕವಾಗಿ ಕೆಲಸ ಮಾಡುವಾಗಲೇ ಪರೋಕ್ಷವಾಗಿ ಈ ಭಾಷೆಯ ಲಕ್ಷಣಗಳಿಂದ ಪ್ರಭಾವಿತವೂ ಆಗಿರುತ್ತದೆ. ಇದೊಂದು ದ್ವಂದ್ವಾತ್ಮಕ ಸಂಬಂಧ. ಈ ಸಂಬಂಧದಲ್ಲಿ ಭಾಷೆ ಕೇವಲ ಸೂಚಕವಾಗಿರುತ್ತದೆ ಎಂದಷ್ಟೇ ತಿಳಿಯುವುದು ಸರಿಯಾಗದ್ದು. ಹಾಗೆಯೇ ಯಾವ ವಿನ್ಯಾಸವನ್ನು ತನ್ನ ಮೂಲಕ ಸೂಚಿತವಾಗಿದೆಯೋ ಅದು ತನ್ನ ಮೇಲೆ ಯಾವ ಪ್ರಭಾವವು, ಪರಿಣಾಮವು ಉಂಟಾಗದಂತೆ ಇರುವುದು ತುಂಬಾ ಕಷ್ಟ. ಆದ್ದರಿಂದ ಭಾಷೆ ತಾರತಮ್ಯಕ್ಕೆ ಕಾರಣವಾಗದಿದ್ದರೂ ಆ ತಾರತಮ್ಯದ ಪರಿಣಾಮಕ್ಕೆ ಮಾತ್ರ ಗುರಿಯಾಗಿರುತ್ತದೆ. ಈ ಬದಲಾದ ದೃಷ್ಟಿಕೋನ ಕನ್ನಡ ಭಾಷಾ ಅಧ್ಯಯನ ಕ್ಷೇತ್ರಕ್ಕೆ ಒಂದು ಹೊಸ ನೆಲೆಗಟ್ಟನ್ನು ಒದಗಿಸಿದೆ.

ಇಷ್ಟಾದರೂ ಕನ್ನಡ ಭಾಷೆಯನ್ನು ಸಮಕಾಲೀನ ನೆಲೆಯಲ್ಲಿ ವರ್ಣನಾತ್ಮಕವಾಗಿ ಚಾರಿತ್ರಿಕ ನೆಲೆಯಲ್ಲಿ ಚಾರಿತ್ರ್ಯಾತ್ಮಕವಾಗಿ ಗ್ರಹಿಸುವ ಯತ್ನಗಳು ಅಗಾಧ ಪ್ರಮಾಣದಲ್ಲಿ ನಡೆದಿವೆಯಾದರೂ ಅಖಿಲ ಕರ್ನಾಟಕ ವ್ಯಾಪ್ತಿಯ ಭಾಷಾ ವಿನ್ಯಾಸಗಳನ್ನು ಕಂಡುಕೊಳ್ಳುವುದು ಸಾಧ್ಯವಾಗಿಲ್ಲ. ಕನ್ನಡದ ಎಷ್ಟೋ ಪ್ರಭೇದಗಳು ಈ ಅಧ್ಯಯನಕ್ಕೆ ಒಳಗಾಗಿಲ್ಲ. ಹೀಗಾಗಿ ಇಂದಿನ ಕನ್ನಡದ ಲಕ್ಷಣಗಳನ್ನು ಗ್ರಹಿಸಲು ಹೊಸ ಪ್ರಯತ್ನಗಳನ್ನು ಮಾಡಬೇಕಾಗಿದೆ.

# ಕನ್ನಡ ಮತ್ತು ಸಾಹಿತ್ಯ

ಭಾಷೆ ಮತ್ತು ಸಾಹಿತ್ಯಗಳ ನಡುವೆ ಇರುವ ಸಂಬಂಧ ಪ್ರಾಚೀನವಾದುದು. ಕನ್ನಡ ಸಾಹಿತ್ಯ ಚರಿತ್ರೆಯ ಬರವಣಿಗೆಯಲ್ಲಿ ಕನ್ನಡ ಭಾಷೆಯ ಬಗೆಗೆ ಚರ್ಚೆಗಳು ಬಂದೇಬರುತ್ತವೆ. ಭಾಷೆಯ ವಿವಿಧ ಸಾಹಿತ್ಯಗಳನ್ನು ಚರ್ಚಿಸುವವರು ಸಾಹಿತ್ಯವನ್ನು ಒಂದು ಮುಖ್ಯ ಸಾಧನೆಯನ್ನಾಗಿ ಪರಿಗಣಿಸುತ್ತಾರೆ. ಸಾಹಿತ್ಯ ಚರಿತ್ರೆಗೂ ಭಾಷಾ ಚರಿತ್ರೆಗೂ ನೇರ ಸಂಬಂಧವನ್ನು ಕಲ್ಪಿಸುವುದು ಸಾಧ್ಯವಿಲ್ಲ. ಉದಾ: ಹಳೆಗನ್ನಡದಿಂದ ನಡುಗನ್ನಡಕ್ಕೆ ಪರಿವರ್ತನೆ ಹೊಂದಿದ್ದಕ್ಕೂ ಸಾಹಿತ್ಯ ವಲಯದಲ್ಲಿ ಆದ ಬದಲಾವಣೆಗೂ ಸಂಬಂಧಗಳನ್ನು ಹುಡುಕುವುದು ಅಸಾಧ್ಯ. ಹಾಗೆಂದು ಅವರೆರಡು ಪರಸ್ಪರ ಸಂಬಂಧವಿಲ್ಲದ ಘಟನೆಗಳು ಎಂದು ತಿಳಿಯುವುದು ಸರಿಯಲ್ಲ. ಉದಾ: ಹಳೆಗನ್ನಡದ ರಚನೆಗೂ ನಡುಗನ್ನಡದ ರಚನೆಗೂ ಇರುವ ವ್ಯತ್ಯಾಸವನ್ನು ಅಕ್ಷರಗಣ ಮತ್ತು ಮಾತ್ರಾ ಗಣಗಳ ಸಂಬಂಧದಲ್ಲಿ ಗುರುತಿಸಲು ಸಾಧ್ಯವಿದೆ. ಹೀಗೆ ಭಾಷಾ ಚರಿತ್ರೆಯನ್ನು ಸಾಹಿತ್ಯ ರಚನೆಯೊಡನೆ ಇಟ್ಟು ನೋಡುವುದು ಅಗತ್ಯವಾಗುತ್ತದೆ.

ಕನ್ನಡದ ಸಂದರ್ಭದಲ್ಲಿ ಈ ಮಾತು ಇನ್ನಷ್ಟು ಮುಖ್ಯವಾಗುವುದು. ಏಕೆಂದರೆ ಕನ್ನಡ ಪರಂಪರೆಯ ಪುನಾರಚನೆ ಮಾಡುವವರು ಅನಿವಾರ್ಯ ಎನ್ನುವಂತೆ ಸಾಹಿತ್ಯ ಪರಂಪರೆಯನ್ನು ಉಲ್ಲೇಖಿಸುತ್ತಾರೆ. ಆ ಕೃತಿಕಾರರ ಕೃತಿಗಳನ್ನು ತಮ್ಮ ನೆನಪುಗಳ ಭಾಗವನ್ನಾಗಿ ಮಾಡಿಕೊಳ್ಳುತ್ತಾರೆ. ಕನ್ನಡ ಹೆಮ್ಮೆಯ ಮಾತುಗಳನ್ನು ಆಡುವವರು ಕವಿಗಳನ್ನು ಸೂಚಕಗಳನ್ನಾಗಿ ಬಳಸುತ್ತಾರೆ. ಆದ್ದರಿಂದ ಭಾಷೆಯ ಮಾತಿನಲ್ಲಿ ಸಾಹಿತ್ಯ ಸೇರಿಕೊಳ್ಳುವುದು ಅಗತ್ಯವಾಗಿದೆ.

ಏಕೀಕರಣದ ಸುಮಾರಿನಲ್ಲಿ ಕನ್ನಡ ಸಾಹಿತ್ಯದಲ್ಲಿ ಒಂದು ಮುಖ್ಯ ಚರ್ಚೆ ಆರಂಭವಾಗಿತ್ತು. ಅದು 20ನೇ ಶತಮಾನದ ಕನ್ನಡ ಸಾಹಿತ್ಯದ ಕೆಲವು ದೃಷ್ಟಿಕೋನಗಳನ್ನು ಪ್ರಶ್ನಿಸುವ ಆಸಕ್ತಿಯನ್ನು ಪಡೆದಿತ್ತು. ಆದರ್ಶ, ಕನಸು, ಸನಾತನ, ಮೌಲ್ಯಶ್ರದ್ಧೆ, ನಾಯಕ ಕಲ್ಪನೆ, ಇವೆಲ್ಲವೂ ಪ್ರಶ್ನಾರ್ಹವಾಗತೊಡಗಿದ್ದವು. ಸಾಹಿತ್ಯದ ವಸ್ತುವಿನ ಜೊತೆಗೆ ಆಶಯ ಮತ್ತು ಭಾಷಾ ರೂಪಗಳು ಬದಲಾಗಬೇಕು ಎನ್ನುವ ವಾದಗಳು ಮಂಡನೆಯಾಗುತ್ತಿದ್ದವು. ಸಾಮಾನ್ಯವಾಗಿ ನವೋದಯ ಎಂದು ಗುರುತಿಸಲಾಗುವ ಸಾಹಿತ್ಯ ಪರಂಪರೆಯನ್ನು ಪ್ರಗತಿಶೀಲ ಚಳುವಳಿ ವಿರೋಧಿಸಿತೆಂದು ಅನಂತರ ನವ್ಯ ಚಳುವಳಿ ಆರಂಭವಾಯಿತೆಂದು ಸಾಹಿತ್ಯದ ವಿದ್ಯಾರ್ಥಿಗಳಿಗೆ ಪಾಠ ಹೇಳುವ ಅಭ್ಯಾಸವಿದೆ. ಆದರೆ ಅಧಿಕಾರ ಹಸ್ತಾಂತರದ ಹೊತ್ತಿನಲ್ಲಿ ಕನ್ನಡ ಸಾಹಿತ್ಯದಲ್ಲಿ ಎರಡು ಪ್ರಮುಖ ಧ್ವನಿಗಳು ವಿರೋಧಿ ನೆಲೆಯಲ್ಲಿ

ಕೇಳತೊಡಗಿದ್ದವು. ಆದ್ದರಿಂದ ಪ್ರಗತಿಶೀಲ ಮತ್ತು ನವ್ಯ ಎನ್ನುವ ಪರಂಪರೆಗಳು ಬೇರೆ ಬೇರೆ ಕಾಲಘಟ್ಟದಲ್ಲಿ ಉದಯಿಸಿದವು ಎಂದು ತಿಳಿಯುವುದು ಅಷ್ಟು ಸರಿಯಲ್ಲ. ಈ ಪ್ರಶ್ನೆ ಬದಿಗಿರಿಸಿದರು. 1956ರ ಹೊತ್ತಿಗೆ ಕನ್ನಡ ಸಾಹಿತ್ಯದಲ್ಲಿ ವಾಸ್ತವತಾ ವಾದದ ಪ್ರಾಬಲ್ಯ ಹಲವು ರೀತಿಗಳಲ್ಲಿ ನೆಲೆಯೂರಿತ್ತು. ಕಾದಂಬರಿಗಳಲ್ಲಿ ಮತ್ತು ಕಾವ್ಯದಲ್ಲಿ ಬೇರೆ ಬೇರೆ ಪ್ರಯೋಗಗಳಿಗೆ ಕಾರಣವಾಗಿತ್ತು. ಅ.ನ.ಕೃ, ನಿರಂಜನ, ತ.ರಾ.ಸು, ಚದುರಂಗ, ನಾಡಿಗೇರ್ ಮುಂತಾದವರ ಪ್ರಗತಿಶೀಲ ಚಿಂತನೆಗಳು ಯುದ್ಧೋತ್ತರ ಜಗತ್ತಿನ ಭ್ರಮನಿರಸನಗಳನ್ನು ಕನ್ನಡ ಸಂದರ್ಭದಲ್ಲಿ ಹೊಂದಿಸುತ್ತಿದ್ದರು.

ನಗರೀಕರಣದ ವಿನ್ಯಾಸಗಳು ಜೀವನ ಕ್ರಮದ ಮೇಲೆ ಬರುವ ಪರಿಣಾಮಗಳನ್ನು ಇವರೆಲ್ಲ ಬೇರೆ ಬೇರೆ ರೀತಿಯಲ್ಲಿ ಶೋಧಿಸುತ್ತಿದ್ದರು. ಅಡಿಗರು ಮತ್ತು ರಾಮಚಂದ್ರಶರ್ಮ ತಮ್ಮ ಕಾವ್ಯದಲ್ಲಿ ಸಾಮಾಜಿಕ ವ್ಯಕ್ತಿಗಿಂತ ಭಿನ್ನವಾದ ವ್ಯಕ್ತಿಯ ಹುಡುಕಾಟದಲ್ಲಿ ತೊಡಗಿದರು. ಈ ವಿವರಗಳು ಏಕೀಕರಣದ ಸಂದರ್ಭದ ಕನಸು ನನಸಾದ ಭಾವದೊಡನೆ ಹೇಗೆ ಹೊಂದಿಕೊಂಡವು ಎನ್ನುವುದು ಕುತೂಹಲದ ವಿಷಯ. ಕನ್ನಡ ಸಂಸ್ಕೃತಿಯ ಎಳೆಗಳನ್ನು ಹುಡುಕಲು ತಮ್ಮದೇ ಆದ ರೀತಿಯಲ್ಲಿ ಯತ್ನಿಸುತ್ತಿದ್ದ ಅ.ನ.ಕೃ. ಅಂಥವರಿಗೆ ಏಕೀಕರಣ ಒಂದು ಅರ್ಥಪೂರ್ಣ ಘಟನೆ ಎನ್ನಿಸಿದರೆ ಆಶ್ಚರ್ಯವಿಲ್ಲ. ಉಳಿದವರು ಈ ಸಂದರ್ಭವನ್ನು ತಮ್ಮ ಎಂದಿನ ಸಾಹಿತ್ಯಕ ಗ್ರಹಿಕೆಯಲ್ಲಿ ಮಂಡಿಸಿದಂತೆ ತೋರುತ್ತದೆ. ಆದರೂ ಕುವೆಂಪು ಕಲ್ಪಿಸುವ ಕಾಲ ದೇಶಾತೀತ ಕರ್ನಾಟಕ ಮತ್ತು ಕರ್ನಾಟಕವೆಂಬ ಪದದ ಮಾಂತ್ರಿಕತೆಯಾಗಲಿ ಬೇಂದ್ರೆಯವರು ಅದೇ ಸಂದರ್ಭದಲ್ಲಿ ಎತ್ತಿದ ಇನ್ನೊಂದು ಪ್ರಶ್ನೆಯಾಗಲಿ ಮುಖ್ಯವಾಗುತ್ತದೆ. ಹುಯಿಲಗೋಳ ನಾರಾಯಣರಾಯರ ಉದಯವಾಗಲಿ ನಮ್ಮ ಚಲುವ ಕನ್ನಡ ನಾಡು ಎಂಬ ನಾಡಗೀತಿಯನ್ನು ಏಕೀಕರಣ ಸಂದರ್ಭದಲ್ಲಿ 'ಉದಯವಾಯಿತು' ಎಂದು ಬದಲಾಯಿಸಲು ಕೆಲವರು ಸಲಹೆ ಮಾಡುತ್ತಾರೆ. ಇವರ ಉತ್ಸಾಹದ ಮಾತುಗಳಿಗೆ ಪ್ರತಿಕ್ರಿಯಿಸದೆ ಬೇಂದ್ರೆಯವರು 'ಉದಯವಾಗಲಿ' ಎಂದು ಇರುವುದೇ ಸರಿ ಎನ್ನುತ್ತಾರೆ. ಬೇಂದ್ರೆಯವರ ಗ್ರಹಿಕೆಯಂತೆ ಯಾವುದು ಆಗಿ ಬಿಡುವುದಿಲ್ಲ. ಅದು ಸಾದಾ ಆಗುತ್ತಿರಬೇಕು. ಆಗಬೇಕೆಂಬ ಹಂಬಲ ಸದಾ ಇರಬೇಕು. ಆದ್ದರಿಂದ ಕರ್ನಾಟಕ ಉದಯವಾಯಿತು ಎಂದು ವಾಕ್ಯಕ್ಕೆ ಪೂರ್ಣವಿರಾಮ ಹಾಕಬೇಕು ಎನ್ನುವುದನ್ನು. ಅವರು ನಿರಾಕರಿಸುತ್ತಾರೆ. ಉದಯವಾಗಲಿ ಎಂಬ ಕೋರಿಕೆಯು ಇರಬೇಕೆನ್ನುತ್ತಾರೆ. ಹಿರಿಯ ತಲೆಮಾರಿನ ಈ ಇಬ್ಬರು ಬರಹಗಾರರ ಪ್ರತಿಕ್ರಿಯೆಗಳು ಕುತೂಹಲಕಾರಿಯಾಗಿವೆ. ಕರ್ನಾಟಕ ರಾಜ್ಯ ನಿರ್ಮಾಣದ ಹಿಂದೆ ಇರುವುದು ಒಂದು ರಾಜಕೀಯ ನಿರ್ಧಾರವೆ ಹೊರತು ಅದೊಂದು ಸಾಂಸ್ಕೃತಿಕ ಅವಿಷ್ಕಾರವಲ್ಲ ಎನ್ನುವ ಒಳನೋಟ ಅವರಲ್ಲಿ ಇದ್ದಂತಿದೆ. ಐವತ್ತು ವರ್ಷಗಳು ಕಳೆದ ಮೇಲೆ ಈ ಪ್ರತಿಕ್ರಿಯೆಗಳು ಈಗ ಮತ್ತಷ್ಟು ಅರ್ಥಪೂರ್ಣವಾಗಿ ಕಾಣುತ್ತಿವೆ.

ಕಳೆದ ಐವತ್ತು ವರ್ಷದಲ್ಲಿ ಕನ್ನಡ ಸಾಹಿತ್ಯ ಕ್ಷೇತ್ರ ಅಗಾಧ ಪ್ರಮಾಣದ ಬದಲಾವಣೆಗಳನ್ನು ಕಂಡಿದೆ. ಕೃತಿ ರಚನೆಯ ಹೆಚ್ಚಳ ಕೃತಿಕಾರರ ಹೆಚ್ಚಳ ಮುಂತಾದ ಪರಿಮಾಣದ ನೆಲೆಯ ಮಾತುಗಳು ಅಷ್ಟು ಮುಖ್ಯವಲ್ಲ. ಹಾಗೆಯೇ ಗುಣಾತ್ಮಕವಾದ

ಮೌಲ್ಯ ನಿರ್ಣಯದ ನೆಲೆಯ ಮಾತುಗಳು ಅಷ್ಟು ಮುಖ್ಯವಲ್ಲ. ಕೊನೆಯ ಪಕ್ಷ ಈ ಚರ್ಚೆಯ ಸಂದರ್ಭದಲ್ಲಿ ಅವುಗಳನ್ನು ನಾವು ಪರಿಗಣಿಸಬೇಕಾಗಿಲ್ಲ. ಆದರೆ ಈ ಐವತ್ತು ವರ್ಷದಲ್ಲಿ ತಾತ್ವಿಕ ನೆಲೆಯಲ್ಲಿ ಆಗಿರುವ ಬದಲಾವಣೆಗಳು ಸಾಮಾಜಿಕ ಪರಿವರ್ತನೆಗಳಿಗೂ ಮತ್ತು ಭಾಷೆಯ ಸ್ಥಿತಿಗತಿಗಳಿಗೂ ಸಂಬಂಧವೊಂದು ರೂಪುಗೊಂಡಿದೆ. ಅದನ್ನು ಮುಂಚೂಣಿಗೆ ತಂದು ಚರ್ಚಿಸುವುದು ಅಗತ್ಯವಾಗಿದೆ.

ಇಪ್ಪತ್ತನೆಯ ಶತಮಾನದ ಸುಮಾರಿಗೆ ಕನ್ನಡದಲ್ಲಿ ಸಾಹಿತ್ಯವೆಂಬ ಪರಿಕಲ್ಪನೆಯನ್ನು ಒಂದು ಸ್ವಯಂ ಪೂರ್ಣ ಘಟನೆ ಎಂಬಂತೆ ಚರ್ಚಿಸುವ ಪ್ರವೃತ್ತಿ ಬಲಗೊಂಡಿತ್ತು. ಇದಕ್ಕೆ ರಾಜಕೀಯವಾಗಿ ಆಗಿದ್ದ ಬದಲಾವಣೆಗಳು ಮತ್ತು ಯುರೋಪಿಯನ್ ಸಾಹಿತ್ಯದ ಪ್ರಭಾವಗಳು ಕಾರಣವಾಗಿದ್ದವು. ಅನಂತರದ ಅರ್ಧ ಶತಮಾನ ಸಾಹಿತ್ಯ ಕೃತಿಗಳು ಮತ್ತು ಕೃತಿಕಾರರ ನಡುವೆ ಒಂದು ಜೈವಿಕ ಸಂಬಂಧವನ್ನು ರೂಪಿಸಿದ್ದವು. ಈ ಸಂದರ್ಭದಲ್ಲಿ ಓದುಗ ಜಗತ್ತು, ಆ ಕೃತಿ, ಕೃತಿಕಾರ ಸಂಬಂಧವನ್ನು ಹೊರಗಿನಿಂದ ಪರಿಭಾವಿಸುವ ಮತ್ತು ಅದರಿಂದ ಉಪಕೃತರಾಗುವ ನೆಲೆಯಲ್ಲಿ ಇದ್ದಿತು. ಆದರೆ ಕಳೆದ ಐವತ್ತು ವರ್ಷದಲ್ಲಿ ನಿಧಾನವಾಗಿ ಸಾಹಿತ್ಯ ಕೃತಿಗಳ ಈ ಮಾಂತ್ರಿಕತೆಯ ವ್ಯಾಖ್ಯೆ ತಪ್ಪಿದೆ. ಅಂದರೆ ಸಾಹಿತ್ಯ ಕೃತಿಗಳನ್ನು ಕೇವಲ ಭಾಷಿಕ ನಿರೂಪಣೆಗಳು ಎಂದು ಪರಿಗಣಿಸಬೇಕೆ ಹೊರತು ಅದರಾಚೆಗೆ ಏನೇ ಇದ್ದರು ಅವೆಲ್ಲವೂ ಗೌಣ. ಅವುಗಳ ಪ್ರಭಾವ ಮುಖ್ಯವಾದುದಲ್ಲ. ಆದ್ದರಿಂದ ಸಾಹಿತ್ಯ ಕೃತಿಗಳನ್ನು ಭಾಷೆಯ ಹಲವು ನಿರೂಪಣೆಗಳೊಡನೆ ಇರಿಸಿ ನೋಡುವುದು ಅಗತ್ಯವೆನಿಸತೊಡಗಿತ್ತು.

ಇಪ್ಪತ್ತೊಂದನೇ ಶತಮಾನದ ಆರಂಭದ ಹೊತ್ತಿಗೆ ಸಾಹಿತ್ಯ ಕೃತಿಗಳು ಕೇವಲ ಭಾಷಿಕ ನಿರೂಪಣೆಗಳು. ಅವುಗಳನ್ನು ಇತರ ಸಂಕಥನಗಳ ರೀತಿಯಲ್ಲೇ ಪರಿಶೀಲಿಸಬೇಕು. ಅವುಗಳಿಗೆ ನಾವು ಕಲ್ಪಿಸುವ ಕಾಲದೇಶಾತೀತವಾದ ಆಯಾಮಗಳು ಆಯಾ ಹೊತ್ತಿನ ಸಾಂಸ್ಕೃತಿಕ ಸಂದರ್ಭಗಳ ಆರೋಪಣೆಯೇ ಹೊರತು ಆ ಕೃತಿಗಳಲ್ಲೇ ಅಂತಸ್ಥವಾಗಿರುವ ಗುಣಲಕ್ಷಣವಲ್ಲ. ಈ ತಾತ್ವಿಕತೆ ಸಾಹಿತ್ಯ ಕೃತಿಗಳಿಗೆ ಒದಗಿದ್ದು ಈವರೆಗಿನ ನಮ್ಮ ಎಷ್ಟೋ ಚರ್ಚೆಗಳನ್ನು ನಿರರ್ಥಕಗೊಳಿಸಿತ್ತು. ಏಕೆಂದರೆ ಒಂದು ಭಾಷಿಕ ನಿರೂಪಣೆಗೆ ಅಗತ್ಯವಾದ ಎಲ್ಲ ಪರಿಕಲ್ಪನಾತ್ಮಕ ನೆಲೆಗಳು ಸಾಂಸ್ಕೃತಿಕವಾಗಿ ದತ್ತವಾಗುತ್ತವೆಯೇ ಹೊರತು ಕೃತಿಕಾರನ ಅನನ್ಯತೆ ಎಂಬುದು ಒಂದು ಮುಖ್ಯ ಸಂಗತಿಯಲ್ಲ. ಈ ಗ್ರಹಿಕೆಯಿಂದ ಸಾಹಿತ್ಯಕವಾಗಿ ಏನು ಪರಿಣಾಮವಾಯಿತು ಎಂಬುದು ಅದು ನಮಗಿಲ್ಲಿ ಮುಖ್ಯವಲ್ಲ. ಆದರೆ ಭಾಷೆಯೂ ಒಂದು ಕಾಲಘಟ್ಟದಲ್ಲಿ ತಳೆಯುವ ಲಿಖಿತ ನಿರೂಪಣೆಗಳ ವ್ಯಾಖ್ಯೆ ಮಾತ್ರ ಬದಲಾಗತೊಡಗಿತ್ತು.

ಏಳನೆಯ ದಶಕದಲ್ಲಿ ಕರ್ನಾಟಕದಲ್ಲಿ ನಡೆದ ಕೆಲವು ಸಾಮಾಜಿಕ ಪರಿವರ್ತನೆಗಲ ಪರಿಣಾಮವಾಗಿ ಆವರೆಗೆ ಸಮಾಜ ಒಪ್ಪಿದ ಸಾಂಸ್ಕೃತಿಕ ನಾಯಕತ್ವದ ಕಲ್ಪನೆ ಬದಲಾಯಿತು. ನಾಯಕರು ಒಂದು ಕಾಲದ ಸಮಾಜದ ಅಪೇಕ್ಷೆಗಳು, ಬಯಕೆಗಳು ಆದರೆ ಬದಲಾದ ಸಾಮಾಜಿಕ ಪರಿಸ್ಥಿತಿಯಲ್ಲಿ ಕರ್ನಾಟಕವು ತನ್ನ ಸಾಮಾಜಿಕ ರಚನೆಯಲ್ಲಿ ಮುಚ್ಚಿಹೋಗಿದ್ದ ಬಿರುಕುಗಳನ್ನು ಹೊರತೆಗೆದು ತೋರತೊಡಗಿತ್ತು.

ಹಿಂದುಳಿದ ವರ್ಗಗಳ ಮತ್ತು ದಲಿತ ಸಮುದಾಯದ ಅಸ್ಮಿತೆಯ ಪ್ರಶ್ನೆಗಳು ಮುಂದೆ ಬಂದವು. ಇವೆಲ್ಲವು ಮೇಲೆ ಹೇಳಿದಂತೆ ನಾಯಕರನ್ನು ನಿರಾಕರಿಸುತ್ತವೆ ತಮ್ಮ ನಾಯಕತ್ವವನ್ನು ತಾವೇ ಕಟ್ಟಿಕೊಳ್ಳಲು ಬಯಸುತ್ತವೆ. ದಲಿತ ಬಂಡಾಯ ಚಳುವಳಿಗಳ ಸಂದರ್ಭದಲ್ಲಿ ಕನ್ನಡದಲ್ಲಿ ಬರೆಯುವವರ ಸಾಹಿತ್ಯ ಸೃಷ್ಟಿ ಮಾಡುವವರ ಸಂಖ್ಯೆ ಹೆಚ್ಚಾಯಿತೆಂದು ಎಲ್ಲರೂ ಗುರುತಿಸುತ್ತಾರೆ ಈ ಬದಲಾವಣೆಯನ್ನು ಧನಾತ್ಮಕವಾಗಿ ನೋಡುವವರು ತಲೆಮಾರುಗಳಿಂದ ಧ್ವನಿ ಕಳೆದುಕೊಂಡವರು ಈಗ ಮಾತಾಡುತ್ತಿದ್ದಾರೆ ಎಂದು ವಿವರಿಸುತ್ತಾರೆ ಋಣಾತ್ಮಕವಾಗಿ ನೋಡುವವರು ಓದುವವರಿಗಿಂತ ಬರೆಯುವವರೆ ಹೆಚ್ಚಾದರೂ ಇದರಿಂದ ಬರೆದುದನ್ನು ಓದುವವರು ಯಾರು ಎಂದು ಗೇಲಿ ಮಾಡಿದರೂ ಎರಡು ಪ್ರತಿಕ್ರಿಯೆಗಳು ಭಾಷಿಕ ನೆಲೆಯಲ್ಲೇ ಇವೆ. ಕೇಳಿಸಿಕೊಳ್ಳುವವರು ಮಾತನಾಡಲು ಬಯಸುವುದು, ತೊಡಗುವುದು ಸಾಧ್ಯವಾಗುವುದು ನಾಯಕರನ್ನು ಅಥವಾ ತಮ್ಮ ಪ್ರತಿನಿಧಿಯಾಗಿ ಮಾತನಾಡುವವರನ್ನು ನಿರಾಕರಿಸಿದಾಗ ಮಾತ್ರ ಸಾಧ್ಯ. ಕನ್ನಡ ಸಾಹಿತ್ಯವಲಯದಲ್ಲಿ ಈಗ ಗ್ರಹಿಕೆಯ ಭಾಷಾ ಕೌಶಲಗಳಿಂದ ಬಳಕೆಯ ಭಾಷಾ ಕೌಶಲಗಳು ಮುಖ್ಯವಾದವು.

ಇದರೊಡನೆ ಹೆಣೆದುಕೊಂಡ ಇನ್ನೊಂದು ಸಂಗತಿ ಇದೆ. ಸಾಹಿತ್ಯ ಸೃಷ್ಟಿಯಲ್ಲಿ ಹಿಂದಿನ ತಾತ್ವಿಕತೆ ಕೃತಿಕಾರರಿಗೆ ಒಂದು ಆರೋಪಿತ ಧನಿಯನ್ನು ನೀಡುತ್ತಿದ್ದವು. ಅಂದರೆ ಕೃತಿಕಾರರು ತಮ್ಮ ಕಾಣಿಕೆಯಿಂದ ನುಡಿಯುತ್ತಿದ್ದಾರೆ ಇಲ್ಲವೇ ಅತೀತವಾದ ಸಾಮರ್ಥ್ಯವೊಂದು ಅವರ ಮೂಲಕ ಮಾತನಾಡುತ್ತಿದೆ ಎಂದು ತಿಳಿಯಲಾಗಿತ್ತು. ಆದರೆ ಈಗ ಬರೆಯುವವರು ಆರೋಪಿತ ಧನಿಯನ್ನು ಬಿಟ್ಟುಕೊಡಬೇಕಾಗಿ ಬಂತು. ಅಂದರೆ ಬರವಣಿಗೆ ಬರೆಯುವವರ ವ್ಯಕ್ತಿತ್ವದ ಒಂದು ಸಹಜ ಹೊರಚಾಚು ಆಗಿಬಿಟ್ಟಿದೆ. ಮೊದಲಿನಂತೆ ಅದೀಗ ಕಾಣೆಯ ನೆಲೆಯನ್ನು ಒಪ್ಪುವಂತಿಲ್ಲ ಅಥವಾ ತನ್ನ ಮೂಲಕ ತಾನೇ ನೇರವಾಗಿ ಹೊಣೆಗಾರರಾಗಿರದ ದನಿಯೊಂದು ಹೊರಬರುತ್ತಿದೆ ಎಂದೂ ತಿಳಿಯುವಂತಿಲ್ಲ. ಭಾಷೆಯ ದೃಷ್ಟಿಯಿಂದ ಈ ಬದಲಾವಣೆ ಬಹಳ ಮುಖ್ಯವಾದುದು. ವಚನಕಾರರನ್ನು ಈ ಅವಧಿಯಲ್ಲಿ ಕನ್ನಡದ ಬಹುಪ್ರಮುಖ ಬರಹಗಾರರೆಂದು ಪರಿಗಣಿಸಿದ್ದಕ್ಕೂ ಈಗ ನಡೆಯುತ್ತಿರುವುದಕ್ಕೂ ನೇರ ಸಂಬಂಧವಿದೆ. 'ಆನು ಒಲಿದಂತೆ ಹಾಡುವೆ' ಎನ್ನುವ ಬಸವಣ್ಣನ ಮಾತು ಬರಹಗಾರರಿಗೆ ನೀಡಿದ ಬಿಡುಗಡೆಯು ಹೌದು ವಿಧಿಸಿದ ಬಂಧನವು ಹೌದು. ಏಳನೇ ದಶಕದ ಅನಂತರದಲ್ಲಿ ಸಾಹಿತ್ಯ ಸೃಷ್ಟಿಗೆ ಒದಗಿದ ಈ ಅವಸ್ಥಾಂತರ ಕನ್ನಡ ಸಾಹಿತ್ಯ ವಲಯದಲ್ಲಿ ಮಾತ್ರವಲ್ಲ, ಭಾಷೆಯ ನೆಲೆಯಲ್ಲು ಬಿಂಬಿತವಾಗತೊಡಗಿದೆ.

ಈ ಅಧ್ಯಯನದಲ್ಲಿ ಬೇರೊಂದು ಕಡೆ ಗುರುತಿಸಿರುವಂತೆ ಕನ್ನಡದ ಏಕ ಘನಾಕೃತಿಯ ಪರಿಕಲ್ಪನೆಯನ್ನು ನಿರಾಕರಿಸಿ ಪ್ರಭೇದಗಳ ಅಸ್ಮಿತೆಯನ್ನು ನೆಲೆಗೊಳಿಸಲು ಯತ್ನಿಸಲಾಯಿತು. ಇದು ಸಾಹಿತ್ಯ ವಲಯದಲ್ಲೂ ಒಂದು ಮುಖ್ಯ ಪಾತ್ರ ವಹಿಸಿದೆ. ಏಕೀಕರಣದ ಮೊದಲ ಎರಡು ದಶಕಗಳಲ್ಲಿ ಭಾಷಾ ಪ್ರಭೇದಗಳನ್ನು ಹಿಂದಕ್ಕೆ ಸರಿಸಿ ಅವುಗಳ ಸ್ವತಂತ್ರ ಬಳಕೆಗೆ ಕಟ್ಟುಪಾಡುಗಳನ್ನು ವಿಧಿಸಿ ಶಿಷ್ಟ ರೂಪವನ್ನು ಎತ್ತಿಹಿಡಿಯುವ

ಪ್ರಕ್ರಿಯೆ ನಡೆಯಿತಷ್ಟೇ. ಈ ಅವಧಿಯಲ್ಲಿ ಕಳೆದು ಹೋಗದ್ದ ಭಾಷಾ ಪ್ರಭೇದಗಳನ್ನು ಸಾಹಿತ್ಯ ಕೃತಿಗಲಲ್ಲಿ ಮರುಗಳಿಸುವ ಮರುಸ್ಥಾಪಿಸುವ ಯತ್ನಗಳು ಮೊದಲಾದವು. ಹೊಸ ತಲೆಮಾರಿನ ಕೆಳವರ್ಗದ ಬರಹಗಾರರಲ್ಲಿ ಸಾಂಸ್ಕೃತಿಕ ನೆನಪುಗಳನ್ನು ಮರುಗಳಿಸುವ ಪ್ರಯತ್ನಗಳು ನಡೆದುದಕ್ಕೂ ಭಾಷಿಕವಾಗಿ ನಡೆದ ಈ ಮರುಗಳಿಕೆಯ ಪ್ರಯತ್ನಕ್ಕೂ ನೇರವಾದ ಸಂಬಂಧವಿದೆ. ಹಾಗೆ ನೋಡಿದರೆ ಈ ಪ್ರಕ್ರಿಯೆ ಇನ್ನೂ ಹೆಚ್ಚಿನ ವ್ಯಾಪಕತೆಯನ್ನು ಪಡೆದುಕೊಂಡಿದೆ. ಎಂಟನೇ ದಶಕದ ಅನಂತರದಲ್ಲಿ ದಲಿತರ ಜೊತೆಯಲ್ಲಿ ಹೆಂಗಸರು ಮತ್ತು ಅಲ್ಪ ಸಂಖ್ಯಾತರು ಕೂಡಾ ಹೀಗೆ ಮರುಗಳಿಕೆಯ ಪ್ರಕ್ರಿಯೆಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡದ್ದನ್ನು ನೋಡುತ್ತೇವೆ.

ಏಕೀಕರಣದ ಮೊದಲ ಎರಡು ದಶಕದಲ್ಲಿ ವ್ಯತ್ಯಾಸಗಳಿವೆ. ಕನ್ನಡ ಸಾಹಿತ್ಯದ ಕಳೆದ ಎರಡು ದಶಕಗಳ ಸಾಧನೆಗಳನ್ನು ಕುರಿತು ಚರ್ಚಿಸುವವರು ಬೇರೆ ಬೇರೆ ಏನೇ ಹೇಳಿದರೂ ಭಾಷೆಯ ನೆಲೆಯಲ್ಲಿ ಸಂಭವಿಸಿದ ಈ ಪರಿವರ್ತನೆಗಳನ್ನು ಕಡೆಗಣಿಸುವುದು ಮಾತ್ರ ಸಾಧ್ಯವಿಲ್ಲ.

ಎಂಟನೆಯ ದಶಕದಿಂದ ಈಚೆಗೆ ಸಾಹಿತ್ಯ ಕೃತಿಗಳು ಬಳಸುವ ಭಾಷೆಯ ಸ್ವರೂಪದಲ್ಲಿ ಒಂದು ಮುಖ್ಯ ಬದಲಾವಣೆಯನ್ನು ಗಮನಿಸುತ್ತೇವೆ. ಅದರಲ್ಲೂ ಕಾದಂಬರಿ ಮತ್ತು ಕೃತಿಗಳಲ್ಲಿ ಈ ಬದಲಾವಣೆ ಹೆಚ್ಚಾಗಿ ಕಂಡುಬರುತ್ತದೆ. ಕಾದಂಬರಿಯ ನಿರೂಪಣೆ ಮತ್ತು ಪಾತ್ರಗಳ ಸಂಭಾಷಣೆ ಈ ಎರಡು ಕಡೆಗಳಲ್ಲಿ ಮೊದಲು ಕ್ರಮವಾಗಿ ಪ್ರಮಾಣ ಭಾಷೆ ಮತ್ತು ಉಪಭಾಷೆಗಳನ್ನು ಅಥವಾ ಆಡುಮಾತಿನ ಒಂದು ಬಗೆಯನ್ನು ಬಳಸುತ್ತಿದ್ದರು. ಆದರೆ ಈಗ ಎರಡು ಕಡೆಗಳಲ್ಲಿ ಕೆಲವು ಕೃತಿಕಾರರು ಉಪಭಾಷೆಯನ್ನೇ ಬಳಸಲು ತೊಡಗಿದ್ದಾರೆ. ಇದಕ್ಕೆ ಸಾಹಿತ್ಯಿಕ ಕಾರಣಗಳು ಏನೇ ಇರಲಿ ಕನ್ನಡ ಭಾಷಾ ಜಗತ್ತಿನಲ್ಲಿ ನಡೆಯುತ್ತಿದ್ದ ಪರಿವರ್ತನೆಗಳು ಸಾಹಿತ್ಯ ಕೃತಿಯಲ್ಲೂ ಕಾಣತೊಡಗಿವೆ. ಎಂದಷ್ಟೇ ನಾವಿಲ್ಲಿ ಗ್ರಹಿಸಬೇಕಾಗಿದೆ. ಉಪಭಾಷೆಗಳ ನಿರಾಕರಣೆ ಒಂದು ಮುಖ್ಯ ಭಾಷಾ ನೀತಿಯ ನೆಲೆಯಾಗಿದ್ದನ್ನು ಎಂಟನೆಯ ದಶಕದಿಂದೀಚೆಗೆ ಪ್ರಶ್ನಿಸುವ ಪ್ರವೃತ್ತಿ ಬೆಳೆಯಿತು. ಅದರಿಂದಾಗಿ ಈ ಉಪಭಾಷೆಗಳನ್ನು ಗುರುತುಗಳನ್ನಾಗಿ ಉಳಿಸಿಕೊಳ್ಳುವ ಅಪೇಕ್ಷೆಯು ಕಾಣತೊಡಗಿತ್ತು. ಇದರ ಪರಿಣಾಮದಿಂದಾಗಿ ಸಾಹಿತ್ಯ ಕೃತಿಗಳಲ್ಲೂ ಎಲ್ಲ ಶೈಲಿ ನೆಲೆಗಳಲ್ಲೂ ಉಪಭಾಷೆಯನ್ನು ಬಳಸಲು ಇದ್ದ ಹಿಂಜರಿಕೆಗಳು ಈಗ ಮಾಯವಾದವು. ಈ ಬಗೆಯ ಪ್ರಯತ್ನಗಳನ್ನು ಸಹಜವಾಗಿಯೇ ಸ್ಥಿಥ ಸಾಹಿತ್ಯಿಕ ಚಿಂತನೆಗಳು ನಿರಾಕರಿಸಿವೆ ಅಥವಾ ಗೇಲಿ ಮಾಡಿವೆ. ಸಂವಹನಕ್ಕೆ ಅಡ್ಡಿಯಾಗುತ್ತೆಂಬುದು ಅವರ ತಗಾದೆ. ಒಂದು ಉಪಭಾಷೆಯು ನಿರೂಪಣೆ ಅದೇ ಭಾಷೆಯ ಇತರ ಭಾಷಿಕರಿಗೆ ಸಂವಹನ ಆಗುವುದಿಲ್ಲ ಎಂಬ ಪರಿಸ್ಥಿತಿಯೇ ಒಂದು ವಿಪರ್ಯಾಸ. ಇದು ವಾಸ್ತವ ಅಲ್ಲದಿರಬಹುದು. ಆದರೆ ಉಪಭಾಷೆಗಳ ಬಗ್ಗೆ ಇರುವ ಅಸಹನೆ ಇಂಥ ಶಂಕೆ ವ್ಯಕ್ತವಾಗುತ್ತದೆ. ಮತ್ತೆ ಕೆಲವರು ಈ ಉಪಭಾಷಾ ಬಳಕೆಯ ಮಾದರಿಯನ್ನು ಕೇವಲ ವಾಸ್ತವತಾ ವಾದದ ನೆಲೆಯಲ್ಲಿ ಗ್ರಹಿಸಿದರು. ಇದು ತಪ್ಪು ಗ್ರಹಿಕೆ. ಏಕೆಂದರೆ ಸಾಹಿತ್ಯ ಕೃತಿಗಳಲ್ಲಿ ವಾಸ್ತವತೆ ಎಂಬುದು ಹೀಗೆ ಪಾತ್ರಗಳ ನಿಜಭಾಷೆ ಮತ್ತು ನಿರೂಪಕರ

ನಿಜಭಾಷೆಗಳಿಗೆ ಸೀಮಿತವಾಗುವುದಿಲ್ಲ. ಹಾಗಿದ್ದಾಗ ಕಾರಂತರ ಎಷ್ಟೋ ಕಾದಂಬರಿಗಳ ಪಾತ್ರಗಳು ಕನ್ನಡವನ್ನು ಮಾತನಾಡುವಂತಿಲ್ಲ. ತುಳುವಿನಲ್ಲಿ ಮಾತ್ರ ಮಾತಾಡಬೇಕಾಗುತ್ತದೆ. ಈ ಪ್ರಶ್ನೆ ಮುಖ್ಯವಲ್ಲ. ವಾಸ್ತವತಾವಾದದ ನೆಲೆಯಲ್ಲಿ ಭಾಷೆಯ ಬಳಕೆಯನ್ನು ನಿಗದಿಪಡಿಸಲು ಹೊರಟ ಎಷ್ಟೋ ಕೃತಿಕಾರರು ಕನ್ನಡದ ಸಾಮಾಜಿಕ ಉಪಭಾಷೆಗಳ ನಡುವೆ ಇರುವ ಅಧಿಕಾರ ಸಂಬಂಧವನ್ನು ಸರಿಯಾಗಿ ಗ್ರಹಿಸಿದಂತೆ ತೋರುವುದಿಲ್ಲ. ಚದುರಂಗರ ವೈಶಾಖ ಕಾದಂಬರಿಯ ಭಾಷೆ ಇದಕ್ಕೊಂದು ನಿದರ್ಶನ. ಅಲ್ಲಿಯ ವಿವಿಧ ಸಾಮಾಜಿಕ ವರ್ಗದ ಪಾತ್ರಗಳು ಒಂದೇ ಮಾದರಿಯ ಆಡುಮಾತನ್ನು ಬಳಸುತ್ತದೆ. ಉರ್ದು ಭಾಷಿಕ ಮುಸ್ಲಮಾನರೊಬ್ಬರ ಭಾಷೆ ಮಾತ್ರ ಇದಕ್ಕೊಂದು ವಿನಾಯಿತಿ ನಿರೂಪಕರು ನಿರೂಪಣೆಯಲ್ಲಿ ಬಳಸುವ ಭಾಷೆಯಲ್ಲಿ ಇರುವ ಮುಖ್ಯ ತೊಂದರೆ ಎಂದರೆ ಅಲ್ಲಿ ಆಡುಮಾತಿನ ಕಲ್ಪನೆಯ ವ್ಯತ್ಯಸ್ತವಾಗಿರುವುದು ಈ ರೀತಿ ವಾಸ್ತವತಾವಾದದ ನೆಲೆಯಿಂದ ಭಾಷಾ ಬಳಕೆಯಲ್ಲಿ ಪರಿವರ್ತನೆಗಳು ನಡೆದಿವೆ ಎಂದು ಗ್ರಹಿಸಿದ್ದು ಒಂದು ತುದಿಯಾದರೆ ಏಕೆ ಈ ಪರಿವರ್ತನೆ ನಡೆಯಿತು ಎನ್ನುವುದನ್ನು ಅರ್ಥಮಾಡಿಕೊಳ್ಳಲಾಗದೆ ಹೋದುದು ಇನ್ನೊಂದು ತುದಿ.

ಭಾಷೆ ಮತ್ತು ಸಾಹಿತ್ಯ ಕೃತಿಗಳ ಸಂಬಂಧ ಇನ್ನೂ ಒಂದು ಮುಖ್ಯ ಆಯಾಮವನ್ನು ಪಡೆದುಕೊಂಡಿದೆ. ಭಾಷಾ ಸಂಸ್ಕೃತಿಯ ಸಾಧನೆಗಳನ್ನಾಗಿ ಕಲಾಕೃತಿಗಳನ್ನು ಗುರುತಿಸಿಕೊಳ್ಳುವುದು ಒಂದು ಪದ್ಧತಿ. ಸಾಮಾನ್ಯವಾಗಿ ಸಾಂಸ್ಕೃತಿಕ ಚರಿತ್ರೆಯನ್ನು ರಚಿಸುವವರು ಕಲೆ, ಸಂಗೀತ, ಸಾಹಿತ್ಯ, ವಾಸ್ತುಶಿಲ್ಪ ಮುಂತಾದ ವಲಯಗಳ ಸಾಧನೆಗಳನ್ನು ವಿಶ್ಲೇಷಿಸಲು ತೊಡಗುತ್ತಾರೆ. ಇದೊಂದು ಸಿದ್ಧ ಮಾದರಿ. ಇಲ್ಲಿ ಒಂದು ಕಾಲದ ಸಂಸ್ಕೃತಿಯ ವ್ಯಾಖ್ಯೆಯಲ್ಲಿ ಸಾಹಿತ್ಯ ಕೃತಿಗಳ ಸ್ಥಾನವೇನು ಎಂಬುದು ಮುಖ್ಯ ಪ್ರಶ್ನೆ ಸರಳವಾದ ಉತ್ತರವೆಂದರೆ ಭಾಷಾ ಸಂಸ್ಕೃತಿಯು ತನ್ನ ಆವಿಷ್ಕಾರಗಳನ್ನು ಭೌತಿಕ ಜಗತ್ತಿನಲ್ಲಿ ಸಂಸ್ಥಾಪಿಸಲು ಮತ್ತು ಶೋಧಿಸಲು ಸಾಹಿತ್ಯ ಕೃತಿಗಳನ್ನು ಬಳಸುತ್ತವೆ. ಈ ಬಗೆಯ ಬಳಕೆಗೆ ಎರಡು ವಿಧಾನಗಳಿವೆ ಒಂದು ಸಾಹಿತ್ಯ ಕೃತಿಗಳಿಗೂ ಸಂಸ್ಕೃತಿಗೂ ಇರುವ ಅಥವಾ ಇರಬೇಕಾದ ಸಂಬಂಧದ ನೆಲೆ ಇನ್ನೊಂದು ಸಾಹಿತ್ಯ ಕೃತಿಗಳನ್ನು ಒಂದು ಸಂಸ್ಕೃತಿಯ ಚಲನಶೀಲತೆಯ ದಾಖಲೆಗಳೆಂದು ತಿಳಿದು ಅವುಗಳನ್ನು ಗುರುತುಗಳನ್ನಾಗಿ ಪರಿವರ್ತಿಸುವುದು. ಮೊದಲನೆಯ ವಿಧಾನದಲ್ಲಿ ಎರಡು ಬೇರೆ ಬೇರೆ ಸಾಧ್ಯತೆಗಳಿವೆ. ಸಂಸ್ಕೃತಿಯ ನೆಲೆಗಳನ್ನು ಅರಿತುಕೊಳ್ಳಲು ಸಾಹಿತ್ಯ ಕೃತಿಗಳನ್ನು ಬಳಸುವುದು ಅಥವಾ ಸಾಹಿತ್ಯ ಕೃತಿಗಳಲ್ಲಿ ಸಂಸ್ಕೃತಿಯ ನೆಲೆಗಳು ಯಾವ ಪ್ರಭಾವವನ್ನು ಬೀರಿವೆ ಎನ್ನುವುದನ್ನು ತಿಳಿಯಲು ಯತ್ನಿಸುವುದು. ಇವೆರಡು ತಾತ್ವಿಕವಾಗಿ ಒಂದಕ್ಕೊಂದು ಪೂರಕ ಮಾದರಿಗಳು ಆಗಿರಬಹುದು. ನಮಗೆ ಭಾಷೆ ಸಂಬಂಧಿಸಿದಂತೆ ಈ ಮಾದರಿಗಳ ಉಪಯುಕ್ತತೆ ಮುಖ್ಯ. ಸಂಸ್ಕೃತಿಯನ್ನು ಅರಿತುಕೊಳ್ಳಲು ಸಾಹಿತ್ಯ ಕೃತಿಗಳನ್ನು ಶೋಧಕಗಳನ್ನಾಗಿ ಬಳಸುವ ವಿಧಾನದಲ್ಲಿ ಭಾಷೆಯ ಪರಿವರ್ತನಾಶೀಲತೆಯನ್ನು ಅದು ಸಾಮಾಜಿಕವಾಗಿ ಪಡೆಯುವ ಹೊಸ ಹೊಸ ಸಂಬಂಧಗಳನ್ನು ಗ್ರಹಿಸುವುದು ಸಾಧ್ಯ. ಆದರೆ ಈ ಬಗೆಯ ಅಧ್ಯಯನಗಳು ಕೆಲವೊಮ್ಮೆ ಅತೀ ಸರಳೀಕರಣದ ಹಾದಿಯನ್ನು ಆಯ್ದುಕೊಳ್ಳಬಹುದು. ಉದಾ:– ಒಂದು ಸಾಹಿತ್ಯ ಕೃತಿಯಲ್ಲಿ ಕಾಣಿಸುವ

ಭಾಷಾ ಪ್ರಯೋಗಗಳನ್ನು ಎತ್ತಿ ತೆಗೆದು ಅವು ಆಯಾ ಸಂಸ್ಕೃತಿಯ ಸ್ವರೂಪವನ್ನು ತಿಳಿಸುತ್ತವೆ ಎಂದು ಹೇಳಲುಹೊರಡುವುದು ಸರಿಯಾದ ವಿಧಾನವಲ್ಲ. ಏಕೆಂದರೆ ಸಾಹಿತ್ಯ ಕೃತಿಯ ವಸ್ತು, ಸಾಹಿತಿ ಮತ್ತು ಓದುಗ ಮೂವರು ಬೇರೆ ಬೇರೆ ಕಾಲದೇಶಗಳಲ್ಲಿರುತ್ತವೆ. ಹಾಗಿರುವಾಗ ಕೃತಿಯ ಭಾಷೆಯೂ ಯಾವ ಕಾಲದ ಭಾಷಾ ಪ್ರಬೇಧವನ್ನು ಸೂಚಿಸುತ್ತದೆ. ಇದು ಸಮಸ್ಯೆಯೇ ಸರಿ.

ಇನ್ನೂ ಸಾಹಿತ್ಯ ಕೃತಿಗಳ ಮೇಲೆ ಸಂಸ್ಕೃತಿ ಬಿರುವ ಪರಿಣಾಮಗಳನ್ನು ಅಧ್ಯಯನ ಮಾಡುವ ವಿಧಾನದಲ್ಲಿ ಭಾಷೆ ಒಂದು ಪರಿಕರವಾಗಿ ಉಳಿಯುವುದಿಲ್ಲ. ಬದಲಾಗಿ ಸಆಂಸ್ಕೃತಿಕ ಚಲನಶೀಲತೆಯ ಅಂಶಗಳನ್ನು ಅದರ ಗತಿತರ್ಕವನ್ನು ತನ್ನೊಳಗೆ ಹುದುಗಿಸಿಟ್ಟು ಕೊಂಡಿರುತ್ತದೆ. ಆದ್ದರಿಂದ ಈ ವಿಧಾನದಲ್ಲಿ ಭಾಷೆಯ ಸ್ವರೂಪದ ಬಗ್ಗೆ ನಮಗೆ ಹೆಚ್ಚಿನ ತಿಳುವಳಿಕೆ ಸಿಗುವುದು ಸಾಧ್ಯ.

ಸಾಹಿತ್ಯ ಕೃತಿಗಳನ್ನು ಸಂಸ್ಕೃತಿಯ ಸೂಚಕಗಳೆಂದು ಪರಿಗಣಿಸುವ ಇನ್ನೊಂದು ಬಗೆಯಲ್ಲಿ ಇರುವ ಸಮಸ್ಯೆಗಳೇನು ಈ ವಿಧಾನದಿಂದ ಕೃತಿ ಮತ್ತು ಕೃತಿಕಾರರು ವಿಘಟನೆಗೆ ಒಳಗಾಗುತ್ತಾರೆ. ಕೃತಿ ಹಿಂದೆಸರಿದು ಕೃತಿಕಾರರು ಮುಂಚೂಣಿಗೆ ಬರುತ್ತಾರೆ. ಕ್ರಿಯೆ ಮತ್ತು ಕರ್ತೃಗಳಲ್ಲಿ ಗೆರೆ ಕೊರೆದಂತೆ ಭೇದವನ್ನು ಉಂಟುಮಾಡಿ ಕರ್ತೃವಿನ ಪಾತ್ರವನ್ನು ಹಿರಿದು ಮಾಡುವ ವಿಧಾನ ಇಲ್ಲಿ ಮುಖ್ಯವಾಗುತ್ತದೆ. ಇದನ್ನು ಕರ್ತೃ ನಿರ್ಮಾಣ ವಿಧಾನ ಎಂದು ಗುರುತಿಸಬಹುದು. ಇದೊಂದು ಸಂಸ್ಕೃತಿಯ ಅಸಾಹಿತ್ಯಕ ನೆಲೆಗಳಲ್ಲಿ ಒಂದಾಗಿವೆ. ಭಾಷಿಕರು ತಮ್ಮ ಭಾಷೆಯ ಸ್ಥಾನಮಾನದ ಬಗ್ಗೆ ಯೋಚಿಸಲು ತೊಡಗಿದ್ದಾಗ ಅವರು ಕೆಲವು ಚಹರೆಗಳನ್ನು ಸೃಷ್ಟಿಸಿಕೊಳ್ಳಬೇಕಾಗುತ್ತದೆ. ಆ ಚಹರೆಗಳನ್ನು ಪ್ರತಿನಿಧಿಗಳನ್ನಾಗಿ ಪರಿಗ್ರಹಿಸಿ ಸಾಂಸ್ಕೃತಿಕ ಹೆಮ್ಮೆಯನ್ನು ಮೆರೆಯಲಾಗುತ್ತದೆ. ಅಲ್ಲದೇ ಭಾಷಿಕ ಔನ್ನತ್ಯವನ್ನು ಸ್ಥಾಪಿಸಲು ಯತ್ನಿಸಲಾಗುತ್ತದೆ. ಉದಾ:- ಕನ್ನಡಕ್ಕೆ ಏಳು ಜ್ಞಾನಪೀಠ ಪ್ರಸ್ತಾವನೆಗಳು ಬಂದಿವೆ ಎಂಬುದನ್ನು ಒಂದು ಹೆಮ್ಮೆಯನ್ನಾಗಿ ನಾವು ಮಾಡಿಕೊಂಡಿದ್ದೇವೆ. ಆದರೆ ಹೀಗೆ ಹೆಮ್ಮೆ ಪಡುವಾಗ ನಮ್ಮ ಗಮನ ಸಂಪೂರ್ಣವಾಗಿ ಕೃತಿಕಾರರ ಮೇಲೆ ಇರುತ್ತದೆಯೇ ಹೊರತು ಕೃತಿಯ ಹೊರಗಿನ ಇಲ್ಲವೆ ಒಳಗಿನ ವಿವರಗಳಲ್ಲಿ ಈ ಸಾಧ್ಯತೆಗಳನ್ನು ಯಾರೂ ಹುಡುಕುವುದಿಲ್ಲ.

ದಿನನಿತ್ಯವು ಇಂಥಾ ಹತ್ತಾರು ಪ್ರಸಂಗಗಳನ್ನು ನಾವು ಗಮನಿಸುತ್ತೇವೆ. ಸಾಹಿತ್ಯ ಸಂಸ್ಕೃತಿಯು ಕೃತಿಕಾರರನ್ನು ಕೃತಿಯಿಂದ ಬೇರ್ಪಡಿಸಿದ ಕೂಡಲೇ ಆ ಕೃತಿಕಾರರು ಸಾಮಾಜಿಕ ಮನ್ನಣೆಯನ್ನು ಪಡೆದು ಬಿಡುತ್ತಾರೆ. ಸಮಾಜವು ಅವರನ್ನು ಆ ನಾಯಕ ಸ್ಥಾನದಿಂದ ಪಲ್ಲಟಗೊಳಿಸಲು ಯೋಚಿಸುವುದಿಲ್ಲ. ಅದಕ್ಕಾಗಿ ಆ ನಾಯಕರ ಕೃತಿಗಳನ್ನು ಕೇವಲ ಸೂಚಕಗಳನ್ನಾಗಿ ಮಾಡಿಬಿಡುತ್ತಾರೆ. ಭಾಷೆಯ ಔನ್ನತ್ಯಕ್ಕೂ ಈ ಗ್ರಹಿಕೆಗಳಿಗೂ ಅರ್ಥಾರ್ಥ ಸಂಬಂಧವಿಲ್ಲ. ಇವನ್ನು ಪ್ರಶಸ್ತಿಗಳಿಗೆ ಹೆಸರಿಡುವುದು ರಸ್ತೆ ಬೀದಿಗಳಿಗೆ ಹೆಸರಿಡುವುದು. ಊರ ಬಡಾವಣೆಗಳಿಗೆ ಹೆಸರಿಡುವುದು ಇಂಥಾ ಕ್ರಿಯೆಗಳಲ್ಲಿ ತೊಡಗಿಕೊಳ್ಳುತ್ತಾರೆ. ಏಕೆಂದರೆ ಅವರಿಗೀಗ ಕರ್ತೃ ಮುಖ್ಯವೆ ಹೊರತು ಕೃತಿ ಮುಖ್ಯವಾಗುವುದಿಲ್ಲ.

ಹೀಗೆ ಭಾಷೆಯ ಔನ್ನತ್ಯಕ್ಕೂ ಸಾಹಿತ್ಯ ಸಿದ್ಧಿಗೂ ಸಂಬಂಧ ಕಲ್ಪಿಸುವ ಕೆಲಸಗಳು ಹಲವಾರಿವೆ. ಇವೆಲ್ಲವೂ ಪ್ರಜಾಪ್ರಭುತ್ವದಲ್ಲಿ ಅನಿವಾರ್ಯವೆಂಬ ವಾದವನ್ನು ಮಂಡಿಸಲಾಗುತ್ತದೆ. ಕೃತಿಯಿಂದ ಕೃತಿಕಾರರಿಗೆ ಅವಧಾರಣೆ ಬದಲಾದುದಕ್ಕೆ ಪಂಪ ಪ್ರಶಸ್ತಿ ಒಂದು ನಿದರ್ಶನ. ಪ್ರಶಸ್ತಿಯು ಪಂಪನ ಹೆಸರಲ್ಲಿದೆ. ಆತನಿಗೆ ಗೌರವ ಸೂಚಿಸಲು ಹೀಗೆ ಹೆಸರಿಡಲಾಗಿದೆ ಸರಿ ಆದರೆ ಈ ಭರಾಟೆಯಲ್ಲಿ ಅವನ ಸಾಹಿತ್ಯ ಕೃತಿಗಳು ಎಲ್ಲಿ ಹೋದವು. ಇನ್ನೂ ಪಂಪ ಪ್ರಶಸ್ತಿಯನ್ನು ಸ್ಥಾಪಿಸಿದಾಗ ಅದನ್ನು ಕೃತಿಯೊಂದಕ್ಕೆ ನೀಡಬೇಕು ಎನ್ನುವ ಶರತ್ತು ಇತ್ತು. ಆದರೆ ಕೆಲವೇ ವರ್ಷಗಳಲ್ಲಿ ಈ ಮಾನದಂಡ ಬದಲಾಗಿ ಸಾಹಿತ್ಯ ಕೃತಿಯ ಬದಲು ಕೃತಿಕಾರರನ್ನು ಹೆಸರಿಸುವ ಪರಿಪಾಠ ಬೆಳೆಯಿತು. ಈಗ ಔಪಚಾರಿಕವಾಗಿಯೂ ಕೃತಿಗಳ ಉಲ್ಲೇಖ ಬರುವುದಿಲ್ಲ

ಸಾಹಿತ್ಯ ಪೋಷಣೆಯ ಚಟುವಟಿಕೆಗಳನ್ನು ಮಾಡುವ ಮೂಲಕ ಭಾಷಾಭಿವೃದ್ಧಿಯನ್ನು ಮಾಡಿದಂತಾಗುತ್ತದೆ ಎನ್ನುವುದು ಸರ್ಕಾರದ ನಿಲುವು. ಸರ್ಕಾರದ ಈ ಬಗೆಯ ಚಟುವಟಿಕೆಗಳ ಇಲಾಖೆಯ ಹೆಸರೆ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಏಕೀಕರಣದ ಮೊದಲೇ ಕೆಂಗಲ್ ಹನುಮಂತಯ್ಯನವರು ಮುಖ್ಯಮಂತ್ರಿಗಳಾಗಿದ್ದಾಗ ಸಂಸ್ಕೃತಿ ನಿರ್ದೇಶನಾಲಯ ಸ್ಥಾಪಿಸಿದರು. ಅವರ ಮೂಲಕ ಕನ್ನಡದ ಉತ್ತಮ ಕೃತಿಗಳನ್ನು ಪ್ರಕಟಿಸುವ ಕೆಲಸ ಆರಂಬಿಸಿದರು. ಕುಮಾರ ವ್ಯಾಸನ ಕರ್ನಾಟ ಭಾರತ ಕಥಾಮಂಜರಿ, ಲಕ್ಷ್ಮೀಶನ ಜೈಮಿನಿ ಭಾರತ ಮೊದಲುಗೊಂಡು ಇಂಥಾ ಚಟುವಟಿಕೆಗಳನ್ನು ಹಮ್ಮಿಕೊಂಡು ಮುಂದುವರೆದರು ಮತ್ತೆ ಎಂಟನೆ ದಶಕದಿಂದ ಹೀಗೆ ಸಾಹಿತ್ಯ ಕೃತಿಗಳನ್ನು ಬೃಹತ್ ಪ್ರಮಾಣದಲ್ಲಿ ಮುದ್ರಿಸಿ ಕಡಿಮೆ ಬೆಲೆಗೆ ಮಾರಾಟ ಮಾಡುವ ಯೋಜನೆಗಳನ್ನು ಸರ್ಕಾರ ನಡೆಸುತ್ತಲೇ ಇದೆ. ವಿಶ್ವ ಕನ್ನಡ ಸಮ್ಮೇಳನದ ಸಂದರ್ಭದ ಪುಸ್ತಕಗಳು ಪರಂಪರೆ ನಂತರ ಕನಕದಾಸರ ಕೃತಿಗಳು ವಚನ ಸಾಹಿತ್ಯ ಸಂಪುಟ, ದಾಸ ಸಾಹಿತ್ಯ ಸಂಪುಟ, ಡಿವಿಜಿ ಕೃತಿಶ್ರೇಣಿ ಹೀಗೆ ಹಲವು ಹತ್ತು ಯೋಜನೆಗಳು ಜಾರಿಯಾಗಿವೆ. ಇವೆಲ್ಲವೂ ಭಾಷೆಯ ಅಭಿವೃದ್ದಿಯ ಹೆಸರಿನಲ್ಲಿ ನಡೆದಿರುವ ಚಟುವಟಿಕೆಗಳು ಈ ಚಟುವಟಿಕೆಗಳಲ್ಲಿ ತೊಡಗುವ ಸರ್ಕಾರ ಸಾಹಿತ್ಯ ಕೃತಿಗಳನ್ನು ಮುಚ್ಚಿದ ಕಪಾಟುಗಳ ಒಳಗೆ ಸೇರಿಸುತ್ತಿದೆ. ಇದು ಒರಟಾದ ಮಾತು ಎನಿಸಿದರೂ ಒಂದು ನಿದರ್ಶನವನ್ನು ಗಮನಿಸೋಣ. ವಚನ ಸಾಹಿತ್ಯದ ಸಕಲ ವಚನಗಳ ಪ್ರಕಟಣೆಯಲ್ಲಿ ಹದಿನಾರು ಸಂಪುಟಗಳು ಹೊರಬಂದವು. ಸರಿ ಸುಮಾರು ಐದು ಸಾವಿರ ಪುಟಗಳ ಪುಸ್ತಕಗಳೂ ಅಂತಹ ಹತ್ತು ಸಾವಿರ ಪ್ರತಿಗಳನ್ನು ಎರಡೆರಡು ಬಾರಿ ಮುದ್ರಿಸಲಾಯಿತು. ಸುಮಾರು ಹತ್ತು ವರ್ಷದ ಅವಧಿಯಲ್ಲಿ ಪ್ರಕಟಗೊಂಡ ಈ ಇಪ್ಪತ್ತು ಸಾವಿರ ಪುಸ್ತಕಗಳು ಕರ್ನಾಟಕದ ವಿವಿಧ ಮನೆಗಳನ್ನು ಸೇರಿವೆ. ಮೇಲು ನೋಟಕ್ಕೆ ಅದ್ಭುತವಾದ ಸಾಧನೆ ಆದರೆ ಈ ಸಂಪುಟಗಳ ಪ್ರಕ್ರಿಯಾತ್ಮಕ ನೆಲೆ ಏನು? ಸಂಸ್ಕೃತಿಯ ಯಾವ ನೆಲೆಗೆ ಈ ವಚನಗಳಿಂದ ನೆರವಾಗಿದೆ ಎಂಬ ಪ್ರಶ್ನೆ ಹಾಗೆ ಉಳಿಯುತ್ತಿದೆ. ಎಂದರೆ ಈ ಇಪ್ಪತ್ತು ಸಾವಿರ ಪುಸ್ತಕಗಳಲ್ಲಿ ಎಷ್ಟೋ ಪಾಲು ಓದದೆ ಉಳಿದ ಗ್ರಂಥಗಳಾಗಿವೆ. ಈ ಹತಾಶೆಯ ಮಾತಿಗೆ ಕಾರಣವಿದೆ. ಭಾಷೆಯ ಅಭಿವೃದ್ಧಿಗಾಗಿ

ಈ ಬಗೆಯ ಕಾರ್ಯಕ್ರಮಗಳನ್ನು ರೂಪಿಸಿ ಜಾರಿಕೊಡುವ ಮೂಲಕ ಸರ್ಕಾರವು ತನ್ನ ಸಾಧನೆಗಳನ್ನು ಪೂರೈಸಿದ ತೃಪ್ತಿ ಪಡಬಹುದೇ ಹೊರತು ಸಾಂಸ್ಕೃತಿಕವಾಗಿ ಪರಿಣಾಮ ಮಾತ್ರ ಶೂನ್ಯ.

ಭಾಷೆಯ ಅಭಿಮಾನದ ಗುರುತಾಗಿ ಸಾಹಿತ್ಯ ಕೃತಿಗಳನ್ನು ಪರಿಗಣಿಸುವ ಈ ಪ್ರವೃತ್ತಿ ಕೇವಲ ಈ ವಲಯಕ್ಕೆ ಮತ್ರ ಸೀಮಿತವಾದುದಲ್ಲ. ಸಂಸ್ಕೃತಿಯ ಈ ಹೊತ್ತಿನ ನೆಲೆಗಳನ್ನು ಅದು ಬಿಂಬಿಸುತ್ತದೆ. ರೂಪ ಮತ್ತು ಆಶಯ ಈ ದ್ವಂದ್ವಮಾನಗಳಲ್ಲಿ ರೂಪವು ಮುಂಚೂಣಿಗೆ ಬಂದು ಆಶಯವು ಹಿಂದಕ್ಕೆ ಸರಿಯುವ ಅಥವಾ ನಾಶವಾಗಿ ಹೋಗುವ ಸಂದರ್ಭಗಳು ಸೃಷ್ಟಿಯಾಗುತ್ತಿವೆ. ಇದು ದೃಗ್ಗೋಚರವಾದ ಮೂರ್ತಿಗಲ ಅಥವಾ ವಸ್ತುಗಳ ನೆಲೆಯಲ್ಲೂ ಕಾಣಿಸಿಕೊಳ್ಳುತ್ತದೆ. ಹೀಗೆ ಆಶಯ ಹಿಂದೆ ಸರಿದು ರೂಪ ಪ್ರಧಾನವಾಗುವ ವಿಘಟಿತ ಸ್ಥಿತಿಯಲ್ಲಿ ಭಾಷೆ ಆಚರಣೆಯಾಗಿ ಬಿಡುತ್ತದೆ. ಇನ್ನೂ ಖಚಿತ ಪಡಿಸಬೇಕೆಂದರೆ ಭಾಷೆ ಆಚರಣೆಯಾಗುವ ಸಂದರ್ಭಕ್ಕೆ ಇದು ಒಂದು ಪ್ರತೀಕವಾಗುತ್ತದೆ. ಭಾಷೆ ಆಚರಣೆಯಾಗುವುದು ಎಂದರೇನು? ಇದನ್ನು ಧನಾತ್ಮಕವಾಗಿ ನೋಡಬೇಕೋ ಅಥವಾ ಋಣಾತ್ಮಕವಾಗಿ ನೋಡಬೇಕೋ ಧನಾತ್ಮಕವಾಗಿ ನೋಡುವುದಾದರೆ ಭಾಷೆಗೆ ಮಾಂತ್ರಿಕತೆ ದೊರಕಿದಂತೆ ಶಬ್ದ ಪ್ರಧಾನವಾದ ಮಂತ್ರಗಳ ಹಾಗೆ ಆದರೆ ಋಣಾತ್ಮಕವಾಗಿ ಪರಿಗಣಿಸಿದರೆ ಭಾಷೆ ಕೇವಲ ಅರ್ಥ ನಿರಪೇಕ್ಷ, ಶಬ್ದ ಜಾಲವಾಗಿ ಬದಲಾಗಿ ಬಿಡುತ್ತಿದೆ.

ಪ್ರಮಾಣ ಭಾಷೆಯ ಚರ್ಚೆಯ ಸಂದರ್ಭದಲ್ಲಿ ಈ ಮಾತನ್ನು ಗಮನಿಸಿದ್ದೆವು. ಭಾಷೆಯೂ ಅರ್ಥಹೀನ ಆಗುವುದು ಅರ್ಥನಿರಪೇಕ್ಷವಾಗುವುದು ಬೇರೆ ಬೇರೆ. ಅರ್ಥಹೀನತೆ ಗಮನಕ್ಕೆ ಬರುವಂತದ್ದು ಅದನ್ನು ಗುರುತಿಸಿ ನಿರಾಕರಿಸುವುದು ಸುಲಭ. ಆದರೆ ಅರ್ಥ ನಿರಪೇಕ್ಷ ಸ್ಥಿತಿ ಹೆಚ್ಚು ಸೂಕ್ಷ್ಮವಾದುದು. ಅದನ್ನು ಬಳಸುವವರು ಕೇಳುವವರು ಹೀಗೆ ಎಲ್ಲರೂ ಅದರ ಸ್ಥಿತಿಯ ಬಗ್ಗೆ ಜಾಗ್ರತರಾಗುವುದಿಲ್ಲ. ನಮ್ಮ ದಿನನಿತ್ಯದ ಸಾರ್ವಜನಿಕ ವಲಯದ ಭಾಷಿಕ ವ್ಯವಹಾರವನ್ನು ಗಮನಿಸಿದರೆ ಈ ರೂಪ ಆಶಯಗಳ ವಿಘಟನೆಯ ಸ್ಥಿತಿ ಕಣ್ಣಿಗೆ ರಾಚುತ್ತದೆ. ಯಾವುದೇ ಒಂದು ಪ್ರಸಂಗವನ್ನು ನಮ್ಮ ಪತ್ರಿಕೆಗಳು ವರದಿ ಮಾಡುವ ಕ್ರಮವನ್ನು ಗಮನಿಸಿ. ಓದುಗರಿಗೆ ಪ್ರತಿಕ್ರಿಯೆ ನೀಡುವ ವ್ಯಕ್ತಿಯ ಚಹರೆಗಳು, ದೃಷ್ಟಿಕೋನಗಳು ಗೊತ್ತಿದ್ದರೆ ಆ ಪ್ರತಿಕ್ರಿಯೆಯ ತಿರುಳು ಏನು ಎಂಬುದನ್ನು ಕಣ್ಣು ಮುಚ್ಚಿಯಾದರೂ ಹೇಳಿ ಬಿಡಬಹುದು. ದಿನವೂ ನಾವು ಓದುವ ಖಂಡಿಸಿದರು, ವಿರೋಧಿಸಿದರು, ನಿರಾಕರಿಸಿದರು ಮುಂತಾದ ಪದ ಪ್ರಯೋಗಗಳು ಏನನ್ನು ಹೇಳುತ್ತವೆ. ಅವುಗಳ ಅರ್ಥ ಓದುಗರಿಗಾಗಲೀ ಬರೆದು ಮುದ್ರಿಸಿದವರಿಗಾಗಲಿ ಮುಖ್ಯವಾಗುವುದಿಲ್ಲ. ಯಾರು ಪ್ರತಿಕ್ರಿಯೆ ನೀಡುತ್ತಾರೋ ಅವರ ಸಾಮಾಜಿಕ ಗುರುತುಗಳ ದೃಢೀಕರಣ ಮಾತ್ರ ಇದರಿಂದ ಸ್ಥಾಪಿತವಾಗುತ್ತದೆ.

ಕಳೆದ ಐವತ್ತು ವರ್ಷದಲ್ಲಿ ಭಾಷೆಯ ಅಭಿವೃದ್ಧಿಗೂ ಸಾಹಿತ್ಯಕ್ಕೂ ಇರುವ ಸಂಬಂಧವನ್ನು ಎರಡು ನೆಲೆಗಳಲ್ಲಿ ನೋಡಿದ್ದೇವೆ. ಒಂದು ಸಾಹಿತ್ಯ ಕೃತಿಗಳ ಒಳಗಿನಿಂದ

ನೋಡುವ ಯತ್ನ. ಇನ್ನೊಂದು ಸಾಹಿತ್ಯ ಕೃತಿಗಳನ್ನು ಸಾಂಸ್ಕೃತಿಕ ಚೌಕಟ್ಟಿನಲ್ಲಿ ಇರಿಸಿ ನೋಡುವ ಯತ್ನ. ಎರಡನೆಯ ಚಟುವಟಿಕೆ ಅಗಾಧ ಪ್ರಮಾಣದ ಸಂಪನ್ಮೂಲವನ್ನು ಮಾನವ ಶ್ರಮವನ್ನು ಉಳಿಸಿಕೊಂಡಿದೆ. ಜನರ ಕಲ್ಪನೆಯ ಲೋಕವನ್ನು ಭದ್ರಪಡಿಸಲು ಶ್ರಮಿಸಿದೆ. ಉಳಿದ ವಲಯಗಳಿಗೆ ಹೋಲಿಸಿದರೆ ಸಾಹಿತ್ಯ ವಲಯದಲ್ಲಿ ಕರ್ತೃವಿಗೆ ಮಹತ್ವ ಪ್ರಧಾನವಾಗುವುದು ಸುಲಭ. ವಿಜ್ಞಾನಿಯೊಬ್ಬರು ವಿಜ್ಞಾನಿಯಾಗಿಯೇ ಉಳಿಯಬೇಕಾದರೆ ನಿರಂತರವಾಗಿ ಶೋಧ ಕಾರ್ಯದಲ್ಲಿ ತೊಡಗಬೇಕು. ಈ ಶರತ್ತು ಸಾಹಿತಿಗೆ ಅನ್ವಯವಾಗುವುದಿಲ್ಲ. ಕನ್ನಡ ಸಂಸ್ಕೃತಿ ಒಪ್ಪಿಕೊಂಡ ಈ ಮಾದರಿ ಒಟ್ಟು ಸಾಂಸ್ಕೃತಿಕ ಮೌಲ್ಯಗಳ ನೆಲೆಯಲ್ಲಿ ಅಷ್ಟೇನೂ ಹಿತಕರವಾಗಿ ಕಾಣುತ್ತಿಲ್ಲ.

# ಕನ್ನಡ: ಮುನ್ನೋಟ

ಐವತ್ತು ವರ್ಷಗಳ ಏಕೀಕರಣದ ಅವಧಿಯನ್ನು ನಾವು ಎರಡು ಘಟ್ಟಗಳಲ್ಲಿ ಗಮನಿಸಬೇಕು 1956 ರಿಂದ 81ರ ವರೆಗೆ ಮೊದಲ ಘಟ್ಟ, ಅನಂತರದ ಅವಧಿ ಎರಡನೆ ಘಟ್ಟ. ಮೊದಲ ಘಟ್ಟದಲ್ಲಿ ಇಪ್ಪತ್ತೈದು ವರ್ಷಗಳು ಕಳೆದರೂ ಕನ್ನಡದ ಜನಮನವು ಆತಂಕದ ಗಳಿಗೆಗಳನ್ನು ಎದುರಿಸಿದ್ದು ಕಡಿಮೆ. ಏಕೀಕರಣದ ಸಂದರ್ಭದ ಉತ್ಸಾಹವೇ ಮುಖ್ಯಸ್ಥಾಯಿಯಾಗಿ ಉಳಿಯಿತು. ಆಡಳಿತ, ಶಿಕ್ಷಣ, ಸಮೂಹ ಮಾಧ್ಯಮ, ಮುಂತಾದ ಕ್ಷೇತ್ರಗಳಲ್ಲಿ ಭಾಷೆಯ ಬಳಕೆಗೆ ಅವಕಾಶಗಳು ಕಲ್ಪಿತವಾದವು. ಆದರೆ ಕನ್ನಡವನ್ನು ಜನರ ಭಾಷೆಯನ್ನಾಗಿ ಸ್ಥಾಪಿಸುವ ವ್ಯವಸ್ಥಿತ ಯೋಜನೆಗಳು ಸರ್ಕಾರದ ಕಡೆಯಿಂದ ಕಂಡುಬರಲಿಲ್ಲ. 1975ರವರೆಗೂ ಸರ್ಕಾರದ ವರ್ಗಸ್ವರೂಪದಿಂದಾಗಿ ಅದು ಜನಪರ ನೆಲೆಗಳನ್ನು ಹೊಂದಿರಲಿಲ್ಲ. ಅಂತಹ ಒತ್ತಾಯಗಳು ಮೂಡಿರಲಿಲ್ಲ. ಎರಡನೆಯ ಹಂತದಲ್ಲಿ ಕನ್ನಡ ಆತಂಕದ ಘಳಿಗೆಗಳನ್ನು ಎದುರಿಸುತ್ತಿರುವುದು ಮತ್ತು ಅದನ್ನು ನಿವಾರಿಸಲು ಪ್ರಯತ್ನಗಳನ್ನು ಮಾಡುವುದು ಇವೆರಡೂ ಜೊತೆಜೊತೆಯಾಗಿಯೇ ಮುಂದುವರೆದಿವೆ. ಸರ್ಕಾರ ಕನ್ನಡ ಮತ್ತು ಸಂಸ್ಕೃತಿಗಾಗಿ ಒಂದು ಪ್ರತ್ಯೇಕ ಸಚಿವ ಶಾಖೆಯನ್ನು ಸೃಷ್ಟಿಸಿದೆ. ವಿಶ್ವಕನ್ನಡ ಸಮ್ಮೇಳನ ನಡೆಸಿತು. ಕನ್ನಡ ವಿಶ್ವವಿದ್ಯಾಲಯ ಸ್ಥಾಪಿಸಿತು. ಕನ್ನಡ ಅಭಿವೃದ್ಧಿ ಪ್ರಾಧಿಕಾರವನ್ನು ಶಾಸನ ಬದ್ಧ ಸಂಸ್ಥೆಯನ್ನಾಗಿ ಸ್ಥಾಪಿಸಿತು. ಇವೆಲ್ಲ ಕ್ರಮಗಳು ಜೊತೆಗೂಡಿಯೂ ಶಿಕ್ಷಣ, ಆಡಳಿತ, ಮತ್ತು ಸಮೂಹ ಮಾಧ್ಯಮಗಳ ವಲಯದಲ್ಲಿ ಕನ್ನಡದ ಸ್ಥಾನಮಾನಗಳ ಬಗೆಗೆ ಆತಂಕಗಳು ಮಾತ್ರ ಹೆಚ್ಚುತ್ತಲೇ ಹೋಗಿವೆ. ಈ ಆತಂಕಗಳು ಕೇವಲ ಭಾಷೆಗೆ ಸಂಬಂಧಿಸಿದ ಪ್ರಶ್ನೆಯಲ್ಲ. ಜನಸಮುದಾಯದ ಜೀವನದ ಬಿಕ್ಕಟ್ಟುಗಳು ಹಲವು ರೀತಿಗಳಲ್ಲಿ ಪ್ರಕಟಗೊಳ್ಳುತ್ತವೆ. ಭಾಷೆಯ ಬಗೆಗೆ ವ್ಯಕ್ತವಾದ ಆತಂಕಗಳು ಇದೇ ನೆಲೆಯವು.

ಕನ್ನಡವು ಕಳೆದ ಇಪ್ಪತ್ತೈದು ವರ್ಷಗಳಲ್ಲಿ ತನ್ನ ಬಳಕೆಯ ವಲಯಗಳ ಸಂಖ್ಯೆಯನ್ನು ಹೆಚ್ಚಿಸಿಕೊಂಡಿದೆ. ಬಳಸುವವರ ಸಂಖ್ಯೆಯು ಹೆಚ್ಚಿದೆ. ಆದರೆ ಸೂಕ್ಷ್ಮ ವಿಶ್ಲೇಷಣೆಗೆ ಗುರಿಪಡಿಸಿದರೆ ಕೆಲವು ವಿಪರ್ಯಾಸಗಳು ಎದುರಾಗುತ್ತವೆ. ಬಳಕೆಯ ವಲಯದಲ್ಲಿ ಅನೌಪಚಾರಿಕ ನೆಲೆಗಳು ವಿಸ್ತಾರಗೊಂಡಂತೆ ಅಲ್ಲೆಲ್ಲ ಕನ್ನಡಕ್ಕೆ ಅವಕಾಶಗಳು ಸೃಷ್ಟಿಯಾಗಿವೆ. ಜನರು ತಮ್ಮ ಸಾಂಪ್ರದಾಯಿಕ ವೃತ್ತಿಗಳನ್ನು ಬಿಟ್ಟುಕೊಟ್ಟು, ಹೊಸ ಹೊಸ ಜೀವನಾವಕಾಶಗಳಿಗೆ ತಂತಮ್ಮ ಊರುಗಳನ್ನು ಬಿಟ್ಟು ಬೇರೆ ನಗರ ಪ್ರದೇಶಗಳಿಗೆ ಸೇರ್ಪಡೆಯಾಗುತ್ತಿದ್ದಾರೆ. ಪಾರಂಪರಿಕ ಜೀವನ ಕ್ರಮದಲ್ಲಿ ಆಗಿರುವ ಪಲ್ಲಟಗಳಿಂದ

ಹಲವು ಸಾಂಸ್ಕೃತಿಕ ಬದಲಾವಣೆಗಳು ನಡೆದಿವೆ. ಒಂದು ಸರಳ ಉದಾಹರಣೆಯನ್ನು ಗಮನಿಸೋಣ: ಕುಟುಂಬ ರಚನೆಯಲ್ಲಿ ಈಗ ಬದಲಾವಣೆಗಳು ನಡೆದು ಹೋಗಿವೆ. ಮೂರು ತಲೆಮಾರುಗಳು ಒಟ್ಟಾಗಿ ಜೀವಿಸುವ ಪ್ರಸಂಗಗಳು ಇಲ್ಲವಾಗುತ್ತಿವೆ. ಅಣುಕುಟುಂಬಗಳು ಸಾಮಾನ್ಯ ವ್ಯವಸ್ಥೆಯಾಗಿ ನೆಲೆಗೊಂಡಿವೆ. ವೃತ್ತಿಜೀವನದಿಂದಾಗಿ ಕೌಟುಂಬಿಕ ಸಮಯವೆಂಬುದು ಕನಿಷ್ಟ ಪ್ರಮಾಣಕ್ಕೆ ಇಳಿದಿದೆ. ಇಲ್ಲಿಯೂ ಆ ಸಮಯವನ್ನು ನಮ್ಮ ಮನೆಯೊಳಗೆ ನುಗ್ಗಿದ ಟೆಲಿವಿಜನ್ ಆಕ್ರಮಿಸಿದೆ. ಇವೆಲ್ಲದರಿಂದ ಭಾಷಿಕವಾಗಿ ಆಗುವ ಬದಲಾವಣೆಗಳು ಗಮನಾರ್ಹ. **ಮಾತನ್ನು ಬಳಸುವ ಸಮಯ** ಮತ್ತು ಸಂದರ್ಭಗಳು ಕಡಿಮೆಯಾಗಿ, **ಮಾತನ್ನು ಕೇಳಿಸಿಕೊಳ್ಳುವ ಸಮಯ** ಹೆಚ್ಚಾಗುತ್ತಿದೆ. ಟೆಲಿವಿಜನ್‌ನಲ್ಲಿ ಕನ್ನಡವು ದಿನದ ಇಪ್ಪತ್ನಾಲ್ಕು ಗಂಟೆಯೂ ಬಳಕೆಯಾಗುತ್ತಿದೆ ಎಂದರೆ ವಾಸ್ತವವಾಗಿ ನಮ್ಮನ್ನು ಕೇಳುವವರನ್ನಾಗಿ ಅದು ಪರಿವರ್ತಿಸುತ್ತಿದೆ. ಮಾತಾಡುವ ಮಾತಿನ ಹಲವು ನಿರೂಪಣೆಗಳಲ್ಲಿ ಭಾಗಿಯಾಗುವ ಸಂದರ್ಭಗಳು ಕಡಿಮೆಯಾಗುತ್ತಿವೆ. ಇದರ ದೂರಗಾಮಿ ಪರಿಣಾಮಗಳು ಏನು ಎನ್ನುವುದು ನಮಗಿನ್ನೂ ತಿಳಿದಿಲ್ಲ.

ಅನೌಪಚಾರಿಕ ವಲಯಗಳಲ್ಲಿ ಕನ್ನಡವು ಹೀಗೆ ಕೇಳುವ ಭಾಷೆಯಾಗಿ, ಕನಿಷ್ಠ ಸಂವಹನದ ಅಗತ್ಯಗಳನ್ನು ಪೂರೈಸುವ ಭಾಷೆಯಾಗಿ ಪಾತ್ರವಹಿಸತೊಡಗಿದೆ. ಜನರು ಸಂಪರ್ಕಕ್ಕಾಗಿ ಕಂಡುಕೊಂಡ, ಪಡೆದುಕೊಂಡ ಹೊಸ ಹೊಸ ತಂತ್ರಜ್ಞಾನ ಸಾಮಗ್ರಿಗಳೂ ಹೀಗೆಯೇ ಕನ್ನಡದ ಅಪರಿಮಿತ ಬಳಕೆಗೆ ಅವಕಾಶಗಳನ್ನು ಕಲ್ಪಿಸಿವೆ. ಮಹಾನಗರಗಳಲ್ಲಿ ಎಲ್ಲೆಲ್ಲಿ ಹತ್ತು ಹದಿನೈದು ವರ್ಷಗಳ ಹಿಂದೆ ಕನ್ನಡ ಕೇಳುತ್ತಿರಲಿಲ್ಲವೋ ಅಲ್ಲಿ ಈಗ ಧಾರಾಳವಾಗಿ ಕನ್ನಡ ಕೇಳುತ್ತಿದೆ. ಉಪಭೋಗಿ ಸಂಸ್ಕೃತಿಯು ತನ್ನ ತೆಕ್ಕೆಗೆ ಕನ್ನಡ ಮಾತಾಡುವವರನ್ನು ಎಳೆದುಕೊಳ್ಳಲು ಅಗತ್ಯವಾದ ಹೊಂದಾಣಿಕೆಗಳನ್ನು ಮಾಡಿಕೊಂಡಿದೆ. ಇದೆಲ್ಲವನ್ನೂ ಗಮನಿಸಿದಾಗ ಕನ್ನಡವು ತನ್ನ ವ್ಯಾಪ್ತಿಯನ್ನು ಹಿಗ್ಗಿಸಿಕೊಳ್ಳುತ್ತಿದೆ ಎಂದು ನಂಬಬೇಕಾಗುತ್ತದೆ.

ಆದರೆ ವಾಸ್ತವವಾಗಿ ಹೀಗೆ ಮಾತಿನ ವಲಯದ ವಿಸ್ತರಣೆಯಲ್ಲಿ ಕನ್ನಡ ಮಿಂಚಿ ಮಾಯವಾಗುತ್ತದೆ. ಅದರ ಅಧಿಕೃತ ನೆಲೆಗೊಳ್ಳುವಿಕೆ ಇಂತಹ ವಲಯಗಳಿಂದ ಸಾಧ್ಯವಾಗುವುದಿಲ್ಲ. ಎಷ್ಟೋ ಭಾಷೆಗಳ ಚರಿತ್ರೆಯನ್ನು ಗಮನಿಸಿದರೆ ಆ ಭಾಷೆಗಳು **ಕಿವಿಯ** ಭಾಷೆಗಳಾಗಿ ಯಾವ ಆತಂಕವೂ ಇಲ್ಲದೆ ಉಳಿದುಕೊಂಡಿರುವುದನ್ನು ನೋಡುತ್ತೇವೆ. ಆದರೆ ಭಾಷೆ **ಕಣ್ಣಿನ** ನೆಲೆಯಲ್ಲಿ ಉಳಿದುಕೊಳ್ಳಬೇಕು. ಕಣ್ಣಿನ ನೆಲೆಯಲ್ಲಿ ಬರೆಹ ಇರುತ್ತದೆ. ಕನ್ನಡವು ಈ ಅಪಾಯವನ್ನು ಎದುರಿಸುತ್ತಿರುವಂತೆ ತೋರುತ್ತದೆ. ಕನ್ನಡವನ್ನು ಔಪಚಾರಿಕವಾಗಿ ಕಲಿತ ಜನಸಮುದಾಯದ ಪ್ರಮಾಣವನ್ನು ಶೇಕಡಾ 70 ರ ಆಸುಪಾಸಿನಲ್ಲಿ ಇರಿಸಲಾಗುತ್ತದೆ. ಎರಡು ಸಾವಿರದ ಹನ್ನೆರಡರ ಹೊತ್ತಿಗೆ ಈ ಪ್ರಮಾಣವನ್ನು ಮತ್ತಷ್ಟು ಹೆಚ್ಚಿಸಲು ಗುರಿ ಇರಿಸಿಕೊಳ್ಳಲಾಗಿದೆ. ಈ ಶೇಕಡಾ 70 ಪ್ರಮಾಣದ ಜನರೂ ಕನ್ನಡವನ್ನು ಕಣ್ಣಿನ ನೆಲೆಯಲ್ಲಿ ಮುಖಾಮುಖಿಯಾಗುವುದು ಕಡಿಮೆಯೇ. ಹೆಚ್ಚೆಂದರೆ ಅದನ್ನು ದಿನದ ಕನಿಷ್ಠ ವೇಳೆಯಲ್ಲಿ ಓದುತ್ತಿರಬಹುದು. ಅದೂ ಪತ್ರಿಕೆಯಲ್ಲಿ ತುಂಡುತುಂಡಾಗಿ ಅದನ್ನು ಬಿಟ್ಟರೆ ಕಣ್ಣಿನ ನೆಲೆಯ ಕನ್ನಡ ಅವರ ಅನುಭವದ ಭಾಗವಾಗುತ್ತಿಲ್ಲ. ಬರೆಯುವ ಮಾತು ಬಂದರಂತೂ ಪರಿಸ್ಥಿತಿ

ಇನ್ನಷ್ಟು ಇಕ್ಕಟ್ಟಿನಲ್ಲಿ ಇರುವುದು ಗೊತ್ತಾಗುತ್ತದೆ. ಏಕೆಂದರೆ ಹಾಗೆ ಬರೆಯಬೇಕಾದ ಒತ್ತಡಗಳು ಈಗ ಕಡಿಮೆಯಾಗುತ್ತಿವೆ. ಪರ್ಯಾಯಗಳು ಲಭಿಸುತ್ತಿವೆ.

ಯಾವುದೇ ಪರಂಪರೆಯ ಭಾಷೆಗೂ ಇಂತಹ ಪರಿಸ್ಥಿತಿಯಿಂದ ಬಿಡುಗಡೆ ಇಲ್ಲ ಎಂದೇ ಹೇಳಬೇಕು. ಓದಬಲ್ಲವರೆಲ್ಲ ಬರೆಯುತ್ತಾರೆ ಎನ್ನುವುದನ್ನು ನಂಬುವಂತಿಲ್ಲ. ಆದರೆ ಬರವಣಿಗೆಗೆ ಕನ್ನಡ ಅಗತ್ಯ ಎನ್ನುವ ಪ್ರಸಂಗಗಳು ಕಡಿಮೆಯಾಗುತ್ತಿವೆ. ಓದುವವರು ಕೂಡಾ ನಿರ್ದಿಷ್ಟ ಪ್ರಮಾಣದಲ್ಲಿ ಕನ್ನಡದಿಂದ ದೂರವಾಗುತ್ತಿದ್ದಾರೆ. ಕಲಿತ ಜನರು ಪರಿಸರದಲ್ಲಿ ದ್ವಿಭಾಷಿಕರಾಗಿರುವ ಪ್ರಸಂಗ ಹೆಚ್ಚಿದೆ. ಔಪಚಾರಿಕವಾಗಿ ಇಂಗ್ಲಿಶ್ ಕಲಿತವರು ಕೂಡಾ ಎಷ್ಟೋ ವೇಳೆ ಓದಲು ಇಂಗ್ಲಿಶ್ ಮತ್ತು ಕನ್ನಡ ಎಂಬ ಆಯ್ಕೆಯನ್ನೇ ಮಾಡಿಕೊಳ್ಳುತ್ತಾರೆ. ಪತ್ರಿಕೆಗಳ ಓದಿನ ಸ್ವರೂಪವನ್ನು ಗಮನಿಸಿದರೆ ಇಂಗ್ಲಿಶ್ ಪತ್ರಿಕೆಗಳು, ಅವು ರಾಜ್ಯಮಟ್ಟದ್ದಿರಲಿ ಅಥವಾ ರಾಷ್ಟ್ರಮಟ್ಟದ್ದಿರಲಿ, ಅವುಗಳ ಓದುಗರು ಕನ್ನಡವನ್ನು ಓದಬಲ್ಲವರೇ. ಅಂದರೆ ಕನ್ನಡದಲ್ಲಿ ಇಂಗ್ಲಿಶ್ ತನ್ನ ಪಾಲನ್ನು ಪಡೆದುಕೊಳ್ಳುತ್ತಿದೆ. ಯುವಜನಾಂಗದಲ್ಲಿ ಈ ಪರಿಸ್ಥಿತಿಯು ಇನ್ನೂ ಭಿನ್ನ ನೆಲೆಯಲ್ಲಿ ಇರುವಂತೆ ತೋರುತ್ತದೆ. ಆ ತಲೆಮಾರು ಭಾಷೆಯ ಕಣ್ಣಿನ ನೆಲೆಗಳನ್ನು ತನ್ನ ಅನುಭವದ ವಲಯದಿಂದ ಆದಷ್ಟೂ ದೂರವಿರಿಸುತ್ತಿದೆ. ಒಂದು ವೇಳೆ ಹಾಗೆ ಓದುವ ಪ್ರಸಂಗ ಬಂದರೂ ಮಾಹಿತಿಗಾಗಿ ನೋಡುತ್ತಾರೆಯೇ ಹೊರತು ವಿವರದಲ್ಲಿ ಓದುವುದಿಲ್ಲ. ಅಂತರ್ಜಾಲದ ವಿವಿಧ ಜಾಲತಾಣಗಳನ್ನು ಅತಿವೇಗವಾಗಿ ಸಂಪರ್ಕ ಮಾಡುವ ಯುವಕರು ಭಾಷೆಯನ್ನು ಕಣ್ಣಿನ ನೆಲೆಯಲ್ಲಿ ಎದುರಿಸಿದರೂ ಅದು ವೇಗವಾಗಿ ಬದಲಾಗುತ್ತಾ ಹೋಗುವುದರಿಂದ ಕೆಲವು ಸೆಕೆಂಡುಗಳಲ್ಲಿ ಬೇಕಾದ್ದನ್ನು ನೋಡಿ ಬಿಡುತ್ತಾರೆ. ಓದುವ ಇಚ್ಛೆ ಮತ್ತು ವ್ಯವಧಾನಗಳು ಇಲ್ಲವಾಗಿವೆ.

ಕನ್ನಡದ ಮಟ್ಟಿಗೆ ಆತಂಕಕಾರಿಯಾಗಿ ಕಾಣುವ ಈ ಸನ್ನಿವೇಶಕ್ಕೆ ಪ್ರತಿಯಾಗಿ ಮತ್ತೊಂದು ಬೆಳವಣಿಗೆಯನ್ನು ಕೆಲವರು ಗುರುತಿಸುತ್ತಾರೆ. ಅವರ ಪ್ರಕಾರ ಬರಹದ ಭಾಷೆಯನ್ನು ಯುವಜನಾಂಗ ಮೊದಲಿಗಿಂತ ಈಗ ಹೆಚ್ಚಾಗಿ ಬಳಸುತ್ತಿದೆ. ಇದಕ್ಕೆ ಅವರು ಕೆಲವು ನಿದರ್ಶನಗಳನ್ನು ನೀಡುತ್ತಾರೆ. ಜಾಲತಾಣಗಳಲ್ಲಿ ಕಂಡು ಬರುವ ಎರಡು ಹೊಸ ಪ್ರವೃತ್ತಿಗಳನ್ನು ಈಚೆಗೆ ಅಭ್ಯಾಸ ಮಾಡಲಾಗುತ್ತಿದೆ. ಅವುಗಳಲ್ಲಿ ಒಂದು: ಸಿಟಿಜನ್ ಜರ್ನಲಿಜಂ. ಎರಡು: ಬ್ಲಾಗರ್ ಆಗುವುದು. ಸಿಟಿಜನ್ ಜರ್ನಲಿಜಂ ಎಂದರೆ ಮಾಧ್ಯಮಗಳಿಗೆ ತ್ವರಿತಗತಿಯಲ್ಲಿ ಘಟನೆ ನಡೆದ ಸ್ಥಳದಿಂದಲೇ ಮಾಹಿತಿಯನ್ನು ರವಾನಿಸುವುದು. ಸಮೂಹ ಮಾಧ್ಯಮಗಳು ಸುದ್ದಿ ಪ್ರಸಾರಕ್ಕೆ ತೆರೆದಿಟ್ಟ ಸಮಯ ಮತ್ತು ಅವಕಾಶಗಳು ಎಷ್ಟು ಹೆಚ್ಚಿವೆ ಎಂದರೆ ಅದರೊಳಗೆ ಪ್ರತಿ ಕ್ಷಣವೂ ಹೊಸ ಮಾಹಿತಿಯನ್ನು, ಸುದ್ದಿಯನ್ನು ತುಂಬುವುದು ಅಸಾಧ್ಯವಾಗಿದೆ. ಸುದ್ದಿ ವಾಹಿನಿಗಳು ತಮ್ಮ ಮಾನವ ಸಂಪನ್ಮೂಲದಿಂದ ಇದನ್ನು ನಿರ್ವಹಿಸಲಾರವು. ಜನರನ್ನು ಹೀಗೆ ಸಿಟಿಜನ್ ಜರ್ನಲಿಸ್ಟ್ ಎಂದು ಪರಿವರ್ತಿಸಿ ಅವರಿಂದ ಮಾಹಿತಿಯನ್ನು ಪಡೆದು ತಮ್ಮ ಕೊರತೆಯನ್ನು ತುಂಬಿಕೊಳ್ಳುತ್ತಿವೆ. ಇದು ಯುವಜನರಿಗೆ ಭಾಷೆಯನ್ನು ಬಳಸಲು ಹೊಸ ಅವಕಾಶವನ್ನು ಕಲ್ಪಿಸಿಕೊಟ್ಟಿದೆ. ಕನ್ನಡದ ಮಟ್ಟಿಗೆ ಇದಿನ್ನೂ ದೊಡ್ಡ ಪ್ರಮಾಣದಲ್ಲಿ

ಬೆಳೆದಿಲ್ಲ. ಆದರೂ ಈಚಿನ ಕೆಲವು ವರ್ಷಗಳಲ್ಲಿ ಪತ್ರಿಕೆಗಳ ತೆರಪನ್ನು ಹೀಗೆ ಜನರ ಬರವಣಿಗೆ ಮೂಲಕ ತುಂಬಿಕೊಳ್ಳುವ, ಜನರಿಗೆ ತಾವು ಭಾಗಿಯಾದ ಅನುಭವವನ್ನು ತಂದು ಕೊಡುವ ಪ್ರಯತ್ನಗಳು ನಡೆಯುತ್ತಿವೆ. ಕನ್ನಡದ ಕೆಲವು ಪತ್ರಿಕೆಗಳು ನಿರ್ದಿಷ್ಟ ವಿಷಯವನ್ನು ಚರ್ಚೆಗೆ ತೆರೆದು ಜನರ ಅಭಿಪ್ರಾಯಗಳನ್ನು ಕೋರಿ ಅವರು ಬರೆದ ಅಭಿಪ್ರಾಯಗಳನ್ನು ಪ್ರಕಟಿಸುವ ಮೂಲಕ ಒಂದು ಹೊಸ ಪದ್ಧತಿಯನ್ನು ಬೆಳೆಸಿದೆ. ಇಲ್ಲೆಲ್ಲ ಯಾವ ಉದ್ದೇಶದಿಂದ ಪತ್ರಿಕೆಗಳು ಹೀಗೆ ಮಾಡುತ್ತಿವೆ ಎಂಬುದು ಬೇರೆ ಮಾತು. ಆದರೆ ಹೊಸ ತಲೆಮಾರಿನ ಜನರು ಬರೆಯಲು ಅವಕಾಶವನ್ನಂತೂ ಕಲ್ಪಿಸಿದಂತಾಗಿದೆ. ಅವರ ಬರವಣಿಗೆಗೆ ಗೊತ್ತಾದ ಜೀವಿತಾವಧಿ ಇರುತ್ತದೆ. ಹಾಗಿದ್ದರೂ ಅಸಂಖ್ಯ ಜನರು ಈ ಬಗೆಯ ಬರವಣಿಗೆಗೆ ಒಲುವೆ ತೋರಿಸುತ್ತಾರೆ ಎನ್ನುವುದು ಗಮನಿಸಬೇಕಾದ ವಿಷಯವಾಗಿದೆ. ಸಿಟಿಜನ್ ಜರ್ನಲಿಜಂನ ಉಗಮ ವಿಕಾಸಗಳನ್ನು ನಾವು ಚರ್ಚಿಸಬೇಕಿಲ್ಲ. ಭಾಷೆಯ ದೃಷ್ಟಿಯಿಂದ ಅಗತ್ಯವಾದ ಸಂಗತಿಗಳನ್ನು ಮಾತ್ರ ಚರ್ಚಿಸಿದರೆ ಸಾಕು. ನಾವು ಗಮನಿಸಿದ ಇನ್ನೊಂದು ಹೊಸ ಪ್ರಸಂಗವೆಂದರೆ 'ಬ್ಲಾಗರ್ ಆಗುವುದು' ಈಗ ಜಾಲ ತಾಣಗಳಲ್ಲಿ ನೂರಾರು ಬ್ಲಾಗ್ ತಾಣಗಳಿವೆ. ಇಲ್ಲಿ ಹೆಸರು ನಮೂದಿಸಿಕೊಂಡ ಕೋಟ್ಯಂತರ ಜನರು ತಮಗೆ ಬೇಕಾದ ವಿಷಯವನ್ನು ಕುರಿತು ತಮಗೆ ತೋಚಿದ್ದನ್ನು ಬರೆಯುತ್ತಾರೆ. ಹೀಗೆ ಬರೆದದ್ದನ್ನು ಯಾರಾದರೂ ಓದಿ ಏನಾದರೂ ಪ್ರತಿಕ್ರಿಯೆಯನ್ನು ಸೂಚಿಸಬಹುದು. ಇದು ನಿರಂತರ ಪ್ರಕ್ರಿಯೆ. ಈ ಬ್ಲಾಗ್‌ತಾಣದಲ್ಲಿ ಏನನ್ನಾದರೂ ಬರೆಯಬೇಕಾಗುತ್ತದೆ. ಅದು ಏನೆಂಬುದು ಆಯಾ ವ್ಯಕ್ತಿಗೆ ಸಂಬಂಧಿಸಿದ ವಿಷಯ. ಆ ವಿಷಯಗಳನ್ನು ಕುರಿತು ಏನಾದರೂ ಬರೆಯುತ್ತಿರಬಹುದು. ಹೀಗೆ ಬರೆದುದನ್ನು ಇನ್ನೊಬ್ಬರು ನೋಡುವಂತೆ ವ್ಯವಸ್ಥೆಯನ್ನು ಮಾಡಿಕೊಳ್ಳಬಹುದು. ನಮಗಿಲ್ಲಿ ಈ ತಂತ್ರಜ್ಞಾನದ ಪರಿಣಾಮಗಳು ಮುಖ್ಯವಲ್ಲ. ಆದರೆ ಯುವಜನಾಂಗದವರು ಬರೆಯಲು ತೊಡಗಿದ್ದಾರೆ ಎನ್ನುವುದಷ್ಟೇ ಮುಖ್ಯ.

ಈ ಅವಕಾಶದಲ್ಲೂ ಕನ್ನಡ ಮರೆಯಾಗುವ ಸಂಭವವೇ ಹೆಚ್ಚು. ನಾವೀಗ ವಿವರಿಸಿದ ಬ್ಲಾಗ್‌ತಾಣಗಳಲ್ಲಿ ಬರುವ ಕೋಟ್ಯಂತರ ಬರವಣಿಗೆಗಳು ಇಂಗ್ಲಿಶ್‌ನಲ್ಲಿರುತ್ತವೆ. ಇದು ಅವರ ಶಿಕ್ಷಣಕ್ರಮ ಮತ್ತು ಸಾಮಾಜಿಕ ಹಿನ್ನೆಲೆಗಳಿಂದ ಉಂಟಾದ ಪರಿಣಾಮ. ಕನ್ನಡ ಇಲ್ಲಿ ಕಾಣಿಸಿಕೊಳ್ಳುವುದು ಆಕಸ್ಮಾತ್ತಾಗಿಯೇ ಹೊರತು ಒಂದು ನಿಯಮವಾಗಿ ಅಲ್ಲ. ಮುಂಬರುವ ದಶಕಗಳಲ್ಲಿ ಪರಸ್ಪರ ಮುಖಾಮುಖಿಯಾಗುವ ಬರೆಹಗಳಲ್ಲಿ ಅಲ್ಲವಾದರೂ ಯುವಜನಾಂಗದ ತಳಮಳಗಳನ್ನು ಹೊರಹಾಕಲು ಈ ಬಗೆಯ ಆಪ್ತ ಮತ್ತು ಅನ್ಯರಿಗೆ ಗೋಚರವಾಗದ ಬರೆಹಗಳು ಮೂಡಲೂಬಹುದು. ಈ ಬದಲಾದ ಪರಿಸ್ಥಿತಿ ಬಂದಾಗ ಏನು ಪರಿಣಾಮ ಆಗುತ್ತದೆ ಎಂಬುದನ್ನು ನಾವು ಕಾಯ್ದು ನೋಡಬೇಕಾಗಿದೆ.

ಹೊಸ ತಲೆಮಾರು ಇದಕ್ಕಾಗಿ ತಾನು ರೂಪಿಸಿಕೊಳ್ಳುವ ಕನ್ನಡವು ನಾವು ಶಾಲಾ ಕಾಲೇಜುಗಳಲ್ಲಿ ಯಾವುದನ್ನು ಪ್ರಮಾಣ ಬದ್ಧಗೊಳಿಸಿದ್ದೇವೆಯೋ ಆ ಕನ್ನಡಕ್ಕಿಂತ ಬೇರೆಯೇ ಅಗಿ ಬಿಡಬಹುದು. ಹಾಗಾಗುತ್ತಿರುವ ಸೂಚನೆಗಳು ಈಗ ಲಭಿಸುತ್ತಿವೆ. ಇದಕ್ಕೆ ಮುಖ್ಯ ಕಾರಣ ತಂತ್ರಜ್ಞಾನವು ನಿರೀಕ್ಷಿಸುವ ವೇಗ. ನಾವೀಗ ವಿವರಿಸಿದ

ಬ್ಲಾಗರ್ ಪಾತ್ರವನ್ನೇ ನೋಡಿ. ಅಲ್ಲಿ ನಿರ್ದಿಷ್ಟ ಸಮಯದಲ್ಲಿ ಬರೆದು ಅದನ್ನು ಜಾಲತಾಣಕ್ಕೆ ಸೇರಿಸಬೇಕು. ಮಾತನಾಡುವ ಸಮಯಕ್ಕೆ ಅನುಗುಣವಾಗಿ ದರ ವಸೂಲು ಮಾಡುವ ತಂತ್ರಜ್ಞಾನ ಜನರ ಭಾಷಾಬಳಕೆಯ ಮೇಲೆ ಪ್ರಭಾವ ಬೀರುತ್ತದೆ. ಅಂತರ್ಜಾಲದಲ್ಲೇ ಜಾಲಹರಟೆ ಮಾಡುವವರು; ಮೊಬೈಲ್‌ನಲ್ಲಿ ಸಂದೇಶಗಳನ್ನು ಕಳಿಸುವವರು, ತಮ್ಮ ಭಾಷಾಬಳಕೆಯ ಸ್ವರೂಪವನ್ನು ಬದಲಿಸಿಕೊಳ್ಳುವುದು ಅಗತ್ಯವಾಗಿಬಿಡುತ್ತದೆ. ಇಲ್ಲಿ ಸರಿತಪ್ಪುಗಳ ಪ್ರಶ್ನೆ ಮುಖ್ಯವಾಗು ವುದಿಲ್ಲ. ಸಮಯ ಮತ್ತು ಸಂಪನ್ಮೂಲಗಳ ನಿರ್ವಹಣೆ ಮುಖ್ಯವಾಗಿಬಿಡುತ್ತದೆ. ಆದ್ದರಿಂದ ಇಂತಹ ಕಡೆ ಭಾಷೆ ಹೆಚ್ಚು ಪ್ರಮಾಣದಲ್ಲಿ ಮುಂದೆ ಬಳಕೆಯಾಗುವ ಸಾಧ್ಯತೆ ಇದ್ದರೂ ಹಾಗೆ ಬಳಕೆಯಾಗುವ ಭಾಷೆ ಮಾತ್ರ ಸಂಪೂರ್ಣವಾಗಿ ಭಿನ್ನವಾಗುತ್ತದೆ. ಭಾಷೆಯ ನಿಗದಿತ ಸ್ವರೂಪವನ್ನು ಕಾಯ್ದುಕೊಳ್ಳಲು ಕಟಿಬದ್ಧರಾಗಿ ಕುಳಿತವರಿಗೆ ಈ ಬಗೆಯ ತ್ವರಿತಗತಿಯ ಬದಲಾವಣೆಗಳನ್ನು ಒಪ್ಪಿಕೊಳ್ಳುವುದು ಕಷ್ಟ. ಆದರೆ ಅನಿವಾರ್ಯ.

ತಂತ್ರಜ್ಞಾನದ ಅವಕಾಶಗಳ ಮಾತು ಬಂದಾಗ ಅದಕ್ಕೆ ತಕ್ಕಂತೆ ಕನ್ನಡವನ್ನು ಒಗ್ಗಿಸಲು ಸಲಹೆಗಳನ್ನು ನೀಡಲಾಗುತ್ತಿದೆ. ಹೀಗೆ ಒಗ್ಗಿಸುವುದು ಎಂದರೇನು? ಆ ಮಾತನ್ನು ಒಗ್ಗಿಸಬೇಕೆ? ಅಥವಾ ಬರೆಹವನ್ನು ಒಗ್ಗಿಸಬೇಕೆ? ಎರಡು ನೆಲೆಗಳಲ್ಲೂ ಬದಲಾವಣೆಗಳು ಅನಿವಾರ್ಯವೇ?ಈ ಎಲ್ಲ ಪ್ರಶ್ನೆಗಳೂ ಮುಖ್ಯವಾಗುತ್ತವೆ. ತಂತ್ರಜ್ಞಾನ ಭಾಷೆಯನ್ನು ತನ್ನ ಅಗತ್ಯಕ್ಕೆ ತಕ್ಕಂತೆ ಬಳಸಿಕೊಳ್ಳುತ್ತದೆಯೇ ಹೊರತು ಭಾಷೆಯ ಬೆಳವಣಿಗೆಗೆ, ಅದರ ಸಾಧ್ಯತೆಗಳ ವಿಸ್ತರಣೆಗೆ ಅದರ ನೆರವು ಕಡಿಮೆ.

ತಂತ್ರಜ್ಞಾನಕ್ಕೆ ಕನ್ನಡವನ್ನು ಹೊಂದಿಸುವ ಪ್ರಯತ್ನಗಳು ವ್ಯಕ್ತಿಗತ ನೆಲೆಯಲ್ಲಿ ಮತ್ತು ಸಾಂಸ್ಥಿಕ ನೆಲೆಯಲ್ಲಿ ನಡೆಯುತ್ತಲೇ ಇವೆ. ಆಯಾ ಸಂದರ್ಭದ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ವ್ಯಕ್ತಿಗಳು ನಡೆಸಿದ ಪ್ರಯುತ್ನಗಳು ಕೆಲವೊಮ್ಮೆ ಪ್ರಮಾಣೀಕರಣಗೊಳ್ಳದೆ ವ್ಯಾಪಕ ಬಳಕೆಯನ್ನು ಪಡೆಯದೆಯೇ ಹೋಗಬಹುದು. ಇನ್ನೂ ಕೆಲವೊಮ್ಮೆ ಒಂದೇ ಸಮಸ್ಯೆಗೆ ಹಲವರು ಬೇರೆ ಬೇರೆ ಪರಿಹಾರಗಳನ್ನು ಕಂಡುಕೊಂಡಿರಬಹುದು. ಇದರಿಂದ ಅವುಗಳಲ್ಲಿ ಯಾವುದನ್ನು ಪ್ರಮಾಣೀಕರಿಸಿ ವ್ಯಾಪಕ ಬಳಕೆಗೆ ಸಿದ್ಧಮಾಡಬೇಕು ಎನ್ನುವುದು ಒಂದು ಸಮಸ್ಯೆಯಾಗುತ್ತದೆ. ಇದೂ ಅಲ್ಲದೇ ವ್ಯಕ್ತಿಗತ ಪ್ರಯತ್ನಗಳಲ್ಲಿ ಪುನರಾವರ್ತನೆಯ ಸಾಧ್ಯತೆ ಹೆಚ್ಚು. ಅದರಿಂದ ಸಮಯ, ಶ್ರಮ, ಮತ್ತು ಸಂಪನ್ಮೂಲಗಳ ಅಪವ್ಯಯಗಳ ಸಾಧ್ಯತೆ ಇದೆ. ಇದೆಲ್ಲವನ್ನೂ ನಿವಾರಿಸಲು ಸಾಂಸ್ಥಿಕ ನೆಲೆಯ ಪ್ರಯತ್ನಗಳಿಗೆ ಹೆಚ್ಚಿನ ಮಹತ್ವ ನೀಡಬೇಕಾಗುತ್ತದೆ. ಜೊತೆಗೆ ವ್ಯಕ್ತಿಗತ ನೆಲೆಯ ಪ್ರಯುತ್ನಗಳನ್ನು ಪ್ರಮಾಣೀಕರಿಸುವ ಅಧಿಕೃತ ವೇದಿಕೆಯೊಂದನ್ನು ಜಾರಿಗೆ ಕೊಡಬೇಕಾಗುತ್ತದೆ. ಇದರಿಂದ ಉಪಯುಕ್ತ ಕಾರ್ಯವಾಹಿಗಳನ್ನು ಗೊತ್ತು ಮಾಡಿಕೊಳ್ಳುವುದು ಸುಲಭವಾಗುತ್ತದೆ.

ಕನ್ನಡದ ಬಳಕೆಯನ್ನು ಹೆಚ್ಚಿಸಲು ಕಂಪ್ಯೂಟರ್‌ಗಳಲ್ಲಿ ಅದರ ಅಳವಡಿಕೆ ಸಾಧ್ಯವಾಗಬೇಕೆಂಬ ಪ್ರಯತ್ನ ಮೊದಲಾಗಿ ಎರಡು ದಶಕಗಳು ಕಳೆದವು. ಮೊದಲ ಪ್ರಯತ್ನಗಳು ಬದಲಾದ ತಂತ್ರಜ್ಞಾನದಿಂದಾಗಿ ನಿರರ್ಥಕವಾಗಿವೆ. ಆದರೂ ಒಂದು

ಪ್ರಯತ್ನವನ್ನು ಕುರಿತಂತೆ ಚರ್ಚೆಯನ್ನು ಬೆಳೆಸಬಹುದು. ಜಾಗತಿಕವಾಗಿ ಲಭ್ಯವಿರುವ ಕಂಪ್ಯೂಟರ್ ಕೀಲಿ ಮಣೆಗಳಲ್ಲಿ ಬೇರೆ ಬೇರೆ ಬಗೆಗಳು ಇವೆಯಾದರೂ ಭಾರತದಲ್ಲಿ ಬಹುಮಟ್ಟಿಗೆ ಕ್ವಾರ್ಟಿ ಕೀಲಿಮಣೆ ಪ್ರಚಲಿತವಾಗಿದೆ.

ಈ ಕೀಲಿಮಣೆಯ ಕೀಲಿಗಳನ್ನು ಬಳಸಿ ಕನ್ನಡ ಬರವಣಿಗೆಯನ್ನು ಮಾಡಲು ಯತ್ನಗಳು ಆರಂಭವಾದವು. ಇದಕ್ಕಾಗಿ ಬಳಸಿದ ತಂತ್ರಜ್ಞಾನದ ಚರ್ಚೆ ನಮಗೆ ಇಲ್ಲಿ ಬೇಕಿಲ್ಲ. ಆದರೆ ಒಂದು ಕೀಲಿಯನ್ನು ಒತ್ತಿದಾಗ ತೆರೆಯ ಮೇಲೆ ಕನ್ನಡ ಅಕ್ಷರ ಮೂಡುವಂತೆ ಮಾಡುವ ಕಾರ್ಯವಾಹಿಗಳು ಸಿದ್ಧವಾದವು. ಇವುಗಳಲ್ಲಿ ಭಿನ್ನತೆ ಇತ್ತು. ಯಾವ ಕೀಲಿಗೆ ಯಾವ ಅಕ್ಷರ ಎಂಬ ಹೊಂದಾಣಿಕೆಯಲ್ಲಿ ವ್ಯತ್ಯಾಸಗಳಿದ್ದವು. ಮುಖ್ಯ ಕೊರತೆ ಎಂದರೆ ಈ ಕಾರ್ಯವಾಹಿಗಳನ್ನು ರೂಪಿಸಿದವರು ತಂತ್ರಜ್ಞರು. ಅವರಿಗೆ ಕನ್ನಡ ಭಾಷೆಯ ಅಕ್ಷರರಚನೆ ಮತ್ತು ಕಾಗುಣಿತ ಗೊತ್ತಿತ್ತು. ಆದರೆ ಧ್ವನಿಗಳು ಆವರ್ತನಗೊಳ್ಳುವ ಪ್ರಮಾಣ ತಿಳಿದಿರಲಿಲ್ಲ. ಇದರಿಂದಾಗಿ ಹೆಚ್ಚು ಚಲನಶೀಲವಾದ ಹೆಗ್ಗಳಿಕೆಗೆ ಹೆಚ್ಚು ಬಳಕೆಯಾಗುವ ಧ್ವನಿಯ ಕೀಲಿ ಸಿಗುವಂತೆ ಮಾಡಲಿಲ್ಲ. ಒಂದು ಕಾರ್ಯವಾಹಿಯಂತೂ ಬಲಗೈ ಬೆರಳುಗಳಿಗೆ ಸ್ವರಗಳನ್ನು ಎಡಗೈ ಬೆರಳುಗಳಿಗೆ ವ್ಯಂಜನಗಳನ್ನು ಹೊಂದಿಸಿತ್ತು. ಇಂತಹ ಅಪ್ರಾಯೋಗಿಕವಾದ ಮಾದರಿಗಳು ಕನ್ನಡ ಬಳಕೆಗೆ ನೆರವಾಗುವ ಬದಲು ಅಡ್ಡಿಯಾಗುತ್ತಿದ್ದವು.

ಇಂಗ್ಲಿಶ್ ಕೀಲಿಗಳಿಂದ ಇಂಗ್ಲಿಶ್ ಅಕ್ಷರಗಳನ್ನೇ ತೆರೆಯ ಮೇಲೆ ಮೂಡಿಸಿ ಅನಂತರ ಅದನ್ನು ಲಿಪ್ಯಂತರಿಸುವ ಹೊಸ ಕಾರ್ಯವಾಹಿ 'ಬರಹ' ಕಳೆದ ಒಂದು ದಶಕದಲ್ಲಿ ಬಳಕೆಯಲ್ಲಿದೆ. ಇದೊಂದು ವಿಭಿನ್ನ ನೆಲೆಯ ಪ್ರಯತ್ನ. ಮೇಲುನೋಟಕ್ಕೆ ಮಧ್ಯವರ್ತಿ ಅಕ್ಷರಗಳನ್ನಾಗಿ ಇಂಗ್ಲಿಶ್ ಅಥವಾ ರೋಮನ್ ಅಕ್ಷರಗಳನ್ನು ಬಳಸುವುದು ವಿಚಿತ್ರವಾಗಿ ಮತ್ತು ಅನಗತ್ಯವಾಗಿ ತೋರುತ್ತದೆ. ಆದರೆ ಸೌಲಭ್ಯದ ದೃಷ್ಟಿಯಿಂದ ಇದರ ಪ್ರಯೋಜನ ಹೆಚ್ಚು. ಅಂತರಗಣಕ ರವಾನೆಗಳಿಗೆ ಇದು ಅನುಕೂಲಕರ. ಲಿಪ್ಯಂತರ ಕಾರ್ಯವಾಹಿ ಇಲ್ಲದೆಯೂ ಕನ್ನಡ ಭಾಷೆಯ ಪಠ್ಯಗಳನ್ನು ಜಾಗತಿಕವಾಗಿ ಪ್ರಚುರಪಡಿಸುವುದು ಇದರಿಂದ ಸಾಧ್ಯವಾಗುತ್ತದೆ.

ಹೀಗೆ ಸಮಸ್ಯೆಗೆ ಹಲವು ಬಗೆಯ ಉತ್ತರಗಳು ಸಾಧ್ಯವಿರುವಾಗ ಆಯ್ಕೆಯ ಅವಕಾಶ ಎದುರಾಗುತ್ತದೆ. ಈ ಸಾಧ್ಯತೆಗಳ ವ್ಯತ್ಯಾಸವನ್ನು ಮೌಲ್ಯಮಾಪನ ಮಾಡಬೇಕಾಗುತ್ತದೆ. ಆಗ ಕೊರತೆಗಳನ್ನು ತುಂಬಿಕೊಳ್ಳಲು ಅಗತ್ಯವಾದ ಪರಿಷ್ಕರಣೆ ಮಾಡಬಹುದು. ಕನ್ನಡದ ಪಠ್ಯವನ್ನು ಅದು ಪದಪಟ್ಟಿಯಾಗಿದ್ದರೆ ಅಕಾರಾದಿಯಾಗಿ ಜೋಡಿಸುವ ಸಮಸ್ಯೆ ಇದೆ ಎಂದುಕೊಳ್ಳೋಣ. ಆಗ ತಂತ್ರಜ್ಞರು ಅದಕ್ಕೆ ಪರಿಹಾರವನ್ನು ಹುಡುಕಬಲ್ಲರು. ಆದರೆ ಅಕಾರಾದಿಯ ಮಾದರಿಗಳಲ್ಲಿ ಯಾವುದನ್ನು ಆಯ್ಕೆ ಮಾಡಿಕೊಳ್ಳಬೇಕು. ಕನ್ನಡದಲ್ಲೇ ಕನಿಷ್ಠ ಎರಡು ಬಗೆಯ 'ಅ'ಕಾರಾದಿಗಳಿವೆ. ಒಂದು ಉಚ್ಚಾರಣೆಯನ್ನು ಅವಲಂಬಿಸಿದರೆ ಇನ್ನೊಂದು ಬರೆಹದ ಕಣ್ಣಿನ ರೂಪವನ್ನು ಅವಲಂಬಿಸುತ್ತದೆ. ಇದಲ್ಲದೆ ಸೌಲಭ್ಯದ ದೃಷ್ಟಿಯಿಂದ ಇಂಗ್ಲಿಶ್ ವರ್ಣಮಾಲೆಯ 'ಅ'ಕಾರಾದಿಯನ್ನೇ ಅನುಸರಿಸುವ ಮತ್ತೊಂದು ಪದ್ಧತಿಯೂ ಇದೆ. ಶಾಲಾ ಕಾಲೇಜುಗಳಲ್ಲಿ ಹಾಜರಾತಿ ಪಟ್ಟಿಯಲ್ಲಿ ಇಂಥದ್ದೇ ಕ್ರಮವನ್ನು ಅನುಸರಿಸುತ್ತಾರೆ.

ಈಚೆಗೆ ಕನ್ನಡದಲ್ಲಿರುವ ದೂರವಾಣಿ ಕೈಪಿಡಿಗಳೂ ಇದೇ ಮಾದರಿಯನ್ನು ಅನುಸರಿಸಿವೆ. ಇವೆಲ್ಲವೂ ಗೊಂದಲಗಳನ್ನು ಉಂಟು ಮಾಡುತ್ತವೆ. ತಾಂತ್ರಿಕವಾದ ಹೊಂದಾಣಿಕೆಯ ಸಮಸ್ಯೆಯು ಉಂಟಾಗುತ್ತದೆ. ಹೀಗಿರುವಾಗ ಅಧಿಕೃತವಾದ ಮಾದರಿಯನ್ನು ಆಯ್ದು ಅದಕ್ಕೆ ಮನ್ನಣೆಯನ್ನು ನೀಡುವುದು ಅಗತ್ಯ. ಇಂತಹ ಪ್ರಯತ್ನಗಳು ಕನ್ನಡದಲ್ಲಿ ಬೇಗಬೇಗ ನಡೆಯಬೇಕಾಗಿದೆ. ಈಗಿನ ಗೊಂದಲ ಮತ್ತಷ್ಟು ಹೆಚ್ಚಲು ಅವಕಾಶ ನೀಡಬಾರದು.

**ಪರಿಕರಗಳ ನಿರ್ಮಾಣ**

ಭಾಷೆಯನ್ನು ಹಲವು ವಲಯಗಳಲ್ಲಿ ಬಳಸುವವರಿಗೆ ಅನುಕೂಲವಾಗಿವ ನೆರವಾಗುವ, ಸಮಸ್ಯೆಗಳಿಗೆ ಪರಿಹಾರ ನೀಡುವ ಪರಿಕರಗಳು ತ್ವರಿತವಾಗಿ ಸಿದ್ಧವಾಗಬೇಕು. ಈ ಪರಿಕರಗಳನ್ನು ಸಿದ್ಧಪಡಿಸುವಾಗ ಉಪಯುಕ್ತತೆಗೆ ಪ್ರಥಮ ಆದ್ಯತೆ ನೀಡಬೇಕು. ಹೀಗಲ್ಲದೆ ಪಾರಂಪರಿಕ ರೀತಿಯಲ್ಲಿ ಪರಿಕರಗಳನ್ನು ನೀಡುವ ಮಾದರಿಗಳನ್ನು ಮಾತ್ರ ಅನುಸರಿಸುತ್ತಾ ಹೋಗಬಾರದು. ಉದಾ.ಗೆ ನಿಘಂಟುಗಳು. ಕನ್ನಡಕ್ಕೆ ಪದಗಳ ಅರ್ಥದ ಜೊತೆ ಬಳಕೆಯನ್ನೂ ನೀಡುವ ನಿಘಂಟುಗಳು ಅಗತ್ಯ. ಆದರೆ ಬಳಕೆಯ ವಲಯದ ಪದಗಳನ್ನು ಈ ಕೋಶಗಳು ಹೊಂದಿಲ್ಲದಿದ್ದರೆ ಅವುಗಳ ಉಪಯುಕ್ತತೆ ಕಡಿಮೆ. ಈಗ ಸಿದ್ಧಗೊಳ್ಳುತ್ತಿರುವ ಹಲವು ನಿಘಂಟುಗಳು ಈ ಸಮಸ್ಯೆಯನ್ನು ಹೊಂದಿವೆ. ಕನ್ನಡ ಸಾಹಿತ್ಯ ಪರಿಷತ್ತು ಮೊದಲು ಪ್ರಕಟಿಸಿದ ಜನಬಳಕೆಯ ಅಗತ್ಯಕ್ಕಾಗಿ ಸಿದ್ಧಗೊಂಡ ಕನ್ನಡ ರತ್ನಕೋಶವನ್ನು ಉದಾಹರಣೆಯನ್ನಾಗಿ ನೋಡಬಹುದು. ವಿದ್ವತ್ತಿನ ಎಲ್ಲ ಅಂಶಗಳನ್ನೂ ಯಥಾನುಕ್ರಮದಲ್ಲಿ ಅಳವಡಿಸಿಕೊಂಡ ಈ ಕೋಶದ ಮುಖ್ಯ ನಮೂದುಗಳಲ್ಲಿ ಅರ್ಧಕ್ಕಿಂತಲೂ ಹೆಚ್ಚು ಪಾಲು ಇಂದಿನ ಕನ್ನಡದಲ್ಲಿ ಬಳಕೆಯಾಗದ, ಕಾಣಸಿಗದ ಪದಗಳಿಂದ ತುಂಬಿವೆ. ಹಳೆಗನ್ನಡ, ನಡುಗನ್ನಡ ಪಠ್ಯಗಳನ್ನು ಓದುವವರಿಗೆ ಅನುಕೂಲಕರವಾಗಿದ್ದರೂ ನಮ್ಮ ಪರಿಸರದ ಕನ್ನಡದ ಸಾವಿರಾರು ಪದಗಳು, ಪದರಚನೆಗಳು ಈ ಕೋಶದಲ್ಲಿಲ್ಲ. ಇಂಥಾ ಕೋಶಗಳು ಸೀಮಿತ ಪ್ರಯೋಜನ ಹೊಂದಿವೆ.

ಇದಲ್ಲದೆ ಪರಿಕರಗಳು ಸಿದ್ಧಗೊಂಡು ಲಭಿಸುವ ವಿಧಾನದಲ್ಲೂ ಬದಲಾವಣೆಗಳಾಗ ಬೇಕಾಗಿದೆ. ಜಾಗತಿಕ ನೆಲೆಯಲ್ಲಿ ಈಗ ನಿಘಂಟುಗಳನ್ನು ಅಂತರ್ಜಾಲ ದಲ್ಲಿ ಇರಿಸಿ ಒದಗಿಸುವ ಪ್ರಯತ್ನಗಳು ನಡೆದಿವೆ. ಎಮಿನೋ ಮತ್ತು ಬರೋ ಸಂಪಾದಿಸಿದ ದ್ರಾವಿಡ ಭಾಷೆಗಳ ಜ್ಞಾತಿಪದಕೋಶ ಎರಡು ಜಾಲತಾಣಗಳಲ್ಲಿ ಲಭಿಸುತ್ತದೆ. ಇದಲ್ಲದೇ ನೂರಾರು ನಿಘಂಟುತಾಣಗಳು ಕಾರ್ಯವಾಹಿಗಳು ಬಳಕೆಯಲ್ಲಿವೆ. ದೃಶ್ಯ ಶ್ರವ್ಯ ಮಾದರಿಯಲ್ಲಿ ಸಿದ್ಧಗೊಂಡ ಅಡಕತಟ್ಟೆಗಳಲ್ಲಿ ನಿಘಂಟುಗಳು ಲಭ್ಯವಿದೆ. ಅಂದರೆ ಹೊಸ ತಂತ್ರಜ್ಞಾನದ ನೆರವಿನಿಂದ ಬಳಕೆಗೆ ಅನುಕೂಲಕರವಾದ ಹೊಸ ಮಾದರಿಗಳು ಸಾಧ್ಯವಾಗುತ್ತಿವೆ. ಕನ್ನಡದಲ್ಲೂ ಇಂತಹ ಪ್ರಯತ್ನಗಳು ನಡೆದಿವೆ. ಇವುಗಳನ್ನು ಅಧಿಕೃತಗೊಳಿಸಬೇಕಾದ ಮತ್ತು ವ್ಯಾಪಕ ಬಳಕೆಗೆ ಸಾಧ್ಯವಾಗುವಂತೆ ಪರಿಷ್ಕರಿಸಬೇಕಾದ ಅಗತ್ಯವಿದೆ.

ಕನ್ನಡವನ್ನು ಕಲಿಯುವ ಬಗೆಗಳು ಈಗ ಬದಲಾಗುತ್ತಿವೆ. ಅನೌಪಚಾರಿಕವಾಗಿ ಕನ್ನಡವು ಸಮುದಾಯದ ಭಾಗವಾಗಿದ್ದು ಕನ್ನಡವನ್ನು ಕಲಿಯುತ್ತಿರುವವರ ಜೊತೆಗೆ ಔಪಚಾರಿಕವಾಗಿ ಕನ್ನಡವನ್ನು ಕಲಿಯಲು ತೊಡಗಿರುವವರ ಪ್ರಮಾಣವೂ ಹೆಚ್ಚುತ್ತಿದೆ. ಹೀಗೆ ಕಲಿಸಲು ಅನುಕೂಲವಾದ ಮಾದರಿಗಳನ್ನು ಹೊಸ ತಂತ್ರಜ್ಞಾನದ ಚೌಕಟ್ಟಿನಲ್ಲಿ ರೂಪಿಸಬೇಕಾಗಿದೆ. ಕಲಿಯುವವರ ಅಗತ್ಯಗಳನ್ನು ಮತ್ತು ಪೂರ್ವ ಸಿದ್ಧತೆಗಳನ್ನು ಅವಲಂಬಿಸಿ ಈ ಕಲಿಕೆಯ ಸಾಮಗ್ರಿ ರೂಪಗೊಳ್ಳಬೇಕು. ಕಲಿಯು ವವರು ಅನ್ಯಭಾಷಿಕರಾಗಿದ್ದರೆ ಅವರ ಮೊದಲ ಭಾಷೆಯ ರಚನೆಯೊಡನೆ ಕನ್ನಡವು ಹೊಂದಿರುವ ವೈಸಾದೃಶ್ಯಗಳನ್ನು ಗಮನದಲ್ಲಿ ಇರಿಸಿಕೊಂಡ ಸಾಮಗ್ರಿ ಬೇಕಾಗುತ್ತವೆ. ಈ ವೈಸಾದೃಶ್ಯಗಳನ್ನು ಗುರುತಿಸುವ ಅಧ್ಯಯನಗಳು ನಡೆಯಬೇಕು. ಕಲಿಕೆಯ ಸಾಮಗ್ರಿಯು ಕನ್ನಡ ಮಾತನ್ನು ಕಲಿಸಲು ಉದ್ದೇಶಿತವೋ, ಅಥವಾ ಮಾತು ಮತ್ತು ಬರೆಹ ಎರಡನ್ನೂ ಕಲಿಸುತ್ತದೆಯೋ ಎಂಬುದನ್ನು ಗಮನಿಸಿ ಅದಕ್ಕೆ ಸ್ವಕಲಿಕೆಯ ಸಾಧ್ಯತೆಗಳು ಮತ್ತು ದೂರಕಲಿಕೆಯ ಅವಕಾಶಗಳು ಈಗ ಹೆಚ್ಚಾಗು ತ್ತಿವೆ. ಈ ಸಾಧ್ಯತೆಯನ್ನು ಬಳಸಿಕೊಳ್ಳಲು ತಕ್ಕ ಪಾಠಸಾಮಗ್ರಿಗಳು ಬೇಕಾಗಿವೆ.

ಈ ಹಿಂದೆ ಬೇರೊಂದು ಅಧ್ಯಾಯದಲ್ಲಿ ಗುರುತಿಸಿದಂತೆ ಕನ್ನಡವನ್ನು ಬರೆಯುವುದು ಎಂದರೆ ಹಳೆಯ ರೀತಿ ಕೈಬೆರಳುಗಳಲ್ಲಿ ಲೆಕ್ಕಣಿಕೆಯನ್ನು ಹಿಡಿದು ಅಕ್ಷರಗಳನ್ನು ಮೂಡಿಸುವುದು ಎಂಬ ವ್ಯಾಖ್ಯೆ ತೀವ್ರವಾಗಿ ಬದಲಾಗುತ್ತಿದೆ. ಹೆಚ್ಚು ಪ್ರಮಾಣದ ಮತ್ತು ಸಾರ್ವಜನಿಕ ಬಳಕೆಗೆ ಅಗತ್ಯವಾದ ಕನ್ನಡ ಬರವಣಿಗೆ ಈಗ ಸಿದ್ಧವಾಗುತ್ತಿರುವುದು ಕಂಪ್ಯೂಟರ್‌ಗಳಲ್ಲಿ. ಆದ್ದರಿಂದ ಈ ಹೊಸ ಬಗೆಯ ಬರವಣಿಗೆಗಳಲ್ಲಿ ತೊಡುಗವವರಿಗೆ ನೆರವಾಗುವ ಸಾಮಗ್ರಿಗಳು ಹಲವಾರಿವೆ. ಅವುಗಳನ್ನು ತ್ವರಿತಗತಿಯಲ್ಲಿ ಸಿದ್ಧಪಡಿಸಬೇಕು. ಅಂತಹ ಕೆಲವನ್ನು ಮುಂದೆ ಪಟ್ಟಿ ಮಾಡಲಾಗುವುದು. ಒಂದು: ಪದಪರೀಕ್ಷಕ(ಸ್ಪೆಲ್‌ಚೆಕ್) ಎರಡು: ವ್ಯಾಕರಣ ಪರೀಕ್ಷಕ. ಮೂರು: ಸಮಾನಾರ್ಥ ಪದಕೋಶ. ನಾಲ್ಕು:'ಅ'ಕಾರಾದಿ ಸಿದ್ಧತೆ. ಐದು: ಗುರುತು ಮಾಡುವಿಕೆ(ಟ್ಯಾಗಿಂಗ್). ಆರು: ಅಕ್ಷರ ಗ್ರಾಹಕ(ಒ.ಸಿ.ಆರ್) ಏಳು: ಉತ್ತಮಪಠ್ಯ ಅಕ್ಷರವಿನ್ಯಾಸ. ಎಂಟು: ಧ್ವನಿಯನ್ನು ಬರವಣಿಗೆಗೆ ಪರಿವರ್ತಿಸುವುದು. ಒಂಬತ್ತು: ಬರವಣಿಗೆಯನ್ನು ಧ್ವನಿಗಳನ್ನಾಗಿ ಪರಿವರ್ತಿಸುವುದು.

1. **ಪದಪರೀಕ್ಷಕ** ಕಂಪ್ಯೂಟರ್‌ನಲ್ಲಿ ಮೂಡಿಸಿದ ಪಠ್ಯದಲ್ಲಿ ಕಾಗುಣಿತ ದೋಷಗಳಿದ್ದರೆ ಅವುಗಳನ್ನು ತೋರಿಸುವ ಮತ್ತು ತಿದ್ದುಪಡಿಗಳನ್ನು ಸೂಚಿಸುವ ಕಾರ್ಯವಾಹಿ ಅತ್ಯಗತ್ಯ. ಇದರಿಂದ ಪಠ್ಯವನ್ನು ತ್ವರಿತಗತಿಯಲ್ಲಿ ದೋಷಗಳಿಂದ ಮುಕ್ತವಾಗಿಸಬಹುದು. ಕರಡು ತಿದ್ದುವಿಕೆ ಎಂಬ ಮಧ್ಯವರ್ತಿ ಹಂತವನ್ನು ಕೈಬಿಡಬಹುದು. ಕನ್ನಡದಲ್ಲಿ ಇಂಥಾ ಪದಪರೀಕ್ಷಕಗಳನ್ನು ಸಿದ್ಧಪಡಿಸಲಾಗಿದೆ. ಆದರೆ ಅವು ಪರಿಪೂರ್ಣವಾಗಿಲ್ಲ. ತಾಂತ್ರಿಕ ಕೊರತೆ ಒಂದೆಡೆಯಾದರೆ ಸಾಮಗ್ರಿ ಕೊರತೆ ಇನ್ನೊಂದೆಡೆ. ಕನ್ನಡ ಭಾಷೆಯ ರಚನೆಯನ್ನು ಅಭ್ಯಾಸ ಮಾಡಿ ಅದಕ್ಕನುಗುಣವಾದ ಸಾಮಗ್ರಿಯನ್ನು ಇಲ್ಲಿ ಅಳವಡಿಸಬೇಕು. ಇಂತಹ ಪದಪರೀಕ್ಷಕಗಳು ಇಂದಿನ ದಿನಮಾನದ ನೂರೆಂಟು ಸಮಸ್ಯೆಗಳಿಗೆ ಪರಿಹಾರ ನೀಡಬಲ್ಲವು.

2. **ವ್ಯಾಕರಣ ಪರೀಕ್ಷಕ:** ಬರವಣಿಗೆಯಲ್ಲಿ ಸಂಭವಿಸುವ ಕೆಲವು ಸಾಮಾನ್ಯ ದೋಷಗಳನ್ನು ಗುರುತು ಮಾಡುವ ಕಾರ್ಯವಾಹಿ ಇದು. ತಿದ್ದುಪಡಿಗಳನ್ನು ಸೂಚಿಸದಿದ್ದರೂ ಬರವಣಿಗೆಯಲ್ಲಿ ತಪ್ಪಾಗಿದೆ ಎಂಬುದನ್ನು ಗುರುತಿಸಿ ಕೊಟ್ಟರೆ ಅದರಿಂದ ತಿದ್ದುಪಡಿ ಸುಲಭವಾಗುತ್ತದೆ. ಇದು ಎಂದೂ ಪರಿಪೂರ್ಣ ಕಾರ್ಯವಾಹಿ ಆಗಲಾರದು. ಆದರೂ ನಿರ್ದಿಷ್ಟ ಗುರಿಗಳನ್ನು ಮತ್ತು ತಪ್ಪುಗಳ ಸಾಮಾನ್ಯ ಆವರ್ತನವನ್ನು ಅಭ್ಯಾಸ ಮಾಡಿದರೆ ಆಗ ಒಂದು ಉಪಯುಕ್ತ ಕಾರ್ಯವಾಹಿ ಸಾಧ್ಯವಾಗುತ್ತದೆ. ಉದಾ.ಗೆ ಕನ್ನಡದ ವಾಕ್ಯರಚನೆಯಲ್ಲಿ ಕರ್ತೃಪದ ಅಥವಾ ನಿಯೋಗಿಗೂ, ಕ್ರಿಯಾಪದದ ಅಖ್ಯಾತಗಳಿಗೂ ಹೊಂದಾಣಿಕೆ ಅಗತ್ಯವೆಂಬ ನಿಯಮವಿದೆ. ಸಾಮಾನ್ಯ ಬರವಣಿಗೆಗಳಲ್ಲಿ, ಅದರಲ್ಲೂ ವಾಕ್ಯಗಳು ದೀರ್ಘವಾದಾಗ ಈ ಹೊಂದಾಣಿಕೆಯ ನಿಯಮದಲ್ಲಿ ವ್ಯತ್ಯಯ ಆಗುವುದುಂಟು. ವ್ಯಾಕರಣ ಪರೀಕ್ಷಕ ಈ ನಿಯಮ ಉಲ್ಲಂಘನೆಯಾದಾಗ ಸೂಚನೆ ನೀಡಿದರೆ ಆಗ ತಿದ್ದುಪಡಿ ಸಾಧ್ಯವಾಗುತ್ತದೆ. ಬರೆಯುವವರ ಅನವಧಾನ ಮತ್ತು ಆಲೋಚನೆಯ ವೇಗದಿಂದ ಸಂಭವಿಸುವ ಹತ್ತಾರು ತಪ್ಪುಗಳು ಪಠ್ಯದಲ್ಲಿ ಉಳಿಯದಂತೆ ನೋಡಿಕೊಳ್ಳಬಹುದು.

3. **ಸಮಾನಾರ್ಥಕ ಪದಕೋಶ:** ದೀರ್ಘ ಬರವಣಿಗೆ ಮಾಡುವಾಗ ಒಂದೇ ಪದ ಹಲವು ಬಾರಿ ಬಳಕೆಯಾಗುವುದುಂಟು ಆಗ ಬರವಣಿಗೆಗೆ ಏಕತಾನತೆ ಬಂದೊದಗುತ್ತದೆ. ಅಲ್ಲದೆ ಕೆಲವು ಪದಗಳನ್ನು ಕೆಲವು ಸನ್ನಿವೇಶಗಳಲ್ಲಿ ಬಳಸಲು ಸಾಧ್ಯವಾಗದೆ ಅದಕ್ಕೆ ಪರ್ಯಾಯವಾದ ರೂಪಗಳನ್ನು ಬಳಸಬೇಕಾಗುತ್ತದೆ. ಇಂತಹ ಕಡೆ ಸಮಾನಾರ್ಥಕ ಪದಕೋಶ ನೆರವಿಗೆ ಬರುತ್ತದೆ. ಶೈಲಿಯ ವೈವಿಧ್ಯ ಕಾಯ್ದುಕೊಳ್ಳುವುದು; ಒಂದೇ ಅರ್ಥವುಳ್ಳ ಬೇರೆ ಬೇರೆ ಪದ ಅಥವಾ ಪದಗಳನ್ನು ಬಳಸಬೇಕಾದ ಅಗತ್ಯವನ್ನು ಇದರಿಂದ ಪೂರೈಸಬಹುದು. ಕನ್ನಡ ಸಮಾನಾರ್ಥಕ ಪದಕೋಶ ಸಿದ್ಧತೆ ನಡೆದಿದೆಯಾದರೂ ಅದನ್ನು ಕಂಪ್ಯೂಟರ್ ಬಳಕೆಗೆ ಅನುವು ಮಾಡಿಕೊಡುವಂತೆ ರೂಪಿಸುವ ಪ್ರಯತ್ನಗಳು ನಡೆದಿಲ್ಲ.

4. **'ಅ'ಕಾರಾದಿ ಸಿದ್ಧತೆ:** ಈ ಕುರಿತು ಹಿಂದೆಯೇ ಚರ್ಚಿಸಲಾಗಿದೆ. 'ಅ'ಕಾರಾದಿ ಪದಪಟ್ಟಿಯನ್ನು ಬಳಸುವ ಅಗತ್ಯ ಈಗ ಹಿಂದೆಂದಿಗಿಂತ ಹೆಚ್ಚಾಗಿದೆ. ಪುಸ್ತಕಗಳ ಕೊನೆಯ ಪದಕೋಶಗಳು ಪದಸೂಚಿಗಳು ಗ್ರಂಥಸೂಚಿಗಳು ಇದನ್ನು ಬಯಸುತ್ತವೆ. ಅಲ್ಲದೆ ದತ್ತಕಣಜವನ್ನು ಶೋಧಿಸುವ ಸರ್ಚ್‌ಇಂಜಿನ್‌ಗಳು 'ಅ'ಕಾರಾದಿ ಸೂಚಕಗಳನ್ನು ಬಹುವಾಗಿ ಅವಲಂಬಿಸುತ್ತವೆ. ಅಲ್ಲದೇ ಸರ್ಕಾರದ ಹಂತದಲ್ಲಿ ಹೆಸರುಗಳು, ಪಟ್ಟಿಗಳು ವಿವಿಧ ಉದ್ದೇಶಗಳಿಗಾಗಿ ಅಗತ್ಯವಾಗುತ್ತವೆ. ಮತದಾರರ ಪಟ್ಟಿ, ಟೆಲಿಪೋನ್ ಕೈಪಿಡಿಗಳು, ಪಡಿತರ ಚೀಟಿಗಳು, ತೆರಿಗೆ ಪಾವತಿಸುವವರ ಪಟ್ಟಿ, ಹೀಗೆ ನೂರಾರು ದತ್ತಕಣಜಗಳು ಸಿದ್ಧವಾಗುತ್ತಿವೆ. ಇಂತಹ ಕಡೆ 'ಅ'ಕಾರಾದಿ ಪಟ್ಟಿ ನೀಡುವ ಕಾರ್ಯಕ್ರಮಗಳು ಅತ್ಯಗತ್ಯವಾಗಿವೆ.

5. **ಅಕ್ಷರ ಗ್ರಾಹಕ(ಒ.ಸಿ.ಆರ್)** ಬರೆದ, ಮುದ್ರಿಸಿದ ಮಾಹಿತಿಯನ್ನು ಗಣಕಕ್ಕೆ ನೇರವಾಗಿ ಕೂಡಿಸುವ ಸ್ಕ್ಯಾನಿಂಗ್‌ತಂತ್ರ ಒಂದಿದೆ. ಆದರೆ ಹೀಗೆ ಮಾಡುವುದು ಅಸಾಧ್ಯವಲ್ಲದಿದ್ದರೂ ಕಷ್ಟ. ಏಕೆಂದರೆ ಅದೊಂದು ಪಠ್ಯವಲ್ಲ. ಕೇವಲ ಚಿತ್ರ. ಅಕ್ಷರಗ್ರಾಹಕಗಳು ಕೈಬರಹದ ಇಲ್ಲವೇ ಮುದ್ರಿಸಿದ ಬರವಣಿಗೆಯನ್ನು ಓದಿ ಪಠ್ಯಗಳನ್ನಾಗಿ ಪರಿವರ್ತಿಸಿ ಗಣಕದ ನೆನಪಿನಲ್ಲಿ ಸಂಗ್ರಹಿಸಬಲ್ಲವು. ಈ ತಂತ್ರಜ್ಞಾನ ಕನ್ನಡಕ್ಕೆ ಪ್ರಮಾಣೀಕೃತ ರೂಪದಲ್ಲಿ ಇನ್ನೂ ಲಭ್ಯವಿಲ್ಲ. ಇಂತಹ ಸೌಲಭ್ಯ ಒದಗಿದಾಗ ಹಳೆಯ ಹಸ್ತಪ್ರತಿಗಳನ್ನು, ಮುದ್ರಿತ ಸಾಮಗ್ರಿಯನ್ನು ಪರಿವರ್ತನಶೀಲ ಪಠ್ಯಗಳನ್ನಾಗಿ ಕಂಪ್ಯೂಟರ್‌ನಲ್ಲಿ ಇರಿಸುವುದು ಸಾಧ್ಯ. ಇಂದಿನ ಕೈಬರಹದ ಬರವಣಿಗೆಯನ್ನು ಕೂಡಾ ನೇರವಾಗಿ ಕಂಪ್ಯೂಟರ್‌ನ ಪಠ್ಯವನ್ನಾಗಿ ಪರಿವರ್ತಿಸಬಹುದು.

6. **ಉತ್ತಮ ಅಕ್ಷರ ವಿನ್ಯಾಸ:** ಕಂಪ್ಯೂಟರ್‌ನ ಬರವಣಿಗೆಗೆ ನೀಡುವ ತಲೆಬರಹದ ಅಕ್ಷರವಿನ್ಯಾಸಗಳು ಕನ್ನಡದಲ್ಲಿ ಸಾಕಷ್ಟಿವೆ. ಆದರೆ ಪಠ್ಯದ ಉದ್ದಕ್ಕೂ ಬಳಸುವ ಅಕ್ಷರ ವಿನ್ಯಾಸಗಳಲ್ಲಿ ಹೆಚ್ಚು ಆಯ್ಕೆಗಳು ಇಲ್ಲ. ಇರುವ ಆಯ್ಕೆಗಳಲ್ಲಿ ಓದು ಮತ್ತು ನೋಟಗಳಿಗೆ ಅನುಕೂಲಕರವಾದ ಅಕ್ಷರವಿನ್ಯಾಸ ಕಡಿಮೆ. ಅಕ್ಷರಗಳ ಗೆರೆಗಳ ಗಾತ್ರ, ಅಗಲ ಮತ್ತು ಎತ್ತರ, ಒತ್ತಕ್ಷರಗಳ ಸ್ವರೂಪ, ಅವುಗಳು ಮೂಲಾಕ್ಷರದೊಡನೆ ಕಾಣಿಸಿಕೊಳ್ಳುವ ಬಗೆ, ಅಕ್ಷರಗಳ ನಡುವೆ ಅಂತರ– ಇಂತಹ ಹತ್ತಾರು ಸಂಗತಿಗಳನ್ನು ಪರಿಗಣನೆಗೆ ತೆಗೆದುಕೊಂಡ ಅಕ್ಷರ ವಿನ್ಯಾಸಗಳು ಕನ್ನಡಕ್ಕೆ ಅತ್ಯಗತ್ಯವಾಗಿವೆ.

7. **ಗುರುತು ಮಾಡುವಿಕೆ (ಟ್ಯಾಗಿಂಗ್):** ದೀರ್ಘಪಠ್ಯಗಳನ್ನು ಕಂಪ್ಯೂಟರ್‌ನಲ್ಲಿ ದಾಖಲಿಸಿದ ಮೇಲೆ ಅಲ್ಲಿನ ಕೆಲವು ಅಗತ್ಯ ಪದಗಳನ್ನು ಆಯ್ದು ಪದಪಟ್ಟಿ ತಯಾರಿಸುವ ಅಗತ್ಯ ಉಂಟಾಗುತ್ತದೆ. ಪದಸೂಚಿಗಾಗಿ, ಪದಾರ್ಥ ವಿವರಣೆಗಾಗಿ, ಗ್ರಂಥಸೂಚಿಗಾಗಿ ಪಠ್ಯದ ಕೆಲವು ಪದಗಳನ್ನು ಗುರುತು ಮಾಡುವುದು ಸಾಧ್ಯವಾಗಬೇಕು. ಆಗ ತಂತಾನೇ ಬೇಕಾದ ಪದಪಟ್ಟಿಗಳು ಲಭಿಸುತ್ತವೆ. ಕನ್ನಡದಲ್ಲಿ ಇದಕ್ಕೆ ನೆರವಾಗುವ ಕಾರ್ಯವಾಹಿಗಳು ಇನ್ನೂ ಲಭ್ಯವಿಲ್ಲ. ಪುಸ್ತಕ ಪ್ರಕಟಣೆಯಲ್ಲಿ ವೃತ್ತಿಪರತೆ ಬರಬೇಕಾದರೆ ಮತ್ತು ಪಠ್ಯಾಧಾರಿತ ಸೌಲಭ್ಯವಿರುವ ಈ ಕಾರ್ಯವಾಹಿಗಳು ಆದಷ್ಟು ಬೇಗ ದೊರಕುವಂತಾಗಬೇಕು.

8. **ಧ್ವನಿಯನ್ನು ಬರವಣಿಗೆಗೆ ಪರಿವರ್ತಿಸುವುದು:** ಮಾತಿನ ಮಾದರಿಗಳನ್ನು ಅನುಸರಿಸಿ ಮಾತಾಡಿದ ಪಠ್ಯವನ್ನು ಬರೆಹದ ಪಠ್ಯವಾಗಿ ಪರಿವರ್ತಿಸುವ ಕಾರ್ಯವಾಹಿಗಳು ಅಗತ್ಯವಾಗುತ್ತವೆ. ಇದರಿಂದ ಸಮಯ ಮತ್ತು ಶ್ರಮದ ಉಳಿತಾಯ ಸಾಧ್ಯ. ಇದೊಂದು ಪರಿಪೂರ್ಣವಾದ ಕಾರ್ಯವಾಹಿ ಆಗಲಾರದು. ಆದರೂ ಒಮ್ಮೆ ಲಭಿಸಿದ ಲಿಖಿತರೂಪವನ್ನು ತಿದ್ದುಪಡಿಗಳೊಡನೆ ಬಳಸುವುದು ಸುಲಭವಾಗುತ್ತದೆ.

9. **ಬರಹವನ್ನು ಮಾತಾಗಿ ಪರಿವರ್ತಿಸುವುದು:** ಎಷ್ಟೋ ಪಠ್ಯಗಳನ್ನು ಕಣ್ಣಿಂದ ಓದುತ್ತಿರುವಂತೆ ಅದನ್ನು ಓದಿದ ಧ್ವನಿಯನ್ನು ಕೇಳಿಸಿಕೊಳ್ಳುವ ಸೌಲಭ್ಯ

ಅಗತ್ಯವಾಗುತ್ತದೆ. ಬರೆಹವನ್ನು ಮಾತಾಗಿ ಪರಿವರ್ತಿಸುವುದರಿಂದ ನಮ್ಮ ಓದಿನ ಕ್ರಮವೇ ಬದಲಾಗಿ ಹೋಗುತ್ತದೆ. ಇವೆಲ್ಲವೂ ನಾಳಿನ ಸಾಧ್ಯತೆಗಳು. ಕನ್ನಡ ಇಂತಹ ಹೊಸ ತಂತ್ರಜ್ಞಾನದ ಅವಕಾಶಗಳನ್ನು ಬೇಗ ಬೇಗ ತನಗೆ ಒದಗುವಂತೆ ಮಾಡಿಕೊಳ್ಳಬೇಕು. ಇದರಿಂದ ಭಾಷೆಯ ಆಧುನೀಕರಣ ಎಂಬ ಪ್ರಕ್ರಿಯೆ ನಿಜವಾದ ಅರ್ಥದಲ್ಲಿ ಪೂರ್ಣವಾಗುತ್ತದೆ.

ಇದಲ್ಲದೆ ಆಧುನಿಕ ಜಗತ್ತಿನ ಇನ್ನೊಂದು ಬಹುಮುಖ್ಯ ಅಗತ್ಯವೆಂದರೆ ಭಾಷಾಂತರದ ಕಾರ್ಯವಾಹಿಗಳು. ಒಂದು ಭಾಷೆಯ ಪಠ್ಯವನ್ನು ಇನ್ನೊಂದು ಭಾಷೆಗೆ ಯಂತ್ರಗಳ ನೆರವಿನಿಂದ ಅನುವಾದಿಸುವುದು ತೀರಾ ಕಠಿಣವಾದ ಕೆಲಸ. ಆದರೆ ಒಂದು ಹಂತದವರೆಗೆ ಅಸಾಧ್ಯವಾದ ಕೆಲಸವೆಂದೇನೂ ತಿಳಿಯಬೇಕಾಗಿಲ್ಲ. ಕನ್ನಡವು ತಾನು ದಿನನಿತ್ಯ ವ್ಯವಹರಿಸುವ ವಲಯಗಳಲ್ಲಿ ಎದುರಿಸುವ ಭಾಷೆಗಳಿಗೆ ಅನುವಾದ ಮಾಡುವ ಕಾರ್ಯವಾಹಿಗಳು ಅಗತ್ಯವಾಗಿವೆ. ಇದರಿಂದ ಸಂವಹನದ ಕೊರತೆಗಳು ಕಡಿಮೆಯಾಗುತ್ತವೆ. ಭಾಷೆಯು ಗೋಡೆಯಾಗುವ ಬದಲು ಸಂಪರ್ಕದ ಹೊಸ ಅವಕಾಶಗಳು ತೆರೆದುಕೊಳ್ಳುತ್ತವೆ. ಇಂದಿನ ಅಗತ್ಯಗಳು ಸ್ಥಿರ ಮತ್ತು ಚಿರ ಭಾಷಾಂತರಗಳ ಜೊತೆಗೆ ತತ್‌ಕ್ಷಣವೇ ನಡೆಯುವ ದುಭಾಷಿತನದ ಭಾಷಾಂತರಗಳನ್ನೂ ಬಯಸುತ್ತವೆ. ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಸಮ್ಮೇಳನಗಳು, ಸಂವಾದಗಳು, ಗೋಷ್ಠಿಗಳು ನಡೆಯುವಾಗ ಹೀಗೆ ಹೇಳಿದ ಮಾತು ಕೂಡಲೇ ಹಲವು ಭಾಷೆಗಳಿಗೆ ಅನುವಾದವಾಗಬೇಕಾದ ಅಗತ್ಯ ಉಂಟಾಗುತ್ತದೆ. ಈ ಬಗೆಯ ಭಾಷಾಂತರ ವ್ಯಾವಹಾರಿಕ ನೆಲೆಯಲ್ಲಿ ತೀರಾ ಅಗತ್ಯವೆನಿಸುವ ಪ್ರಸಂಗಗಳು, ಸಂದರ್ಭಗಳು ದಿನೇ ದಿನೇ ಹೆಚ್ಚಾಗುತ್ತಿವೆ. ಇದಕ್ಕೆ ನೆರವಾಗುವಂತೆ ಕನ್ನಡ ಭಾಷೆಯನ್ನು ಸನ್ನದ್ಧಗೊಳಿಸಬೇಕಾಗಿದೆ.

ಈ ಹಿಂದೆಯೇ ಗಮನಿಸಿದಂತೆ ಏಕಭಾಷಿಕರ ಕಾಲ ಮುಗಿಯಿತು. ಒಂದಕ್ಕಿಂತ ಹೆಚ್ಚು ಭಾಷೆಗಳನ್ನು ಬಳಸುವುದು ಅಗತ್ಯವಷ್ಟೇ ಅಲ್ಲ ಅನಿವಾರ್ಯವೂ ಆಗುತ್ತಿದೆ. ಆಯ್ಕೆಯಿಂದ ಏಕಭಾಷಿಕರಾಗುವ ಹಠ ಮಾಡಬಹುದು. ಸಹಜ ಪ್ರಕ್ರಿಯೆಯಲ್ಲಿ ನಾಗರಿಕ ಲೋಕ ಬಹುಭಾಷಿಕರನ್ನು ಸಮರ್ಥಿಸುತ್ತಿದೆ.ಹೀಗೆ ಒಂದಕ್ಕಿಂತ ಹೆಚ್ಚು ಭಾಷೆಗಳನ್ನು ಕಲಿಯಲು ಅಗತ್ಯವಾದ ಪಠ್ಯಗಳನ್ನು ಸಿದ್ಧಪಡಿಸುವ ಮಾತನ್ನು ಈ ಹಿಂದೆಯೇ ಹೇಳಲಾಗಿದೆ. ಆದರೆ ದ್ವಿಭಾಷಿಕರು ದೈನಂದಿನ ವ್ಯವಹಾರದಲ್ಲಿ ಎದುರಿಸುವ ಸಮಸ್ಯೆಗಳಿಗೆ ಪರಿಹಾರ ನೀಡುವ ನೆಲೆಗಳು ಸಿದ್ಧಗೊಳ್ಳಬೇಕು. ಸಂವಹನ ಕೊರತೆಯ ಸಂದರ್ಭವನ್ನು ಕನಿಷ್ಠ ಪ್ರಮಾಣಕ್ಕೆ ಇಳಿಸುವುದು ಅಗತ್ಯವಾಗಿದೆ. ಇದಲ್ಲದೇ ಪೌರಸಮಾಜವು ಚಲನಶೀಲವಾದುದು. ನೆಲೆಗೊಳ್ಳದಿದ್ದರೂ ವ್ಯವಹಾರಕ್ಕಾಗಿ ಲಕ್ಷಗಟ್ಟಲೆ ಜನ ಒಂದು ಭಾಷಾಪ್ರದೇಶದಿಂದ ಇನ್ನೊಂದು ಭಾಷಾಪ್ರದೇಶಕ್ಕೆ ಗೊತ್ತಾದ ಅವಧಿಗೆ ವಲಸೆ ಹೋಗುತ್ತಿದ್ದಾರೆ. ದುಡಿಮೆ, ವ್ಯವಹಾರ, ವ್ಯಾಪಾರ, ಪ್ರವಾಸ, ವಿದ್ಯಾರ್ಜನೆ, ಸಾಮಾಜಿಕಸಂಪರ್ಕ ಹೀಗೆ ಹಲವು ಹತ್ತು ಕಾರಣಗಳಿಂದ ಕ್ಲುಪ್ತಕಾಲದ ದ್ವಿಭಾಷಿಕ ಸಂದರ್ಭಗಳು ಸೃಷ್ಟಿಯಾಗುತ್ತಿವೆ. ಇಂತಹ ಕಡೆಗಳಲ್ಲಿ ಅಗತ್ಯವಾದ ಭಾಷಾಸಂವಹನ

ತಡೆ ಇಲ್ಲದೆ ನಡೆಯುವಂತೆ ಯೋಜನೆಗಳನ್ನು ರೂಪಿಸಬೇಕಾಗಿದೆ. ಇಂದಿನ ದಿನಗಳಲ್ಲಿ ಜನರು ಹೇಗೋ ಇಂತಹ ಪರಿಸ್ಥಿತಿಯನ್ನು ನಿಭಾಯಿಸುತ್ತಿದ್ದಾರೆ. ಆದರೆ ಅವರಿಗೆ ನೆರವಾಗುವ ಪರಿಕರಗಳನ್ನು ಸಿದ್ಧಪಡಿಸಿ ಸುಲಭವಾಗಿ ಲಭ್ಯವಾಗುವಂತೆ ಮಾಡಬೇಕಾಗಿದೆ.

ಕನ್ನಡವು ಆತಂಕಗಳನ್ನು ಎದುರಿಸುತ್ತಿಲ್ಲ ಎಂದು ಹಠ ಮಾಡುವುದು ತಪ್ಪಾಗುತ್ತದೆ. ಮುಳುಗೇ ಹೋಯ್ತು ಎಂಬ ನಿರಾಶೆಯಾಗಲೀ, ಮತ್ತು ಕನ್ನಡಕ್ಕೆ ಏನೂ ಆಗದು ಎಂಬ ಭರವಸೆಯಾಗಲೀ ಎರಡೂ ಅತಿರೇಕಗಳು. ವಾಸ್ತವದ ನೆಲೆಯಲ್ಲಿ ಪರಿವರ್ತನೆಗಳ ಸ್ವರೂಪವನ್ನು ಗ್ರಹಿಸಬೇಕಾಗಿದೆ. ಕೇವಲ ಅಭಿಮಾನ ಮತ್ತು ಪೈಪೋಟಿಯ ಮನೋಭಾವ ಮಾತ್ರ ಸಾಲುವುದಿಲ್ಲ. ಹೊಸ ತಂತ್ರಜ್ಞಾನದ ನೆರವಿನಿಂದ ಹೊಸ ಅಗತ್ಯಗಳಿಗೆ ಅನುಗುಣವಾಗಿ ಬಳಕೆಯ ವಲಯಗಳನ್ನು ನಿರ್ವಹಿಸಲು ಕನ್ನಡ ಶಕ್ತವಾಗುವಂತೆ ಮಾಡುವುದೇ ಸರಿಯಾದ ದಾರಿ. ಇದರಲ್ಲಿ ಹಿಂಜರಿಕೆ ಮತ್ತು ಕಾಯ್ದು ನೋಡುವ ಪ್ರವೃತ್ತಿ ಹೊಂದುವುದಿಲ್ಲ. ಯೋಜಿತ ರೀತಿಯಲ್ಲಿ ಕಾರ್ಯನಿರ್ವಹಣೆ ಮಾಡಿದರೆ ಮಾತ್ರ ಇಪ್ಪತ್ತೊಂದನೆಯ ಶತಮಾನ ದಲ್ಲಿ ಕನ್ನಡವು ತನ್ನ ನಿಜಪಾತ್ರವನ್ನು ನಿರ್ವಹಿಸಬಲ್ಲುದು. ಮೂರನೆಯ ಸಹಸ್ರಮಾನಕ್ಕೂ ದಾಟಿ ಬಂದ ಜಗತ್ತಿನ ಕೆಲವೇ ಭಾಷೆಗಳಲ್ಲಿ ಒಂದಾಗಿರುವ ಕನ್ನಡಕ್ಕೆ ಇಂದು, ನಿನ್ನೆಗಳಿರುವಂತೆ ನಾಳೆಗಳೂ ಇರುತ್ತವೆ.

# ಎರಡು ಪ್ರಸಂಗಗಳಲ್ಲಿ ಕನ್ನಡ

ಈಚೆಗೆ ವಿಧಾನಮಂಡಲದಲ್ಲಿ ನಡೆದ ಎರಡು ಬೇರೆಬೇರೆ ಘಟನೆಗಳು ನಮ್ಮ ಭಾಷಿಕ ಸಂದರ್ಭವನ್ನು ಪ್ರತಿಬಿಂಬಿಸುವುದರಿಂದ ಅವುಗಳನ್ನು ಕುರಿತು ಚರ್ಚಿಸುವುದು ಸೂಕ್ತ. ಮೊದಲ ಘಟನೆ ಹೀಗಿದೆ. ರಾಜ್ಯ ಸರಕಾರದ ಬಗೆಗೆ ಕೇಂದ್ರ ಸರಕಾರ ಅಷ್ಟೇನೂ ಉತ್ಸಾಹದಾಯಕ ಧೋರಣೆಯನ್ನು ಪ್ರಕಟಿಸುತ್ತಿಲ್ಲ. ಬೇರೆ ರಾಜ್ಯಗಳ ಪ್ರಸ್ತಾವನೆಗಳಿಗೆ ಹೆಚ್ಚಿನ ಸಹಕಾರ, ಸಹಾಯಗಳನ್ನು ನೀಡುತ್ತಿದೆ ಎಂಬುದನ್ನು ಸೂಚಿಸಲು ಸದಸ್ಯರೊಬ್ಬರು ಕೇಂದ್ರಸರಕಾರದ ಮಲತಾಯಿ ಧೋರಣೆ ಎಂಬ ಮಾತನ್ನು ಬಳಸಿದರೆಂದು ವರದಿಯಾಗಿದೆ. ಕೂಡಲೇ ಸದನದಲ್ಲಿದ್ದ ಮಹಿಳಾಸದಸ್ಯರೊಬ್ಬರು ಈ ಪ್ರಯೋಗ ಹೆಂಗಸರಿಗೆ ಅವಮಾನ ಮಾಡುವ ಉದ್ದೇಶದಿಂದ ಕೂಡಿದೆಯೆಂದು ಪ್ರತಿಭಟಿಸಿದರಂತೆ.

ಮಲತಾಯಿಯಾದವಳು ತನ್ನ ಗಂಡನ ಮೊದಲ ಹೆಂಡತಿಯ ಮಕ್ಕಳನ್ನು ಸರಿಯಾಗಿ ನೋಡಿಕೊಳ್ಳುವುದಿಲ್ಲವೆಂಬ ಸಿದ್ಧ ತಿಳುವಳಿಕೆಯನ್ನು ಒಪ್ಪಿಕೊಂಡು ಜೀವನದ ಇತರ ವಲಯಗಳನ್ನೂ ಇಂಥ ಪಕ್ಷಪಾತದ ಧೋರಣೆಯಿರುವುದನ್ನು ಹೇಳುವಾಗ 'ಮಲತಾಯಿಧೋರಣೆ' ಎನ್ನುವ ಮಾತನ್ನು ಬಳಸುವುದು ಸಹಜವಾಗಿದೆ. ಈ ಮಾತನ್ನು ಸಂಕಥನವೊಂದರಲ್ಲಿ ಬಳಸಿದಾಗ ಸದಸ್ಯರು ಪ್ರತಿಭಟಿಸಿದರೇಕೆ? ಕೇಂದ್ರ ಸರಕಾರ ರಾಜ್ಯಸರಕಾರದ ಬಗೆಗೆ ತೋರುತ್ತಿರುವ ಪಕ್ಷಪಾತದ ಧೋರಣೆಯಿಂದಾಗಿ ಉಂಟಾಗಿರುವ ಏರುಪೇರಿನ ಪರಿಸ್ಥಿತಿಯನ್ನು ಅವರು ಪ್ರಶ್ನಿಸುತ್ತಿಲ್ಲ. ಬದಲಾಗಿ ಆ ಪರಿಸ್ಥಿತಿಯನ್ನು ವಿವರಿಸಲು ಬಳಸಿದ ವಾಗ್ರೂಢಿಯನ್ನು ಹಾಗೂ ಆ ವಾಗ್ರೂಢಿಯ ಹಿಂದಿನ ಸಾಮಾಜಿಕ ತಿಳುವಳಿಕೆಯನ್ನು ಅವರು ಪ್ರಶ್ನಿಸುತ್ತಿದ್ದಾರೆ. ಈ ಬಗೆಯ ಹಲವು ಪ್ರಸಂಗಗಳು ಮೇಲಿಂದ ಮೇಲೆ ವರದಿಯಾಗುತ್ತಿವೆ. ಭಾಷೆಯನ್ನು ಬಳಸುವವರು ಈಗ ಹತ್ತು ಸಲ ಯೋಚಿಸುವುದು ಅನಿವಾರ್ಯವಾಗಿದೆ.

ಸಾಮಾಜಿಕ 'ತಿಳುವಳಿಕೆ' ಭಾಷೆಯಲ್ಲಿ ವ್ಯಕ್ತವಾಗುತ್ತಿರುತ್ತದೆ. ಆ ತಿಳುವಳಿಕೆಯನ್ನು ನಾವು ಒಪ್ಪಲಿ ಬಿಡಲಿ ದಿನವೂ ನಮ್ಮ ಮಾತಿನಲ್ಲಿ ಬಳಸುತ್ತಲೇ ಇರುತ್ತೇವೆ. ಆ ತಿಳುವಳಿಕೆಯ ಪರಿಣಾಮದಲ್ಲಿ ಭಾಗಿಗಳಾಗುತ್ತಿರುತ್ತೇವೆ. ಕೆಲವು ನಿದರ್ಶನಗಳನ್ನು ನೋಡೋಣ. 'ಹೆಂಗರಳು' ಎಂಬ ಮಾತನ್ನು ಸಾಮಾನ್ಯವಾಗಿ ಗಂಡಿಸಿನ ಸ್ವಭಾವವನ್ನು ಕುರಿತು ಮಾತನಾಡುವಾಗ ಮಾತ್ರ ಬಳಸುತ್ತೇವೆಯಲ್ಲವೇ? ಹಾಗೆಯೇ 'ಹೆಣ್ಣಿಗತನ' ಎಂಬ ರಚನೆಯನ್ನು ಕೂಡ. ಹೆಂಗಸಿನಲ್ಲಿ ಇದೆಯೆಂದು ತಿಳಿಯಲಾದ ಲಕ್ಷಣಗಳನ್ನು

ಗಂಡಸಿನಲ್ಲಿ ನಾವು 'ಕಂಡು' ಪ್ರಸಂಗವಶಾತ್ ಸೂಕ್ತ ಪದವನ್ನು ಬಳಸುತ್ತೇವೆ. ಈ 'ತಿಳುವಳಿಕೆ' ಹೆಂಗಸನ್ನು ಕುರಿತ ನಮ್ಮ ಸಿದ್ಧ ಮಾದರಿಯನ್ನು ಅವಲಂಬಿಸಿದೆ. ಈ 'ಪೋಲಿಸಿಣಿ' ಪದವೂ ಕೂಡ ಗಂಡಸರು ಪೋಲಿಸ್ ಆಗುವರೆಂಬ ನಂಬಿಕೆಯಿಂದ ಹುಟ್ಟಿದೆ.

ಭಾಷೆಯಲ್ಲಿ ಹೀಗೆ ಅಡಕಗೊಂಡಿರುವ ಸಾಮಾಜಿಕ ತಿಳುವಳಿಕೆಯನ್ನು ಪ್ರಶ್ನಿಸುವುದು ನಮ್ಮಲ್ಲಿ ಆಗುತ್ತಿರುವ ಸಾಮಾಜಿಕ ಪರಿವರ್ತನೆಯನ್ನು ಕುರಿತ ಚಿಂತನೆಯ ಸೂಚಕ. ಭಾಷೆಯ ಬಳಕೆಯಲ್ಲಿ ಬದಲಾವಣೆಯನ್ನು ತರುವ ಮೂಲಕ ಸಾಮಾಜಿಕ ತಿಳುವಳಿಕೆಯನ್ನು ಅಳಿಸಿಹಾಕಬಹುದೇ ಎಂಬ ಪ್ರಶ್ನೆಯನ್ನು ಸಹಜವಾಗಿಯೇ ಕೇಳಬಹುದಾಗಿದೆ. ಉದಾಹರಣೆಗೆ ನಮ್ಮ ಸಂಕಥನಗಳು ಸಾಮಾನ್ಯವಾಗಿ ಪುರುಷಕೇಂದ್ರಿತವಾಗಿರುತ್ತವೆಯಷ್ಟೆ. ಅಂದರೆ ಸಂಕಥನಗಳಲ್ಲಿ ಬಳಕೆಯಾಗುವ ಸಾಮಾನ್ಯ ನಾಮಪದಗಳಿಗೆ ಪುರುಷವಾಚಿಗಳನ್ನೆ ಬಳಸುತ್ತೇವೆ. ಮನುಷ್ಯ ತನ್ನ ಸ್ವಾರ್ಥಕ್ಕಾಗಿ ಏನನ್ನಾದರೂ ಬಲಿಕೊಡಲು ಸಿದ್ಧನಾಗುತ್ತಾನೆ', 'ಭಾಷೆಯನ್ನು ಬಳಸುವವನು ತನ್ನ ಅಭಿಪ್ರಾಯಗಳನ್ನು ಇತರರಿಗೆ ತಿಳಿಸಲು ಯತ್ನಿಸುತ್ತಿರುತ್ತಾನೆ' ಎಂಬ ಮಾದರಿಯ ವಾಕ್ಯಗಳನ್ನು ದಿನವೂ ಬಳಸುತ್ತಿರುತ್ತೇವೆ. ಇಲ್ಲೆಲ್ಲ ಏಕೆ ಪುರುಷರನ್ನೇ ಉದ್ದೇಶಿಸಬೇಕು? ಇದು ಸಮಾಜದಲ್ಲಿರುವ ಅಸಮಾನತೆಯನ್ನು ಸೂಚಿಸುತ್ತದೆ ಎಂದು ವಾದಿಸಿ ಪರ್ಯಾಯವಾಗಿ ಈ ಸಂಕಥನಗಳಲ್ಲಿ ಸ್ತ್ರೀ ಸೂಚಕ ರೂಪಗಳನ್ನು ಬಳಸಿದೆವೆನ್ನೋಣ. ಆಗ ಆ ಬದಲಾವಣೆ ಸಮಾಜದಲ್ಲಿ ಹೆಣ್ಣು ಮತ್ತು ಗಂಡುಗಳ ಸ್ಥಾನಮಾನದಲ್ಲಿ ಆಗಿರುವ ಬದಲಾವಣೆಯನ್ನು ಸೂಚಿಸುವುದಿಲ್ಲ. ಬದಲಾಗಿ ಯಾವ ಬಗೆಯ ಬದಲಾವಣೆ ಬೇಕೆಂದು ಬಯಸಲಾಗುತ್ತಿದೆಯೋ ಅದನ್ನು ಈ ಭಾಷಿಕ ಬಳಕೆಗಳು ಸೂಚಿಸುತ್ತವೆ ಮಾತ್ರ.

ಉತ್ತರ ಅಮೆರಿಕಾ ಮತ್ತು ಕೆಲವು ಯುರೋಪಿನ ದೇಶಗಳಲ್ಲಿ ಸ್ತ್ರೀ ಸಮಾನತೆಯ ಚಳುವಳಿಗಳು ಆರಂಭಗೊಂಡಾಗ ಆ ಚಳುವಳಿಗಳ ನೇತಾರರು ಅವರವರ ಸಮಾಜದ ಭಾಷೆಗಳಲ್ಲಿ ಇದ್ದ ಹೆಣ್ಣು-ಗಂಡು ಭೇದವನ್ನು ಗುರುತಿಸಿದರು; ಚರ್ಚಿಸಿದರು. ಅನಂತರ ಆಯಾ ಸಮಾಜಗಳು ಒಂದು ಅಲಿಖಿತ ಒಪ್ಪಂದಕ್ಕೆ ಬಂದವೋ ಎಂಬಂತೆ ಭಾಷೆಯ ಬಳಕೆಯಲ್ಲಿದ್ದ ಈ ಭೇದವನ್ನು ಅಳಿಸಲು ಅನುವುಮಾಡಿಕೊಡುವ ಪ್ರಯೋಗಗಳನ್ನು ಜಾರಿಗೆ ತಂದರು. ಅಧ್ಯಯನಗಳ ಮೂಲಕ ತಿಳಿದು ಬಂದಿರುವ ಸಂಗತಿಯೆಂದರೆ ಈ ಭಾಷಿಕ ಪರಿವರ್ತನೆಗೂ ಆಯಾ ಸಮಾಜಗಳಲ್ಲಿನ ಹೆಂಗಸಿನ ಸ್ಥಾನಮಾನಗಳಿಗೂ ಆರ್ಥಿಕ ಸ್ಥಿತಿಗತಿಗಳಿಗೂ ಸಂಬಂಧವಿಲ್ಲ. ಅಂದರೆ ಭಾಷೆಯಲ್ಲಿ ಹೆಣ್ಣು ಗಂಡು ಸಮಾನವೆಂದು ಸೂಚಿಸಿದಷ್ಟು ಸುಲಭವಾಗಿ ಸಾಮಾಜಿಕವಾಗಿ ಸಾಧಿಸುವುದು ಸಾಧ್ಯವಾಗಿಲ್ಲ. ಹಾಗಿದ್ದರೆ ಈ ಭಾಷಿಕ ಬದಲಾವಣೆಗಳ ಅರ್ಥವೇನು? ಈಗಾಗಲೇ ಹೇಳಿದಂತೆ, ಈ ಬಗೆಯ ಭಾಷಿಕ ಪರಿವರ್ತನೆಗಳ ಸಾಮಾಜಿಕ ಪರಿವರ್ತನೆಗಳನ್ನು ಪ್ರತಿನಿಧಿಸುತ್ತಿರುವುದಿಲ್ಲ; ಬದಲಿಗೆ ಯಾವ ಬಗೆಯ ಸಾಮಾಜಿಕ ಪರಿವರ್ತನೆಗಳನ್ನು ಸಮಾಜ ಬಯಸುತ್ತದೆ ಎಂಬುದರ ಸೂಚಕವಾಗಿರುತ್ತದೆ. ಈ ಬಯಕೆ ವಾಸ್ತವವಾಗಿ

ಸಮಾಜದಲ್ಲಿ ಇರಬಹುದು ಅಥವಾ ಇದೆ ಎಂದು ತೋರಿಸಿಕೊಳ್ಳುತ್ತಿರಬಹುದು. ಈ ಸೂಕ್ಷ್ಮ ವ್ಯತ್ಯಾಸವನ್ನು ಭಾಷಿಕ ಬಳಕೆಗಳು ದಾಖಲು ಮಾಡಲಾರವು.

ಕನ್ನಡ ಕೂಡ ದಿನದಿನದ ಬಳಕೆಯಲ್ಲಿ ಸಾಮಾಜಿಕ ಪರಿವರ್ತನೆಯ ದಿಕ್ಕುದೆಸೆಗಳಿಗೆ ಅನುಗುಣವಾಗಿ ಬದಲಾವಣೆಗಳನ್ನು ಮಾಡಿಕೊಳ್ಳಬೇಕಾಗಿದೆ. ಮೇಲೆ ಉಲ್ಲೇಖಿಸಿದ ಪ್ರಸಂಗವನ್ನು ಹೋಲುವ ನೂರಾರು ಪ್ರಸಂಗಗಳು ಸಂಭವಿಸುತ್ತಲೇ ಇವೆ. ಶಿಕ್ಷಣ ಕ್ಷೇತ್ರದಲ್ಲಿ ಮತ್ತು ಮಾಧ್ಯಮಗಳಲ್ಲಿ ಇದರ ಪರಿಣಾಮಗಳು ಹೆಚ್ಚಾಗಿರುವಂತೆ ತೋರುತ್ತದೆ. ಈ ಕುರಿತು ನಮ್ಮ ಅಧ್ಯಯನಗಳು ನಡೆಯಬೇಕಾಗಿವೆ.

ಇನ್ನೊಂದು ಪ್ರಸಂಗ: ವಿಧಾನಮಂಡಲ ಅಧಿವೇಶನ ನಡೆಯುತ್ತಿರುವಾಗ ಗಣ್ಯ ಪ್ರೇಕ್ಷಕರ ಗ್ಯಾಲರಿಗೆ ಅಮೇರಿಕದ ಸಂಸತ್ ಸದಸ್ಯರ ತಂಡವೊಂದು ಭೇಟಿ ನೀಡಿದಾಗ ನಡೆದ ಘಟನೆಯಿದು ಇದನ್ನು ವರದಿ ಮಾಡಿದ ಕ್ರಮ ಹೀಗಿದೆ. ಅಮೇರಿಕನ್ ಸಂಸತ್ ಸದಸ್ಯರ ಆಗಮನದ ಸುಳಿವು ಸಿಕ್ಕಿದ ....ಅವರು (ಸದಸ್ಯರ ಹೆಸರು) ಸೊಗಸಾದ ಇಂಗ್ಲಿಶ್‌ನಲ್ಲಿ ಭಾಷಣ ಮಾಡಿದರು. ಉತ್ತರ ನೀಡುತ್ತಿದ್ದ ಸಚಿವರಾದ.. (ಸಚಿವರ ಹೆಸರು) ತಮ್ಮದೇ ಆದ ಇಂಗ್ಲಿಶ್ ಶೈಲಿಯಲ್ಲಿ ಮಾತಾಡಲು ಹಿಂದೆ ಬೀಳಲಿಲ್ಲ. ಇದನ್ನು ಕಂಡ ಅವರು (ಸದಸ್ಯರ ಹೆಸರು) ತಮ್ಮ ಇಂಗ್ಲಿಷ್ ಭಾಷಣ ಮಾಡದೇ ಬಿಡಲಿಲ್ಲ. ಈ ಪ್ರಸಂಗ ಹಾಗೂ ವರದಿಗಳೆರಡನ್ನೂ ಒಟ್ಟಾಗಿ ಗಮನಿಸಬೇಕು. ಕರ್ನಾಟಕದ ವಿಧಾನ ಮಂಡಲದ ಸದಸ್ಯರು ತಮ್ಮ ಎಂದಿನ ರೀತಿಯನ್ನು ಬಿಟ್ಟು ಇಂಗ್ಲಿಷ್‌ನಲ್ಲಿ ಮಾತನಾಡಿದ್ದಕ್ಕೆ ಅವರದೇ ಸಮರ್ಥನೆಗಳಿರಬಹುದು. ಗಣ್ಯ ಅತಿಥಿಗಳಿಗೆ ತಮ್ಮ ವಿಚಾರಗಳ ಅರಿವಾಗಲೆಂದು ಹೀಗೆ ಮಾಡಿದರೆಂದು ಹೇಳಲು ಸಾಧ್ಯವಿದೆ. ಆದರೆ ಜರ್ಮನ್, ಚೈನಾ, ಸೌದಿ ಅರೇಬಿಯಾದ ಸಂಸತ್ ಸದಸ್ಯರು ಆಗಮಿಸಿದಾಗ? ಅಥವಾ ಅಸಾಮ್, ಗುಜರಾತ್, ತಮಿಳು ನಾಡಿನ ವಿಧಾನಮಂಡಲದ ಸದಸ್ಯರು ಬಂದರೆ? ಎಲ್ಲ ಸಂದರ್ಭಗಳಲ್ಲೂ ನಮ್ಮ ವಿಧಾನ ಮಂಡಲದ ಸದಸ್ಯರ ಭಾಷಣದ ಭಾಷೆ ಯಥಾನುಕ್ರಮದಲ್ಲಿ ಬದಲಾಗುವುದು ಸಾಧ್ಯವಿಲ್ಲವಷ್ಟೆ? ಇಂಗ್ಲಿಶ್‌ಗಿರುವ ಈ ಆಳುವ ಗುಣ ಇನ್ನೂ ಮಾಸಿಲ್ಲವೆಂಬುದನ್ನು ಮತ್ತೆ ನೆನಪಿಸುತ್ತಿರುವ ಘಟನೆಯಿದು.

ಇನ್ನು-ವರದಿಗಾರರು ಈ ಪ್ರಸಂಗವನ್ನು ನೋಡಿರುವ ವಿಧಾನ ಕುತೂಹಲಕಾರಿಯಾಗಿದೆ. ಹೀಗೆ ಇಂಗ್ಲಿಷ್‌ನಲ್ಲಿ ಮಾತನಾಡಿದ ಮೂರು ಪ್ರಸಂಗಗಳನ್ನು ವರದಿ ಮಾಡುವಾಗ ಬಳಸಿರುವ ಪದಗಳು ಗಮನ ಸೆಳೆಯುತ್ತವೆ. ಒಬ್ಬರ ಭಾಷಣ 'ಸೊಗಸಾದ' ಇಂಗ್ಲಿಶಿನಲ್ಲಿತ್ತು. ಇನ್ನೊಬ್ಬರು ಭಾಷಣದಲ್ಲಿ ಬಳಸಿದ ಇಂಗ್ಲಿಶ್ ತಮ್ಮದೇ ಆದ ಶೈಲಿಯಲ್ಲಿತ್ತು. ಮತ್ತೊಬ್ಬರು ಇಂಗ್ಲಿಷ್ ಮಾತಾಡಲು ಹಿಂದೆ ಬೀಳಲಿಲ್ಲ. ಸದನದಲ್ಲಿ ಇಂಗ್ಲಿಶ್ ಬಳಸಿದ್ದಕ್ಕೆ ಮೇಲೆ ಹೇಳಿದ ಪ್ರಾಯೋಜನಿಕ ವಿವರಣೆಯಷ್ಟೆ ಮುಖ್ಯವಲ್ಲವೆಂಬುದು ಈ ವರದಿಯಿಂದ ಗೋಚರವಾಗುತ್ತದೆ. ಅತಿಥಿಗಳಿಗೆ ತಿಳಿಯಲಿ ಎಂಬ ಸದುದ್ದೇಶದಿಂದ ಮಾಡಿದ ಇಂಗ್ಲಿಶ್ ಬಳಕೆಗೆ ಅಂಟಿಕೊಂಡಿರುವ ಗುಣವಾಚಕಗಳ

ಬಳಕೆಯನ್ನು ಗಮನಿಸಿ. ನಾವು ಇಂಗ್ಲಿಶ್ ಬಳಸುವಾಗ ಅದು ಚೆನ್ನಾಗಿದೆಯೋ ಇಲ್ಲವೋ ಎಂಬುದನ್ನು ಗಮನಿಸಬೇಕು. ಬಳಸಬೇಕಾದ ಪ್ರಸಂಗ ದೊರಕಿದಾಗ ಹಿಂದೆ ಬೀಳದೆ ಬಳಸಬೇಕು, ಹಾಗೆ ಹಿಂಜರಿಕೆಯಿಲ್ಲದೆ ಬಳಸುವಾಗ ಭಾಷೆಯ ಶೈಲಿಯ ಬಗೆಗೆ ಗಮನವಿಡಬೇಕು ಎಂಬ ಹಲವಾರು ಶರತ್ತುಗಳನ್ನು ವರದಿಯು ಕಲ್ಪಿಸಿಕೊಂಡಿದೆ.

ಭಾರತ, ಜಗತ್ತಿನಲ್ಲೇ ಹೆಚ್ಚು ಪ್ರಮಾಣದ ದ್ವಿಭಾಷಿಕರು, ಬಹುಭಾಷಿಕರು ಇರುವ ದೇಶ. ಇಲ್ಲಿನ ದ್ವಿಭಾಷಿಕತೆಗೆ ಬಹುಭಾಷಿಕತೆಗೆ ಹಲವು ಆಯಾಮಗಳಿವೆ. ಇಂಗ್ಲಿಶ್ ಭಾಷೆಯನ್ನು ಔಪಚಾರಿಕ ಶಿಕ್ಷಣದ ಭಾಗವಾಗಿ ದ್ವಿತೀಯ ಭಾಷೆಯನ್ನಾಗಿ ಅತಿ ಹೆಚ್ಚು ಸಂಖ್ಯೆಯಲ್ಲಿ ಈ ದೇಶದಲ್ಲಿ ಕಲಿಯಲಾಗುತ್ತಿದೆ. ಕಲಿಸಲಾಗುತ್ತಿದೆ. ಹೀಗಿದ್ದರೂ ಆ ಭಾಷೆಯನ್ನು ಬಳಸುವಾಗ ನಮ್ಮ ಭಾಷೆಯನ್ನು ಬಳಸುವಂತೆ ಬಳಸುವ ಹಾಗಿಲ್ಲ. ಇನ್ನೂ 'ಮೆಚ್ಚಿಸುವ' ಗುಣದಿಂದ ಆ ಭಾಷೆಯ ಬಳಕೆಗೆ ಬಿಡುಗಡೆ ದೊರಕಿಲ್ಲ. ಆಳುವವರ ಭಾಷೆಯಾಗಿ ಅದು ಪಡೆದುಕೊಂಡ ಈ 'ಸೌಲಭ್ಯ'ದಿಂದ ಅದನ್ನು ನಾವಿನ್ನೂ ವಂಚಿತಗೊಳಿಸಿಲ್ಲ.

ಬೃಹತ್ ಪ್ರಮಾಣದ ಸಾಕ್ಷರತಾ ಕಾರ್ಯಕ್ರಮಗಳನ್ನು ಯೋಜಿಸಿ ಅಕ್ಷರಬಲ್ಲವರು ಮತ್ತು ನಿರಕ್ಷರಸ್ಥರು ಇವರ ನಡುವೆ ಇದ್ದ ಕಂದಕವನ್ನು ತುಂಬುವ ನಮ್ಮ ಯತ್ನ ಒಂದೆಡೆ ನಡೆದಿದೆ. ಆದರೆ ಇದಕ್ಕಿಂತಲೂ ದೊಡ್ಡ ಕಂದಕ ಇಂಗ್ಲಿಶನ್ನು ಸರಿಯಾಗಿ ಬಳಸುವವರು ಮತ್ತು ಇಂಗ್ಲಿಶ್‌ನ್ನು ಬಳಸಲಾರದವರು ಇವರ ನಡುವೆ ಇದೆ. ಎರಡನೆ ಗುಂಪಿಗೆ ನವಸಾಕ್ಷರರು ಹೊಸದಾಗಿ ಸೇರ್ಪಡೆಯಾಗುತ್ತಿದ್ದಾರೆ. ನಮ್ಮ ಎಲ್ಲ ದೇಶಿಯ ಭಾಷೆಗಳೂ ಈ ಇಕ್ಕಟ್ಟಿನಿಂದ ಪಾರಾಗಲು ಹವಣಿಸುತ್ತಲೇ ಈ ಶತಮಾನವನ್ನು ಕಳೆದಿವೆ.

# ಕನ್ನಡ ಲಿಪಿ ಸುಧಾರಣೆ

ಕನ್ನಡ ಲಿಪಿಯನ್ನು ಸುಧಾರಿಸಬೇಕೆಂಬ ಮಾತು ಹಲವಾರು ದಶಕಗಳಿಂದ ಕೇಳಿಬರುತ್ತಿದೆ. ಹಲವಾರು ಬಾರಿ ಸುಧಾರಣೆಯ ಪ್ರಯತ್ನಗಳೂ ನಡೆದಿವೆ. ಲಿಪಿಯನ್ನು ಸುಧಾರಿಸಬೇಕೆಂದು ವಾದಿಸುವವರು ಬೇರೆಬೇರೆ ಕಾರಣಗಳನ್ನು ಮುಂದೊಡ್ಡುತ್ತಾರೆ. ಅವುಗಳಲ್ಲಿ ಕೆಲವು ಹೀಗಿವೆ.

1) ಭಾರತೀಯ ಭಾಷೆಗಳೆಲ್ಲವನ್ನೂ ಒಂದೇ ಲಿಪಿಯಲ್ಲಿ ಬರೆಯುವ ಮೂಲಕ ಏಕತೆಯನ್ನು ಸಾಧಿಸಬಹುದು.

ಈ ಕಾರಣವನ್ನು ಕೊಡುವವರಲ್ಲಿಯೂ ಹಲವು ಪಂಗಡಗಳಿವೆ. ಇರಲಿ ಭಾಷೆಗೂ ಲಿಪಿಗೂ ಇರುವ ಸಂಬಂಧವನ್ನು ಸರಳೀಕರಿಸುವ ಕಾರಣವಿದು. ದೇವನಾಗರಿ ಲಿಪಿಯನ್ನು ಭಾರತೀಯ ಭಾಷೆಗಳೆಲ್ಲಕ್ಕೂ ಸಮಾನವಾಗಿ ಬಳಸುವ ಪ್ರಯತ್ನ ನಡೆದಿದೆ. ವಿನೋಬಾ ಭಾವೆಯವರು ವ್ಯಾಪಕವಾಗಿ ಈ ಪ್ರಯೋಗವನ್ನು ಮಾಡಿದರು. ಅವರ ಆಶ್ರಮದ ಪತ್ರಿಕೆಯೊಂದು ಕನ್ನಡ ಭಾಷೆಯಲ್ಲಿದ್ದರೂ ಲಿಪಿ ದೇವನಾಗರಿಯಾಗಿರುತ್ತಿತ್ತು. ಹಾಗೆ ನೋಡಿದರೆ ಇಂಥ ಪ್ರಯತ್ನ ಹೊಸದೇನಲ್ಲ. ಹಲವಾರು ಹಸ್ತಪ್ರತಿಗಳಲ್ಲಿ ಭಾಷೆ ಕನ್ನಡವಾಗಿದ್ದರೂ ಲಿಪಿ ಬೇರೆಯಾಗಿರುವ ನಿದರ್ಶನಗಳಿವೆ. ಸಂಸ್ಕೃತವನ್ನಂತೂ ಕನ್ನಡ ಲಿಪಿಯಲ್ಲಿ ಬರೆಯುವ ಪದ್ಧತಿಗೆ ನಾವೆಲ್ಲವೂ ಒಗ್ಗಿಕೊಂಡಿದ್ದೇವೆ. ಇಂಥ ಪ್ರಯತ್ನವನ್ನು ಕನ್ನಡಕ್ಕೆ ಒಂದು ಪರ್ಯಾಯ ಲಿಪಿಯನ್ನು ಅತಿಗೆ ಒಯ್ಯುವುದು ಸಾಧ್ಯವಿಲ್ಲ. ಅವಶ್ಯವಿದ್ದಲ್ಲಿ ಬೇರೆ ಲಿಪಿಯಲ್ಲಿ ಕನ್ನಡವನ್ನು ಬರೆಯುವುದು ಸಾಧ್ಯ ಎಂಬುದಷ್ಟೇ ಇಲ್ಲಿ ಮುಖ್ಯ

ಕನ್ನಡಕ್ಕೂ ತೆಲುಗಿಗೂ ಸಮಾನ ಲಿಪಿಯೊಂದನ್ನು ರೂಪಿಸುವ ಪ್ರಯತ್ನವೂ ಸಾಕಷ್ಟು ಬಾರಿ ನಡೆದಿದೆ. ಮುದ್ರಣಯಂತ್ರಗಳು ವ್ಯಾಪಕವಾಗಿ ಬಳಕೆಗೆ ಬರುವ ಮೊದಲು ಹಸ್ತಪ್ರತಿಗಳಲ್ಲಿ, ಕಲ್ಲಚ್ಚಿನ ಪ್ರತಿಗಳಲ್ಲಿ ಈ ಎರಡೂ ಭಾಷೆಗಳಿಗೂ ಬಹುಮಟ್ಟಿಗೆ ಸಮಾನವಾದ ಲಿಪಿಯೊಂದನ್ನು ಬಳಸಲಾಗುತ್ತಿತ್ತು ಎನ್ನುವ ಅಂಶವನ್ನು ಮುಂದಿರಿಕೊಂಡು ಸಮಾನ ಲಿಪಿಯ ಪರವಾಗಿ ವಾದಿಸಲಾಗುತ್ತಿದೆ. ಹೀಗೆ ಸಮಾನ ಲಿಪಿಯೊಂದನ್ನು ಈ ಎರಡೂ ಭಾಷೆಗಳಿಗೂ ರೂಪಿಸುವುದರಿಂದ ಆಗುವ ಪ್ರಯೋಜನವಾದರೂ ಏನು? ಈ ಪ್ರಶ್ನೆಗೆ ಉತ್ತರ ಅಸ್ಪಷ್ಟ

2) ಕನ್ನಡವನ್ನು ಯಂತ್ರಲೇಖನಕ್ಕೆ ಅಳವಡಿಸಲು ಅನುಕೂಲವಾಗುವಂತೆ ಲಿಪಿಯನ್ನು ಸುಧಾರಿಸಬೇಕುನ್ನುವವರು ಇನ್ನೊಂದು ಗುಂಪಿನಲ್ಲಿದ್ದಾರೆ. ಮೊದಲು ಮುದ್ರಣ ಯಂತ್ರವನ್ನು ಗಮನದಲ್ಲಿರಿಸಿಕೊಂಡು ಈ ಮಾತನ್ನು ಹೇಳಲಾಗುತ್ತಿತ್ತು. ಇದರ ಪರಿಣಾಮವಾಗಿಯೇ ಬರೆಹದ ಲಿಪಿ ಮತ್ತು ಮುದ್ರಣದ ಲಿಪಿಗಳ ನಡುವೆ ಎದ್ದು ಕಾಣುವ ಹಲವು ವ್ಯತ್ಯಾಸಗಳು ಉಂಟಾಗಿವೆ. ಮುದ್ರಣದ ಅಂದ ಮತ್ತು ಸೌಲಭ್ಯಗಳನ್ನು ಗಮನಿಸಿ ಸುಧಾರಣೆಗಳು ಇನ್ನೂ ನಡೆಯುತ್ತಲೇ ಇವೆ. ಬರೆಹದ ಲಿಪಿಯ ಘಟಕಗಳು ಮತ್ತು ಮುದ್ರಣದ ಲಿಪಿಯ ಘಟಕಗಳು ಹಲವು ಸಂದರ್ಭಗಳಲ್ಲಿ ಬೇರೆ ಬೇರೆಯಾಗಿರುತ್ತವೆ.

ಕಾಗುಣಿತವನ್ನು ಬಿಟ್ಟುಕೊಡುವ ಮೂಲಕ ಕನ್ನಡ ಲಿಪಿಯನ್ನು ಸುಧಾರಿಸುವ ಪ್ರಯತ್ನವನ್ನು ಒಮ್ಮೆ ಮಾಡಲಾಯಿತು. ಬಿ.ಎಂ. ಶ್ರೀಯವರು 'ಕನ್ನಡ ಬಾವುಟ' ವೆಂಬ ಕವನ ಸಂಕಲವನ್ನು ಪ್ರಕಟಿಸುವ ಸಂದರ್ಭದಲ್ಲಿ ಇಂಥ ಸುಧಾರಿತ ಲಿಪಿಯನ್ನು ಮುದ್ರಣಕ್ಕೆ ಬಳಸಿದ್ದರು. 'ಕನ್ನಡ' ವನ್ನು 'ಕನ್‌ನಡ', 'ಪ್ರಯತ್ನ'ವನ್ನು 'ಪ್‌ರಯತ್‌ನ'ವೆಂದು ಬದಲಿಸಲು ಅವರು ಯತ್ನಿಸಿದರು. ಬರೆಹದಲ್ಲೂ ಇದೇ ಪ್ರಯೋಗವನ್ನು ಅವರು ಮಾಡಿದ್ದರೋ ಅಥವಾ ಮಾಡಬೇಕೆಂದು ಬಯಸಿದ್ದರೋ ಅದು ತಿಳಿಯದು. ಬೆರಳಚ್ಚಿನ ಯಂತ್ರದ ಕೀಬೋರ್ಡನ್ನು ಕನ್ನಡ ಭಾಷೆಗಾಗಿ ರೂಪಿಸುವ ಸಂದರ್ಭದಲ್ಲಿ ಮತ್ತೆ ಕನ್ನಡ ಲಿಪಿಯ ಸುಧಾರಣೆಯ ಮಾತು ಮುಂದಾಯಿತು. ಹಲವಾರು ಸುಧಾರಣೆಗಳನ್ನು ಮಾಡಿಕೊಳ್ಳಲಾಗಿದೆ ಕೂಡ. ತಲೆಕಟ್ಟುಳ್ಳ ಅಕ್ಷರಗಳಿಗೆ ಇಕಾರ ಯುಕ್ತ ರೂಪಗಳನ್ನು ಬೆರಳಚ್ಚಿಸಲು ಪ್ರತ್ಯೇಕ ಕೀಯನ್ನು ನೀಡಿರುವುದು ಇಂಥ ಮುಖ್ಯ ಬದಲಾವಣೆ. ಕೆಲವಾರು 'ತೋರಿಕೆ'ಯ ಅಕ್ಷರಗಳನ್ನು ಈ ಕೀ ಬೋರ್ಡು ರೂಪಿಸಿಕೊಂಡು ಸಮಸ್ಯೆಗಳನ್ನು ಪರಿಹರಿಸಿಕೊಂಡಿದೆ. 'ಪ', 'ಷ' ಮತ್ತು 'ಕ್ಷ'ಗಳನ್ನು ಬೆರಳಚ್ಚು ಮಾಡುವುದನ್ನು ಗಮನಿಸಿದರೆ ಈ ಸುಧಾರಣೆಯ ರಹಸ್ಯ ಗೊತ್ತಾಗುತ್ತದೆ.

ವಿದ್ಯುನ್ಮಾನ ಬೆರಳಚ್ಚು ಯಂತ್ರದ ಡೈಸೀ ವೀಲನ್ನು ಕನ್ನಡಕ್ಕಾಗಿ ರೂಪಿಸುವ ಸಂದರ್ಭ ಬಂದಾಗ ಮತ್ತೆ ಕನ್ನಡ ಲಿಪಿಯಲ್ಲಿ ಸುಧಾರಣೆಯ ಮಾತು ಬಂತು.ಈಗ ಅದನ್ನೂ ಸಿದ್ಧಪಡಿಸಲಾಗಿದೆ. ಸಿದ್ಧಗೊಂಡಿರುವ ಸುಧಾರಿತ ಲಿಪಿಯು ಯಂತ್ರದ ಸೌಲಭ್ಯಗಳಿಗೆ ಅನುಗುಣವಾಗಿದೆಯಾದರೂ ಹಲವಾರು ಕುಂದುಗಳನ್ನು ಹೊಂದಿದೆ. ಈ ಲಿಪಿಗೆ ಪೇಟೆಂಟನ್ನು ನೀಡುವಾಗ ಸರಕಾರ ಈ ಬಗೆಗೆ ಹೆಚ್ಚು ತಲೆಕೆಡಿಸಿಕೊಳ್ಳಲು ಹೋದಂತಿಲ್ಲ. ಈ ಕಾಲಘಟ್ಟದಲ್ಲಿ ವಿದ್ಯುನ್ಮಾನ ಬೆರಳಚ್ಚು ಯಂತ್ರಕ್ಕೆ ಸ್ಥಾನ ಇಲ್ಲವಾಗುತ್ತಿದೆ. ಹಾಗಾಗಿ ಆ ಲಿಪಿಗೂ ಆಯಸ್ಸು ಕಡಿಮೆ.

ಗಣಕ ಯಂತ್ರಗಳಿಗಾಗಿ ಕನ್ನಡ ಲಿಪಿಯನ್ನು ಸುಧಾರಿಸುವ ಮಾತು ಮತ್ತೆ ಮುಂದಾಗಿದೆ. ಇಲ್ಲಿನ ಸಮಸ್ಯೆಗೆ ಎರಡು ಮುಖಗಳಿವೆ. ಕನ್ನಡ ಭಾಷೆಯನ್ನು ಕನ್ನಡ ಲಿಪಿಯಲ್ಲೇ ಗಣಕಯಂತ್ರದ ತೆರೆಯ ಮೇಲೆ ಕಾಣಿಸುವಂತೆ ಮಾಡುವುದು ಮತ್ತು ಪ್ರಿಂಟರ್‌ನಲ್ಲಿಯೂ ಕನ್ನಡ ಲಿಪಿಯಲ್ಲೇ ಮೂಡುವಂತೆ ಮಾಡುವುದು. ಈ ಸಮಸ್ಯೆ ಅಷ್ಟು ಗಾಢವಾದುದಲ್ಲ. ಇದನ್ನಾಗಲೇ ಹಲವಾರು ಬಗೆಯಲ್ಲಿ ಸಾಧಿಸಲಾಗಿದೆ. ಕನ್ನಡದ

ಬಹುಪಾಲು ಮುದ್ರಣವೀಗ ಈ ಸುಧಾರಿತ ಲಿಪಿಯ ನೆರವಿನಿಂದಲೇ ನಡೆಯುತ್ತಿದೆ. ಇಲ್ಲಿ ಮುದ್ರಣ ಯಂತ್ರಕ್ಕಾಗಿ ಮಾಡಿಕೊಂಡ ಸುಧಾರಣೆಗಳು ಬಹುಮಟ್ಟಿಗೆ ಯೋಜಿತ ರೀತಿಯಲ್ಲಿ ಬಳಕೆಯಾಗುತ್ತಿವೆ. ನೀವೀಗ ಓದುತ್ತಿರುವ ಲೇಖನ ಕೂಡ ಇಂಥದೇ ಸೌಲಭ್ಯದಿಂದ ರೂಪಿತವಾಗಿರುವುದು. ಮುಖ್ಯವಾದ ಪರಿವರ್ತನೆಯೊಂದು ಇಲ್ಲಿ ಸಂಭವಿಸಿದೆ. ಕನ್ನಡ ಲಿಪಿಯಲ್ಲಿ ಸುಧಾರಣೆ ನಡೆಯಬೇಕೆಂಬ ಹಿಂದಿನ ಪ್ರಯತ್ನಗಳು ಎರಡು ಬಗೆಯ ಲಿಪಿಗಳನ್ನು ಕನ್ನಡಕ್ಕಾಗಿ ಕಲ್ಪಿಸಿಕೊಂಡಿದ್ದವು. ಓದಿಗಾಗಿ ಒಂದಾದರೆ ಬರೆಯುವುದಕ್ಕಾಗಿ ಮತ್ತೊಂದು. ಮುದ್ರಣ, ಬೆರಳಚ್ಚು ಮುಂತಾದ ಸಂದರ್ಭದಲ್ಲಿನ ಲಿಪಿ ಓದಿಗಾಗಿ ಇದ್ದರೆ, ಬರೆಯುವವರು ಬಳಕೆಯ ಮತ್ತೊಂದು ಮಾದರಿ ಲಿಪಿಯನ್ನು ಬಳಸುತ್ತಲೇ ಬಂದಿದ್ದಾರೆ. ಆದರೆ ಗಣಕಯಂತ್ರಕ್ಕಾಗಿ ಕನ್ನಡವನ್ನು ಅಳವಡಿಸಿರುವ ಸಂದರ್ಭದಲ್ಲಿ ಮೊದಲ ಬಾರಿಗೆ ಈ ಎರಡೂ ಲಿಪಿಗಳು ಒಂದೇ ಆಗುತ್ತಿವೆ. ಬರೆಯುವವರು ನೇರವಾಗಿ ಗಣಕಯಂತ್ರದಲ್ಲೇ ಬರೆಯುವುದು ಈಗ ಸಾಧ್ಯ. ಬರೆದು ಅನಂತರ ಅದನ್ನು ಬೆರಳಚ್ಚು ಮಾಡಬೇಕಾಗಿಲ್ಲ. ನಮ್ಮ ಹಲವಾರು ಪತ್ರಿಕೆಗಳ ಸುದ್ದಿಗಾರರು ತಮ್ಮ ವರದಿಗಳನ್ನು ಈಗ ಬರೆಯುವುದು ಗಣಕಯಂತ್ರದಲ್ಲಿ, ಅದು ನೇರವಾಗಿ ಮುದ್ರಣಕ್ಕೆ ಹೋಗುತ್ತದೆ. ಹೀಗಾಗಿ ಬರೆಯುವ ಇನ್ನೊಂದು ಲಿಪಿಗೆ ಈಗ ಅವಕಾಶಗಳು ಕಡಿಮೆಯಾಗುತ್ತಿವೆಯಾದರೂ ಆಯಸ್ಸು ಮುಗಿದಿಲ್ಲ. ಏಕೆಂದರೆ ಗಣಕಯಂತ್ರ ನಮ್ಮ ಜೀವನಕ್ರಮದೊಳಗೆ ಅಷ್ಟು ತೀವ್ರತರದಲ್ಲಿ ನುಗ್ಗಲಾರದು. ಏನೇ ಆದರೂ ಅತ್ಯಂತ ಆಪ್ತರಿಗೆ ಪತ್ರಬರೆಯುಲಿಕ್ಕಾದರೂ ನಮ್ಮ ಕೈಬರೆಹವನ್ನು ಕಾಯ್ದಿರಿಸಿಕೊಳ್ಳ ಬೇಕಾಗುತ್ತದೆಯಲ್ಲವೇ? ಕೊನೆಯ ಪಕ್ಷ ನಮ್ಮ ಸಹಿಗಾಗಿಯಾದರೂ ಆ ಲಿಪಿ ಬೇಕು.

ಗಣಕಯಂತ್ರಕ್ಕಾಗಿ ಬೇಕಾಗಿರುವ ಸುಧಾರಣೆಗೆ ಇನ್ನೊಂದು ಮುಖವಿದೆ. ಜಗತ್ತಿನ ಎಲ್ಲ ಗಣಕಯಂತ್ರಗಳಿಗೂ ಅರ್ಥವಾಗುವ ಸಂಕೇತ ಲಿಪಿಯೊಂದಿದೆ. ಸಾಮಾನ್ಯವಾಗಿ ಅದನ್ನು 'ಅಸ್ಕಿ' ಎನ್ನಲಾಗುತ್ತದೆ. ಇದನ್ನೇ ಕೊಂಚ ಬದಲಾವಣೆಗಳೊಂದಿಗೆ ಅನುಸರಿಸುವ ಭಾರತೀಯ ಮಾದರಿಯೊಂದಿದೆ. ಅದನ್ನು 'ಇಸ್ಕಿ' ಎನ್ನುತ್ತಾರೆ. ಒಂದು ಸಂಕೇತ ಲಿಪಿಯಲ್ಲಿ ಬರೆದದ್ದನ್ನು ಇನ್ನೊಂದು ಸಂಕೇತ ಲಿಪಿಗೆ ಪರಿವರ್ತಿಸುವುದು ಸುಲಭ. ಎಲ್ಲಕ್ಕಿಂತ ಮುಖ್ಯವಾಗಿ ಈ ಸಂಕೇತ ಲಿಪಿಯ ಮೂಲಕ ರೋಮನ್ ಲಿಪಿಯನ್ನು 'ಓದುವುದು' ಸಾಧ್ಯ. ಅಂದರೆ ರೋಮನ್ ಲಿಪಿಯಲ್ಲಿ ಇರುವ ಬರೆಹವನ್ನು ಗಣಕಯಂತ್ರ ತಂತಾನೇ ಈ ಸಂಕೇತಲಿಪಿಗೆ ಪರಿವರ್ತಿಸಿಕೊಳ್ಳಬಲ್ಲದು. ಜಗತ್ತಿನ ಇನ್ನಾವುದೇ ಲಿಪಿಗೂ ಈ ಸೌಲಭ್ಯವಿಲ್ಲ. ಇದರಿಂದ ಏನಾಯಿತು? ರೋಮನ್ ಭಾಷೆಯ ಬರೆಹವೊಂದನ್ನು ಜಗತ್ತಿನ ಯಾವುದೇ ಗಣಕಯಂತ್ರದಲ್ಲಿ ಓದುವುದು ಸಾಧ್ಯ. ಆದರೆ ಕನ್ನಡ ಲಿಪಿಯಲ್ಲಿರುವ ಬರೆಹವನ್ನು ಓದಲು ಮೊದಲು ಆ ಗಣಕಯಂತ್ರಕ್ಕೆ ಈ ಲಿಪಿಯನ್ನು ಓದುವ ಸೌಲಭ್ಯವನ್ನು ಅಳವಡಿಸಬೇಕಾಗುತ್ತದೆ. ಅಲ್ಲದೆ ಗಣಕಯಂತ್ರದ ನೆರವಿನಿಂದ ನೇರವಾಗಿ ನಡೆಸಬಹುದಾದ ಹಲವಾರು ಕಾರ್ಯಗಳನ್ನು ಕನ್ನಡ ಲಿಪಿಯನ್ನು ಬಳಸಿ ಮಾಡುವುದು ಸಾಧ್ಯವಿಲ್ಲ. ಒಂದು ಸಣ್ಣ ನಿದರ್ಶನ. ಈ ಲೇಖನದಲ್ಲಿ ನೂರಾರು ಪದಗಳಿವೆ ಎಂದಿಟ್ಟುಕೊಳ್ಳಿ. ಅವೆಲ್ಲವನ್ನೂ ಅಥವಾ ನಾವು ಗುರುತು ಮಾಡಿದ ಪದಗಳನ್ನು

ಅಕಾರಾದಿಯಾಗಿ ಜೊಡಿಸಬೇಕಾದರೆ ಅದಕ್ಕೊಂದು ಪ್ರತ್ಯೇಕ ಕಾರ್ಯವಾಹಿಯೊಂದನ್ನು ಬರೆಯಬೇಕಾಗುತ್ತದೆ. ಅದು ಕೂಡ ಸಂಪೂರ್ಣ ಯಶಸ್ವಿಯಾಗುತ್ತದೆ ಎನ್ನುವಂತಿಲ್ಲ. ಆದರೆ ರೋಮನ್ ಲಿಪಿಯಲ್ಲಿನ ಒಂದು ಬರೆಹದ ಪದಗಳನ್ನು ಸೆಕೆಂಡುಗಳಲ್ಲಿ ಅಕಾರಾದಿಯಾಗಿ ಜೋಡಿಸುವುದು ಗಣಕಯಂತ್ರಕ್ಕೆ ಸಾಧ್ಯ. ಅಂದರೆ ಕನ್ನಡವನ್ನು ರೋಮನ್ ಲಿಪಿಯಲ್ಲಿ ಬರೆದಿದ್ದರೆ ಸಾಕು. ಅಕಾರಾದಿ ಪಟ್ಟಿ ಸಿದ್ಧ. ಈ ಅಕಾರಾದಿ ಸಾಮಾನ್ಯವಾಗಿ ರೋಮನ್ ಲಿಪಿಯಾಧಾರಿತವಾಗಿರುತ್ತದೆ. ಹೀಗೆಯೇ ಇಂಥ ಹಲವಾರು ಸೌಲಭ್ಯಗಳು ಕನ್ನಡಕ್ಕೆ ಒದಗಬೇಕಾಗಿದ್ದರೆ ಕನ್ನಡ ಭಾಷೆಯನ್ನು ಗಣಕಯಂತ್ರಕ್ಕಾಗಿ ಬಳಸುವಾಗ ರೋಮನ್ ಲಿಪಿಯಲ್ಲಿ ಬರೆಯುವ ಅವಶ್ಯಕತೆ ಇದೆ. ಕನ್ನಡ ಭಾಷೆಯ ಮಾಹಿತಿಯನ್ನು ಜಗತ್ತಿನ ಯಾವುದೇ ಭಾಗಕ್ಕೆ ರವಾನಿಸಲು ಇದರಿಂದ ಸಾಧ್ಯವಾಗುತ್ತದೆ. ಒಂದು ನೆಲೆಯಲ್ಲಿ ಈ ಸಾಧ್ಯತೆಯನ್ನು ನಾವು ಒಪ್ಪಿಕೊಂಡಿದ್ದೇವೆ. ತಂತಿಸಂದೇಶವನ್ನು ಕಳುಹಿಸುವಾಗ ಕನ್ನಡ ಭಾಷೆಯ ಮಾಹಿತಿಯನ್ನು ರೋಮನ್ ಲಿಪಿಯಲ್ಲಿ ಬರೆಯುವುದು ಸಾಧ್ಯವಷ್ಟೇ? ಈ ಸೌಲಭ್ಯವನ್ನು ನಾವು ಈಗಾಗಲೇ ಬಳಸುತ್ತಿದ್ದೇವೆ. ವ್ಯಾಪಕವಾಗಿ ಗಣಕಯಂತ್ರದಲ್ಲೂ ಈ ಬಳಕೆ ಸಾಧ್ಯವಾಗುವಂತೆ ಕನ್ನಡ ಭಾಷೆಯ ರೋಮನ್ ಲಿಪಿರೂಪದ ಪ್ರಮಾಣೀಕರಣ ನಡೆಯಬೇಕಾಗಿದೆ.

3) ಕನ್ನಡ ಬರೆಹದಲ್ಲಿ ಇರುವ ಅತಾರ್ಕಿಕ ಮತ್ತು 'ಹೆಚ್ಚುವರಿ' ಅಂಶಗಳನ್ನು ತೆಗೆದು ಹಾಕಿ ಕನ್ನಡ ಲಿಪಿಯನ್ನು ಸುಧಾರಿಸಬೇಕೆಂಬುದು ಇನ್ನೊಂದು ಬಗೆಯ ಪ್ರಯತ್ನದ ಹಿಂದಿನ ವಾದ. ಮಹಾಪ್ರಾಣ ಅಕ್ಷರಗಳನ್ನು ಬರೆಯುವಾಗ ಕೆಲವೊಮ್ಮೆ ಅಲ್ಪಪ್ರಾಣ ಅಕ್ಷರ ರೂಪಕ್ಕೆ ನಡುವೆ ಕೆಳಗೆ ಗೆರೆ ಎಳೆದರೆ ಮತ್ತೆ ಕೆಲವು ಕಡೆಗಳಲ್ಲಿ ಬೇರೆ ಅಕ್ಷರ ರೂಪಗಳನ್ನು ಬಳಸಲಾಗುತ್ತದೆ. (ಗಮನಿಸಿ: ದ,ಧ ಮತ್ತು ಕ,ಖ)ಇದು ಅತಾರ್ಕಿಕ. ಎಲ್ಲ ಕಡೆಯೂ ಅಲ್ಪಪ್ರಾಣ ಅಕ್ಷರಗಳನ್ನೇ ಬಳಸಿ ಮಹಾಪ್ರಾಣ ಅಕ್ಷರಗಳನ್ನು ಬರೆದರೆ ಕೆಲವಾದರೂ ಅಕ್ಷರಗಳನ್ನು ಕನ್ನಡ ವರ್ಣಮಾಲೆಯಿಂದ ಕೈಬಿಡಬಹುದು. ಇಂಥದೇ ಇನ್ನೂ ಕೆಲವು ಅತಾರ್ಕಿಕ ಅಂಶಗಳನ್ನು ಹೀಗೆ ಗುರುತಿಸಲಾಗಿದೆ. ಕ ವರ್ಗ ಮತ್ತು ಚ ವರ್ಗದ ಅನುನಾಸಿಕಗಳಿಗೆ ಪ್ರತ್ಯೇಕ ಅಕ್ಷರ ಚಿಹ್ನೆಗಳು ಇರುವುದು 'ಹೆಚ್ಚುವರಿ'. ಅವುಗಳನ್ನು ಕೈ ಬಿಡಬಹುದು. ಇದೇ ಬಗೆಯಲ್ಲಿ ಹೆಚ್ಚುವರಿಯಾದ ಲಿಪಿಗಳನ್ನು ಬಿಟ್ಟು ಕನ್ನಡ ಲಿಪಿಯನ್ನು ಸುಧಾರಿಸುವ ಪ್ರಯತ್ನ ನಡೆಯುತ್ತಲೇ ಇದೆ. ಲಿಪಿಯ ಅತಾರ್ಕಿಕತೆ ಬಿಡಿಸಲಾಗದ ಸಮಸ್ಯೆ. ಒಂದೇ ಅಕ್ಷರಕ್ಕೆ ಸಂದರ್ಭಾನುಸಾರ ಬೇರೆ ಬೇರೆ ಉಚ್ಚಾರಣೆ ಇರುವುದು ಹಾಗೂ ಕೆಲವು ಅಕ್ಷರಗಳಿಗೆ ನಿರ್ದಿಷ್ಟ ಸಂದರ್ಭಗಳಲ್ಲಿ ಉಚ್ಚಾರಣೆಯೇ ಇಲ್ಲದಿರುವುದು, ರೋಮನ್ ಲಿಪಿಯಲ್ಲಿ ಬರೆಯಲಾಗುವ ಇಂಗ್ಲಿಶಿನಲ್ಲಿಯೂ ಕಾಣುವ ಲಕ್ಷಣವಾಗಿದೆ. ಆದ್ದರಿಂದ ಬರೆಹವನ್ನು ತರ್ಕಬದ್ಧಗೊಳಿಸಲು ಮತ್ತು ಅನವಶ್ಯಕ ಅಂಶಗಳಿಂದ ಮುಕ್ತಗೊಳಿಸಲು ನಡೆಸುವ ಯತ್ನಗಳು ಯಶಸ್ವಿಯಾಗುವುದು ಕಷ್ಟ

ಇಂಡಿಯನ್ ಲಿಂಗ್ವಿಸ್ಟಿಕ್ ಪತ್ರಿಕೆಯ ಈಚಿನ ಸಂಚಿಕೆಯಲ್ಲಿ (ಆಲ್ಬರ್ಟ್ ಸಿ. ಹೆನ್ರಿಚ್/ಕೆ.ಎಸ್. ಗುರುಬಸವೇ ಗೌಡ: ಎ ಪ್ರೊಪೋಸಲ್ ಫಾರ್ ಮಶೀನ್ ರೈಟಿಂಗ್ ಕನ್ನಡ ಇನ್ ಶಾರ್ಟ್‌ಹ್ಯಾಂಡ್, Vol. 36, Pp 119-124) ಒಂದು ಟಿಪ್ಪಣಿ ಪ್ರಕಟವಾಗಿದೆ.

ಅದರಲ್ಲಿ ಹದಿಮೂರು ಮುಖ್ಯ ಚಿಹ್ನೆ ಮತ್ತು ಆರು ಉಪಚಿಹ್ನೆಗಳ ನೆರವಿನಿಂದ ಕನ್ನಡವನ್ನು ಬರೆಯುವುದು ಸಾಧ್ಯವೆಂದು ಸೂಚಿಸಲಾಗಿದೆ. ಯಂತ್ರಲೇಖನಕ್ಕಾಗಿ ಈ ಮಾದರಿಯ ಲಿಪಿ ಸುಧಾರಣೆ ಅವಶ್ಯವೆಂದು ಅಲ್ಲಿ ಹೇಳಲಾಗಿದೆಯಾದರೂ ಈ ಸುಧಾರಿತ ಲಿಪಿಯನ್ನು ಯಾವಯಾವ ಹಂತಗಳಲ್ಲಿ ಬಳಸಬಹುದೆಂಬ ಬಗೆಗೆ ಸೂಚನೆಗಳಿಲ್ಲ. ಉದಾಹರಣೆಗೆ ದಿನಪತ್ರಿಕೆಗಳಲ್ಲಿ ಬಳಸಬಹುದೇ? ಬಹುಮಟ್ಟಿಗೆ ಸಾಧ್ಯವಿಲ್ಲ. ಓದುಗರನ್ನು ಬದಲಾದ ಈ ಲಿಪಿಗೆ ಒಗ್ಗಿಸುವುದೇ ಅಸಾಧ್ಯ. ಹೀಗಾಗಿ ಉಲ್ಲೇಖಿತ ಟಿಪ್ಪಣಿಯಲ್ಲಿ ಸೂಚಿಸಲಾದ ಸುಧಾರಿತ ಲಿಪಿ ಒಪ್ಪಿತವಾಗುವುದು ಕಷ್ಟ.

ಕನ್ನಡದ ಬರವಣಿಗೆಯ ಮತ್ತು ಓದಿನ ಲಿಪಿಗಳಲ್ಲಿ ನಡೆಯುತ್ತಿರುವ ಹಲವಾರು ಸುಧಾರಣೆಗಳು ತಂತಾನೇ ಕನ್ನಡಿಗರ ಒಪ್ಪಿಗೆಯನ್ನು ಪಡೆಯುತ್ತಲೇ ಇವೆ. ಒಪ್ಪಿಗೆ ಸಿಗಲಾರದ ಬದಲಾವಣೆಗಳೂ ಉಂಟಾಗುತ್ತದೆ. ಅಥವಾ ಗಣಕ ಯಂತ್ರದ ನೆನಪು ಮತ್ತು ವೇಗಗಳ ಮೇಲೆ ಇದರಿಂದಾಗಿ ಹೆಚ್ಚು ಒತ್ತಡ ಬೀಳುತ್ತದೆ. ಈ ಪರಿಸ್ಥಿತಿ ನಿವಾರಣೆಯಾಗಲು ಕನ್ನಡವು ರೇಖಾತ್ಮಕ ಬರವಣಿಗೆಯ ವಿಧಾನಕ್ಕೆ ಬದಲಾಗಬೇಕು. ರೇಖಾತ್ಮಕ ಲಿಪೀಕರಣ ವಿಧಾನಕ್ಕೆ ಇಂಗ್ಲಿಶ್ ಬರವಣಿಗೆ ಒಂದು ಸುಮಾರಾದ ನಿದರ್ಶನ, ಧ್ವನಿಗಳನ್ನು ಪ್ರತ್ಯೇಕ ಘಟಕವನ್ನಾಗಿ ತೆಗೆದುಕೊಂಡು ಅವುಗಳಲ್ಲಿ ಪ್ರತಿಯೊಂದಕ್ಕೂ ಒಂದು ಚಿಹ್ನೆಯನ್ನು ನೀಡಿ ಈ ರೇಖಾತ್ಮಕ ಬರವಣಿಗೆಯನ್ನು ರೂಪಿಸಲಾಗುತ್ತದೆ. ಈ ಮೊದಲೇ ಹೇಳಿದಂತೆ ರೋಮನ್ ಲಿಪಿಯನ್ನು ಆಧರಿಸಿ ಕನ್ನಡ ಬರವಣಿಗೆಯನ್ನು ಮಾಡಲು ಸಾಧ್ಯವಾಗುವಂತೆ ಒಂದು ಚಿಹ್ನೆ ಹೊಂದಾಣಿಕೆಯ ಕೋಷ್ಟಕವನ್ನು ರೂಪಿಸುವುದು ಮತ್ತು ಅದನ್ನು ಸಾರ್ವತ್ರಿಕವಾಗಿ ಬಳಸುವುದು ಅವಶ್ಯ. (ಪರೋಕ್ಷವಾಗಿ ರೇಖಾತ್ಮಕ ಬರವಣಿಗೆಯೂ ಇದರಿಂದ ಸಾಧ್ಯವಾಗುತ್ತದೆ). ಈಗಾಗಲೇ ಅನಧಿಕೃತವಾಗಿ ಇಂಥದೊಂದು ವ್ಯವಸ್ಥೆ ಜಾರಿಯಲ್ಲಿದೆ. ಈ ಮೊದಲೇ ಹೇಳಿದಂತೆ ತಂತಿ ಇಲಾಖೆ ಕನ್ನಡ ಭಾಷೆಯ ತಂತಿ ಸಂದೇಶವನ್ನು ರೋಮನ್ ಲಿಪಿಯಲ್ಲಿ ಬರೆದಿದ್ದರೆ ಒಪ್ಪಿಕೊಳ್ಳುತ್ತದೆ. ಅಂದರೆ ಹೀಗೆ ತಂತಿ ಕಳುಹಿಸುವವರು ತಮ್ಮದೇ ಆದ ಲಿಪಿಪರಿವರ್ತನೆಯ ವಿಧಾನವನ್ನು ರೂಪಿಸಿಕೊಳ್ಳುತ್ತಿದ್ದಾರೆ ಎಂದಾಯ್ತು. ಇದು ಸಂದರ್ಭಾನುಸಾರ ಬದಲಾಗುತ್ತದೆ. ಮತ್ತು ಸಂದೇಶವನ್ನು ಕಳಿಸುವಾಗ ಉಂಟಾಗುವ ಏರುಪೇರು, ಹಾಗೂ ಸಂದೇಶಗಳನ್ನು ಪಡೆದವರಿಗೆ ಈ ಲಿಪಿಪರಿವರ್ತನೆ ಗೊತ್ತಿಲ್ಲದಿದ್ದರೆ ಸಂವಹನದಲ್ಲಿ ಗೊಂದಲಗಳು ಉಂಟಾಗುವುದು ಸಹಜ. ಆದ್ದರಿಂದ ಪ್ರಮಾಣೀಕರಣಗೊಂಡ ಲಿಪಿ ಪರಿವರ್ತನೆಯ ವಿಧಾನವೊಂದನ್ನು ರಚಿಸುವುದು ಅನಿವಾರ್ಯ.

ಈ ಲಿಪಿಪರಿವರ್ತನೆಯ ವಿಧಾನವನ್ನು ರೂಪಿಸುವ ಮುನ್ನ ಕೆಲವು ಸಂಗತಿಗಳನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಅವುಗಳಲ್ಲಿ ಮುಖ್ಯವಾದುದೆಂದರೆ ಮಹಾಪ್ರಾಣಗಳನ್ನು ಈ ಹೊಸ ಲಿಪಿ ಪ್ರತಿನಿಧೀಕರಣದಲ್ಲಿ ಪೂರ್ಣವಾಗಿ ಕೈ ಬಿಡುವುದು ಸೂಕ್ತ. ಕನ್ನಡ ಬರವಣಿಗೆಯಲ್ಲಿ ಮಹಾಪ್ರಾಣಾಕ್ಷರಗಳನ್ನು ಸೂಕ್ತವಾಗಿ ಪ್ರತಿನಿಧಿಸುತ್ತಿದ್ದೇವೆ. ವಾಸ್ತವದಲ್ಲಿ ಈ ಅಕ್ಷರಗಳು ನಮಗೆ ಬೇಕಾಗಿಲ್ಲ. ಅವುಗಳ ಬದಲಿಗೆ ಆಯಾ ಮಹಾಪ್ರಾಣಾಕ್ಷರಗಳ ಅಲ್ಪಪ್ರಾಣ ರೂಪಗಳನ್ನು ಬಳಸಬಹುದು. ಹೀಗೆ ಅಲ್ಪಪ್ರಾಣಗಳನ್ನು ಬರೆಯುವುದರಿಂದ

ತುಂಬ ಸಂದರ್ಭಗಳಲ್ಲಿ ಅರ್ಥವ್ಯತ್ಯಾಸಗಳು ಉಂಟಾಗುವುದಿಲ್ಲ. ಅರ್ಥವ್ಯತ್ಯಾಸಗಳು ಉಂಟಾಗಬಹುದಾದ ಸಂದರ್ಭಗಳನ್ನು ಸಂಶೋಧನೆಯೊಂದರಲ್ಲಿ ಗುರುತಿಸಲಾಗಿದೆ. ಅವುಗಳ ಸಂಖ್ಯೆ ಇಪ್ಪತ್ತರ ಆಸುಪಾಸಿನಲ್ಲಿದೆ. ಅಲ್ಲಿಯೂ ಸಂದರ್ಭಾನುಸಾರಿಯಾಗಿ ಅರ್ಥ ಸ್ಪಷ್ಟಗೊಳ್ಳುತ್ತದೆ. ಈ ಪರಿಹಾರಕ್ಕೆ ಮಾನಸಿಕವಾಗಿ ಹೊಂದಿಕೊಳ್ಳಲು ಆಗದಿದ್ದಲ್ಲಿ ಮಹಾಪ್ರಾಣಾಕ್ಷರಗಳನ್ನುಳ್ಳ ಪದಗಳಿಗೆ ಪರ್ಯಾಯವಾದ ಸಮಾನಾರ್ಥಕಗಳನ್ನು ಬಳಸುವುದು ಮಹಾಪ್ರಾಣಾಕ್ಷರಗಳನ್ನು ನಿರಾಕರಿಸಿದ್ದನ್ನು ಕನ್ನಡ ಭಾಷೆಯ ಚರಿತ್ರೆಯಲ್ಲಿ ಗುರುತಿಸಬಹುದು). ಉದಾ. ಧನ ಪದವನ್ನು ದನ ಎಂದು ಬರೆಯುವುದರಿಂದ ಅರ್ಥದಲ್ಲಿ ವ್ಯತ್ಯಾಸವಾಗುತ್ತದೆ. ಹೀಗಾದಾಗ ಧನ ಪದದ ಬದಲು, ಹಣ, ಸಂಪತ್ತು ಮುಂತಾದ ಪದಗಳಲ್ಲಿ ಯಾವುದಾದರೊಂದನ್ನು ಪರ್ಯಾಯವಾಗಿ ಬಳಸಬಹುದು.

ಶ ಮತ್ತು ಷಕಾರಗಳಿಗೆ ಒಂದೇ ಲಿಪಿಯನ್ನು ಬಳಸುವುದು. ಈ ಎರಡು ಧ್ವನಿಗಳಿಗೆ ಇರುವ ವ್ಯತ್ಯಾಸ ಈಗ ಕನ್ನಡದ ಮಟ್ಟಿಗೆ ಬರವಣಿಗೆಯಲ್ಲಿ ಮಾತ್ರ ಉಳಿದಿದೆ. ಉಚ್ಚಾರಣೆಯಲ್ಲಿ ಈ ವ್ಯತ್ಯಾಸ ಅಷ್ಟು ಮುಖ್ಯವಾಗಿಲ್ಲ. ಆದ್ದರಿಂದ ಇವೆರಡೂ ಧ್ವನಿಗಳನ್ನು ಒಂದೇ ಲಿಪಿಯಿಂದ ಪ್ರತಿನಿಧಿಸುವುದು ಸೂಕ್ತ.

**ಪರಿವರ್ತನೆಯ ಕೋಷ್ಟಕ: ಒಂದು ಸಾಧ್ಯತೆ**

ಅ=a ಇ=i ಉ=u ಎ=e ಒ=o ಕ=k ಗ=g ಚ=c ಜ=j ಟ=t ಡ=D ಣ=N ತ=t ದ=d ನ=n ಪ=p ಬ=b ಮ=m ಯ=y ರ=r ಲ=l ವ=v ಶ=S ಸ=s ಹ=h ಳ=L ಎಲ್ಲ ವ್ಯಂಜನಗಳ ಚಿಹ್ನೆಗಳು ಅಕಾರಯುಕ್ತವಾಗಿವೆ ಎಂದು ತಿಳಿಯುವುದು. k ಎಂದರೆ ಕ್ ಅಲ್ಲ ಕ m ಎಂದರೆ ಮ್ ಅಲ್ಲ ಮ. ವ್ಯಂಜನಾಂತ ಪದಗಳನ್ನು ಬರೆಯುವಾಗ ಇದರಿಂದ ಸಮಸ್ಯೆ ಉಂಟಾಗುತ್ತದೆ. bs ಎಂಬುದನ್ನು ಬಸ್ ಎಂದು ಓದಬೇಕೋ ಅಥವಾ ಎಂದು ಓದಬೇಕೋ? ಇಂಥ ಕಡೆಗಳಲ್ಲಿ ವ್ಯಂಜನಾಂತವನ್ನು ಸೂಚಿಸಲು (‘) ಚಿಹ್ನೆಯನ್ನು ಬಳಸಬಹುದು. ಆಗ bs ಎಂದರೆ ಬಸ್ ಎಂದಾಗುತ್ತದೆ.

ಹೀಗಿಲ್ಲದೆ ಎಲ್ಲ ವ್ಯಂಜನ ಚಿಹ್ನೆಗಳನ್ನೂ ಕೇವಲ ವ್ಯಂಜನಗಳೆಂದು ತಿಳಿದು ಸ್ವರಯುಕ್ತವಾಗಿ ಬರೆಯುವುದು ಇನ್ನೊಂದು ಮಾರ್ಗ. ಆಗ ಕ,ಮ,ನಗಳನ್ನು ಕ್ರಮವಾಗಿ ka, ma, na ಎಂದು ಬರೆಯಲಾಗುತ್ತದೆ. ಇದು ಸರಿಯಾದ ವಿಧಾನವೆಂದು ಅನ್ನಿಸುವುದಾದರೂ ಒಟ್ಟು ಬರವಣಿಗೆಯು ದೀರ್ಘವಾಗುತ್ತದೆ. ಲಿಪೀಕರಣಕ್ಕೆ ಜಾಗ ಮತ್ತು ಸಮಯ ಅಧಿಕವಾಗಿ ಬೇಕಾಗುತ್ತದೆ. ಆದ್ದರಿಂದ ಈ ವಿಧಾನವನ್ನು ಅನುಸರಿಸುವುದು ಸೂಕ್ತವಾಗಲಾರದು.

ದೀರ್ಘಸ್ವರಗಳಿಗೆ ಆಯಾ ಸ್ವರಚಿಹ್ನೆಗಳ ಕ್ಯಾಪ್ ರೂಪಗಳನ್ನು (ಶಿಫ್ಟ್ ಕೀಯಲ್ಲಿ ಮೂಡುವ ಚಿಹ್ನೆ) ಬಳಸುವುದು. gA ಎಂದರೆ ಗಾ, nI ಎಂದರೆ ನೀ. ಪರ್ಯಾಯವಾಗಿ ಆಯಾ ಸ್ವರಚಿಹ್ನೆಗಳನ್ನು ಎರಡು ಬಾರಿ ಬರೆಯುವ ವಿಧಾನವನ್ನು ಬೇಕಾದರೆ ಅನುಸರಿಸುವುದು ಸಾಧ್ಯ. kaa ಎಂದರೆ ಕಾ. buu ಎಂದರೆ ಬೂ.

ಸಜಾತೀಯ ವ್ಯಂಜನ ದ್ವಿತ್ವಗಳನ್ನು ಸೂಚಿಸಲು ಆಯಾ ವ್ಯಂಜನಗಳನ್ನೇ ಮರಳಿ ಬರೆಯುವುದು. app ಎಂದರೆ ಆಪ್ತ, ippttu ಎಂದರೆ ಇಪ್ಪತ್ತು. ವಿಜಾತೀಯ ವ್ಯಂಜನ ದ್ವಿತ್ವಗಳನ್ನು ಬರೆಯುವುದೂ ಇದೇ ಮಾದರಿಯಲ್ಲಿ ckr ಎಂದರೆ ಚಕ್ರ, sdy ಎಂದರೆ ಸದ್ಯ. ವಿಸರ್ಗವನ್ನು H ಮತ್ತು ಋಕಾರವನ್ನು R ಇವುಗಳಿಂದ ಸೂಚಿಸಲಾಗುತ್ತದೆ.

ಬಿಂದುವನ್ನು ಪ್ರತಿನಿಧಿಸುವುದು: ಬಿಂದುವಿನ ಅನಂತರ ಕವರ್ಗ, ಚವರ್ಗ ಮತ್ತು ತವರ್ಗದ ಧ್ವನಿಗಳಿದ್ದರೆ ಆಗ ಬಿಂದುವನ್ನು n' ಚಿಹ್ನೆಯಿಂದ ಸೂಚಿಸುವುದು. ಬಿಂದುವಿನ ಅನಂತರ ಟವರ್ಗದ ವ್ಯಂಜನವಿದ್ದರೆ ಆಗ N' ಚಿಹ್ನೆಯನ್ನು ಬಳಸುವುದು. ಉಳಿದ ಎಲ್ಲ ಕಡೆಗಳಲ್ಲೂ ಬಿಂದುವಿನ ಬದಲು M' ಚಿಹ್ನೆಯನ್ನು ಬರೆಯುವುದು. ಆಗಿ ಅಂಗಿ, ಪಂಜು, ಕಂತೆ ಇವುಗಳು ಕ್ರಮವಾಗಿ an' gi, pn' ju, kn'te ಎಂದಾಗುತ್ತವೆ. ಗಂಟು, ಮಂಡೆಗಳು gN'Tu, mn'De ಎಂದಾಗುತ್ತವೆ. ಕೆಂಪು, ಜಂಬ, ಅಂಶ, ಸಿಂಹ ಎಂಬ ಪದಗಳನ್ನು kem'pu, jm'b, am'S, sim'h ಎಂದು ಬರೆಯಲಾಗುತ್ತದೆ.

ಬಿಂದುವನ್ನು ಸೂಚಿಸುವಾಗ ವ್ಯಂಜನಾಂತ ಚಿಹ್ನೆ ಏಕೆ ಬೇಕು ಎಂಬ ಪ್ರಶ್ನೆ ಎದುರಾಗುತ್ತದೆ. ಇದಕ್ಕೆ ಕೆಲವು ಕಾರಣಗಳಿವೆ. ಆನಂದ ಎಂಬ ಪದವನ್ನು ಹೇಗೆ ಬರೆಯುವುದು? ಈಗ ನಾವು ಹಾಕಿದ ಚೌಕಟ್ಟಿನಲ್ಲಿ Annd ಎಂದು ಬರೆಯಬೇಕಾಗುತ್ತದೆ. ಇದನ್ನು ಓದುವಾಗ ಅನ್ನದ ಎಂದೂ ಓದಬಹುದಲ್ಲವೇ? ಈ ಸಮಸ್ಯೆಯನ್ನು ಪರಿಹರಿಸಲು ಇಂತಹ ಕಡೆಗಳಲ್ಲಿ ಬಳಸುವುದು ಸರಿಯಾಗುತ್ತದೆ. ಆಗ ಆನಂದ ಪದವನ್ನು Ann'd ಎಂದು ಬರೆಯುವುದು ಸರಿಯಾಗುತ್ತದೆ.

ಇದಲ್ಲದೆ ಇನ್ನೂ ಒಂದು ವಿಧಾನದಿಂದ ಬಿಂದುವನ್ನು ಬರೆಯಬಹುದು. ಅದಕ್ಕೆ ಒಂದು ಪ್ರತ್ಯೇಕ ಚಿಹ್ನೆಯನ್ನು ಬಳಸುವುದು ಆ ವಿಧಾನ. ಉದಾ. q, x, z, w, f ಇವುಗಳಲ್ಲಿ ಯಾವುದಾದರೊಂದನ್ನು ಬಿಂದುವಿಗೆ ಬದಲಾಗಿ ಬರೆಯಲು ಆಯ್ಕೆ ಮಾಡಬಹುದು. f ಅನ್ನು ಆಯ್ದೆವೆನ್ನಿ. ಆಗ ಕಂತೆ, ಅಂಗಿ, ಮಂದಿ, ಕೆಂಪು, ಆನಂದ, ಸಂಶಯ, ಸಿಂಹ ಈ ಪದಗಳು ಕ್ರಮವಾಗಿ kfte, afgi, mgdi, kepu, anfd, sfsy, sifh ಎಂದಾಗುತ್ತವೆ.

ಬಹುಪಾಲು ಕನ್ನಡಿಗರು, ಕನ್ನಡ ಲಿಪಿಯನ್ನು ಬಳಸುವವರು ಬಿಂದುವಿಗೆ ಬದಲಾಗಿ ಹೊಸ ಚಿಹ್ನೆಯನ್ನು ಬಳಸಲು ಸೂಚಿಸುವ ಈ ಸಲಹೆಯನ್ನು ಒಪ್ಪುವುದು ಅನುಮಾನ. ಏನೇ ಆಗಲಿ ಇವೆರಡರಲ್ಲಿ ಯಾವುದನ್ನು ಒಪ್ಪಿದರೂ ಅದನ್ನು ಬಳಕೆಗೆ ತರಬಹುದು. ತಾಂತ್ರಿಕ ಕಾರಣಗಳಿಂದ ಎರಡನೆಯ ವಿಧಾನ ಹೆಚ್ಚು ಸೂಕ್ತವೆಂದು ಮಾತ್ರ ಪ್ರಾಸಂಗಿಕವಾಗಿ ಸೂಚಿಸಬಹುದಾಗಿದೆ. ಏಕೆಂದರೆ ಈ ರೋಮನ್ ಲಿಪೀಕರಣದಿಂದ ಮೂಲ ಕನ್ನಡ ಲಿಪಿಗೆ ಪರಿವರ್ತಿಸುವ ಗಣಕ ಕಾರ್ಯವಾಹಿಯನ್ನು ಯಾರಾದರೂ ರೂಪಿಸುವುದಾದರೆ ಅವರಿಗೆ ಎಲ್ಲ ಬಿಂದುಗಳಿಗೂ ಒಂದೇ ಪರ್ಯಾಯ ಚಿಹ್ನೆ ಇದ್ದರೆ ಅನುಕೂಲವಾಗುತ್ತದೆ.

# ಉರ್ದುಭಾಷಿಕರ ಕನ್ನಡದ ಒಂದುಲಕ್ಷಣ

ಕನ್ನಡದ ಹಲವು ಸಾಮಾಜಿಕ ಉಪಭಾಷೆಗಳಲ್ಲಿ ಮುಸ್ಲಿಂ ಕನ್ನಡವೂ ಒಂದು. ಮುಸ್ಲಿಂ ಕನ್ನಡವನ್ನು ಮುಸ್ಲಿಮರು ಆಡುವ ಕನ್ನಡವೆಂದು ವಿವರಿಸಲು ಬರುವುದಿಲ್ಲ. ಏಕೆಂದರೆ ಮುಸ್ಲಿಂಮರೆಲ್ಲರೂ ಒಂದೇ ಮಾದರಿ ಕನ್ನಡವನ್ನು ಬಳಸುವುದಿಲ್ಲ. ಉರ್ದು ಮನೆ ಮಾತಾಗಿರುವ ಮುಸ್ಲಿಮರೂ ಬೇರೆ ಬೇರೆ ಬಗೆಯಲ್ಲಿ ಕನ್ನಡವನ್ನು ಬಳಸುತ್ತಾರೆ. ಈ ಎಲ್ಲ ಬಗೆಗಳನ್ನೂ ಇನ್ನೂ ಸರಿಯಾಗಿ ಅಭ್ಯಾಸಮಾಡಿಲ್ಲ. ಹಳೆಯ ಮೈಸೂರಿನ ಬಯಲು ಸೀಮೆಯ ಉರ್ದುಭಾಷಿಕರ ಕನ್ನಡದ ಲಕ್ಷಣಗಳು ಹೆಚ್ಚು ಕಡಿಮೆ ಸ್ಥಿರಪಟ್ಟಿವೆ. ಕನ್ನಡಿಗರು ಉರ್ದುಭಾಷಿಕರ ಕನ್ನಡವನ್ನು ಅನುಕರಿಸುವಾಗ ಈ ಸ್ಥಿರೀಕೃತ ಲಕ್ಷಣಗಳನ್ನು ಪ್ರಕಟಿಸುತ್ತಾರೆ. ಈ ಲಕ್ಷಣಗಳು ಸ್ಥಿರಗೊಂಡು ಏಳೆಂಟು ದಶಕಗಳೇ ಕಳೆದಿವೆ. ಐದನೆಯ ದಶಕದಲ್ಲಿ ಬಂದ ವೃತ್ತಿರಂಗಭೂಮಿಯ ನಾಟಕ, ಹಿರಣ್ಣಯ್ಯನವರ ಎಚ್ಚಮನಾಯಕದಲ್ಲಿ 'ಬಲತ್ಕಾರ'ದಿಂದ ಮತಾಂತರಗೊಂಡ ಖಾನ್ ಸಿದ್ಧಾಂತಿ ಮತ್ತು ಬುಡೆನ್ ಶಾಸ್ತ್ರೀ ಎಂಬ ಪಾತ್ರಗಳಿವೆ. ಆ ಪಾತ್ರಗಳು ಆಡುವ ಕನ್ನಡದಲ್ಲಿ ಈ ಸ್ಥಿರೀಕರಣದ ಲಕ್ಷಣಗಳು ಕಾಣಿಸಿಕೊಳ್ಳುತ್ತವೆ. ಅಂಥ ಒಂದು ಲಕ್ಷಣವನ್ನು ಸೂಚಿಸುವ ಈ ಕೆಳಗಿನ ವಾಕ್ಯ ನೋಡಿ.

1. ನಮ್ದು ಅಣ್ಣ ಬಂದಿದಾರೆ
2. ನಿಮ್ದು ಮನೆಗೆ ಯಾರ್ ಬಂದ್ರು/

ನಮ್ದು ಮತ್ತು ನಿಮ್ದು ಪದಗಳ ಬದಲು ನಾವು ನಿರೀಕ್ಷಿಸುವ ಪದಗಳೆಂದರೆ 'ನಮ್ಮ' ಮತ್ತು 'ನಿಮ್ಮ' ಕನ್ನಡದಲ್ಲಿ ನಮ್ಮದು, ನಿಮ್ಮದು ಮುಂತಾದ ರೂಪಗಳು ವಿಶೇಷಣಗಳಾಗಿ ಬಳಕೆಯಾಗುವುದಿಲ್ಲ. ಸಾಮಾನ್ಯವಾಗಿ ನಾಮಪದ(ಗುಚ್ಛ)ವೊಂದರ ವ್ಯಾಖ್ಯಾನವಾಗಿ ಈ ರೂಪ ಬಳಕೆಯಾಗುತ್ತವೆ.

3. (ಆ ಮನೆ) ನಮ್ಮದು
4. (ಈ ಪುಸ್ತಕ) ನಮ್ಮದು

3,4ರಲ್ಲಿ ಆವರಣದಲ್ಲಿರುವ ಪದಗುಚ್ಛಗಳ ವ್ಯಾಖ್ಯಾನಗಳಾಗಿ 'ನಮ್ಮದು' ಬಳಕೆಯಾಗಿವೆ. ವಾಕ್ಯದಲ್ಲಿ ಅವು ಸ್ಥಾನಪಲ್ಲಟ ಹೊಂದಬೇಕಾದರೆ ನಾಮಪದಗುಚ್ಛದ ನಡುವೆ ಬರಲಾರವು.

3 (ಎ) ನಮ್ಮದು ಆ ಮನೆ
3 (ಬಿ) ಆ ನಮ್ಮದು ಮನೆ
3 (ಬಿ) ಅಸಾಧ್ಯ. ಅಂದರೆ ವಿಶೇಷಣದ ಸ್ಥಾನದಲ್ಲಿ ನಮ್ಮದು ಬರಲಾರದು.

ಹೀಗಿರುವಲ್ಲಿ ಉರ್ದುಭಾಷಿಕರ ಕನ್ನಡದ ಈ ಲಕ್ಷಣವನ್ನು ಹೇಗೆ ವಿವರಿಸುವುದು? ಹಿಂದಿ, ಉರ್ದು ಮೊದಲಾದ ಇಂಡೋ ಯುರೋಪಿಯನ್ ಭಾಷೆಗಳಲ್ಲಿ ವಿಶೇಷಣಗಳು ಹೊಂದಿರುವ ಎರಡು ಲಕ್ಷಣಗಳನ್ನು ಗಮನಿಸೋಣ. 1 ವಿಶೇಷಣಗಳು ವಿಶೇಷ್ಯದ ಲಿಂಗ ಸೂಚಕವನ್ನೇ ಹೊಂದಿರುತ್ತವೆ. 2 ವಿಶೇಷಣ, ವಿಶೇಷ್ಯಗಳ ಅನುಕ್ರಮ ನಿಗದಿಯಲ್ಲ. ವಿಶೇಷ್ಯಗಳ ಅನಂತರದಲ್ಲೂ ವಿಶೇಷಣ ಬರುವುದು ಸಾಧ್ಯ. ಕನ್ನಡದಲ್ಲಿ ಈ ಎರಡೂ ಲಕ್ಷಣಗಳಿಲ್ಲ. ಉರ್ದು ಭಾಷಿಕರು ತಮ್ಮ ಭಾಷೆಯ ನಿಯಮಗಳನ್ನು ಕನ್ನಡ ಭಾಷಾ ಬಳಕೆಯಲ್ಲಿ ಅನ್ವಯಿಸುತ್ತಿರುವುದರಿಂದ 3.4ರ ಮಾದರಿಯ ರಚನೆಗಳು ಉಂಟಾಗುತ್ತಿರುವ ಸಾಧ್ಯತೆ ಇದೆ. ವಿಶೇಷಣವೂ ನಾಮಪದದಂತೆ ವರ್ತಿಸುವುದು ಉರ್ದುಭಾಷೆಯ ನಿಯಮವಾಗಿದ್ದರೆ ಕನ್ನಡದಲ್ಲೂ ವಿಶೇಷಣವನ್ನು ನಾಮಪದವನ್ನಾಗಿ ಪರಿವರ್ತಿಸುವುದು ಒಂದು ಪರಿಹಾರವಾಗಿ ಕಂಡಿದೆ. ಆಗ ವಿಶೇಷಣದ ನಮ್ಮ ಜಾಗದಲ್ಲಿ ನಾಮಪದ ನಮ್ಮದುವನ್ನು ಬಳಸುವುದು ಅವರಿಗೆ ಸರಿಯಾಗಿ ಕಂಡಿದೆ.

# ಕನ್ನಡದ ಅಕ್ಷರ ರಚನೆಯ ಒಂದು ನಿಯಮ

ಕನ್ನಡದ ಧ್ವನಿರಚನೆಯನ್ನು ಗಮನಿಸಿದವರಿಗೆ ಒಂದು ಸಂಗತಿ ಗೊತ್ತಾಗುತ್ತದೆ. ಅದನ್ನು ಹೀಗೆ ವಿವರಿಸಬಹುದು. ಕನ್ನಡದ ಪದಗಳಲ್ಲಿ ಕಂಡುಬರುವ ಧ್ವನಿಸಾತತ್ಯದಲ್ಲಿ ಪದಾದಿಯ ದೀರ್ಘ ಸ್ವರದ ಮುಂದೆ ಸಜಾತೀಯ ವ್ಯಂಜನ ದ್ವಿತ್ವವು ಬರುವುದಿಲ್ಲ. ಅಥವಾ ಯಾವುದೇ ಸ್ವಜಾತೀಯ ವ್ಯಂಜನ ದ್ವಿತ್ವದ ಹಿಂದಿನ ಸ್ವರ ಯಾವಾಗಲೂ ಹ್ರಸ್ವವೇ ಆಗಿರುತ್ತದೆ. ಈ ಕೆಳಗಿನ ಉದಾಹರಣೆಯನ್ನು ನೋಡಿ. ತಪ್ಪು, ಉಕ್ಕು, ಅಕ್ಕ, ಹಗ್ಗ, ಆದ್ರೆ, ಬಾಗ್ಲು, ಸದ್ರ, ಬಳ್ವ, ಕೊಡ್ಲಿ, ಬದ್ಲು, ಹಾಡ್ಯ. ಈ ಪದಗಳಲ್ಲಿ ಮೇಲೆ ಹೇಳಿದ ಲಕ್ಷಣಗಳು ಕಾಣುತ್ತವೆ. ಕನ್ನಡ ಇತರ ಭಾಷೆಗಳಿಂದ ಸ್ವೀಕರಿಸಿದ ಪದಗಳಲ್ಲೂ ಇದೇ ಲಕ್ಷಣವನ್ನು ನಾವು ನೋಡಬಹುದು. ಉದಾ: ಪಾರ್ಕು, ತೀವ್ರ, ಬಾಲ್ಕನಿ, ಕಾವ್ಯ ಇತ್ಯಾದಿ. ಹಾಗಿದ್ದಲ್ಲಿ ಇದು ಕನ್ನಡದ ವಿಶೇಷ ಲಕ್ಷಣ ಹೇಗೆ? ಈ ಪ್ರಶ್ನೆ ನಮಗೆ ಎದುರಾಗುತ್ತದೆ. ಕನ್ನಡದ ಜ್ಞಾತಿ ಭಾಷೆಯಾದ ತಮಿಳಿನಲ್ಲಿ ಕನ್ನಡಕ್ಕೆ ನಿಷಿದ್ಧವಾದ ಧ್ವನಿರಚನೆಯುಳ್ಳ ಪದಗಳು ಕಾಣಸಿಗುತ್ತವೆ. ಉದಾ: ತೋಟ್ಟಂ, ಆಟ್ಟ, ಕಾಟ್ಟು, ಕಾತ್ತಿರು ಇತ್ಯಾದಿ. ಕನ್ನಡದಲ್ಲಿ ಇಂಥ ರಚನೆಗಳು ಸಾಧ್ಯವಿಲ್ಲ ಎನ್ನುವ ಅಂಶ ನಮಗೆ ಹಲವಾರು ಕಾರಣಗಳಿಂದ ಮುಖ್ಯವಾಗುತ್ತದೆ. ಅವುಗಳಲ್ಲಿ ಕೆಲವನ್ನು ಈಗ ನಾವು ಗಮನಿಸಬಹುದು.

1. ಕನ್ನಡಕ್ಕೆ ಯಾವುದಾದರೊಂದು ಭಾಷೆಯಿಂದ ಪದವೊಂದನ್ನು ಸ್ವೀಕರಿಸಬೇಕಾಗಿ ಬಂದಿತೆನ್ನೋಣ. ಆಗ ಮೇಲೆ ಹೇಳಿದ ಬಗೆಯ ರಚನೆಯುಳ್ಳ ಪದವೊಂದನ್ನು ಕನ್ನಡ ಸ್ವೀಕರಿಸಲಾರದು ಎಂದು ಖಚಿತವಾಗಿ ಹೇಳಬಹುದು. ಅಥವಾ ಅಂಥ ಪದವೊಂದನ್ನು ಸ್ವೀಕರಿಸಿದ್ದೇ ಆದರೆ, ಅದರ ಧ್ವನಿರಚನೆಯಲ್ಲಿ ಬದಲಾವಣೆಯನ್ನು ಮಾಡಿಕೊಂಡು ಕನ್ನಡದ ಸಹಜ ಧ್ವನಿನಿಯಮಗಳಿಗೆ ಅನುಗುಣವಾಗಿರುವಂತೆ ಬದಲಾಯಿಸಿಕೊಳ್ಳುತ್ತದೆ.

2. ಕನ್ನಡದ ಧ್ವನಿ ರಚನೆ ಮತ್ತು ಕನ್ನಡ ಅಕ್ಷರ ರಚನೆಯನ್ನು ಕುರಿತು ಅಧ್ಯಯನ ಮಾಡುವವರಿಗೆ ಇದರಿಂದ ಕೆಲವು ತಿಳುವಳಿಕೆಗಳು ನಮಗೆ ದೊರಕುತ್ತವೆ. ಕನ್ನಡ ಅಕ್ಷರಗಳನ್ನು ಸರಳ, ಭಾರ ಮತ್ತು ಅತಿಭಾರ ಎಂದು ಮೂರು ವಿಧಗಳಲ್ಲಿ ವಿಂಗಡಿಸಬಹುದು. ಸರಳ ಅಕ್ಷರಗಳ ಅಂತ್ಯದಲ್ಲಿ ವ್ಯಂಜನ ಬರುವುದಿಲ್ಲ ಮತ್ತು ಕೇಂದ್ರ ಹ್ರಸ್ವವಾಗಿರುತ್ತದೆ. ಆದಿಯಲ್ಲಿ ವ್ಯಂಜನ ಬರುವುದು ಐಚ್ಛಿಕ.

ಉದಾ: ಕ, ತ ಇತ್ಯಾದಿ. ಇಂಥ ಅಕ್ಷರಗಳಲ್ಲಿ ಪ್ರಥಮ ವ್ಯಂಜನ ಬಂದರೆ ಅಲ್ಲಿ ಒಂದಕ್ಕಿಂತ ಹೆಚ್ಚು (ಬಹುಮಟ್ಟಿಗೆ ಎರಡು) ವ್ಯಂಜನಗಳು ಬರಬಹುದು. ಈ ಬಗೆಯ ಅಕ್ಷರಗಳು ಅನ್ಯ ಭಾಷೆಯ ಪದಗಳಲ್ಲಿ ಮಾತ್ರ ಕಾಣಸಿಗುತ್ತವೆ. ಉದಾ: ಗ್ರ (ಗ್ರಹಣ), ಮ್ಲ (ಆಮ್ಲ), ಕ್ಷ(ಕ್ಷಮೆ), ಪ್ಲ (ಪ್ಲಸ್ಸು) ಇತ್ಯಾದಿ.

ಭಾರ ಅಕ್ಷರಗಳಲ್ಲಿ ಕೇಂದ್ರ ಸ್ವರವು ದೀರ್ಘವಾಗಿರುವುದು ಒಂದು ಮಾದರಿ. ಉದಾ: ಆ, ಕಾ, ಕೂ, ನೂ ಇತ್ಯಾದಿ. ಈ ಮಾದರಿಯ ಅಕ್ಷರಗಳಲ್ಲಿ ಅಂತ್ಯದ ಭಾಗದಲ್ಲಿ ವ್ಯಂಜನಗಳಿರುವುದಿಲ್ಲ. ಇನ್ನೊಂದು ಮಾದರಿಯಲ್ಲಿ ಕೇಂದ್ರ ಸ್ವರ ಹ್ರಸ್ವವೇ ಆಗಿರುತ್ತದೆ. ಆದರೆ ಕೊನೆಯಲ್ಲಿ ಒಂದು ವ್ಯಂಜನವಿರುತ್ತದೆ. ಉದಾ: ಕಲ್, ಬಿಟ್, ಸುಟ್, ತುಯ್, ಕಳ್ ಇತ್ಯಾದಿ. ಈ ಬಗೆಯ ಅಕ್ಷರಗಳು ದೇಶ್ಯ ಮತ್ತು ಅನ್ಯದೇಶ್ಯ ಪದಗಳೆರಡರಲ್ಲೂ ಕಾಣಸಿಗುತ್ತವೆ. ಮೂರನೆಯ ಮಾದರಿ ಅಕ್ಷರವೆಂದರೆ ಅತಿಭಾರದ ಬಗೆಯದ್ದು. ಇದರಲ್ಲೂ ಎರಡು ಬಗೆ. ಕೇಂದ್ರ ಸ್ವರ ಹ್ರಸ್ವವಾಗಿರುವುದು ಮೊದಲ ಮಾದರಿ. ಇದರಲ್ಲಿ ಅಂತ್ಯಭಾಗದ ವ್ಯಂಜನಗಳು ಎರಡಿರುತ್ತವೆ. ಕನ್ನಡವು ಈ ಎರಡು ವ್ಯಂಜನಗಳು ಬೇರೆ ಬೇರೆಯಾಗಿರಬೇಕು ಎಂಬ ಶರತ್ತನ್ನು ವಿಧಿಸುತ್ತದೆ. ಕಟ್ಪ್, ಕುಳ್ಳ್, ಬರ್ರ್ ಎಂಬ ಮಾದರಿಯ ಅಕ್ಷರಗಳು ಕನ್ನಡದಲ್ಲಿ ಸಾಧ್ಯವಾಗುವುದಿಲ್ಲ. ಇನ್ನೊಂದು ಮಾದರಿಯಲ್ಲಿ ಕೇಂದ್ರ ಸ್ವರವು ದೀರ್ಘವಾಗಿರುತ್ತದೆ. ಅಂತ್ಯದಲ್ಲಿ ಒಂದು ವ್ಯಂಜನವಿರುತ್ತದೆ. ಕಾರ್, ಊರ್, ಏರ್, ತೋರ್ ಇವೆಲ್ಲ ಈ ಮಾದರಿಯ ಭಾರ ಅಕ್ಷರಗಳು.

ಯಾವ ಬಗೆಯ ಅಕ್ಷರ ರಚನೆಯನ್ನು ಕನ್ನಡವು ಒಪ್ಪುವುದಿಲ್ಲ ಎನ್ನುವ ಸಂಗತಿ ನಮಗೆ ಮುಖ್ಯ. ಏಕೆಂದರೆ ಅದರಿಂದ ಕನ್ನಡವು ಇತರ ಭಾಷೆಗಳಿಂದ ಎರವಲು ಪಡೆಯುವಾಗ ಯಾವ ಬಗೆಯ ಅಕ್ಷರ ರಚನೆಯ ಪದಗಳನ್ನು ಸ್ವೀಕರಿಸುವುದಿಲ್ಲ ಎನ್ನುವುದನ್ನು ಗುರುತಿಸಬಹುದು. ಅಲ್ಲದೆ ಅಂಥ ರಚನೆಯುಳ್ಳ ಪದಗಳನ್ನು ಸ್ವೀಕರಿಸಲೇಬೇಕಾದರೆ ಆ ಪದದ ಅಕ್ಷರ ರಚನೆಯಲ್ಲಿ ಎಂಥ ವ್ಯತ್ಯಾಸಗಳನ್ನು ಮಾಡಿಕೊಳ್ಳಬಹುದು ಎಂಬುದೂ ಕೂಡಾ ನಮಗೆ ತಿಳಿಯುತ್ತದೆ.

ಈಗ ಮೂಲ ಪ್ರಶ್ನೆಗೆ ಬರೋಣ. ಕನ್ನಡದ ಪದದಲ್ಲಿ ಪ್ರಥಮ ಸ್ವರವು ದೀರ್ಘವಾಗಿದ್ದರೆ ಅದರ ಅನಂತರದಲ್ಲಿ ಸ್ವಜಾತೀಯ ವ್ಯಂಜನ ದ್ವಿತ್ವ ಬರುವುದಿಲ್ಲ. ಆದರೆ ವಿಜಾತೀಯ ವ್ಯಂಜನದ್ವಿತ್ವ ಬರಬಹುದು ಎಂಬ ಸಂಗತಿಯನ್ನು ಹೇಗೆ ಅರ್ಥ ಮಾಡಿಕೊಳ್ಳುವುದು. ಇದನ್ನು ನಿದರ್ಶನಗಳ ಮೂಲಕ ಅರ್ಥ ಮಾಡಿಕೊಳ್ಳಬೇಕು. ಆಸ್ತಿ, ಇಷ್ಟ, ಗುದ್ಲಿ ಇವೆಲ್ಲವೂ ಕನ್ನಡಕ್ಕೆ ಸಹಜ. ಆದರೆ ಕಾಟ್ಟು, ತೋಟ್ಟ ಮುಂತಾದವು ಅಸಹಜ ಎಂದಾಯ್ತು. ಅಕ್ಷರ ವಿಭಜನೆ ಮಾಡುವಾಗ ಆಸ್ತಿ ಎನ್ನುವುದನ್ನು ಆ ಮತ್ತು ಸ್ತಿ ಎಂದು ವಿಭಜಿಸಬೇಕೋ ಅಥವಾ ಆಸ್ ಮತ್ತು ತಿ ಎಂದು ವಿಭಜಿಸಬೇಕೋ ಎಂಬುದು ಮುಖ್ಯ ಪ್ರಶ್ನೆ. ಇವೆರಡರಲ್ಲಿ ಆಯ್ಕೆ ಕಷ್ಟ. ಆದರೂ ಮೊದಲನೆಯ ವಿಭಜನೆ ಹೆಚ್ಚು ಸೂಕ್ತವೆಂದು ಹೇಳಲು ಕಾರಣಗಳಿವೆ ಅಥವಾ ಇವೆರಡರಲ್ಲಿ ಯಾವುದನ್ನು ಆಯ್ಕೆ ಮಾಡಿದರು ಕನ್ನಡದಲ್ಲಿ ಸಾಧ್ಯವಿರುವ ಅಕ್ಷರ ರಚನೆಯ ನಿಯಮಗಳಿಗೆ ಭಂಗ ಬರುವುದಿಲ್ಲ.

ಆದರೆ ನಾವು ನಿಷಿದ್ಧವೆಂದು ಹೇಳುತ್ತಿರುವ ಅಕ್ಷರ ರಚನೆಯಲ್ಲಿ ಸ್ವರ ಕೇಂದ್ರವಾಗಿ ದೀರ್ಘ ಸ್ವರವಿದ್ದರೆ (ಅತಿಭಾರಾಕ್ಷರ) ಮುಂದೆ ಒಂದೇ ವ್ಯಂಜನವಿರಬೇಕು. ಆದರೆ ಆಟ್ಟ ಎಂಬ ಮಾದರಿಯ ಪದಗಳಲ್ಲಿ ಆಟ್ ಟ ಎಂದು ವಿಭಜಿಸಲು ಬರುವುದಿಲ್ಲ. ಆಟ್ಟ್ ಮತ್ತು ಆ ಎಂದು ವಿಭಜಿಸುವುದು ಅವಶ್ಯ. ಹೀಗಾದಾಗ ಆಟ್ಟ್ ಎಂಬುದು ಅತಿಭಾರಾಕ್ಷರವಾಗಿ ಅದು ಕನ್ನಡಕ್ಕೆ ಹೊರತಾಗಿಬಿಡುತ್ತದೆ. ಆಟ್ಟ ಎಂಬುದನ್ನು ಆ ಮತ್ತು ಟ್ಟ ಎಂದು ಏಕೆ ವಿಭಜಿಸಬಾರದು ಎಂದು ಕೇಳಬಹುದು. ಸರಿಯೇ ಆದರೆ ಕನ್ನಡದಲ್ಲಿ ಅಕ್ಷರದ ಆರಂಭದಲ್ಲಿ ವ್ಯಂಜನದ್ವಿತ್ವಗಳು ಅದರಲ್ಲೂ ಸ್ವಜಾತೀಯ ವ್ಯಂಜನದ್ವಿತ್ವಗಳು ಬರುವುದಿಲ್ಲವಲ್ಲ. ಆದ್ದರಿಂದ ಈ ವಿಭಜನೆ ಸಾಧ್ಯವಿಲ್ಲ.

ಇಲ್ಲಿಯವರೆಗೆ ಓದಿದ ಕೆಲವರಾದರೂ ಒಂದು ಪ್ರಶ್ನೆಯನ್ನು ಹಾಕಲು ಸಿದ್ಧರಾಗಿರಬಹುದು. ಇಷ್ಟೆಲ್ಲ ಹೇಳಿದ ಮೇಲೂ 'ಆದ್ದರಿಂದ' ಎಂಬಂಥ ರೂಪಗಳು ಕನ್ನಡದಲ್ಲಿ ಇವೆಯಲ್ಲ? ಇದು ಇಲ್ಲಿ ನಿರೂಪಿಸಿದ ನಿಯಮಕ್ಕೆ ಹೊರತಾಗಿದೆಯಲ್ಲವೇ ಎಂಬುದೇ ಆ ಪ್ರಶ್ನೆ. 'ಆದ್ದರಿಂದ' ಎಂಬ ರಚನೆಯಲ್ಲಿ ಆ ಎಂಬ ದೀರ್ಘ ಸ್ವರದ ಮುಂದೆ ದ್ದ ಎಂಬ ಸಜಾತೀಯ ದ್ವಿತ್ವ ಬಂದಿದೆಯಲ್ಲ? ಆದರೆ ನಾವೀಗ ನಿರೂಪಿಸಿದ ನಿಯಮ ಪದಗಳ ಒಳಗಿನ ಅಕ್ಷರ ರಚನೆಗೆ ಸಂಬಂಧಿಸಿದೆ. ಎರಡು ಪದಗಳು ಸೇರಿ ಆಗುವ ರಚನೆಗಳಿಗಲ್ಲ. 'ಆದ್ದರಿಂದ' ಎಂಬುದು ಇಂಥ ರಚನೆ. ಇಂಥಲ್ಲಿ ಮೊದಲ ದಕಾರ ಮತ್ತು ಎರಡನೆಯ ದಕಾರದ ನಡುವೆ ಒಂದು ಪದಗಡಿ ಇರುತ್ತದೆ. ಪದಗಡಿಗಳಿರುವಲ್ಲಿ ಅಕ್ಷರ ರಚನೆಯ ನಿಯಮಗಳು ಪ್ರವರ್ತಿಸುವ ಕ್ರಮವೇ ಬೇರೆ. ಅದು ಬೇರೊಂದು ಟಿಪ್ಪಣಿಗೆ ವಸ್ತುವಾಗುತ್ತದೆ.

## ಕನ್ನಡದ ಕೆಸರು ಗದ್ದೆಯಲ್ಲಿ ಇಂಗ್ಲಿಶಿನ ವೈಹಾಳಿ

ಸುಮಾರು ಇಪ್ಪತ್ತೊಂದು ವರ್ಷಗಳ ಹಿಂದೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಇಂಗ್ಲಿಶ್ ಕವಿ ಟಿ.ಎಸ್.ಇಲಿಯಟ್ (ಈತನ ಹೆಸರನ್ನು ಎಲಿಯಟ್ ಎನ್ನಬೇಕೋ ಇಲಿಯಟ್ ಎನ್ನಬೇಕೋ ಎಂಬುದನ್ನೆ ಚರ್ಚಿಸಿದ ಬೇರೆ ಪ್ರಸಂಗಗಳಿವೆ)ನ ಶತಮಾನೋತ್ಸವ ಸಂದರ್ಭದಲ್ಲಿ ಒಂದು ವಿಚಾರ ಸಂಕಿರಣವನ್ನು ನಡೆಸಿತ್ತು. ಅಲ್ಲಿ ನಾನು ಬರೆದು ಓದಿದ 'ಇನ್ನು ಕನ್ನಡಿಗಳು ಸಾಕು' ಎಂಬ ಅಡ್ಡ ಹೆಸರಿನ ಪ್ರಬಂಧ ಅಲ್ಲಿಯೇ ಬಲು ಟೀಕೆಗೆ ಒಳಗಾಯಿತು. ಕನ್ನಡದ ಸೃಜನಶೀಲತೆಯ ಮೇಲೆ ಅಪನಂಬಿಕೆ ಇರುವುದರಿಂದಾಗಿ ಈ ಬಗೆಯ ಚಿಂತನೆಗಳು ಹುಟ್ಟುತ್ತವೆ ಎಂದು ಗೆಳೆಯ ಡಿ.ಆರ್.ನಾಗರಾಜ್ ಹೇಳಿದರೆ, ಈ ಬಗೆಯ ವಿಚಾರಗಳನ್ನು ಮಂಡಿಸುವುದಕ್ಕೆ ನಾರಾಯಣ ಡೆರಿಡಾನನ್ನು ಓದಿರುವುದೇ ಕಾರಣ ಎಂದು ಅನಂತಮೂರ್ತಿ ಹೇಳಿದರು. ಒಟ್ಟಾರೆ ಇಂಗ್ಲಿಶ್ ಮೂಲಕ ಬರುವ ಪ್ರಭಾವಗಳಿಗೆ ಹೆದರಬಾರದೆಂದೂ ಇಂತಹ ಪ್ರಭಾವಗಳ ಎದುರಾಗಿ ಮಾತನಾಡುವುದನ್ನೂ ಕೂಡ ಇಂಗ್ಲಿಶ್ ಮೂಲಕವೇ ಕಲಿಯಬೇಕಾಗಿದೆಯೆಂದು ಹೇಳಿದಂತಾಯಿತು. ಎರಡು ದಶಕಗಳು ಕಳೆದ ಮೇಲೂ ಈ ಗೊಂದಲ ನನ್ನನ್ನು ಬಿಟ್ಟುಕೊಟ್ಟಿಲ್ಲ. ಅಂದಹಾಗೆ ಈ ಕವಿಯ ನೂರನೆಯ ಹುಟ್ಟು ಹಬ್ಬವನ್ನು ಮರೆಯದೇ ಆಚರಿಸಿದವರಲ್ಲಿ ಕನ್ನಡಿಗರೇ ಮೊದಲಿಗರು. ಇದು ನಮಗೆ ವಿಚಿತ್ರ ಎಂದು ತೋರಲೇ ಇಲ್ಲವಲ್ಲ. ಈಗ ಮತ್ತೆ ಅದೇ ಗುಂಗಿನಲ್ಲಿ ಅದೇ ರಾಗದ ಹೊಸ ಟಿಪ್ಪಣಿಯೊಂದನ್ನು ನಿಮ್ಮೆದುರು ಮಂಡಿಸುತ್ತಿದ್ದೇನೆ.

ಕನ್ನಡ ನುಡಿಯ ಬೆಳವಣಿಗೆಯನ್ನು ಅರಿಯಲೆಂದು ಮತ್ತು ಅದರ ಇಂದಿನ ಪದಗಳು ಹೇಗೆ ಹುಟ್ಟಿ ಬಂದವೆಂದು ತಿಳಿಯಲು ಆಗಾಗ ದ್ರಾವಿಡ ಭಾಷೆಗಳ ನಿಷ್ಪತ್ತಿ ಕೋಶವನ್ನು ನೋಡುತ್ತಿರುತ್ತೇನೆ. ಇದನ್ನು ಕಳೆದ ಶತಮಾನದ ಹೆಸರುಪಡೆದ ನುಡಿಯರಿಗರಾದ ಟಿ.ಬರೋ ಮತ್ತು ಎಂ.ಬಿ.ಎಮಿನೋ ಅವರು ಸಂಪಾದಿಸಿದ್ದಾರೆ. ಅದನ್ನು ಸುಮಾರು ಇಪ್ಪತ್ತೈದು ವರ್ಷಗಳ ಹಿಂದೆ ತಿದ್ದಿ ಬೆಳಸಲು ಅವರಿಗೆ ಅನುವು ದೊರೆತಿತ್ತು. ಈ ಕೋಶದಲ್ಲಿ ಕನ್ನಡದ ಮಾಹಿತಿಗಾಗಿ ಅವರು ಹತ್ತೊಂಬತ್ತನೆಯ ಶತಮಾನದಲ್ಲಿ ಕ್ರೈಸ್ತ ಮೆಶನರಿಗಳು ಸಿದ್ಧಪಡಿಸಿದ ಪದಕೋಶಗಳನ್ನು ನೋಡಿದ್ದಾರೆ. ಅದರಲ್ಲೂ ಎಫ್.ಕಿಟೆಲ್ ಅವರು ತಯಾರಿಸಿದ ಕನ್ನಡ-ಕನ್ನಡ-ಇಂಗ್ಲಿಶ್ ಕೋಶ ಅವರ ನೆರವಿಗೆ ಒದಗಿದೆ. ಆ ಕೋಶ ತಯಾರಾದ ಸುಮಾರು ಅರವತ್ತು ವರುಷಗಳ ಬಳಿಕ ಅವರು ತಮ್ಮ ಕೋಶವನ್ನು ತಯಾರಿಸುತ್ತಿದ್ದರು. ಈ ಎರಡು ಕೋಶಗಳು ಸಿದ್ಧವಾದ ಹೊತ್ತಿನ ನಡುವೆ ಕನ್ನಡದಲ್ಲಿ ಕನ್ನಡದ ಬಗೆಗೆ ಹೆಚ್ಚಿನ ಮಾಹಿತಿಯನ್ನು

ನೀಡುವ ಆಕರಗಳು ಸಿದ್ಧವಾಗಿದ್ದವು. ಕನ್ನಡ ಸಾಹಿತ್ಯ ಪರಿಷತ್ತು ಸಿದ್ಧಪಡಿಸಿರುವ ಕನ್ನಡ–ಕನ್ನಡ ನಿಘಂಟಿನ ಎಲ್ಲ ಸಂಪುಟಗಳಲ್ಲವಾದರೂ ಎರಡು ಸಂಪುಟಗಳಾದರೂ ಹೊರಬಿದ್ದಿದ್ದವು. ಅಲ್ಲದೆ ಹೆಚ್ಚಿನ ಮಾಹಿತಿ ಪಟ್ಟಿಕೆಗಳ ರೂಪದಲ್ಲಿ ನಿಘಂಟು ಕಾರ್ಯಾಲಯದಲ್ಲಿ ಆ ವೇಳೆಗೆ ದೊರಕುತ್ತಿತು. ಆದರೆ ಬರೋ ಮತ್ತು ಎಮಿನೋ ಅವರು ಕನ್ನಡದ ಬಗೆಗೆ ಕನ್ನಡದಲ್ಲಿ ದೊರೆಯುವ ಮಾಹಿತಿಯನ್ನು ನೋಡುವ ಗೋಜಿಗೆ ಹೋಗಲೇ ಇಲ್ಲ. ಇದು ಕೇವಲ ಕನ್ನಡಕ್ಕೆ ಮಾತ್ರ ಹೊಂದುವ ಮಾತಲ್ಲ. ಬರೆಹ ಪರಂಪರೆಯಿರುವ ತಮಿಳು, ಮಲೆಯಾಳಮ್ ಮತ್ತು ತೆಲುಗು ನುಡಿಗಳ ಬಗೆಗೆ ಆಯಾ ನುಡಿಗಳಲ್ಲಿ ದೊರಕುತ್ತಿದ್ದ ಮಾಹಿತಿಯನ್ನು ನೋಡಲಿಲ್ಲ. ಆ ನುಡಿಗಳ ಬಗೆಗೆ ಇಂಗ್ಲಿಶ್‌ನಲ್ಲಿ ದೊರಕುತ್ತಿದ್ದ ಮಾಹಿತಿಯನ್ನು ಪಡೆದು ಬಳಸಿಕೊಂಡಿದ್ದಾರೆ.

ನಮಗೆ ಇದರಲ್ಲಿ ಯಾವ ತಪ್ಪೂ ಕಾಣಲಿಲ್ಲ. ಇಂತಹ ಕೋಶವನ್ನು ಮಾಡುವವರು ಎಲ್ಲ ನುಡಿಗಳನ್ನು ತಾವೇ ಕಲಿತು ಆಯಾ ನುಡಿಯಲ್ಲಿ ದೊರೆಯುವ ಮಾಹಿತಿಯನ್ನು ಪಡೆದುಕೊಳ್ಳುವುದು ಆಗದ ಮಾತೆಂದು ತಿಳಿದುಬಿಟ್ಟೆವು. ಇಂಡೋ ಯುರೋಪಿಯನ್ ನುಡಿಗಳಿಗೆ ಆರ್.ಟರ್ನರ್ ಅವರು ತಯಾರಿಸಿಕೊಟ್ಟ ನಿಷ್ಪತ್ತಿ ಕೋಶದ ಮಾದರಿಯಲ್ಲಿ ದ್ರಾವಿಡ ಭಾಷೆಗಳಿಗೂ ಒಂದು ಆ ಮಾದರಿಯ ಕೋಶ ಬೇಕೆಂಬ ಬಯಕೆ ಇದ್ದುದು ಸರಿಯೇ. ಆ ಕೊರತೆಯನ್ನು ತುಂಬಿಕೊಡಲು ಈ ನುಡಿಯರಿಗರು ದುಡಿದು ಕಟ್ಟಿದ ಈ ಕೋಶವನ್ನು ಒಪ್ಪಿಕೊಳ್ಳುವುದರಲ್ಲಿ ನಮಗೆ ಹಿಂಜರಿಕೆಯೇನೂ ತೋರಲಿಲ್ಲ. ಆದರೆ ಕನ್ನಡದ 'ದಿಟ'ವಾದ ಮಾಹಿತಿ ಇದರಲ್ಲಿ ಸೇರ್ಪಡೆಯಾಗಿದ್ದರೆ ಇದರ ಹೆಚ್ಚಳ ಇನ್ನಷ್ಟು ಬೆಳೆಯುತ್ತಿರಲಿಲ್ಲವೇ? ಈ ಕೆಲಸವನ್ನು ಬರೋ ಮತ್ತು ಎಮಿನೋ ಅವರು ಮಾಡದಿದ್ದರೂ ಕನ್ನಡ ನಾಡಿನ ನುಡಿಯರಿಗರು ಮಾಡಬೇಕಿತ್ತು. ಆದರೆ ಆ ದಿಕ್ಕಿನಲ್ಲಿ ಯಾರೂ ತಲೆಕೆಡಿಸಿಕೊಳ್ಳಲಿಲ್ಲ. ಇದು ಕನ್ನಡದ ಮಟ್ಟಿಗೆ ಕೊರತೆಯುಳ್ಳ ಕೋಶ ಎಂಬ ಅನಿಸಿಕೆ ನಮ್ಮನ್ನು ಎಂದೂ ಕಾಡಲಿಲ್ಲ.

ಸುಮಾರು ಮೂರ್‍ನಾಲ್ಕು ದಶಕಗಳ ಹಿಂದೆ ಅಮೆರಿಕಾದ ವಿಶ್ವವಿದ್ಯಾಲಯದಲ್ಲಿದ್ದ ಡಾ.ಎ.ಕೆ.ರಾಮಾನುಜನ್ ಅವರು ಎರಡು ಅನುವಾದ ಗ್ರಂಥಗಳನ್ನು ಹೊರತಂದರು. ಒಂದು ತಮಿಳು ಸಂಗಂ ಸಾಹಿತ್ಯದಲ್ಲಿರುವ ಅಗಮ್ ಪದ್ಯಗಳ ಅನುವಾದ. ಇದನ್ನವರು ಇಂಟೀರಿಯರ್ ಲ್ಯಾಂಡ್‌ಸ್ಕೇಪ್ ಎಂಬ ಹೆಸರಿನಿಂದ ಕರೆದಿದ್ದರು. ಎರಡನೆಯದು ಕನ್ನಡ ವಚನಕಾರರ ಕೆಲವು ವಚನಗಳ ಅನುವಾದ; ಸ್ಪೀಕಿಂಗ್ ಆಫ್ ಶಿವ ಎಂಬ ಹೆಸರಿರುವ ಈ ಸಂಕಲನದಲ್ಲಿ ಬಸವಣ್ಣ, ಅಲ್ಲಮ, ಅಕ್ಕ ಮತ್ತು ಕೆಲವು ಆಯ್ದ ವಚನಕಾರರ ರಚನೆಗಳು ಇಂಗ್ಲಿಶಿಗೆ ಅನುವಾದವಾಗಿದ್ದವು. ಇದನ್ನು ಓದುವವರಿಗೆ ನೆರವಾಗುವ ಮೂರು ಪ್ರಬಂಧಗಳು ಈ ಸಂಕಲನದಲ್ಲಿ ಇವೆ. ಮೊದಲನೆಯದನ್ನು ರಾಮಾನುಜನ್ ಅವರೇ ಬರೆದಿದ್ದರೆ ಇನ್ನೆರಡನ್ನು ವಿಲಿಯಂ ಮೆಕ್‌ಕೊರ್ಮಾಕ್ ಬರೆದಿದ್ದಾರೆ. ಇವೆರಡರಲ್ಲಿ ಒಂದು ಷಟ್‌ಸ್ಥಲವನ್ನು ಇನ್ನೊಂದು ಲಿಂಗಾಯಿತ ಸಂಸ್ಕೃತಿಯನ್ನು ವಿವರಿಸುತ್ತವೆ. ಮೆಕ್ ಕೊರ್ಮಾಕ್ ಅವರು ಕನ್ನಡವನ್ನು ಇಂಗ್ಲಿಶ್ ಬಲ್ಲವರು ಕಲಿಯಲು ನೆರವಾಗುವ ಪಾಠಗಳನ್ನು ಬರೆದವರು. ಅವರು ಕನ್ನಡ ಓದಬಲ್ಲವರಾಗಿದ್ದರು.

ಈ ಎರಡೂ ಅನುವಾದಗಳು ಹೊರಬಂದಾಗ ಕನ್ನಡ ವಿಮರ್ಶೆಯ ವಲಯ ಅವುಗಳನ್ನು ಓದಿ ಚರ್ಚಿಸತೊಡಗಿತು. ಆದರೆ ಯಾರೂ ಸಂಗಂ ಕವಿತೆಗಳನ್ನು ತಮಿಳಿನಲ್ಲಿ ಓದಬೇಕೆಂದು ಬಯಸಿ ತಮಿಳನ್ನು ಕಲಿಯಲು ಮುಂದಾಗಲಿಲ್ಲ. (ಅದಕ್ಕೂ ಮೊದಲು ಸಂಗಂ ರಚನೆಗಳನ್ನು ಮೂಲ ತಮಿಳಿನಿಂದಲೇ ಕನ್ನಡಕ್ಕೆ ಅನುವಾದಿಸ ಬೇಕೆಂಬ ಇರಾದೆ ಬಿ.ಎಂ.ಶ್ರೀಯವರಿಗೆ ಇದ್ದಂತೆ ತೋರುತ್ತದೆ. ಅವರ ಅಪ್ರಕಟಿತ ಬರಹಗಳಲ್ಲಿ ಇಂತಹ ಅನುವಾದಗಳಿಗೆ ಅವರು ತೊಡಗಿದ್ದರ ಮಾಹಿತಿ ದೊರಕುತ್ತದೆ.)ಇಂಗ್ಲಿಶ್ ಅನುವಾದಗಳನ್ನು ಓದಿ ಅದನ್ನು ಕುರಿತು ಚರ್ಚೆಗಳನ್ನು ಮಾಡತೊಡಗಿದರು. ವಚನಗಳ ಅನುವಾದಗಳನ್ನು ಕುರಿತಂತೆ ನಡೆದ ಚರ್ಚೆಗಳು ಎರಡು ದಿಕ್ಕಿನಲ್ಲಿ ನಡೆಯತೊಡಗಿದವು. ಒಂದು ಬಗೆಯ ಚರ್ಚೆಯಲ್ಲಿ ಅನುವಾದಗಳು ಎಷ್ಟೋ ಕಡೆಗಳಲ್ಲಿ ಮೂಲದ ಚಹರೆಗಳನ್ನು ಸರಿಯಾಗಿ ತೋರುವುದಿಲ್ಲವೆಂಬ ನೆಲೆಯಲ್ಲಿ ನಡೆಯುತ್ತಿದ್ದವು. ಇನ್ನೊಂದು ನೆಲೆಯ ಚರ್ಚೆಗಳು ಕನ್ನಡದ ವಚನಗಳನ್ನು ಇಂಗ್ಲಿಶ್ ಅನುವಾದದ ಮೂಲಕ ಓದಿದಾಗ ಕನ್ನಡಿಗರಿಗೆ ಸಿಗುವ ಹೊಸ ಹೊಳಹುಗಳನ್ನು ಮೆಚ್ಚಿಕೊಳ್ಳತೊಡಗಿದವು. ಅಲ್ಲದೆ ವಚನಗಳನ್ನು ಚರ್ಚಿಸುವಾಗ ರಾಮಾನುಜನ್ ಬರೆದ ಗ್ರೇಟ್ ಟ್ರೆಡಿಶನ್ ಮತ್ತು ಲಿಟಲ್ ಟ್ರೆಡಿಶನ್ ಪರಿಕಲ್ಪನೆಗಳು ಕನ್ನಡ ವಿಮರ್ಶಕರಿಗೆ ಹೊಸ ಹತಾರಗಳಾಗಿ ಕಂಡವು. ತಮ್ಮ ವಿಮರ್ಶೆಗಳಲ್ಲಿ ಅವುಗಳನ್ನು ತಕ್ಕಂತೆ ಬಳಸತೊಡಗಿದರು. ಇದರಿಂದ ಹೊರಬಂದ ಸಂಗತಿಯೊಂದು ಈಗ ಗೊತ್ತಾಗುತ್ತಿದೆ. ಕನ್ನಡ ನುಡಿಯರಿಗರಲ್ಲಿ ಕನ್ನಡ ಮತ್ತು ಇಂಗ್ಲಿಶ್ ನುಡಿಗಳೆರಡನ್ನೂ ಬಲ್ಲವರು ಕನ್ನಡವನ್ನು, ಕನ್ನಡ ಅರಿವನ್ನು ಇಂಗ್ಲಿಶ್ ನುಡಿಯ ಮೂಲಕ ತಿಳಿಯುವ ಹೊಸ ದಾರಿಯೊಂದನ್ನು ಕಂಡುಕೊಂಡರು. ಎರಡು ನುಡಿಗಳನ್ನು ಬುದ್ಧಿ ಮುಖ್ಯವಾದ ಕೆಲಸಗಳಲ್ಲಿ ಬಳಸುವವರು ಈ ಇಕ್ಕಟ್ಟಿನಲ್ಲಿ ಸಿಲುಕುವರೆಂಬುದು ದಿಟ. ಆದರೆ ಇದು ಇಕ್ಕಟ್ಟಾಗಿರದೆ ಒಂದು ಬಗೆಯ ಬಿಡುಗಡೆ ಎಂದು ಆಗ ಹೆಚ್ಚು ಜನರು ತಿಳಿದ್ದಂತೆ ನನಗೆ ಈಗ ತೋರುತ್ತದೆ. ಬಸವಣ್ಣ, ಅಕ್ಕ, ಅಲ್ಲಮರ ವಚನಗಳ ಅಂಕಿತಗಳನ್ನು ಲಾರ್ಡ್ ಆಫ್ ಮೀಟಿಂಗ್ ರಿವರ್ಸ್, ಲಾರ್ಡ್ ಆಫ್ ವೈಟ್ ಜಾಸ್ಮಿನ್, ಲಾರ್ಡ್ ಆಫ್ ಕೇವ್ಸ್ ಎಂದು ಅನುವಾದಿಸಿದ್ದರಿಂದ ಅವರ ವಚನಗಳನ್ನು ನೋಡಲು ನಮಗೆ ಹೊಸ ದಾರಿಗಳು ಸಿಕ್ಕಿದವೆಂದು ಆಗ ನಲಿದಾಡಿದ್ದನ್ನು ನಾನಿನ್ನೂ ಮರೆತಿಲ್ಲ. ರಾಮಾನುಜನ್ ಅವರ ಎರಡೂ ಪ್ರಯತ್ನಗಳು ಅವರ ಮುಂದಿನ ಬರವಣಿಗೆಗಳ ದಾರಿಯನ್ನು ತೆರೆದಿದ್ದವು. ತಮಿಳು ನಾಡಿನ ಸಂತರ ರಚನೆಗಳನ್ನು, ಸಂಗಂ ಕವಿತೆಗಳಲ್ಲಿರುವ ಪುರಂ ಗುಂಪಿನ ರಚನೆಗಳನ್ನು ಅವರು ಇಂಗ್ಲಿಶಿಗೆ ಅನುವಾದಿಸಿದರು. ಇವೆರಡೂ ಅನುವಾದ ಗ್ರಂಥಗಳು ಕನ್ನಡ ವಿಮರ್ಶೆಯ ವಲಯವನ್ನು ಅಷ್ಟು ತಟ್ಟಿದಂತೆ ತೋರುವುದಿಲ್ಲ. ಈಗ ಎಲ್ಲವನ್ನೂ ಹಿಂತಿರುಗಿ ನೋಡಿದರೆ ನಮಗೆ ಒಂದು ಕನ್ನಡಿಯನ್ನು ನಾವು ಹುಡುಕುತ್ತಿದ್ದೆವು; ಅದನ್ನು ರಾಮಾನುಜನ್ ಅವರ ವಚನಗಳ ಅನುವಾದ ಒದಗಿಸಿತು ಎಂದು ತೋರುತ್ತದೆ. ಆದರೆ ಕನ್ನಡಿಯೊಳಗೆ ಕಂಡವರು ನಾವೇ ಅಗಿದ್ದೆವೋ ಇಲ್ಲವೇ ನಾವು ಹೇಗಿರಬೇಕೆಂದು ಬಯಸಿದ್ದೆವೋ ಅದು ಅಲ್ಲಿ ಕಂಡಿತೋ? ಇದು ನಮ್ಮನ್ನು ಕಾಡಲಿಲ್ಲ.

ನಮ್ಮ ತಿಳುವಳಿಕೆಯನ್ನು ಹಿಡಿತದಲ್ಲಿಟ್ಟುಕೊಂಡಿರುವ ನೆಲೆಗಳು ಯಾವುವು ಎಂಬುದನ್ನು ನಾನು ಹುಡುಕುತ್ತಿದ್ದೇನೆ. ಹಾಗಾಗಿ ಮೇಲಿನ ಉದಾಹರಣೆಗಳು ನನಗೆ ಬೇಕೆನಿಸಿದವು. ಮತ್ತೆ ಈ ಉದಾಹರಣೆಗಳಿಗೆ ಮರಳುವವನಿದ್ದೇನೆ. ಅದಕ್ಕೂ ಮೊದಲು ಕೆಲವು ವಿವರಗಳನ್ನು ನೋಡೋಣ. ಕನ್ನಡ ನಾಡಿನಲ್ಲಿ ಓದುವ ಮತ್ತು ಓದುವುದನ್ನೇ ಮುಂದವರಿಸುವ ಎಲ್ಲರಿಗೂ ಇಂಗ್ಲಿಶ್ ನುಡಿಯು ಬೇಕೇಬೇಕೆಂದು ನಾವು ಹೇಳುತ್ತೇವೆ. ನಮಗೆಷ್ಟು ಇಂಗ್ಲಿಶ್ ಬೇಕು ಎಂಬ ಕೇಳ್ವಿಯನ್ನು ನಾವೇ ಹಾಕಿಕೊಂಡು ಅದಕ್ಕೆ ಕುವೆಂಪು ಅವರು ಹೇಳಿದ ಮಾತನ್ನು ಬದಲನ್ನಾಗಿ ಹೇಳುತ್ತೇವೆ. ಇಂಗ್ಲಿಶ್ ನಮಗೆ ಗ್ರಂಥಾಲಯದ ಭಾಷೆಯಾದರೆ ಸಾಕೆಂದು ಕುವೆಂಪು ಹೇಳಿದರು. ನಾವು ಈಗಲೂ ಅದನ್ನು ಹೇಳುತ್ತಿದ್ದೇವೆ. ಆದರೆ ಈ ಹೇಳಿಕೆಯನ್ನು ತಿಳಿದುಕೊಳ್ಳುವ ಬಗೆಯಲ್ಲಿ ಕೊಂಚ ಬದಲಾವಣೆಯಾಗಿದೆಯೆಂದು ತೋರುತ್ತದೆ. ಇಂಗ್ಲಿಶ್ ಗ್ರಂಥಾಲಯದ ಭಾಷೆಯಾದರೆ **ಸಾಕೆಂದು** ಕುವೆಂಪು ಹೇಳಿದರೂ ನಾವು ಅದನ್ನು ತಿಳಿದುಕೊಳ್ಳುವಾಗ ಇಂಗ್ಲಿಶ್ ಗ್ರಂಥಾಲಯದ ಭಾಷೆ **ಆಗಲೇಬೇಕೆಂದು**ಕೊಂಡುಬಿಟ್ಟಿದ್ದೇವೆ. ಇವೆರಡು ನಿಲುವುಗಳಲ್ಲಿ ಇರುವ ಬದಲಾವಣೆಯನ್ನು ಈಗ ನೋಡೋಣ. ನಾನೂ ಸೇರಿದಂತೆ ಹಲವರು ಓದಿನಲ್ಲಿ ಬರವಣಿಗೆಯಲ್ಲಿ ತೊಡಗಿಸಿಕೊಂಡಿರುವವರು ನಮ್ಮಿಂದ ಕಲಿತವರ ಬಗೆಗೆ ಆಗಾಗ ಗೊಣಗುವುದನ್ನು ನೀವು ಕೇಳಿರುತ್ತೀರಿ. ಈಗಿನವರಿಗೆ ಇಂಗ್ಲಿಶ್ ಓದಿ ಅದರಲ್ಲಿರುವುದನ್ನು ತಿಳಿದುಕೊಳ್ಳಲು ಆಗುತ್ತಿಲ್ಲ ಎನ್ನುವುದೇ ಆ ಗೊಣಗು. ಪಿಎಚ್.ಡಿ ಓದಿಗೆಂದು ಬಂದವರಿಗೆ ನಾವು ಕೇಳುವ ಮೊದಲ ಕೇಳ್ವಿಯೆಂದರೆ ಇಂಗ್ಲಿಶ್ ಪುಸ್ತಕ, ಲೇಖನಗಳನ್ನು ಓದಿ ತಿಳಿದುದುಕೊಳ್ಳಲು ಆಗುವುದೋ ಎಂದು. ನಮ್ಮನ್ನು ಒಪ್ಪಿಸಲೆಂದೋ, ಮೆಚ್ಚಿಸಲೆಂದೋ ಅವರು ಬರೆದ ಪಿಎಚ್.ಡಿ ಪ್ರಬಂಧಗಳ ಓದುಪಟ್ಟಿಯಲ್ಲಿ ಮೊದಲ ಕೆಲವಾದರೂ ಪುಸ್ತಕಗಳು ಇಂಗ್ಲಿಶ್ ಭಾಷೆಯವಾಗಿರುತ್ತವೆ. ಈ ಮಾತು ಸಮಾಜ ವಿಜ್ಞಾನ ವಿಷಯಗಳಲ್ಲಿ ಪಿಎಚ್.ಡಿ ಓದನ್ನು ಮುಂದುವರೆಸುತ್ತಿರುವ ಎಲ್ಲರಿಗೂ ಹೊಂದುವ ಮಾತಾಗಿದೆ. ಹೀಗೆ ಇಂಗ್ಲಿಶ್ ಆಕರಗಳಿಂದ ಓದನ್ನು ಮೊದಲು ಮಾಡದಿದ್ದರೆ ನಮ್ಮ ಓದಿನಲ್ಲಿ ಕೊರೆ ಉಳಿದುಕೊಳ್ಳುವುದೆಂಬ ಆತಂಕ ಯಾವಾಗಲೂ ಮನೆಮಾಡಿರುತ್ತದೆ.

ಹೊಸ ಓದಿನ ವಲಯುಗಳು ನಮಗೆ ಇಂಗ್ಲಿಶ್ ಶಿಕ್ಷಣದ ಮೂಲಕ ಪರಿಚಯವಾದವು. ಅವುಗಳಲ್ಲಿ ಓದು ಮುಂದುವರೆಸುತ್ತಿರುವವರು ಇಂಗ್ಲಿಶ್ ಭಾಷೆಯ ಬರಹಗಳನ್ನು ಓದುವುದು, ಅದರಿಂದ ತಮ್ಮ ತಿಳುವಳಿಕೆಯನ್ನು ಹೆಚ್ಚಿಸಿಕೊಳ್ಳುವುದು ಸರಿಯಲ್ಲವೇ ಎಂದು ಯಾರಾದರೂ ಕೇಳಬಹುದು. ಅಂದರೆ ನಾವು ನಮ್ಮ ತಿಳುವಳಿಕೆಯನ್ನು ಬೆಳೆಸಿಕೊಳ್ಳುವುದಕ್ಕೆ ಇಂಗ್ಲಿಶ್ ಭಾಷೆಯ ಆಕರಗಳಿಂದ ಓದನ್ನು ಮೊದಲು ಮಾಡಬೇಕು ಎಂಬುದು ಈಗ ಚಾಲ್ತಿಯಲ್ಲಿರುವ ಕಟ್ಟುಪಾಡಾಗಿದೆ. ಇದು ಸರಿಯೇ ತಪ್ಪೇ ಎಂದಾಗಲೀ ಇದರಿಂದ ಏನು ಪರಿಣಾಮವಾಗಿದೆ ಎಂದಾಗಲೀ ಯೋಚಿಸುವ ಬಿಡುವು ನಮಗೆ ಇಲ್ಲವಾಗಿದೆ.

ಇಂಗ್ಲಿಶ್ ಭಾಷೆಯಲ್ಲಿ ನಮಗೆ ಓದಲು ಸಿಗುವ ಆಕರಗಳು ಯಾವ ಬಗೆಯವು ಎಂಬುದನ್ನು ಈಗ ನೋಡೋಣ. ಈ ಟಿಪ್ಪಣಿಯ ಮಟ್ಟಿಗೆ ಮಾನವಿಕ ವಲಯದ

ಓದಿಗೆ ನನ್ನ ಮಾತನ್ನು ಮಿತಗೊಳಿಸಿಕೊಳ್ಳುತ್ತೇನೆ. ಈ ವಲಯದ ಓದುಬರಹಗಳು ನಮ್ಮ ನಾಡಿನ, ನಮ್ಮ ಸಮಾಜದ ಸಮಸ್ಯೆಗಳನ್ನು ಕುರಿತೇ ಇರುತ್ತವೆಯಷ್ಟೆ. ಮೊದಲಿಗೆ ಇಂಡಾಲಜಿ ಎಂಬ ಅಧ್ಯಯನ ಶಾಖೆ ಕುಡಿಯಿಟ್ಟದ್ದು ಹೇಗೆ ಎಂಬುದನ್ನು ನೋಡೋಣ. ಭಾರತ ಬ್ರಿಟಿಶ್ ಮತ್ತು ಕೆಲವು ಯರೋಪಿನ ನಾಡುಗಳ ವಸಾಹತಾಗಿದ್ದಾಗ ಯರೋಪಿನ ವಿದ್ವಾಂಸರು ಈ ನಾಡಿನ ಸಂಸ್ಕೃತಿಯನ್ನು ತಿಳಿಯಲು ಆಸಕ್ತಿ ಹೊಂದಿದರು. ಅವರ ಓದುಬರಹಗಳ ಮೂಲಕವೇ ಇಂಡಾಲಜಿ ಎಂಬೊಂದು ಅಧ್ಯಯನ ಶಾಖೆ ಬೆಳೆಯಿತು. ಈ ಶಾಖೆಯ ಹಿಂದಿನ ನೆಲೆಗಳನ್ನು ಈಗಾಗಲೇ ಹಲವರು ಚರ್ಚಿಸಿದ್ದಾರೆ. ಭಾರತವನ್ನು ಯುರೋಪಿನ ಕಣ್ಣುಗಳ ಮೂಲಕ ನೋಡುವುದು ಅಲ್ಲಿ ಕಂಡು ಬರುತ್ತದೆ. ಯುರೋಪಿನ ಹಲವು ದೇಶಗಳು ಈ ಬಗೆಯ ಅಧ್ಯಯನದಲ್ಲಿ ತೊಡಗಿದ್ದರೂ ಈಗ ಅದು ಹೆಚ್ಚಾಗಿ ನಮಗೆ ಇಂಗ್ಲಿಶ್ ಮೂಲಕವೇ ದೊರೆಯುವಂತಾಗಿದೆ. ಯುರೋಪಿನ ಕಣ್ಣುಗಳ ಮೂಲಕ ನೋಡುವ ಬಗೆಯನ್ನು ಈ ನಾಡಿನಲ್ಲೇ ಇದ್ದುಕೊಂಡು ಇಲ್ಲಿನ ಸಮಾಜ ಸಂಸ್ಕೃತಿಗಳನ್ನು ಅಧ್ಯಯನ ಮಾಡುತ್ತಿದ್ದ ಇಲ್ಲಿನ ವಿದ್ವಾಂಸರಲ್ಲೂ ನಾವು ನೋಡುತ್ತೇವೆ. ಇದು ನಾವು ತಿಳಿದಷ್ಟು ಸರಳವಾಗಿಲ್ಲ. ಆಗ ನಾವು ನೋಡುವುದು ಮತ್ತು ಕಾಣುವುದು ಒಂದೇ ಆಗಿರುವುದಿಲ್ಲ. ಹೇಗೆ ನೋಡಬೇಕೆಂದು ನಮಗೆ ಹೇಳಿಕೊಡಲಾಗುತ್ತದೆಯೋ ಅದರಂತೆ ನಾವು ಕಾಣುತ್ತಿರುತ್ತೇವೆ. ಇಂಡಾಲಜಿ ಈ ಹೊರೆ ನಮ್ಮನ್ನು ಈಗಲೂ ಬಿಟ್ಟು ಹೋಗಿಲ್ಲವೆಂದು ತೋರುತ್ತದೆ.

ಹತ್ತೊಂಬತ್ತನೆಯ ಶತಮಾನದ ಕೊನೆಯವರೆಗೆ ನಮಗೆ ಯೋರೋಪಿನ ವಿದ್ವಾಂಸರು ನಮ್ಮ ಸಾಮಗ್ರಿಯನ್ನೇ ಅಗೆದು ತೆಗೆದು ಕೊಟ್ಟರು; ಜೊತೆಗೆ ಆ ಸಾಮಗ್ರಿಯನ್ನು ಜೋಡಿಸುವ ಮತ್ತು ಅದನ್ನು ವಿವರಿಸುವ ಬಗೆಯನ್ನೂ ಹೇಳಿಕೊಟ್ಟರು. ಕನ್ನಡದ ಮಿತಿಯಲ್ಲಿ ಒಂದೆರಡು ಉದಾಹರಣೆಗಳನ್ನು ಈಗ ನೊಡೋಣ. ನಮ್ಮ ಬರಹದ ದಾಖಲೆಗಳು ಕಲ್ಬರಹಗಳಾಗಿ ಇಲ್ಲವೇ ಕೈಬರಹದ ತಾಳೆಯೋಲೆಗಳ ಮೇಲೆ ಇದ್ದುವಷ್ಟೆ. ಇದಲ್ಲದೆ ಜನರ ನೆನಪಿನಲ್ಲಿದ್ದ ಸಾಮಗ್ರಿಗಳನ್ನು ಕೂಡ ಬರಹಕ್ಕೆ ತರುವ ಹಾದಿಗಳನ್ನು ತೋರಿಸಿಕೊಟ್ಟರು. ಮೆಕೆಂಜಿ ಸಂಗ್ರಹಿಸಿದ ಕೈಫಿಯತ್ತುಗಳು ಮತ್ತು ಫ್ಲೀಟ್ ಮಹಾಶಯ ಹೀಗೆ ಸಂಗ್ರಹಿಕೊಟ್ಟ ಲಾವಣಿಗಳನ್ನು ನೆನಪುಮಾಡಿಕೊಳ್ಳೋಣ. ಕಲ್ಬರಹಗಳನ್ನು ನಾವು ಓದುವ ಹಾಗೆ ಇಂದಿನ ತಂತ್ರಜ್ಞಾನದ ನೆರವಿನಿಂದ ಮುದ್ರಿಸುವುದನ್ನು ಹೇಳಿಕೊಟ್ಟದ್ದಲ್ಲದೆ ಅವುಗಳ ನಿಜ ಪಾಠವನ್ನು ಗುರುತಿಸುವ ಬಗೆಯನ್ನೂ ತೋರಿಸಿಕೊಟ್ಟರು. ಕೈಬರೆಹದ ಪ್ರತಿಗಳಿಗೆ ಬಂದರೆ ಒಂದೇ ಕೃತಿಯ ಹಲವು ಪ್ರತಿಗಳು ದೊರೆಯುತ್ತಿದ್ದವು. ಇವುಗಳಿಂದ ನಿಜಪಾಠವನ್ನು ಹೆಕ್ಕಿ ತೆಗೆಯುವುದನ್ನು ಹೇಳಿಕೊಟ್ಟರು. ಇದರಿಂದ ನಾವು ಮಾತು ಮತ್ತು ಬರಹಗಳಲ್ಲಿ ಯಾವುದು ಅಧಿಕೃತ ಎಂಬ ಬಗ್ಗೆ ಅಲ್ಲಿಯವರೆಗೆ ಇದ್ದ ನಮ್ಮ ನಂಬಿಕೆಗಳನ್ನು ಬಿಟ್ಟುಕೊಟ್ಟು ಹೊಸ ಹಾದಿಯಲ್ಲಿ ಸಾಗತೊಡಗಿದೆವು. ಈ ಚೌಕಟ್ಟಿಗೆ ಸಿಲುಕಿದ ನಾವು ಮಾತಿನಲ್ಲಿದ್ದ ಎಲ್ಲವನ್ನೂ ಬರಹಕ್ಕೆ ತರುವ ಮತ್ತು ಬರಹದಲ್ಲಿರುವುದರ ನಿಜಪಾಠವನ್ನು ಹುಡುಕುವ ಉದ್ಯಮದಲ್ಲಿ ತೊಡಗಿದ್ದೇವೆ.

ಇಂಗ್ಲಿಶ್ ಭಾಷಿಕರು (ಇವರು ಯುರೋಪಿನ ಭಾಷಿಕರ ಪ್ರತಿನಿಧಿಗಳೆಂಬಂತೆ ನಾವು ತಿಳಿದಿದ್ದೇವೆ. ಇದರ ಸಮಸ್ಯೆ ಕಡೆಗೆ ಇನ್ನೊಂದೆಡೆ ಚರ್ಚಿಸುತ್ತೇನೆ) ನಮಗೆ 'ಹೊಸಕಣ್ಣು'ಗಳನ್ನು ಕೊಟ್ಟರು. ನಾವು ಅದನ್ನು ಹಸಾದವೆಂದು ಒಪ್ಪಿಕೊಂಡಿದ್ದೇವೆ; ಈಗಲೂ ಅದರ ಹೊರೆಯಿಂದ ಬಿಡುಗಡೆಯೇ ಇಲ್ಲವೇನೋ ಎಂಬಂತೆ ಮುಂದುವರೆಯುತ್ತಿದ್ದೇವೆ. ಈ ಇಂಗ್ಲಿಶ್ ಆಕರಗಳನ್ನು ನಾವು ಕೆಲವು ಗುಂಪುಗಳಾಗಿ ವಿಂಗಡಿಸಿಕೊಂಡು ನೋಡೋಣ. 1. ಇಂಗ್ಲಿಶ್ ಭಾಷೆಯಲ್ಲಿ ಮಂಡಿತವಾಗಿರುವ ಆಕರಗಳು ಆ ಭಾಷೆಯಲ್ಲಿರುವುದರಿಂದಲೇ ಹೆಚ್ಚಿನ ಮನ್ನಣೆಯನ್ನು ಪಡೆಯುವಂತಹವು. 2. ನಮಗೆ ಸಂಬಂಧಪಟ್ಟ ಮಾಹಿತಿಯನ್ನು ಇಂಗ್ಲಿಶ್ ಭಾಷೆಯ ಮೂಲಕ ಮಂಡಿಸುವಂತಹವು. ಇಲ್ಲಿ ಭಾಷೆಯ ಜೊತೆಗೆ ಮಾಹಿತಿಯನ್ನು ಜೋಡಿಸುವ ಬಗೆಯೂ ಪ್ರಭಾವವನ್ನು ಬೀರುತ್ತಿರುತ್ತದೆ. 3) ಚಿಂತನೆಯ ಚೌಕಟ್ಟನ್ನು ಒದಗಿಸುವ ಇಂಗ್ಲಿಶ್ ಆಕರಗಳು. ಇವು ಬೇರೆಬೇರೆ ಜ್ಞಾನ ಶಾಖೆಗಳ ತಾತ್ವಿಕ ನೆಲಗಟ್ಟನ್ನು, ವಿಶ್ಲೇಷಣೆಯ ನೆಲೆಗಳನ್ನು ಮಂಡಿಸುತ್ತಿರುತ್ತವೆ. ಈ ಮಾದರಿಗಳು ನಮ್ಮ ಅಧ್ಯಯನಕಾರರನ್ನು ಪ್ರಭಾವಿಸುತ್ತಿರುತ್ತವೆ. ನಾನು ಮೊದಲ ಎರಡು ಬಗೆಯ ಆಕರಗಳ ಬಗೆಗೆ ಈಗ ಹೆಚ್ಚು ಚರ್ಚಿಸುವುದಿಲ್ಲ. ಮೊದಲಿಗೆ ಮೂರನೆಯ ಬಗೆಯ ಆಕರಗಳನ್ನು ಕುರಿತು ನೋಡೋಣ.

ಚಿಂತನೆಯ ಚೌಕಟ್ಟನ್ನು ಒದಗಿಸುವ ಆಕರಗಳನ್ನು ನಾವು ಎದುರಿಸುತ್ತಿರುವ ಬಗೆ ಯಾವುದು? ಬಹುಮಟ್ಟಿಗೆ ಇದು ಹೀರಿಕೊಳ್ಳುವ ಹಾದಿ. ಚಿಂತನೆಗಳು ಇಂಗ್ಲಿಶ್ ಭಾಷೆಯಲ್ಲಿ ಮಂಡಿತವಾಗಿದ್ದರೂ ಅವುಗಳಿಗೆ ಮೂಲ್ಯ ನಿರಪೇಕ್ಷವಾದ ಮತ್ತು ಸಾರ್ವತ್ರಿಕವಾದ ನೆಲೆಯಿದೆ ಎಂಬ ನಂಬಿಕೆಯಿಂದ ಆ ಆಕರಗಳನ್ನು ನಾವು ನೋಡುತ್ತೇವೆ. ಇದು ಕೇವಲ ಭಾಷೆಗೆ ಸಂಬಂಧಪಟ್ಟ ಮಾತಲ್ಲ; ನೋಡುವ ನೆಲೆಗಳು ಇದರಲ್ಲಿ ಸೇರಿಕೊಂಡಿರಬಹುದೆಂಬ ಸಂದೇಹ ನಮ್ಮನ್ನು ಕಾಡಿರುವುದು ಕಡಿಮೆ. ಹೆಚ್ಚೆಂದರೆ ಈ ಬಗೆಯ ಆಕರಗಳಲ್ಲಿ ಇರುವ ವಿವಿಧ ಪ್ರಸ್ಥಾನಗಳಲ್ಲಿ ನಮಗೆ ಅನುಕೂಲವೆನಿಸುವ ಪ್ರಸ್ಥಾನಕ್ಕೆ ಮತ್ತು ಅದರ ಆಕರಗಳಿಗೆ ಮೊದಲ ಮಣೆಯನ್ನು ನಾವು ಹಾಕುತ್ತಿದ್ದೇವೆ. ನೀವು ಸಂರಚನಾವಾದಿಗಳೋ, ಆಧುನಿಕೋತ್ತರವಾದಿಗಳೋ, ಮಾರ್ಕ್ಸ್‌ವಾದಿಗಳೋ ಹೀಗೆ ನಿಮ್ಮ ಆಯ್ಕೆಗಳಿಗೆ ತಕ್ಕಂತೆ ಆಕರಗಳನ್ನು ನೀವು ಆಯ್ದುಕೊಳ್ಳುತ್ತೀರಿ; ಆ ಆಕರಗಳನ್ನು ಅಧಿಕೃತ ನೆಲೆಗೆ ರವಾನಿಸುತ್ತೀರಿ. ಈ ಹೆದ್ದಾರಿ ಎಷ್ಟು ಬಳಕೆಯಾಗಿ ಹೋಗಿದೆಯೆಂದರೆ ಇದಕ್ಕೆ ಬದಲಾದ ದಾರಿಗಳಿರಬಹುದೆಂದು ಕಲ್ಪಿಸಿಕೊಳ್ಳಲು ಈಗ ಆಗುತ್ತಿಲ್ಲ.

ಒಂದೆರಡು ನಿದರ್ಶನಗಳ ಮೂಲಕ ನಾವು ಹಿಡಿದ ಹಾದಿಯಲ್ಲಿರುವ ತೊಂದರೆಗಳನ್ನು ತಿಳಿಯೋಣ. ಎರಡನೆಯ ಮಹಾಯುದ್ಧದ ಬಳಿಕ ಉತ್ತರ ಅಮೆರಿಕಾದ ವಿಶ್ವವಿದ್ಯಾಲಯಗಳಲ್ಲಿ ಅಧ್ಯಯನಕಾರರು ಹೊಸ ಪರಿಕಲ್ಪನೆಯೊಂದರ ಬೆನ್ನು ಹತ್ತಿದರು. ಆ ಪರಿಕಲ್ಪನೆ ಮೂಡಲು ಆಗ ಆ ದೇಶ ಅನುಸರಿಸುತ್ತಿದ್ದ ರಾಜಕೀಯ ಚಿಂತನೆಯ ಚೌಕಟ್ಟು ಕಾರಣವಾಗಿತ್ತು. ದಕ್ಷಿಣ ಏಸಿಯಾವನ್ನು ಒಂದು ಅಧ್ಯಯನ ವಲಯವನ್ನಾಗಿ ಪರಿಗಣಿಸುವುದೇ ಆ ಹೊಸ ಪರಿಕಲ್ಪನೆ. ಅಮೆರಿಕಾದ ಆಡಳಿತಕ್ಕೆ ದಕ್ಷಿಣ ಏಸಿಯಾವನ್ನು

ಒಂದು ಘಟಕವನ್ನಾಗಿ ನೋಡುವ ಅಗತ್ಯ ಇದ್ದುದಕ್ಕೆ ಕಳೆದ ಆರು ದಶಕಗಳಲ್ಲಿ ಸಾಕಷ್ಟು ಪುರಾವೆಗಳು ದೊರಕಿವೆ. ಅದನ್ನು ಬದಿಗಿಟ್ಟು ನೋಡಿದರೂ ದಕ್ಷಿಣ ಏಸಿಯಾವನ್ನು ಚಾರಿತ್ರಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ, ಸಾಂಸ್ಕೃತಿಕವಾಗಿ ಒಂದು ಘಟಕವನ್ನಾಗಿ ನೋಡಲು ಯಾವ ಪುರಾವೆಗಳಿದ್ದವು ಎಂಬುದು ಈಗಲೂ ಸ್ಪಷ್ಟವಾಗದ ಸಂಗತಿ. ಭೌಗೋಳಿಕವಾಗಿ ಗುರುತಿಸಲಾದ ದಕ್ಷಿಣ ಏಸಿಯಾ ಎಂಬ ಪ್ರದೇಶದ ಜನರಿಗೆ ಇದೊಂದು ಹೊಸ ಚಹರೆಯನ್ನು ರೂಪಿಸಿಬಿಟ್ಟದೆ. ಅದು ಅವರಿಗೆ ಬೇಕೋ ಬೇಡವೋ ಎಂಬುದು ಮುಖ್ಯವಾಗಲಿಲ್ಲ. ದಕ್ಷಿಣ ಏಸಿಯಾ ಎಂಬ ಪರಿಕಲ್ಪನೆಯಿಂದ ಚೀನಾ ಮತ್ತು ಜಪಾನ್ ದೇಶಗಳನ್ನು ಹೊರಗಿಟ್ಟುದರ ಹಿಂದಿನ ತರ್ಕವನ್ನು ಮತ್ತು ಆದರ ಪರಿಣಾಮಗಳನ್ನು ನಾವಿನ್ನೂ ಅರಗಿಸಿಕೊಳ್ಳಬೇಕಾಗಿದೆ.

ಅಮೆರಿಕಾದ ವಿಶ್ವವಿದ್ಯಾಲಯಗಳು ದಕ್ಷಿಣ ಏಸಿಯಾ ಅಧ್ಯಯನ ಶಾಖೆಗಳನ್ನು ತೆರೆದವು. ಚರಿತ್ರೆ, ಸಮಾಜ, ಸಂಸ್ಕೃತಿ, ರಾಜಕೀಯ ವ್ಯವಸ್ಥೆ ಹೀಗೆ ಹಲವು ಹತ್ತು ನೆಲೆಗಳಲ್ಲಿ ಅಧ್ಯಯನಗಳು ಮುಂದುವರೆದವು. ಭಾರತದಲ್ಲಿರುವ ನಾವೂ ಕೂಡ ಈ ಚೌಕಟ್ಟನ್ನು ಬಿಡದೆ ಬೆನ್ನುಹತ್ತಿದ್ದೇವೆ. ದಕ್ಷಿಣ ಏಸಿಯಾ ಎಂಬ ರಚನೆಯೊಂದನ್ನು ಒಪ್ಪಿ, ಅದರ ಚಹರೆಗಳನ್ನು ದೃಢೀಕರಿಸುವ ಅಧ್ಯಯನಗಳಿಗೆ ನಮ್ಮದೇ ಆದ ಕೊಡುಗೆಗಳನ್ನು ನೀಡುತ್ತಿದ್ದೇವೆ. ಚಿಂತನೆಯ ಚೌಕಟ್ಟುಗಳಿಗೆ ನಮ್ಮ ಕೊಡುಗೆ ಹೆಚ್ಚಿಲ್ಲವಾದರೂ ಅಗಾಧ ಪ್ರಮಾಣದ ಮಾಹಿತಿಯನ್ನು ಸಾಮಗ್ರಿಯನ್ನು ಒದಗಿಸಲು ಮುನ್ನುಗ್ಗಿದ್ದೇವೆ. ನಾನು ಈ ಟಿಪ್ಪಣೆಯ ಮೊದಲಲ್ಲಿ ಹೇಳಿದ ದ್ರಾವಿಡ ಭಾಷೆಗಳ ಜ್ಞಾತಿಪದಕೋಶ, ರಾಮಾನುಜನ್ ಅವರ ಅನುವಾದಗಳು ಈ ಬೃಹತ್ ಅಧ್ಯಯನ ಶಾಖೆಯ ಟಿಸಿಲುಗಳು ಎನ್ನುವುದನ್ನು ಗಮನಿಸಬೇಕು.

ಈ ಪರಿಕಲ್ಪನೆ ನಮ್ಮ ಆಧ್ಯಯನಗಳಿಗೆ ಹಾಕಿರುವ ಕಣ್ಣುಪಟ್ಟಿಯನ್ನು ನಾವು ಗುರುತಿಸಿಲ್ಲ. ಈಚಿನ ಒಂದು ಉದಾಹರಣೆಯನ್ನು ಗಮನಿಸೋಣ. ಅಮೆರಿಕಾದ ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾದ ಶೆಲ್ಡನ್ ಪೊಲಾಕ್ ಅವರು ಸಂಸ್ಕೃತ ಭಾಷಾ ವಿದ್ವಾಂಸರು. ಅವರು ದಕ್ಷಿಣ ಏಸಿಯಾದಲ್ಲಿ ಸಂಸ್ಕೃತದ ಪ್ರಸರಣವನ್ನು ಕುರಿತಂತೆ ವ್ಯಾಪಕವಾದ ಆಧ್ಯಯನವನ್ನು ಮಾಡಿದ್ದಾರೆ. ಸಂಸ್ಕೃತ ರೂಪಿಸಿಕೊಟ್ಟ ಮಾದರಿಯಲ್ಲಿ ಆಯಾ ಪ್ರದೇಶದ ಭಾಷೆಗಳು ಕ್ರಿಸ್ತ ಶಕೆಯ ಮೊದಲ ಸಹಸ್ರಮಾನದಲ್ಲಿ ತಮ್ಮ ಚಹರೆಗಳನ್ನು ಕಟ್ಟಿಕೊಂಡ ಬಗೆಯನ್ನು ನಿರೂಪಿಸಿದ್ದಾರೆ. ಕನ್ನಡದ ಶ್ರೀವಿಜಯನ ಕವಿರಾಜ ಮಾರ್ಗದ ಬಗೆಗೂ ವಿವರವಾದ ಚಿಂತನೆಯನ್ನು ಮಂಡಿಸಿದ್ದಾರೆ. ಅವರ ವಿಚಾರಗಳು 'ನಮಗೂ ಮುಖ್ಯವೆನಿಸಿದ್ದರಿಂದ' ಅವರ ಕೆಲವು ಬರಹಗಳು ಕನ್ನಡಕ್ಕೂ ಅನುವಾದವಾಗಿ ಪ್ರಕಟಗೊಂಡಿವೆ. ಪೊಲಾಕ್ ಅವರು ಗ್ರೀಕ್ ಮತ್ತು ಲ್ಯಾಟಿನ್ ಭಾಷೆಗಳು ಯುರೋಪಿನ ದೇಶಭಾಷೆಗಳ (ನಿಜವಾಗಿ ಬಳಸಿದ ಪದ ವರ್ನಾಕ್ಯುಲರ್ಸ್. ಜನರಾಡುವ, ಮನ್ನಣೆ ಪಡೆಯದ ಭಾಷೆಗಳನ್ನು ಯುರೋಪಿನಲ್ಲಿ ಹೀಗೆ ವರ್ನಾಕ್ಯುಲರ್ ಗಳೆಂದು ಕರೆಯುವುದು ವಾಡಿಕೆಯಲ್ಲಿತ್ತು.) ಜೊತೆಗೆ ಪಡೆದುಕೊಂಡ ಸಂಬಂಧ ಮತ್ತು ಆ

ಭಾಷೆಗಳು ತಮ್ಮ ಚಹರೆಯನ್ನು, ಮಧ್ಯಯುಗದ ಬಳಿಕ ಕಟ್ಟಿಕೊಂಡ ಬಗೆ ಇವೆಲ್ಲವನ್ನೂ ಕುರಿತಂತೆ ಕೆಲವು ಅಧ್ಯಯನಗಳು ಈಗಾಗಲೇ ನಡೆದಿವೆ. ಪೊಲಾಕ್ ಅವರಿಗೆ ಅದೇ ಮಾದರಿಯು ಸಂಸ್ಕೃತ ಮತ್ತು ಇಲ್ಲಿನ ದೇಶಭಾಷೆಗಳ ನಡುವೆ ಇದೆಯೋ ಇಲ್ಲವೋ ಎಂಬುದನ್ನು ತಿಳಿಯುವ ಕುತೂಹಲವಿದ್ದಂತಿದೆ. ನನಗೆ ಅವರು ತಲುಪಿರುವ ನಿರ್ಣಯಗಳನ್ನು ಚರ್ಚಿಸುವ ಬಯಕೆ ಇಲ್ಲ. ಆದರೆ ದಕ್ಷಿಣ ಏಸಿಯಾವನ್ನು ಒಂದು ಪ್ರಾದೇಶಿಕ ಘಟಕವೆಂದು ನೋಡಿದ್ದರಿಂದ ಆದ ತೊಂದರೆಗಳನ್ನು ಮಾತ್ರ ಇಲ್ಲಿ ಗಮನಿಸಬೇಕಾಗಿದೆ. ಸಂಸ್ಕೃತದಷ್ಟೇ ಪ್ರಭಾವಶಾಲಿಯಾಗಿದ್ದ ಭಾಷೆಗಳು ಪ್ರಾಕೃತ ಮತ್ತು ಪಾಲಿಗಳು. ಭಾರತದ ಆಚೆಗೆ ದಾಟಿದ ಬರವಣಿಗೆಗಳು ಪಾಲಿ ಭಾಷೆಯಲ್ಲಿದ್ದವು. ಚೀನಾ ಮತ್ತು ಜಪಾನ್ ದೇಶಗಳ ಮಟ್ಟಿಗಂತೂ ಈ ಮಾತು ಇನ್ನಷ್ಟು ಖಚಿತವಾಗಿದೆ. ರಾಮಾಯಣದ ಪರಂಪರೆ ದಕ್ಷಿಣ ಏಸಿಯಾದಲ್ಲಿ ಹರಡಿಕೊಂಡಿರುವ ವಿಧಾನವನ್ನು ಅಧ್ಯಯನ ಮಾಡುವವರು ಚೀನಾ ದೇಶವನ್ನು ಬದಿಗಿಟ್ಟರೆ ಅದರಿಂದ ಅವರಿಗೆ ದೊರಕುವುದು ಅರ್ಧ ಸತ್ಯ ಮಾತ್ರ. ಏಕೆಂದರೆ ಪ್ರಾಕೃತ ಮತ್ತು ಪಾಲಿ ಮೂಲಗಳಿಂದ ಚೀನಾ ದೇಶದಲ್ಲಿ ನೆಲೆಗೊಂಡ ರಾಮಾಯಣ ಸಂಬಂಧಿ ಕಥಾನಕಗಳ ಪರಿಚಯವಿನ್ನೂ ನಮಗೆ ಆಗಿಲ್ಲ. ಈ ಕೊರತೆಗಳ ಮಾತು ಒತ್ತಟ್ಟಿಗಿರಲಿ. ದಕ್ಷಿಣ ಏಸಿಯಾ ಎಂಬ ಪ್ರಾದೇಶಿಕ ಚೌಕಟ್ಟನ್ನು ಒಪ್ಪುವ ಮೂಲಕ ನೆಲೆಗೊಂಡ ರಚನೆಗಳು ನಮ್ಮನ್ನು ಕಟ್ಟಿ ಹಾಕಿರುವ ಬಗೆಯನ್ನು ಇಲ್ಲಿ ಮನಗಾಣಬೇಕಾಗಿದೆ.

ಇದು ಒಂದು ಉದಾಹರಣೆ. ಇದಕ್ಕಿಂತ ಸಮಸ್ಯಾತ್ಮಕವಾದ ನೆಲೆಗಳು ಇವೆ. ಯುರೋಪಿನ ಜ್ಞಾನಯುಗದ (ಹಾಗೆಂದು ಸದ್ಯ ರೆನೆಸಾನ್ಸ್ ಪದವನ್ನು ವಿವರಿಸಿಕೊಳ್ಳೋಣ) ಚಿಂತನೆಗಳ ಮೇಲೆ ಪ್ರಭಾವ ಬೀರಿರುವ ತತ್ವಶಾಸ್ತ್ರದ ಪರಿಕಲ್ಪನೆಗಳನ್ನು ಫ್ರೆಂಚ್ ತತ್ವಶಾಸ್ತ್ರಜ್ಞ ರೆನೆ ದೆಕಾರ್ತೆ ರೂಪಿಸಿಕೊಟ್ಟಿದ್ದಾನೆ. ಕಾರ್ಟಿಸಿಯನ್ ತತ್ವಶಾಸ್ತ್ರ ಎಂದು ಅದನ್ನು ಕರೆಯುತ್ತಾರೆ. ಇದು ವಿವಿಧ ಜ್ಞಾನವಲಯಗಳನ್ನು ಪ್ರಭಾವಿಸಿರುವ ರೀತಿಯನ್ನು ವಿವರವಾಗಿ ಅಧ್ಯಯನ ಮಾಡಲಾಗಿದೆ. ಅಂದರೆ ನಾವು ಮಾನವಿಕಗಳಲ್ಲಿ ಪಡೆದುಕೊಳ್ಳುತ್ತಿರುವ ಚಿಂತನೆಯ ಚೌಕಟ್ಟುಗಳ ಹಿಂದೆ ಇರುವ ತಾತ್ವಿಕ ನೆಲೆಗಟ್ಟು ಈ ಕಾರ್ಟಿಸಿಯನ್ ಮೂಲದ್ದಾಗಿರಬಹುದು. ಆದರೆ ಇದು ನಮ್ಮ ಚಿಂತನಾ ಕ್ರಮವನ್ನು ನಿಯಂತ್ರಿಸಬಹುದೇ? ಅಥವಾ ಇಂತಹ ನಿಯಂತ್ರಣಕ್ಕೆ ಒಳಗಾಗಿದ್ದೇವೆ ಎನ್ನುವುದು ನಮಗೆ ಗೊತ್ತಿದೆಯೇ? ಹೀಗಾಗಿ ಇಂಗ್ಲಿಶ್ ಇಲ್ಲವೇ ಇಂಗ್ಲಿಶ್ ಮೂಲಕ ದೊರಕುವ ಚಿಂತನಾ ಚಾಕಟ್ಟುಗಳನ್ನು ಸಾರ್ವತ್ರಿಕ ಮತ್ತು ಮೌಲ್ಯ ನಿರಪೇಕ್ಷ ಎಂದು ತಿಳಿದರೆ ಅದು ಪ್ರಮಾದವೇ ಸರಿ.

ಇನ್ನು ಮೊದಲು ಹೇಳಿದ ಎರಡು ಆಕರಗಳಿಗೆ ಬರೋಣ. ಇಂಗ್ಲಿಶ್ ಭಾಷೆಯಲ್ಲಿರುವುದರಿಂದಲೇ ಆಕರಕ್ಕೆ ದೊರೆಯುವ ಮಾನ್ಯತೆಯ ಬಗೆಗೆ ಹೆಚ್ಚು ಹೇಳುವ ಅಗತ್ಯವಿಲ್ಲ. ಇದು ಜಾಗತಿಕ ರಾಜಕಾರಣದ ಹುನ್ನಾರವಾಗಿರುವುದರಿಂದ ದೇಶೀಯ ಚಿಂತಕರೂ ಕೂಡ ತಮ್ಮ ಭಾಷಿಕರನ್ನು, ನಾಡಿನವರನ್ನು ಉದ್ದೇಶಿಸಿ

ಮಾತಾಡುವಾಗ ಅವರಿಗೆ ಬೆನ್ನು ತಿರುಗಿಸುವ ಪ್ರಸಂಗ ಈಗ ಒದಗಿದೆ. ಅಂದರೆ ಅವರು ತಮ್ಮ ನಾಡು ನುಡಿಗಳ ವಕ್ತಾರರಂತೆ ಮಾತನಾಡುತ್ತಾರೆಯೇ ಹೊರತು. ನಾಡು ನುಡಿಗಳೊಡನೆ ಸಂವಾದಕ್ಕೆ ತೊಡಗುವುದಿಲ್ಲ. ಈಗ ಅಧಿಕ ಪ್ರಮಾಣದಲ್ಲಿ ಪ್ರಕಟವಾಗುತ್ತಿರುವ ಜರ್ನಲ್‌ಗಳು ಮತ್ತು ವಿದ್ವತ್ ಪ್ರಕಟನೆಗಳನ್ನು ನೋಡಿದರೆ ಈ ಸಂಗತಿ ಸ್ಪಷ್ಟವಾಗುತ್ತದೆ. ಕೇಂಬ್ರಿಜ್ ಯೂನಿವರ್ಸಿಟಿ ಪ್ರೆಸ್, ಆಕ್ಸ್ ಫರ್ಡ್ ಯೂನಿವರ್ಸಿಟಿ ಪ್ರೆಸ್, ಸೇಜ್, ವೈಲಿ ಈಸ್ಟರ್ನ್ ಮುಂತಾದ ಪ್ರಕಟನ ಸಂಸ್ಥೆಗಳ ಪಟ್ಟಿಯನ್ನು ತಿರುವುಹಾಕಿದರೆ ಮೇಲೆ ಹೇಳಿದ ಸಂಗತಿ ಸ್ಪಷ್ಟವಾಗುತ್ತದೆ. ಇಲ್ಲಿ ಬೆಳಕು ಕಾಣುವ ಸಾವಿರಾರು ಪುಟಗಳ ಅಧ್ಯಯನ ದೇಶ ಭಾಷೆಗಳಲ್ಲಿ ಓದುವವರಿಗೆ ದೂರವೇ ಆಗುತ್ತಿವೆ. ದೇಶಭಾಷೆಗಳಿಗೆ ಇದರಿಂದ ಕೊರತೆಯುಂಟಾಗಿದೆ ಎಂದು ತಿಳಿಯುವುದು ಒಂದು ಬಗೆ. ಆದರೆ ಆ ಅಧ್ಯಯನಗಳು ಈಗಿರುವ ಬಗೆಯಲ್ಲಿ ದೇಶಭಾಷೆಗಳಲ್ಲಿ ನೆಲೆಗೊಳ್ಳುವ ಸಾಧ್ಯತೆಯೂ ಇಲ್ಲವೆಂದು ಹೇಳುವುದು ಇನ್ನೊಂದು ›ಗೆ. ಎರಡನೆಯದು ತುಂಬ ಆತಂಕಕ್ಕೆ ಗುರಿಮಾಡುವ ಸಂಗತಿ. ನಮ್ಮ ಚಿಂತಕರು ನಮ್ಮೊಡನೆ ಮಾತನಾಡುವ ಅವಕಾಶವನ್ನು ಬೇಕೆಂತಲೇ ಬಿಟ್ಟುಕೊಡುತ್ತಿದ್ದಾರೆಯೆ?

ಎರಡನೆಯ ಬಗೆಯ ಆಕರಗಳು ನಮಗೆ ಸಂಬಂಧಿಸಿದ ಮಾಹಿತಿಗಳನ್ನು ಬಳಸಿಕೊಂಡು ಇಂಗ್ಲಿಶಿನಲ್ಲಿ ನಿರೂಪಣೆಗಳನ್ನು ಮಂಡಿಸುತ್ತವೆ. ಈ ಮಾಹಿತಿಗಳನ್ನು ಕೂಡಿಹಾಕುವ ಮತ್ತು ಬಳಸಿಕೊಳ್ಳುವ ಬಗೆಯನ್ನು ಕುರಿತಂತೆ ಪುಟಗಟ್ಟಲೆ ಬರೆಯಬಹುದು. ಮೊದಲನೆಯದಾಗಿ ಹೀಗೆ ಮಾಹಿತಿಯನ್ನು ಕಲೆಹಾಕುವಾಗ , ಅಧ್ಯಯನಗಳ ಪ್ರಮೇಯಗಳಿಗೆ ಅನುಗುಣವಾಗಿರುವ ಮತ್ತು ಅದಕ್ಕೆ ಹೊಂದಿಕೊಳ್ಳುವ ಮಾಹಿತಿಯನ್ನು ಮಾತ್ರ ತೆಗೆದುಕೊಳ್ಳಲಾಗುತ್ತದೆ. ಅಲ್ಲದೆ ಮಾಹಿತಿಗಳನ್ನು ಸಿದ್ಧವಸ್ತುಗಳೆಂದು ಪರಿಗಣಿಸುತ್ತಾರೆಯೇ ಹೊರತು ಅವುಗಳು ಪ್ರಕ್ರಿಯಾತ್ಮಕವಾಗಿವೆ ಎನ್ನುವುದನ್ನು ಗಮನಿಸುವುದಿಲ್ಲ. ಜೀವನಕ್ರಮದ ಚೌಕಟ್ಟಿನಿಂದ ಹೊರತೆಗೆದ ಮಾಹಿತಿಗಳು ಹೀಗೆ ಚಲನಶೀಲತೆಯನ್ನು ಕಳೆದುಕೊಂಡು ಕೇವಲ ಮಾಹಿತಿಗಳಾಗಿಬಿಡುತ್ತವೆ; ಮತ್ತು ಪ್ರಮೇಯವನ್ನು ಸಮರ್ಥಿಸಲು ದುಡಿಯತೊಡಗುತ್ತವೆ. ಅಧ್ಯಯನಗಳಿಗೆ ನಮ್ಮ ನಾಡು ನುಡಿ ಮತ್ತು ನಾಡವರು ಪರಿಕರಗಳಾಗಿಬಿಡುತ್ತಾರೆ.

ಇದೆಲ್ಲ ಆತಂಕಗಳು ಏಕಾಗಿ? ಕನ್ನಡ ಚಿಂತನೆ ಎಂಬುದು ಹೀಗೆಯೇ 'ಇತರ'ಕ್ಕೆ ಜೋತುಬಿದ್ದೇ ಬದುಕಬೇಕೆ? ಚಿಂತನೆಯ ಚೌಕಟ್ಟುಗಳು ಇಲ್ಲಿಯೇ ಹಟ್ಟಲಾರವೇ? ಹುಟ್ಟಬಾರದೇ? ಈ ಬಗೆಯ ಪ್ರಶ್ನೆಗಳನ್ನು ಹಾಕಿಕೊಂಡ ಕೂಡಲೇ ಕೆಲವರು ಕೇಕೆ ಹಾಕಿ ನಗುವುದುಂಟು. ಅವರಲ್ಲಿ ಎರಡು ಬಗೆಯವರಿದ್ದಾರೆ. ಮೊದಲ ಬಗೆಯವರು 'ಈಗ ನಿಮಗೆ ಬುದ್ಧಿಬಂತೆ?' ಎನ್ನುವವರು. ಇವರ ಪ್ರಕಾರ 'ನಮ್ಮ ಚಿಂತನೆಗಳನ್ನು' ನಾವು ಮರೆತಿದ್ದೇವೆ. 'ಪಶ್ಚಿಮ ಬುದ್ಧಿ'ಯಾಗಿದ್ದೇವೆ. ಮರುಖನನದಿಂದ ಅಗೋ ನಮ್ಮ ಬಂಗಾರದ ವಿಗ್ರಹ ಕೈಗೆ ದೊರಕುತ್ತದೆ. ಇನ್ನೊಂದು ಬಗೆಯವರು

'ಇತರ' ಎನ್ನುವುದೇ ಇಲ್ಲ; ಅದು ಭ್ರಮೆ ಎನ್ನುವವರು. ಸದ್ಯ ಈ ಎರಡೂ ಬಗೆಯವರೊಡನೆ ಸಂವಾದಕ್ಕೆ ನಾನು ಸಿದ್ಧನಿಲ್ಲ. ಮೊದಲನೆಯದಾಗಿ ನಾವೀಗ ಇರುವ ಸಂದರ್ಭದ ಇಕ್ಕಟ್ಟುಗಳ ಬಗೆಗೆ, ಇಂಗ್ಲಿಶಿನ ಸವಾರಿಯ ಬಗೆಗೆ ಎಚ್ಚರಗೊಳ್ಳಬೇಕು; ಆ ಬಳಿಕ ಅದರಿಂದ ಹೊರಬರಲು ದಾರಿಗಳನ್ನು ಹುಡುಕಬೇಕು. ಅಂತಹ ದಾರಿ ಒಂದಲ್ಲ; ಹಲವು ಇರಬಹುದು. ದಾರಿಯ ಸೂಚನೆಗಳು ನಮ್ಮ ಹಿರೀಕರಲ್ಲೇ ಇವೆಯೆಂದು ನಾನು ನಂಬಿದ್ದೇನೆ. ಭಾಷೆ ಮತ್ತು ಸಾಹಿತ್ಯದ ವಿದ್ಯಾರ್ಥಿಯಾದ ನನಗೆ ಪಂಪನಲ್ಲಿ, ಅಲ್ಲಮನಲ್ಲಿ, ಬಸವಣ್ಣನಲ್ಲಿ, ಕುಮಾರವ್ಯಾಸನಲ್ಲಿ ಇಂತಹ ಹಲವು ಒಳದಾರಿಗಳ ಸುಳಿವುಗಳು ಕಾಣುತ್ತವೆ. ಅವುಗಳ ಬೆನ್ನು ಹತ್ತುವುದು ವ್ಯರ್ಥವಾಗಲಾರದು.

# ಕನ್ನಡದ ಹಳಮೆ

ಚರಿತ್ರೆಯನ್ನು ಬರೆಯುವವರು ಕಾಲ ಗಣನೆಗೆ ಕ್ರಿಸ್ತಶಕ ಮತ್ತು ಕ್ರಿಸ್ತಪೂರ್ವ ಎಂಬ ವಿಭಜನೆಯನ್ನು ಮಾಡಿಕೊಳ್ಳುತ್ತಾರಷ್ಟೆ. ಚರಿತ್ರೆ ಕ್ರಿಸ್ತಶಕದ ಮೊದಲಿಂದಲೇ ಶುರುವಾಯಿತೆಂದು ಇದರ ಅರ್ಥವಲ್ಲ. ಆದರೂ ಹೀಗೆ ಕಾಲಗಣನೆ ಮಾಡುವ ಬಗೆ ಈಗ ಚಾಲ್ತಿಯಲ್ಲಿದೆ. ಕ್ರಿ.ಶ. ಮೊದಲಾಗಿ ಈಗ ಎರಡು ಸಾವಿರ ವರ್ಷಗಳು ಮುಗಿದಿವೆ. ಇದನ್ನು ಎರಡು ಸಹಸ್ರಮಾನಗಳೆಂದು ಕರೆಯೋಣ. ಈಗ ಮೂರನೆಯ ಸಹಸ್ರಮಾನದಲ್ಲಿ ನಾವಿದ್ದೇವೆ. ಮೊದಲನೆಯ ಸಹಸ್ರಮಾನದಲ್ಲೂ ಜನರು ಆಡು ಮಾತಾಗಿ ಬಳಸುತ್ತಿದ್ದ ಮತ್ತು ಬರೆಹ ರೂಪವನ್ನೂ ಪಡೆದಿದ್ದ ಎಷ್ಟೋ ಭಾಷೆಗಳು ಈಗ ಇಲ್ಲವಾಗಿವೆ. ಆಗಲೂ ಬಳಕೆಯಲ್ಲಿದ್ದು ಈಗ ಅಂದರೆ ಮೂರನೆಯ ಸಹಸ್ರಮಾನದಲ್ಲೂ ಜನರ ಆಡುಮಾತಾಗಿ ಮತ್ತು ಬರವಣಿಗೆಯ ರೂಪದಲ್ಲಿ ಬಳಕೆಯಾಗುತ್ತಿರುವ ಭಾಷೆಗಳ ಸಂಖ್ಯೆ ಜಗತ್ತಿನಲ್ಲಿ ಹೆಚ್ಚೆಂದರೆ ಹತ್ತು ಇರಬಹುದು. ಕನ್ನಡ ಅಂತಹ ಭಾಷೆಗಳಲ್ಲಿ ಒಂದು.

ಕನ್ನಡವನ್ನು ಎಷ್ಟು ಹಿಂದಿನಿಂದ ಜನರು ಮಾತಾಡುತ್ತಿದ್ದಾರೆ? ಈ ಭಾಷೆಯನ್ನು ಬರಹ ರೂಪದಲ್ಲಿ ಇರಿಸತೊಡಗಿ ಎಷ್ಟು ವರ್ಷಗಳಾದವು? ಈ ಎರಡು ಪ್ರಶ್ನೆಗಳಿಗೆ ಉತ್ತರಗಳನ್ನು ಕಂಡುಹಿಡಿಯಲು ವಿದ್ವಾಂಸರು ಪ್ರಯತ್ನ ಪಡುತ್ತಿದ್ದಾರೆ. ಮೊದಲ ಪ್ರಶ್ನೆಯನ್ನು ನೋಡೋಣ. ಕನ್ನಡವನ್ನು ಜನ ಮಾತಾಡುತ್ತಿದ್ದುದಕ್ಕೆ ಪುರಾವೆಗಳನ್ನು ಬೇರೆ ಬೇರೆ ಲಿಖಿತ ದಾಖಲೆಗಳ ಮೂಲಕವೇ ಪಡೆದುಕೊಳ್ಳಬೇಕಿದೆ. ಇವು ಕನ್ನಡ ಭಾಷೆಯ ದಾಖಲೆಗಳೇ ಆಗಬೇಕಿಲ್ಲ. ಅಂತಹ ಕೆಲವು ದಾಖಲೆಗಳನ್ನು ಈಗ ಗಮನಿಸೋಣ.

ಅಶೋಕ ದಕ್ಷಿಣಭಾರತದಲ್ಲಿ ಬರೆಸಿದ ಕಲ್ಬರಹಗಳೆಲ್ಲವೂ ಈಗಿನ ಕರ್ನಾಟಕ ಮತ್ತು ಆಂಧ್ರ ರಾಜ್ಯಗಳಲ್ಲಿ ಹರಡಿಹೋಗಿವೆ. ಅಂತಹ ಒಂದು ಕಲ್ಬರಹ ಬ್ರಹ್ಮಗಿರಿಯಲ್ಲಿದೆ. ಪ್ರಾಕೃತ ಭಾಷೆಯಲ್ಲಿರುವ ಈ ಕಲ್ಬರಹದಲ್ಲಿ 'ಇಸಿಲ'ಎನ್ನುವ ಪದವಿರುವುದನ್ನು ಗುರುತಿಸಿದ್ದಾರೆ. ಇದು ಪ್ರಾಕೃತಭಾಷೆಯ ಪದವಲ್ಲ. ಹಾಗಿದ್ದಲ್ಲಿ ಇದು ಯಾವ ಭಾಷೆಯ ಪದ? ಈ ಪದ ಒಂದು ಊರಿನ ಹೆಸರನ್ನು ಹೇಳುವುದೆಂದು ಡಿ.ಎಲ್.ನರಸಿಂಹಾಚಾರ್ ಅವರು ಹೇಳಿದ್ದಾರೆ. ಇದು ಆ ಕಲ್ಬರಹದ ಆಸುಪಾಸಿನ ಪ್ರದೇಶದಲ್ಲಿರುವ ಊರಿನ ಹೆಸರನ್ನು ಹೇಳುತ್ತಿರುವುದರಿಂದ ಆ ಪದ ಕನ್ನಡದ ಪದವೇ

ಆಗಿರಬೇಕೆಂಬುದು ಅವರ ವಾದ. ಇಸಿಲ ಎಂಬುದು ಎಯಿಲ್ ಎಂಬ ಪದದೊಡನೆ ನಂಟನ್ನು ಹೊಂದಿದೆ; ಎಯಿಲ್ ನಾಡು ಎಂಬ ಪದ ಕೋಲಾರ ಜಿಲ್ಲೆಯ ಶಾಸನಗಳಲ್ಲಿ ಕಾಣಸಿಗುತ್ತದೆ ಎಂಬುದು ಡಿ.ಎಲ್.ನರಸಿಂಹಾಚಾರ್ ಅವರ ವಿಚಾರ. ಈಗ ದೊರಕಿರುವ ಕನ್ನಡ ಭಾಷೆಯ ಪದಗಳಲ್ಲಿ ಅತ್ಯಂತ ಹಿಂದಿನದು ಇದೇ ಎಂದು ಗುರುತಿಸಲಾಗಿದೆ.

ತಮಿಳುನಾಡಿನಲ್ಲಿ ಕ್ರಿಪೂದ ಅವಧಿಗೆ ಸೇರಿದ ಕಲ್ಬರಹಗಳನ್ನು ಓದಿ ಅಧ್ಯಯನ ಮಾಡಿರುವ ತಮಿಳು ವಿದ್ವಾಂಸ ಡಾ. ಇರಾವತಂ ಮಹದೇವನ್ ಅವರು ಅಲ್ಲಿನ ಕೆಲವು ಕಲ್ಬರಹಗಳಲ್ಲಿ ಸಿಗುವ ಪದಗಳು ತಮಿಳು ಭಾಷೆಗೆ ಸೇರಿದವುಗಳಲ್ಲ ಎಂದು ಹೇಳಿ ಅವು ಕನ್ನಡದ ಪದಗಳಾಗಿರಬಹುದೆಂದು ವಾದಿಸುತ್ತಾರೆ. ಸಿತ್ತಿನವಾಸಿಲ್ ಎಂಬಲ್ಲಿ ದೊರಕಿದ ಕಲ್ಬರಹದಲ್ಲಿ ಇಂತಹ ಪದಗಳನ್ನು ಅವರು ತೋರಿಸಿಕೊಟ್ಟಿದ್ದಾರೆ. **ಗವುಂಡಿ** (ಉಚ್ಚಾರಣೆಯ ರೂಪ; ಬರಹ ರೂಪವಲ್ಲ) ಮತ್ತು **ಪೊಸ್ತಿಲ್** ಎಂಬ ಪದಗಳನ್ನು ಇಲ್ಲಿ ಉಲ್ಲೇಖಿಸಬಹುದು. **ಗವುಂಡಿ** ಎಂಬುದು ಇಂದಿನ ಕನ್ನಡದಲ್ಲಿ **ಗೌಡಿತಿ** ಎಂದಾಗಿದ್ದರೆ, **ಪೊಸ್ತಿಲ್** ಎಂಬುದು **ಹೊಸಿಲು** ಎಂದಾಗಿದೆ. ಅಂದರೆ ಈ ಕಲ್ಬರ ರಚನೆಯಾಗುವ ಹೊತ್ತಿಗೆ ಕನ್ನಡ ಭಾಷೆ ಜನರ ಆಡುಮಾತಾಗಿತ್ತು ಎಂಬುದು ಇದರಿಂದ ಸೂಚಿತವಾಗುತ್ತದೆ.

ಗ್ರೀಕ್ ದೇಶದಿಂದ ಬಂದ ಪ್ರವಾಸಿ ಟಾಲೆಮಿ ತನ್ನ ಭೂವಿವರ ಕಥನದಲ್ಲಿ ಹಲವು ಊರುಗಳ ಹೆಸರುಗಳನ್ನು ಹೇಳಿದ್ದಾನೆ. ಇಂದಿನ ಕರ್ನಾಟಕದ ಹಲವು ಊರುಗಳಲ್ಲಿ ಅವನು ತಿರುಗಾಡಿರುವುದು ಗೊತ್ತಿರುವ ಸಂಗತಿ. ಅವನ ಬರಹದಲ್ಲಿ ಕಾಣಸಿಗುವ ಊರ ಹೆಸರುಗಳು ಗ್ರೀಕ್ ಉಚ್ಚಾರಣೆಗೆ ಅನುಗುಣವಾಗಿ ಲಿಖಿತವಾಗಿವೆ. ಕನ್ನಡದ ಬಹುಖ್ಯಾತ ಸಂಶೋಧಕರಾಗಿದ್ದ ಗೋವಿಂದ ಪೈಯವರು ಈ ಊರುಗಳ ಗ್ರೀಕ್ ರೂಪಗಳಿಂದ ಕನ್ನಡದ ರೂಪಗಳನ್ನು ಊಹಿಸಿದ್ದಾರೆ. ಆ ಊರುಗಳು ಈಗಲೂ ಕರ್ನಾಟಕದಲ್ಲಿ ಇವೆ ಎನ್ನುವುದು ಗಮನಿಸಬೇಕಾದ ಸಂಗತಿ. ಗ್ರೀಕ್ ರೂಪಗಳನ್ನು ನೀಡಿ ಕಂಸದಲ್ಲಿ ಕನ್ನಡದಲ್ಲಿ ಊರುಗಳ ರೂಪಗಳನ್ನು ಮುಂದೆ ಬರೆಯಲಾಗಿದೆ. **ನಗರೂರಿಸ್ (ನಗರೂರು) ತಬಸೆಂ (ತವಸಿ),ಇಂಡೆ (ಇಂಡಿ) , ತಿರಿಪಂಗಲಿಡ (ಗಡಹಿಂಗ್ಲಜ) ಹಿಪ್ಪೋಕೌರ( ಹೂವಿನ ಹಿಪ್ಪರಿಗಿ)** ಈ ಊರುಗಳಲ್ಲಿ ವಾಸಿಸುತ್ತಿದ್ದ ಜನರು ಮಾತಾಡುತ್ತಿದ್ದ ಭಾಷೆ ಕನ್ನಡವೇ ಆಗಿರಬೇಕೆಂದು ತಿಳಿಯಬೇಕಿದೆ. ಕಾವೇರಿಯ ದಕ್ಷಿಣ ಭಾಗದಲ್ಲಿದ್ದ ಹೆಸರಾಂತ ರಾಜ್ಯ ಪುನ್ನಾಟ (ಈಗ ಕಬಿನಿ ಜಲಾಶಯದಲ್ಲಿ ಮುಳುಗಡೆಯಾಗಿರುವ ಕೀರ್ತಿಪುರಟ್ಟೈಲ್ಲವೇ ಕಿತ್ತೂರು ಈ ರಾಜ್ಯದ ರಾಜಧಾನಿಯಾಗಿತ್ತು) ಕೂಡ ಟಾಲೆಮಿಯಲ್ಲಿ ಉಲ್ಲೇಖಗೊಂಡಿದೆ. ಇಲ್ಲಿಂದ ಹಸಿರು ಬಣ್ಣದ ಬೆಲೆಬಾಳುವ ಕಲ್ಲುಗಳು ಗ್ರೀಕ್ ದೇಶಕ್ಕೆ ರಫ್ತಾಗುತ್ತಿದ್ದುದನ್ನು ಗುರುತಿಸಲಾಗಿದೆ. ಪುನ್ನಾಟವು ತಮಿಳು ಮಾತಾಡುತ್ತಿದ್ದ ಪ್ರದೇಶಕ್ಕೆ ಹೊರಗಿದ್ದುದರಿಂದ ಅಲ್ಲಿನ ಜನರು ಕನ್ನಡ ಮಾತಾಡುತ್ತಿದ್ದರೆಂದು ಹೇಳಬಹುದು.

ಗೋವಿಂದ ಪೈ ಅವರೇ ಇನ್ನೊಂದು ಗ್ರೀಕ್ ದಾಖಲೆಯಲ್ಲಿ ಕನ್ನಡ ಪದಗಳನ್ನು ಹುಡುಕಿ ತೆಗೆದಿದ್ದಾರೆ. ಕ್ರಿ.ಶ ಎರಡನೆಯ ಶತಮಾನಕ್ಕೆ ಸೇರಿದ ಗ್ರೀಕ್ ನಾಟಕದ ಹಸ್ತಪ್ರತಿಯೊಂದನ್ನು ಅವರು ಪರಿಶೀಲಿಸಿದಾಗ ಆ ನಾಟಕವು ಕರ್ನಾಟಕದ ಕರಾವಳಿಯಲ್ಲಿ

ನಡೆದ ಘಟನೆಯೊಂದನ್ನು ಆಧರಿಸಿರುವುದನ್ನು ಗುರುತಿಸಿದರು. ಅಲ್ಲಿ ಗ್ರೀಕ್ ವ್ಯಾಪಾರಿಗಳು ಮತ್ತು ಇಲ್ಲಿನ ಜನರು ಪಾತ್ರಧಾರಿಗಳಾಗಿದ್ದಾರೆ. ಈ ಪ್ರಹಸನದ ಭಾಷೆ ಗ್ರೀಕ್. ಆದರೆ ಗ್ರೀಕ್ ವ್ಯಾಪಾರಿ ಪಾತ್ರಧಾರಿಯು ತನ್ನ ಮಾತುಗಳು ಇಲ್ಲಿನ ಜನರಿಗೆ ತಿಳಿಯುವಂತಾಗಲು ತನ್ನ ಗ್ರೀಕ್ ಉಚ್ಚಾರಣೆಯಲ್ಲಿ ಹೇಳಿರುವ ಕೆಲವು ವಾಕ್ಯಗಳು ಗ್ರೀಕ್ ಭಾಷೆಯವಲ್ಲ. ಹಾಗಿದ್ದರೆ ಆ ವಾಕ್ಯಗಳು ಆ ಗ್ರೀಕ್ ವ್ಯಕ್ತಿಗಳು ಹೇಳಿರುವ ಕನ್ನಡ ವಾಕ್ಯಗಳಿರಬೇಕೆಂದು ಗೋವಿಂದ ಪೈಯವರು ಊಹಿಸಿದ್ದಾರೆ. ಅವರು ಈ ವಾದವನ್ನು ಮುಂಡಿಸಿದ ಬಳಿಕ ಆ ಹಸ್ತಪ್ರತಿಯನ್ನು ಮತ್ತೆ ಯಾರೂ ವಿವರವಾಗಿ ಪರಿಶೀಲಿಸಲು ಹೋಗಿಲ್ಲ. ಮತ್ತೊಮ್ಮೆ ಅಧ್ಯಯನ ಮಾಡಿದರೆ ಸರಿಯಾದ ಮಾಹಿತಿ ಈಗ ದೊರಕುವುದು ಸಾಧ್ಯವಿದೆ. ಏನೇ ಇದ್ದರೂ ಆ ಸುತ್ತಿನಲ್ಲಿ ಕನ್ನಡವನ್ನು ಮಾತಾಡುತ್ತಿದ್ದ ಜನರು ಇದ್ದುದಕ್ಕೆ ಇದು ಒಂದು ಬಳಸು ಪುರಾವೆಯಾಗಿ ತೋರುತ್ತದೆ.

ಹಾಲನೆಂಬ ಕವಿ ಕ್ರಿಶ ಎರಡನೆಯ ಶತಮಾನದಲ್ಲಿ 'ಗಾಥಾ ಸತ್ತಸಯಿ" ಎಂಬ ಕೃತಿಯೊಂದನ್ನು ರಚಿಸಿದ. ಶಾತವಾಹನ ಆಳ್ವಿಕೆಯ ಕಾಲದ ಕೃತಿ ಇದು. ಇದರಲ್ಲಿ ಏಳುನೂರು ಪದ್ಯಗಳಿವೆ. ಈ ಪದ್ಯಗಳು ಪ್ರಾಕೃತ ಭಾಷೆಯಲ್ಲಿವೆಯಾದರೂ ಇವುಗಳಲ್ಲಿ ಕಾಣಸಿಗುವ ಎಷ್ಟೋ ಪದಗಳು ಪ್ರಾಕೃತ ಭಾಷೆಯವಲ್ಲ. ಅಂತಹ ಕೆಲವು ಪದಗಳನ್ನು ಗುರುತಿಸಿ ಅವು ಕನ್ನಡ ಭಾಷೆಯ ಬಾದಗಳಾಗಿರಬೇಕೆಂಬ ವಿಚಾರವನ್ನು ಮಂಡಿಸಲಾಗಿದೆ. ಶಾತವಾಹನರ ಆಳ್ವಿಕೆಯ ಪ್ರದೇಶದಲ್ಲಿ ಇಂದಿನ ಕರ್ನಾಟಕವೂ ಸೇರಿತ್ತಾದ್ದರಿಂದ ಆ ಪದಗಳು ಕನ್ನಡದ ಪದಗಳೆಂದು ಊಹಿಸಿದ್ದರಲ್ಲಿ ತಪ್ಪೇನೂ ಇರಲಾರದು. **ಅತ್ತಾ (ಅತ್ತೆ) ತುಪ (ತುಪ್ಪ) ಪೊಟ್ಟೆ(ಹೊಟ್ಟೆ) ಘಲಹಿ (ಹತ್ತಿ)** ಇವು ಇಂತಹ ಪದಗಳಾಗಿವೆ.

ತಮಿಳು ಭಾಷೆಯ ಅತಿ ಪ್ರಾಚೀನ ಕೃತಿ ಸಮೂಹವೆಂದು ಸಂಗಂ ರಚನೆಗಳನ್ನು ವಿದ್ವಾಂಸರು ಗುರುತಿಸಿದ್ದಾರೆ. ಇವುಗಳ ರಚನೆಯ ಕಾಲದ ಬಗೆಗೆ ವಿವಾದಗಳಿದ್ದರೂ ಬಹುಮಟ್ಟಿಗೆ ಇವು ಕ್ರಿಪೂ 3ನೆಯ ಶತಮಾನದಿಂದ ಕ್ರಿಶ ಮೂರನೆಯ ಶತಮಾನದ ವರೆಗಿನ ಅವಧಿಯಲ್ಲಿ (ಆರು ನೂರು ವರ್ಷಗಳು) ರಚನೆಗೊಂಡಿರಬೇಕೆಂದು ಬಹುಮಟ್ಟಿಗೆ ಒಪ್ಪಿಕೊಳ್ಳಲಾಗಿದೆ. ಸಂಗಂ ರಚನೆಗಳಲ್ಲಿ ಇರುವ ಪದರೂಪಗಳನ್ನು ಗಮನಿಸಿದ ತಮಿಳಿನ ಕೆಲವು ವಿದ್ವಾಂಸರು ಅಲ್ಲಿನ ಕೆಲವು ರೂಪಗಳು ಮುಂದೆ ತಮಿಳು ಭಾಷೆಯಲ್ಲಿ ಕಾಣಸಿಗುವುದಿಲ್ಲ ಎನ್ನುವುದನ್ನು ಹೇಳಿದ್ದಾರೆ. ಆದರೆ ಅಂತಹ ಕೆಲವು ರೂಪಗಳು ಬೇರೆ ದ್ರಾವಿಡ ಭಾಷೆಗಳಲ್ಲಿ ಉಳಿದುಕೊಂಡಿವೆ. ಕನ್ನಡದಲ್ಲೂ ಅಂತಹ ರೂಪಗಳು ಇವೆ. ಇಂದಿನ ಕನ್ನಡದಲ್ಲೂ ಬಳಕೆಯಾಗುತ್ತಿರುವ 'ಇಳಿ' ಎನ್ನುವ ಕ್ರಿಯಾ ರೂಪವನ್ನು ನೋಡೋಣ. ಈಗ ನಾವು ಯಾವ ಅರ್ಥದಲ್ಲಿ ಬಳಸುತ್ತಿದ್ದೇವೋ ಅದೇ ಅರ್ಥದಲ್ಲಿ ಸಂಗಂ ರಚನೆಗಳಲ್ಲೂ ಈ ಕ್ರಿಯಾ ರೂಪ ಬಳಕೆಯಾಗಿದೆ. ಆದರೆ ತಮಿಳಿನಲ್ಲಿ ಈಗ ಈ ರೂಪ ಇಲ್ಲ. ಅದಕ್ಕೆ ಬದಲಾಗಿ ಅದೇ ಅರ್ಥದ ಎರಂಗು ಎನ್ನುವ ಕ್ರಿಯಾ ರೂಪವಿದೆ. ಕನ್ನಡದಲ್ಲೂ ಎರಗು ರೂಪವಿದೆ; ಜೊತೆಗೆ ಹಳೆಯ ರೂಪವಾದ ಇಳಿ ಕೂಡ ಇದೆ. ಈ ಸಂಗತಿಯನ್ನು ಗಮನಿಸಿದರೂ

ಕನ್ನಡ ಆ ಹೊತ್ತಿಗಾಗಲೇ ಜನರ ಆಡುಮಾತಾಗಿತ್ತು ಎನ್ನಲು ಪುರಾವೆ ಒದಗುತ್ತದೆ.

ಸಂಗಂ ರಚನೆಗಳ ಈ ಪುರಾವೆಯನ್ನು ಒಪ್ಪಿಕೊಳ್ಳಲು ಒತ್ತಾಸೆಯಾಗಿ ನಿಲ್ಲುವ ಇನ್ನೊಂದು ವಿವರವನ್ನು ಈಚೆಗೆ ಡಾ. ಶೆಟ್ಟರ್ ಅವರು ಮುಂದಿಟ್ಟಿದ್ದಾರೆ. ಸಂಗಂ ರಚನೆ ಹಲವು ಕವಿಗಳ ಕ್ರಿಯಾಶೀಲತೆಯ ಫಲ. ಈ ಕವಿಗಳಲ್ಲಿ ಕೆಲವರಾದರೂ ಆಗ ತಮಿಳನ್ನು ಮಾತಾಡುತ್ತಿದ್ದ ಮತ್ತು ಬಹುಖ್ಯಾತರಾದ ತಮಿಳು ರಾಜರುಗಳಾದ ಮೂವೆಂದರ್(ಚೋಳ, ಪಾಂಡ್ಯ ಮತ್ತು ಚೇರ)ಅವರ ಆಳ್ವಿಕೆಯ ಪ್ರದೇಶಕ್ಕೆ ಸೇರದವರಿದ್ದಾರೆಂದು ಶೆಟ್ಟರ್ ಅವರು ಗುರುತಿಸಿದ್ದಾರೆ. ಇಪ್ಪತ್ತಕ್ಕೂ ಹೆಚ್ಚಿನ ಸಂಖ್ಯೆಯಲ್ಲಿರುವ ಇಂತಹ ಕವಿಗಳು ತಮಿಳಿನಲ್ಲಿ ಬರೆದರೂ ಅವರು ತಮಿಳು ಮಾತಾಡುವ ಪ್ರದೇಶದವರಾಗಿರಲಿಲ್ಲ. ಅವರ ಹೆಸರುಗಳನ್ನು ಗಮನಿಸಿದರೆ ಅವರೆಲ್ಲ, ತಮಿಳು ಪ್ರದೇಶದ ಉತ್ತರ ಮತ್ತು ವಾಯುವ್ಯ ಪ್ರದೇಶಗಳಿಂದ ಬಂದವರಾಗಿದ್ದರೆಂದು ತಿಳಿಯಬಹುದು. ಅಂದರೆ ಅವರಲ್ಲಿ ಕೆಲವರಾದರೂ ಕನ್ನಡ ಮಾತಾಡುತ್ತಿದ್ದರು ಮತ್ತು ಕನ್ನಡ ಮಾತಾಡುತ್ತಿದ್ದ ಪ್ರದೇಶಗಳಿಂದ ಹೋಗಿ ತಮಿಳು ರಾಜರ ಆಶ್ರಯದಲ್ಲಿ ಕವಿತೆಯನ್ನು ಬರೆದವರು. ಇದೂ ಕೂಡ ಸಂಗಂ ರಚನೆಗಳಲ್ಲಿ ಕನ್ನಡ ಪದಗಳು ಕಾಣಿಸಿಕೊಂಡಿರುವುದಕ್ಕೆ ಕಾರಣವಾಗಿರಬಹುದು. ಇವೆಲ್ಲವೂ ಕನ್ನಡ ಮಾತಾಡುತ್ತಿದ್ದ ಜನರ ಹಳಮೆಯನ್ನು ಗುರುತಿಸಲು ನಮಗೆ ನೆರವಾಗುವ ಪುರಾವೆಗಳಾಗಿವೆ.

**ಬರಹ ರೂಪಗಳು:**

ಸುಮಾರು ಕ್ರಿ.ಶ. 450 ರಲ್ಲಿ ಬರೆದಿರಬಹುದಾದ ಹಾಸನ ಜಿಲ್ಲೆಯ ಹಲ್ಮಿಡಿ (=ಹನ್ಮಿಡಿ)ಯಲ್ಲಿ ದೊರೆತ ಕಲ್ಬರಹವೇ ಕನ್ನಡ ರೂಪಿಸಿಕೊಂಡ ಲಿಪಿ ವ್ಯವಸ್ಥೆಯಲ್ಲಿ ದೊರೆತಿರುವ ಅತಿ ಪ್ರಾಚೀನ ದಾಖಲೆ ಎಂದು ಈಗ ತಿಳಿಯಲಾಗಿದೆ. ಈ ಕಲ್ಬರಹಕ್ಕೂ ಹಿಂದಿನ ಕಾಲಾವಧಿಗೆ ಸೇರಿದವು ಎಂದು ಗೋವಿಂದ ಪೈಗಳು ಕೆಲವು ಕಲ್ಬರಹಗಳನ್ನು ಗುರುತಿಸಿದ್ದರು. ಆದರೆ ಕನ್ನಡದ ವಿದ್ವಾಂಸರು ಅವರ ವಾದಗಳನ್ನು ಒಪ್ಪಲಿಲ್ಲ. ಹೀಗಿದ್ದರೂ ಗಂಗರಾಜರಾದ ಕೊಂಗುಣಿವರ್ಮ ಮತ್ತು ಹರಿವರ್ಮರ ಕಾಲಕ್ಕೆ ಸೇರಿದ ಎರಡು ಶಾಸನಗಳು ಹಲ್ಮಿಡಿಯ ಶಾಸನಕ್ಕೂ ಹಿಂದಿನವು ಎಂದು ಡಾ.ಶೆಟ್ಟರ್ ತಿಳಿಯುತ್ತಾರೆ. ಅವುಗಳಲ್ಲಿ ಒಂದು ಕ್ರಿಶ ನಾಲ್ಕನೆಯ ಶತಮಾನದ ಉತ್ತರಾರ್ಧಕ್ಕೆ(ಕ್ರಿ.ಶ 357) ಸೇರಿದ್ದಾದರೆ ಇನ್ನೊಂದು ಹಲ್ಮಿಡಿ ಶಾಸನಕ್ಕಿಂತ ಒಂದು ದಶಕದಷ್ಟಾದರೂ(ಕ್ರಿ.ಶ 444) ಹಿಂದಿನದು. ಈ ಎರಡೂ ಶಾಸನಗಳಲ್ಲಿ ಇಂದಿನ ತಲಕಾಡಿನ ಉಲ್ಲೇಖವಿದೆ.

ಶ್ರವಣ ಬೆಳಗೊಳದಲ್ಲಿ ದೊರೆತ ಮತ್ತು ಕ್ರಿ.ಶ. 5–6ನೆಯ ಶತಮಾನಕ್ಕೆ ಸೇರಿದ್ದು ಎಂದು ತಿಳಿಯಲಾಗಿದ್ದ ಶಾಸನವೊಂದನ್ನು ವಿವರವಾಗಿ ಅಧ್ಯಯನ ಮಾಡಿ ಅದರಲ್ಲಿರುವ ಪ್ರಾಕೃತಜನ್ಯ ಪದಗಳ ನೆರವಿನಿಂದ ಆ ಶಾಸನದ ಕಾಲವನ್ನು ಹಲ್ಮಿಡಿ ಶಾಸನಕ್ಕಿಂತಲೂ ಹಿಂದಕ್ಕೆ ಒಯ್ಯಬೇಕಾಗುತ್ತದೆಂದು ಡಾ. ಎಂ.ಜಿ.ಮಂಜುನಾಥ್ ಹೇಳುತ್ತಿದ್ದಾರೆ.

ಇದಲ್ಲದೆ ಚಿತ್ರದುರ್ಗದ ತಣ್ಣೀರು ಹೊಂಡದ ಬಳಿಯ ಶಿಲಾಭಿತ್ತಿಯೊಂದರಲ್ಲಿ ಕಾಣಸಿಗುವ ಅತಿ ಚಿಕ್ಕ ಬರಹವೊಂದು ಕ್ರಿಶ ಎರಡನೆಯ ಶತಮಾನಕ್ಕೆ ಸೇರಿದ್ದಾಗಿದ್ದು ಅದರಲ್ಲಿ ಇರುವ ಬರವಣಿಗೆಯನ್ನು 'ಮಯಮ' ಎಂದು ಓದಲಾಗಿದೆ. ಹೀಗೆ ಓದಿ ಇದು ವ್ಯಕ್ತಿಯೊಬ್ಬರ ಹೆಸರೆಂದೂ ಇದು ಕನ್ನಡದ ಪದವೆಂದೂ ಪ್ರೊ. ಲಕ್ಷ್ಮಣ ತೆಲಗಾವಿ, ಡಾ.ದೇವರ ಕೊಂಡಾರೆಡ್ಡಿ ಮೊದಲಾದ ವಿದ್ವಾಂಸರು ಹೇಳುತ್ತಿದ್ದಾರೆ. ಈ ಕಲ್ಬರಹ 1908ರ ವೇಳೆಗೆ ಗಮನಕ್ಕೆ ಬಂದಿತ್ತು. ಆದರೆ ಅದರ ಮೊದಲ ಮತ್ತು ಕೊನೆಯ ಅಕ್ಷರಗಳನ್ನು 'ಮ' ಬದಲು 'ದ' ಎಂದು ಓದಿಬಿಟ್ಟಿದ್ದರು. ಹೀಗಾಗಿ ಈ ಪದದ ಮಹತ್ವ ಗಮನಕ್ಕೆ ಬಂದಿರಲಿಲ್ಲ.('ಅಮ'ದಿಂದ ಕೊನೆಯಾಗುವ ವ್ಯಕ್ತಿನಾಮ ಸೂಚಕ ಪದಗಳು ಕನ್ನಡದಲ್ಲಿ ದೊರಕುತ್ತವೆ. ಇದು ಅಮ್ಮ ಎಂಬುದರ ಹಳೆಯ ರೂಪವಾಗಿದ್ದು ಒಂದು ಹಂತದಲ್ಲಿ ಗಂಡಸನ್ನು ಸೂಚಿಸುತ್ತಿತ್ತು)

# ಕನ್ನಡ ಭಾಷಾಶಾಸ್ತ್ರ ಮತ್ತು ಕರ್ನಾಟಕದ ಸಮಾಜ

1. ಕನ್ನಡ ಭಾಷಾಶಾಸ್ತ್ರ ಎಂಬುದೊಂದು ಇದೆಯೇ? ಹೆಚ್ಚಾಗಿ ಇದನ್ನು ಕನ್ನಡದಲ್ಲಿ ಬರೆಯಲಾದ ಭಾಷಾಶಾಸ್ತ್ರ ಎಂದೇ ತಿಳಿಯುತ್ತೇವೆ. ಇಂತಹ ಬರವಣಿಗೆ ಕನ್ನಡದಲ್ಲಿ ಸಾಕಷ್ಟಿದೆ. ಈ ಬರಹಗಳಲ್ಲಿ ಕನ್ನಡಕ್ಕೆ ಹೊಂದುವ ಉದಾಹರಣೆಗಳು ಇರುತ್ತವೆ. ಕನ್ನಡ ರಚನೆಯನ್ನು ಅರಿಯಲು ನೆರವು ನಿಡುವ ಮಾತುಗಳೂ ಇರಬಹುದು. ಆದರೆ ಈ ಬರಹಗಳನ್ನು ಕನ್ನಡ ಭಾಷಾಶಾಸ್ತ್ರ ಎಂದು ಕರೆಯುವುದು ಸರಿಯಲ್ಲ. ಕನ್ನಡ ಭಾಷೆಯ ರಚನೆ ಮತ್ತು ಬಳಕೆಗಳನ್ನು ವಿವರಿಸುವ ಬರವಣಿಗೆಯನ್ನು ನಾವು ಕನ್ನಡ ಭಾಷಾಶಾಸ್ತ್ರ ಎಂದು ಲೆಕ್ಕಕ್ಕೆ ಹಿಡಿಯುವುದಾದರೆ ಇಂತಹ ಬರವಣಿಗೆಗಳು ಕನ್ನಡದಲ್ಲಿ ಹೆಚ್ಚಿಲ್ಲ. ಕನ್ನಡ ಭಾಷಾಶಾಸ್ತ್ರವನ್ನು ತಿಳಿಸುವ ಬರಹಗಳು ಕನ್ನಡಕ್ಕಿಂತ ಇಂಗ್ಲಿಶಿನಲ್ಲಿ ಹೆಚ್ಚಿವೆ ಎನ್ನುವುದನ್ನು ಗಮನಿಸಬೇಕು. ಕನ್ನಡದ ಚಹರೆಗಳನ್ನು ತಿಳಿಸುವ, ಭಾಷಾಶಾಸ್ತ್ರೀಯ ನೆಲೆಯಲ್ಲಿ ನಿಲ್ಲುವ ಬರವಣಿಗೆಗಳು ಕನ್ನಡದಲ್ಲಿ ದೊರಕುವುದು ಕಡಿಮೆ.

2. ಭಾಷಾಶಾಸ್ತ್ರದ ಒಂದು ಕೊಂಬೆಯಾಗಿ ಸಾಮಾಜಿಕ ಭಾಷಾಶಾಸ್ತ್ರ ಎಂಬುದು ಬೆಳೆದು ಬಂದಿದೆ. ಕನ್ನಡ ಭಾಷಾಶಾಸ್ತ್ರಕ್ಕೂ ಕನ್ನಡ ಸಮಾಜಕ್ಕೂ ಇರುವ ನಂಟನ್ನು ಕುರಿತು ತಿಳಿಸುವ ಬರವಣಿಗೆಗಳೂ ಕೂಡ ಕನ್ನಡದಲ್ಲಿ ಬಂದಿರುವುದು ಕಡಿಮೆ. ಇಲ್ಲವೇ ಇಲ್ಲವೆಂದಲ್ಲ. ಇರುವ ಬರಹಗಳೂ ನಮ್ಮ ಕಲಿಕೆಯ ಚೌಕಟ್ಟಿನಿಂದ ಹೊರಗೆ ಉಳಿದಿವೆ. ಯಾವುದೇ ತಿಳುವಳಿಕೆ ಕಲಿಕೆಯ ಚೌಕಟ್ಟಿನಿಂದ ಒಳಗೆ ಸೇರಿಕೊಳ್ಳದಿದ್ದರೆ ಅದು ಕೆಲಸಕ್ಕೆ ಬರುವುದಿಲ್ಲ. ಕನ್ನಡದಮಟ್ಟಿಗೆ ಹೇಳುವುದಾದದರೆ ಕನ್ನಡ ನುಡಿಯ ರಚನೆಯ ಮತ್ತು ಬಳಕೆಗಳ ಬಗೆಗೆ ದೊರೆತಿರುವ ತಿಳುವಳಿಕೆಯನ್ನು ಬಳಸಿಕೊಳ್ಳಲು ಸಾಮಾಜಿಕ ಸಂಸ್ಥೆಗಳು ಸಿದ್ಧವಿಲ್ಲ.

3. ನುಡಿಗೆ ಮೂರು ನೆಲೆಗಳು ಅ) ಪ್ರತಿಯೊಬ್ಬರಲ್ಲೂ ಅದು ಒಂದು ಕೌಶಲವಾಗಿ ನೆಲೆಯಾಗಿರುತ್ತದೆ. ಆ) ಆ ನುಡಿಯ ಸಮುದಾಯದ ನೆಲೆಯಲ್ಲಿ ಅದು ಎಲ್ಲರಿಗೂ ಸೇರಿದುದಾಗಿರುತ್ತದೆ. ಇ) ಎಷ್ಟೋ ತಲೆಮೊರೆಗಳಿಂದ ಬಳಸಿಕೊಂಡು ಬಂದಿರುವುದರಿಂದ ಅದಕ್ಕೊಂದು ಪಾರಂಪರಿಕ ನೆಲೆಯಿರುತ್ತದೆ. ಈಗ ನಮಗೆ ನುಡಿಯ ಎರಡನೆಯ ನೆಲೆ ಚರ್ಚೆಗೆ ಬೇಕಾಗಿದೆ. ಕನ್ನಡ ನುಡಿಯನ್ನಾಡುವ

ಸಮುದಾಯದ ಹಲವು ಸಮಾನ ಚಹರೆಗಳಲ್ಲಿ ಅದು ಬಳಸುವ ಕನ್ನಡ ನುಡಿಯೂ ಒಂದಾಗಿದೆ. ಈ ಚಹರೆಯನ್ನು ಅದು ಹೇಗೆ ನಿರ್ವಹಿಸಬೇಕೆಂಬುದು ಸಾಮಾಜಿಕ ನೆಲೆಯಲ್ಲಿಯೇ ತೀರ್ಮಾನವಾಗಬೇಕು.

4. ನಾವು ಈಗ ಸಂವಿಧಾನಬದ್ಧವಾಗಿ ಪ್ರಜಾಪ್ರಭುತ್ವವನ್ನು ನಮ್ಮ ಆಡಳಿತದ ತಳಹದಿಯನ್ನಾಗಿ ಆಯ್ದುಕೊಂಡಿದ್ದೇವೆ. ಅದರಿಂದಾಗಿ ನುಡಿಗೆ ಸಂಬಂಧಿಸಿದ ಯಾವ ನಿರ್ಣಯವಾದರೂ ಒಟ್ಟು ಸಮುದಾಯವನ್ನು ಪರಿಗಣನೆಗೆ ತೆಗೆದುಕೊಳ್ಳಲೇಬೇಕು. ಈ ನಿಟ್ಟಿನಲ್ಲಿ ನುಡಿಸಮುದಾಯಗಳಿಗೆ ಒಂದು ಭಾಷಾನೀತಿಯೂ ಅದನ್ನು ಅನುಸರಿಸಿದ ಭಾಷಾಯೋಜನೆಯೂ ಇರಬೇಕಾಗುತ್ತದೆ. ಕನ್ನಡ ಸಮುದಾಯವೆಂಬುದು ಕರ್ನಾಟಕವೆಂಬ ಆಡಳಿತ ವಲಯದಲ್ಲಿ ಸೇರಿಹೋಗಿರುವ ಮತ್ತು ಬೇರೆ ಆಡಳಿತ ವಲಯಗಳಲ್ಲೂ ಹಂಚಿಹೋಗಿರುವ ಸಮುದಾಯವಾಗಿದೆ. ಕರ್ನಾಟಕದ ಭಾಷಾನೀತಿ ಮತ್ತು ಭಾಷಾ ಯೋಜನೆಗಳು ಕರ್ನಾಟಕವೆಂಬ ಆಡಳಿತ ವಲಯದಲ್ಲಿರುವ ಎಲ್ಲ ನುಡಿಗಳ ನಡುವಣ ನಂಟನ್ನು ಗಮನದಲ್ಲಿಟ್ಟುಕೊಳ್ಳುತ್ತಲೇ ಹೊರಗೆ ಬೇರೆ ಆಡಳಿತ ವಲಯಗಳಲ್ಲಿ ಹರಡಿಹೋಗಿರುವ ಕನ್ನಡ ನುಡಿಸಮುದಾಯಗಳ ಹಿತವನ್ನೂ ಕಾಯ್ದುಕೊಳ್ಳಬೇಕಾಗುತ್ತದೆ.

5. ಕರ್ನಾಟಕದಲ್ಲಿರುವ ಭಾಷೆಗಳ ಮತ್ತು ಭಾಷಿಕರ ನಡುವಣ ಸಂಬಂದಗಳನ್ನು ಕುರಿತಂತೆ ನೀತಿಯೊಂದನ್ನು ರೂಪಿಸುವುದು ಒಂದು ಹೆಜ್ಜೆ. ಇಲ್ಲಿ ಸಂವಿಧಾನ ನೀಡುವ ಸೂಚನೆಗಳನ್ನು ಗಮನದಲ್ಲಿರಿಸಿಕೊಂಡೇ ಮುಂದುವರೆಯಬೇಕಾಗುತ್ತದೆ. ಭಾಷಿಕರು ಕಡಿಮೆ ಇದ್ದಾಗ ಅವರಿಗೆ ಸಂವಿಧಾನ ನೀಡಿರುವ ಹಕ್ಕುಗಳನ್ನು ಕಾಯ್ದುಕೊಳ್ಳುವುದು ಸರಕಾರದ ಹೊಣೆಯಾಗಿರುತ್ತದೆ. ಈ ನೆಲೆಯಲ್ಲಿ ಭಾಷಾ ನೀತಿ ಇಕ್ಕಟ್ಟನ್ನು ಎದುರಿಸುತ್ತಿದೆ. ಕನ್ನಡನುಡಿಯನ್ನು ನೆಲೆಗೊಳಿಸಲು ಮುಂದಾಗುವುದೋ ಇಲ್ಲವೇ ಎಲ್ಲ ನುಡಿಗಳ ಹಿತವನ್ನು ಕಾಯ್ದುಕೊಳ್ಳುವುದೋ ಎಂಬ ಎರಡೂ ಪ್ರಶ್ನೆಗಳು ಒಂದೇ ಅಲ್ಲ. ಅವು ಬೇರೆ ಬೇರೆ ಉತ್ತರಗಳನ್ನು ಬಯಸುತ್ತಿವೆ. ಇದು ಮುಖ್ಯವಾಗಿ ಕಲಿಕೆ ವಲಯದಲ್ಲಿ ಸಮಸ್ಯೆಗಳನ್ನು ಹುಟ್ಟಿಹಾಕಿದೆ. ಯಾವ ನುಡಿಯನ್ನು ಕಲಿಯಬೇಕು ಮತ್ತು ಯಾವ ನುಡಿಯ ಮೂಲಕ ಕಲಿಯಬೇಕು ಎಂಬ ಎರಡು ಪ್ರಶ್ನೆಗಳು ಕಗ್ಗಂಟಾಗಿ ಕುಳಿತಿವೆ.

6. ಕನ್ನಡ ನುಡಿಯಲ್ಲಿರುವ ಒಳನುಡಿಗಳ ನಂಟನ್ನು ಹೇಗೆ ಕಾಯ್ದುಕೊಳ್ಳ ಬೇಕು ಎನ್ನುವುದು ಇನ್ನೊಂದು ಸಮಸ್ಯೆ. ಕನ್ನಡ ಭಾಷಾಶಾಸ್ತ್ರ ಒಳನುಡಿಗಳನ್ನು ವಿವರಿಸುವ ಕೆಲಸವನ್ನು ಮಾಡಿದೆಯೇ ಹೊರತು ಅವುಗಳ ನಡುವಣ ನಂಟಿನ ಸ್ವರೂಪವನ್ನು ತಿಳಿಸಿಕೊಡುವ ಹೊಣೆಯನ್ನು ಹೊತ್ತಿಲ್ಲ. ಒಳನುಡಿಗಳ ಚಹರೆಗಳನ್ನು

ಉಳಿಸಿಕೊಳ್ಳಬೇಕೋ ಇಲ್ಲವೇ ಅಳಿಸ ಹಾಕಬೇಕೋ ಎಂಬುದು ಪ್ರಶ್ನೆ. ನಮ್ಮ ಕಲಿಕೆಯ ನೆಲೆಗಳು ಒಳನುಡಿಗಳನ್ನು ಅಳಿಸಿಹಾಕುವ ಕಡೆಗೆ ಚಲಿಸುತ್ತಿವೆ. ಇದು ಪ್ರಮಾಣೀಕರಣವೆಂಬ ಪ್ರಕ್ರಿಯೆಯ ಚೌಕಟ್ಟಿನಲ್ಲಿ ಆಗಬೇಕಾದ್ದೇ ಎಂದು ತಿಳಿಯುವವರೂ ಇದ್ದಾರೆ. ಆದರೆ ಇದು ಒಳನುಡಿಗಳನ್ನು ಆಡುವವರ ಸಾಮಾಜಿಕ ಚಹರೆಗಳ ನಡುವೆ ಎಂತಹ ತಿಕ್ಕಾಟಗಳನ್ನು ಹುಟ್ಟುಹಾಕಿದೆ ಎಂಬುದನ್ನು ತಿಳಿಯಬೇಕಾಗಿದೆ.

7. ಕನ್ನಡ ನುಡಿಯ ಬೆಳವಣಿಗೆಯ ಬಗೆಗೆ ರೂಪಿಸುವ ಯೋಜನೆಗಳನ್ನು ಹೇಗೆ ಮತ್ತು ಯಾವ ನೀತಿಯ ತಳಹದಿಯ ಮೇಲೆ ಕಟ್ಟಬೇಕು ಎನ್ನುವುದು ಮೊದಲ ಪ್ರಶ್ನೆ. ಬಳಿಕ ಆ ಯೋಜನೆಗಳನ್ನು ಕಾರ್ಯರೂಪಕ್ಕೆ ತರುವವರು ಯಾರು ಮತ್ತು ಜಾರಿಗೊಳಿಸುವ ಬಗೆಗಳು ಯಾವುವು ಎಂಬುದನ್ನು ತಿಳಿಸುಕೊಳ್ಳುವುದು ಎರಡನೆಯ ಹೆಜ್ಜೆ. ಮುಂದೆ ಜಾರಿಗೊಂಡ ಯೋಜನೆಗಳು ಗುರಿಯನ್ನು ಮುಟ್ಟಿವೆಯೇ , ಬೇಕೆನಿಸಿದ ಪರಿಣಾಮಗಳನ್ನು ತಂದಿವೆಯೇ ,ಹಾಗೆ ಆಗದಿದ್ದರೆ ಅದಕ್ಕೆ ಕಾರಣಗಳು ಎಲ್ಲಿವೆ ಎಂಬುದನ್ನು ಗೊತ್ತು ಮಾಡಿಕೊಳ್ಳುವುದು ಮೂರನೆಯ ಹೆಜ್ಜೆ. ಈ ಮೂರೂ ಹೆಜ್ಜೆಗಳನ್ನು ಕನ್ನಡದ ಮಟ್ಟಿಗೆ ನಾವು ಎಚ್ಚರವಾಗಿ ಇರಿಸಿಯೇ ಇಲ್ಲವೆಂದು ಹೇಳಬೇಕಾಗಿದೆ. ಆದರೆ ಏನೆಲ್ಲ ಸಂಗತಿಗಳು ನಡೆದು ಹೋಗಿವೆ ಇವೆಲ್ಲವನ್ನೂ ಈ ಮೂರು ವಲಯಗಳಲ್ಲಿ ಇರಿಸಿ ನೋಡುವುದರಿಂದ ತಂತಾನೆ ಏನೆಲ್ಲ ಆಗಿಹೋಗಿದೆ ಎಂಬುದನ್ನು ತಿಳಿದುಕೊಳ್ಳಬೇಕಾಗಿದೆ.

8. ಆಡಳಿತದಲ್ಲಿ ಕನ್ನಡದ ಬಳಕೆ ಎಂಬುದು ಎಲ್ಲರಿಗೂ ಬೇಕಾದ ಆಟದ ಚೆಂಡು. ಆಡಳಿತ ಎಂದರೇನು, ಅದು ಜನರಿಗೆ ಉತ್ತರದಾಯಿತ್ವವನ್ನು ಹೊಂದಿದೆಯೇ ಎಂಬುದನ್ನು ತಿಳಿದುಕೊಳ್ಳುವವರೆಗೆ ಆಡಳಿತದಲ್ಲಿ ಕನ್ನಡವೆಂಬುದು ಚಹರೆ ಇಲ್ಲದ ಮಾತು. ಸರಕಾರದ ದಾಖಲೆಗಳು ಕನ್ನಡ ನುಡಿಯಲ್ಲಿ ಇವೆ ಎಂದ ಮಾತ್ರಕ್ಕೆ ಎಲ್ಲವೂ ಕನ್ನಡ ಮತ್ತು ಕನ್ನಡ ನುಡಿಯುವವರ ಪರವಾಗಿ ಇರುತ್ತದೆ ಎಂದು ಹೇಳಬರುವುದಿಲ್ಲ.

9. ಕನ್ನಡ, ಇಂಗ್ಲಿಶ್ ಮತ್ತು ಸಂಸ್ಕೃತಗಳ ನಡುವೆ ಇರುವ ಮತ್ತು ಇರಬೇಕಾದ ನಂಟನ್ನು ಕುರಿತು ನಾವು ಇನ್ನೂ ಚರ್ಚಿಸುತ್ತಿಲ್ಲ. ಚರ್ಚಿಸಿದರೂ ಕನ್ನಡ ಎಲ್ಲ ಪ್ರಭಾವಗಳನ್ನು ಅರಗಿಸಿಕೊಂಡು ಬೆಳೆಯಬಲ್ಲುದು ಎಂಬ ನಂಬಿಕೆಯಲ್ಲಿ ಮುನ್ನುಗ್ಗುತ್ತಿದ್ದೇವೆ. ಇದರಿಂದ ಕನ್ನಡ ಒಂದು ಅಚ್ಚ ಅನುವಾದದ ನುಡಿಯಾಗಿ ನೆಲೆಗೊಳ್ಳುತ್ತಿದೆ ಎನ್ನುವುದನ್ನು ಮರೆಯುತ್ತಿದ್ದೇವೆ. ಕನ್ನಡ ಲೋಕದೃಷ್ಟಿ ಎನ್ನುವುದೊಂದಿದ್ದರೆ ಅದು ಕನ್ನಡ ನುಡಿಯ ಮೂಲಕವೇ ಕಾಣುವಂತಾಗಬೇಕು. ಆದರೆ ನಮ್ಮ ಇಂದಿನ ನುಡಿಗಟ್ಟುಗಳು ಇಂಗ್ಲಿಶ್ ಲೋಕದೃಷ್ಟಿಯನ್ನು ಸಂಸ್ಕೃತದ ಪದಗಳ ಮೂಲಕ ಮಂಡಿಸುವ ಹಾದಿಯನ್ನು ಹಿಡಿದಿವೆ. ಇದು ಕನ್ನಡದ ಜೀವಸೆಲೆಯನ್ನು ಬತ್ತಿಸಿದೆಯೇ ಎಂಬುದನ್ನು ನಾವೀಗ ಕಂಡುಕೊಳ್ಳಬೇಕಿದೆ.

10. ಇದಲ್ಲದೆ ತಂತ್ರಜ್ಞಾನದ ದಾಪುಗಾಲಿಗೆ ಕನ್ನಡ ಸರಿಹೆಜ್ಜೆಯನ್ನು ಇಡುವುದು ಆಗುತ್ತಿದೆಯೇ ಎಂಬುದನ್ನೂ ಗಮನಿಸಬೇಕಿದೆ. ತಂತ್ರಜ್ಞಾನ ಬಲ್ಲವರು ಕನ್ನಡ ನುಡಿಯ ಒಳ ಕಟ್ಟೋಣವನ್ನು ಬಲ್ಲವರು ಮತ್ತು ಕನ್ನಡವನ್ನು ನಿತ್ಯವೂ ಬಳಸುವವರು ಇವರನ್ನು ಪರಿಗಣನೆಗೆ ತೆಗೆದುಕೊಳ್ಳುತ್ತಿಲ್ಲ. ಸರಕಾರ ಮತ್ತು ಇತರ ಸಾಮುದಾಯಿಕ ಮತ್ತು ಸಾಂವಿಧಾನಿಕ ಹೊಣೆಯ ಸಂಸ್ಥೆಗಳು ಕನ್ನಡ ಮತ್ತು ತಂತ್ರಜ್ಞಾನದ ಸಂಬಂಧವನ್ನು ನಿರ್ವಹಿಸುತ್ತಿರುವ ಹಿಂದಿರುವ ಹೊಣೆಗೇಡಿತನವನ್ನು ನಾವಿನ್ನೂ ಸರಿಯಾಗಿ ಗ್ರಹಿಸಿಲ್ಲ.

# ಹೊಸಕಾಲಕ್ಕೆ ಕನ್ನಡ

ಸುಮಾರು ಇಪ್ಪತ್ತೈದು ವರುಷಗಳ ಹಿಂದೆ ಉದಯವಾಣಿಯ ದೀವಳಿಗೆಯ ಹೆಚ್ಚಿನ ಹೊತ್ತಿಗೆಗಾಗಿ ಕನ್ನಡದ ಹಿರಿಯ ಬರಹಗಾರ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರನ್ನು ಕಂಡು ಮಾತಾಡಿಸಲು ಹೋಗಿದ್ದೆ. ಆ ಮಾತುಕತೆಗಳು ಆ ಹೊತ್ತಗೆಯಲ್ಲಿ ಆ ವರುಷ ಅಚ್ಚಾಗಿವೆ. ಆ ಮಾತಿನ ನಡುವೆ ಒಮ್ಮೆ ನಾನು ಮಾಸ್ತಿಯವರನ್ನು ಅವರು ಜೀವನ ಪತ್ರಿಕೆಯಲ್ಲಿ ಬರೆಯುತ್ತಿದ್ದ ಸಂಪಾದಕೀಯ ಬರವಣಿಗೆಯಲ್ಲಿ ಒಂದು ಬಗೆಯ ಉದಾರವಾದಿ ಮನೋಭಾವ ಇರುವುದಲ್ಲವೇ ಎಂದು ಕೇಳಿದೆ. ತಟ್ಟನೆ ಅವರು ಉದಾರವಾದಿ ಅಂದರೆ ಏನು ಎಂದು ಕೇಳಿದರು. ಯಾವ ಹಿಂಜರಿಕೆಯೂ ಇಲ್ಲದೆ ನಾನು ಲಿಬರಲ್ ಎಂದು ಉಲಿದೆ. ಅದಕ್ಕೆ ಮೊದಲು ಅವರನ್ನು ತಮಿಳು ಮನೆಮಾತಾಗಿರುವವರೆಂದು ಕರೆದು ಕೊಂಚ ಕೆರಳಿಸಿದ್ದೆ. ಅವರು ಹೇಳಿದರು: ' ಇಂಗ್ಲಿಶ್ ಪದ ಲಿಬರಲ್ ಅನ್ನೋದು ಯಾಕೆ ಬಂತು? ಅದನ್ನೇ ನಾನು ಕೇಳತೇನೆ. ಅದು ನಮ್ಮ ಪದ ಅಲ್ಲವಲ್ಲ. ಮನೆಮಾತು ಕನ್ನಡ ಆದವರು ಕನ್ನಡದಲ್ಲಿ ಹೇಳೋಕೆ ಸಾಧ್ಯ ಆಗಬೇಕಿತ್ತು. ಹೇಳಿ. ಯಾಕೆ ಆಗೋಲ್ಲ ?' ನಾನು 'ಈ ಮಾತುಗಳ ಬಳಕೆಯೆಲ್ಲ ಈಗ ರೂಢಿಯಾಗಿ ಬಿಟ್ಟಿದೆಯಲ್ಲವೇ?' ಎಂದೆ. ಅವರೆಂದರು' 'ತುಂಬಾ ತಪ್ಪು. ನಮ್ಮ ಅನುಭವ ಅಲ್ಲ ಅದು. ಅದನ್ನು ಹೊರಗಿನಿಂದ ತಕ್ಕೊಂಡು ಪ್ರತಿ ಮಾಡತಾ ಇದೇವೆ. ನಮ್ಮ ಮಾತು ಅನುಕರಣ ಆಗಿ ಬಿಟ್ಟಿದೆ. ಹೊರಗಿನ ಮಾತನ್ನ ಪ್ರತಿ ಮಾಡತಾ ಇದೇವೆ. ಒಳಗೆ ಅಲ್ಲ. ಮುಖವಾಡ ಮಾಡಿಕೊಂಡುಬಿಟ್ಟಿದೇವೆ ಶಬ್ದಗಳನ್ನ.' ನಮ್ಮ ಅನುಭವವನ್ನು ನಮ್ಮ ಮಾತಿನಲ್ಲಿ ಹೇಳಲು ಆಗಬೇಕು ಅನ್ನುವ ಅವರ ಮಾತಿನ ಹಿಂದಿನ ಕಳಕಳಿ ಆಗ ನನ್ನನ್ನು ಅಷ್ಟು ಕಾಡಿಸಿರಲಿಲ್ಲ. ಆದರೆ ಈಗ ಹಾಗಲ್ಲ. ಅದರಲ್ಲೂ ಶಬ್ದಗಳನ್ನು ಮುಖವಾಡ ಮಾಡಿಕೊಂಡು ಬಿಟ್ಟಿದೇವೆ ಎನ್ನುವ ಅವರ ಮಾತಿನ ಹರಹು ಎಷ್ಟು ದೊಡ್ಡದಾಗಿದೆ ಎಂಬುದರ ಅರಿವು ಆಗ ನನಗೆ ಇರಲಿಲ್ಲ. ಈಗ ಇಂಗ್ಲಿಶ್ ಇಲ್ಲವೇ ಸಂಸ್ಕೃತದ ಮುಖವಾಡದೊಳಗೆ ಹುದುಗಿ ಹೋಗಿರುವ ಕನ್ನಡದ ಮುಖವನ್ನು ಹೇಗೆ ಹೊರಗೆಳೆಯಬೇಕೆಂಬುದೇ ನಮ್ಮ ಮುಖ್ಯ ಸಮಸ್ಯೆಯಾಗಿದೆ.

ಕನ್ನಡವನ್ನು ಹೊಸ ಕಾಲಕ್ಕೆ ಸಜ್ಜುಗೊಳಿಸುವುದು ಹೇಗೆ? ಈ ನಿಟ್ಟಿನಲ್ಲಿ ಏನು ಹೇಳಲು ಹೊರಟರೂ ಮೇಲೆ ಹೇಳಿದ ಮಾಸ್ತಿಯವರ ಮಾತಿನಿಂದಲೇ ಮೊದಲು ಮಾಡಬೇಕಾಗುತ್ತದೆ. ಹೊಸ ಕಾಲಕ್ಕೆ ಕನ್ನಡ ಸಜ್ಜಾಗಲು ಹಲವು ಅಡ್ಡಿ ಆತಂಕಗಳಿವೆ. ಅವುಗಳಲ್ಲಿ ಇಂಗ್ಲಿಶ್ ಮತ್ತು ಕನ್ನಡಗಳ ಯಜಮಾನಿಕೆಯ ನೆರಳಿನಲ್ಲಿ ಕನ್ನಡಕ್ಕೆ

ಯಾವ ಅಪಾಯವೂ ಇಲ್ಲವೆಂದು ತಿಳಿದಿರುವ ಅವಸ್ಥೆಯಿಂದ ಹೊರಬಂದು ದಿಟವಾಗಿ ಕನ್ನಡ ನಿರಾಳವಾಗಿ ಉಸಿರಾಡುವಂತೆ ಮಾಡಲು ಆಗಬೇಕಿದೆ. ಈ ಮಾತನ್ನು ಕನ್ನಡದಲ್ಲಿ ಬಳಕೆಯಾಗುತ್ತಿರುವ ಸಂಸ್ಕೃತ ಮತ್ತು ಇಂಗ್ಲಿಶ್ ಪದಗಳನ್ನು ಗಮನಿಸಿ ಹೇಳುತ್ತಿಲ್ಲ. ಅದಕ್ಕಿಂತ ಹೆಚ್ಚಾಗಿ ಕನ್ನಡದಲ್ಲಿ ಯೋಚಿಸಬೇಕಿಲ್ಲವೆಂಬಂತೆ ಎರವಲು ಉಡುಪು ತೊಟ್ಟು ಮೆರೆಯುತ್ತಿರುವ ಬಗೆಯನ್ನು ಗಮನಿಸಿ ಹೇಳುವ ಮಾತಿದು. ಈ ಬಗೆಗೆ ಇನ್ನಷ್ಟು ಮುಂದೆ ಹೇಳಲಿಕ್ಕಿದೆ.

ಕನ್ನಡವನ್ನು ಹೊಸಕಾಲಕ್ಕೆ ಸಜ್ಜುಗೊಳಿಸುವ ಕೆಲಸಕ್ಕೆ ಎರಡು ನೆಲೆಗಳಿವೆ. ಒಂದು: ಕನ್ನಡ ನುಡಿಗೆ ಬೇಕಾಗಿರುವ ಕಸುವನ್ನು ತಂದುಕೊಡುವುದು. ಎರಡು: ಹಾಗೆ ಕಸುವು ಪಡೆದ ಕನ್ನಡದ ಬಳಕೆಗೆ ಅನುವಾಗುವ ಅವಕಾಶಗಳನ್ನು ನಮ್ಮ ಸುತ್ತಮುತ್ತಣ ಪರಿಸರದಲ್ಲಿ ಕಟ್ಟಿಕೊಡುವುದು. ಇವೆರಡೂ ಒಟ್ಟಿಗೆ ಆಗಬೇಕಾದ ಕೆಲಸಗಳು. ಈ ಎರಡರಲ್ಲಿ ಯಾವುದೊಂದು ತಳುವಿದರೂ ಇನ್ನೊಂದರಿಂದ ಏನೂ ಮಾಡಲಾಗುವುದಿಲ್ಲ. ಕಸುವು ಮತ್ತು ಅವಕಾಶಗಳು ಒಟ್ಟೊಟ್ಟಿಗೆ ಒದಗಿಬರಬೇಕಿದೆ. ಕನ್ನಡದ ಬಳಕೆಗೆ ಅವಕಾಶಗಳನ್ನು ಕಟ್ಟಿಕೊಡಲು ನಡೆಸುತ್ತಿರುವ ಪ್ರಯತ್ನಗಳು ಹೆಚ್ಚಾಗಿವೆ. ಅಂತಹ ಅವಕಾಶಗಳು ದೊರಕಿದಾಗ ಕನ್ನಡ ಬಳಸಲು ತಕ್ಕಂತಿರಬೇಕು. ಹಾಗೆಯೇ ಕಸುವು ತುಂಬಿಕೊಂಡ ನುಡಿಗೆ ಬಳಸಲು ಅವಕಾಶಗಳಿಲ್ಲದಿದ್ದರೆ ಆಗಲೂ ಆ ನುಡಿ ಸೊರಗುತ್ತದೆ. ಉದಾಹರಣೆಗೆ ಕನ್ನಡದಲ್ಲಿ ಬೇರೆಬೇರೆ ತಿಳಿವಿನ ವಲಯಗಳ ಓದು ಸಾಮಗ್ರಿ ಇಲ್ಲ. ಅದಕ್ಕಾಗಿ ನೂರಾರು ಹೊತ್ತಗೆಗಳನ್ನು ಬರೆಸಿ ಇನ್ನೊಂದು ನುಡಿಯಿಂದ ಮಾರ್ಪುಗೊಳಿಸಿ ಅಚ್ಚು ಮಾಡಿಸುತ್ತೇವೆ ಎಂದುಕೊಳ್ಳೋಣ. ಆದರೆ ಆ ಹೊತ್ತಗೆಗಳನ್ನು ಬಳಸಲು ಅವಕಾಶಗಳೇ ಒದಗಿ ಬಾರದಿದ್ದರೆ ಹೇಗಾಗುತ್ತದೆ? ಈಗ ಚಾಲ್ತಿಯಲ್ಲಿರುವ ಕಲಿಕೆಯ ಬಗೆಯಲ್ಲಿ ಕಲಿಯುವ ಎಲ್ಲರೂ ಒಂದಲ್ಲ ಒಂದು ಹಂತದಲ್ಲಿ ಇಂಗ್ಲಿಶ್ ನುಡಿಯ ಮೂಲಕವೇ ಕಲಿಯಬೇಕಾದ ಒತ್ತಡಕ್ಕೆ ಒಳಗಾಗಿದ್ದಾರೆ. ಹೀಗಿರುವ ಕನ್ನಡದಲ್ಲಿ ಬೇರೆಬೇರೆ ತಿಳಿವಿನ ವಲಯದ ಹೊತ್ತಗೆಗಳನ್ನು ಅಣಿಗೊಳಿಸಿ ಅಚ್ಚು ಮಾಡಿಸಿಟ್ಟರೂ ಅವು ಬಳಕೆಯಾಗಲಾರವು. ಇದಕ್ಕೆ ತಿರುವುಮುರುವಾದ ಇನ್ನೊಂದು ಬಗೆಯನ್ನು ನೋಡೋಣ. ಕನ್ನಡವನ್ನು ಬಳಸಲು ಕಂಪ್ಯೂಟರ್ ತಂತ್ರಜ್ಞಾನವು ಈಗ ಅವಕಾಶವನ್ನು ಹುಟ್ಟುಹಾಕಿದೆ. ಆದರೆ ಅಲ್ಲಿ ಕನ್ನಡವನ್ನು ಬಳಸಲು ಬೇಕಾದ ಕಸುವನ್ನು ಆ ನುಡಿಗೆ ತಂದುಕೊಡಲು ನಮಗೆ ಆಗಿಲ್ಲ. ಅಂದರೆ ಅವಕಾಶಗಳಿದ್ದರೂ ಅದನ್ನು ಬಳಸಿಕೊಳ್ಳಲು ಆಗುತ್ತಿಲ್ಲ. ಒಟ್ಟಾರೆ ಕನ್ನಡ ನುಡಿಯನ್ನು ಸಜ್ಜುಗೊಳಿಸುವುದು ಮತ್ತು ಕನ್ನಡ ನುಡಿಯ ಬಳಕೆಗೆ ತಕ್ಕಂತೆ ಪರಿಸರವನ್ನು ಸಜ್ಜುಗೊಳಿಸುವುದು ಈ ಎರಡೂ ಕೆಲಸಗಳು ಜೊತೆಜೊತೆಯಾಗಿಯೇ ಆಗಬೇಕಿದೆ.

ನುಡಿಯನ್ನು ಸಜ್ಜುಗೊಳಿಸುವ ಕೆಲಸದಲ್ಲಿ ಹಲವು ಹಂತಗಳಿವೆ; ಹಲವು ಮಾದರಿಗಳಿವೆ. ನಾವು ಇದನ್ನು ಮೊದಲು ಗುರುತು ಮಾಡಿಕೊಳ್ಳಬೇಕು. ಯಾವ ಮಾದರಿಯನ್ನು ಬಳಸಿಕೊಂಡರೆ ನಮಗೆ ಬೇಕಾದ ಬಗೆಯಲ್ಲಿ ಕನ್ನಡದ ಬಳಕೆ ಮಾಡಲು ಆಗುತ್ತದೆ ಎಂಬುದು ಗೊತ್ತಿರಬೇಕು. ಕೆಲವು ಮಾದರಿಗಳು ಹಳೆಗಾಲದವು.

ಅವುಗಳು ಒಂದು ಕಾಲಕ್ಕೆ ಮೆಚ್ಚುವಂತೆ ಇದ್ದವಾದರೂ ಹೊಸಕಾಲದ ಸವಾಲುಗಳನ್ನು ಅವು ಎದುರಿಸಲಾರವು. ಇದಕ್ಕೊಂದು ಉದಾಹರಣೆ ನೋಡೋಣ. ಕನ್ನಡ ಪದಕೋಶವನ್ನು ರಚಿಸುವ ಮಾದರಿ ನಮಗೆ ಸಂಸ್ಕೃತದಿಂದ ದೊರೆತಿರುವ ಹಾಗೆ ಇಂಗ್ಲಿಶಿನಿಂದಲೂ ದೊರೆತಿದೆ. ಕಳೆದ ಶತಮಾನದಲ್ಲಿ ನಮ್ಮ ನುಡಿಯರಿಗರು ಇಂಗ್ಲಿಶ್ ಮಾದರಿಯ ಪದಕೋಶವೊಂದನ್ನು ಕನ್ನಡ ನುಡಿಗಾಗಿ ರಚಿಸಲು ತೊಡಗಿಕೊಂಡರು. ಸುಮಾರು ಐವತ್ತು ವರುಷಗಳ ಕಾಲ ಕಷ್ಟಪಟ್ಟು ಒಂದು ಪದಕೋಶವನ್ನು ರಚಿಸಿದರು. ಆದರೆ ಅದೀಗ ಪದಕೋಶದ ಬಳಕೆ ದಿನದಿನವೂ ಬೇಕಾಗಿರುವವರ ನೆರವಿಗೆ ಬರುತ್ತಿಲ್ಲ. ಹಾಗಾಗಲು ಆ ಪದಕೋಶದಲ್ಲಿರುವ ಕೊರತೆಗಳು ಕಾರಣವೆಂದು ನಾನು ಹೇಳುತ್ತಿಲ್ಲ. ಬದಲಾಗಿ ಪದಕೋಶವೊಂದನ್ನು ಬಳಸುವವರು ಈಗ 'ತಟಕ್ಕನೆ' ಅದನ್ನು 'ನೋಡುವ' ಹಾಗಿರಬೇಕೆಂದು ಬಯಸುತ್ತಾರೆ. ಎಲ್ಲಿಗೋ ಹೋಗಿ ಸಾವಿರಾರು ಪುಟಗಳ ನಡುವೆ ತಮಗೆ ಬೇಕಾದ ಮಾಹಿತಿಯನ್ನು ಅಗೆದು ತೆಗೆಯಲು ಅವರಿಗೆ ಹೊತ್ತಿಲ್ಲ. ಜೊತೆಗೆ ತಾಳ್ಮೆಯೂ ಇಲ್ಲ. ಅದೀಗ ಅವರು ಬರೆಯುತ್ತಿರುವ ಕಂಪ್ಯೂಟರ್ ಒಳಗೆ ಒಂದು ಕಡೆ ಕುಳಿತಿರ ಬೇಕು. ಒಂದು ಕೀಲಿಯ ಒತ್ತಿನೊಡನೆ ಎಲ್ಲ ತೆರೆದು ಕೊಳ್ಳುವಂತಿರಬೇಕು. ಹಾಗಾಗದಿದ್ದಲ್ಲಿ ಹೆಚ್ಚಿನ ಶ್ರಮದ ಕೆಲಸಗಳು ಕೂಡ ಕೆಲಸಕ್ಕೆ ಬಾರದಂತಾಗುತ್ತವೆ. ಅಂದರೆ ಯಾವ ಮಾದರಿಯಲ್ಲಿ ಕನ್ನಡವನ್ನು ಹೊಸ ಕಾಲಕ್ಕೆ ಸಜ್ಜುಗೊಳಿಸಬೇಕು ಎನ್ನುವುದೂ ಕೂಡ ಮುಖ್ಯ

ಆಡಳಿತಕ್ಕೆ ಕನ್ನಡವನ್ನು ಸಜ್ಜುಗೊಳಿಸಲು ಮುಂದಾಗುವವರು ಹೆಚ್ಚಾಗಿ ಅದನ್ನು ಹೊಸ ಕಾಲದ ಬೇಕುಗಳಿಗೆ ಹೊಂದಿಸಲು ಹೆದ್ದಾರಿಯೊಂದನ್ನು ಕಂಡುಕೊಂಡಿದ್ದಾರೆ. ಅದೆಂದರೆ ಬಳಕೆಗೆ ಬೇಕಾದ ಪದಕೋಶಗಳನ್ನು ರೂಪಿಸಿಕೊಡುವುದು. ಆಡಳಿತದಲ್ಲಿ ಈಗ ಬಳಸುತ್ತಿರುವ ಇಂಗ್ಲಿಶ್ ನುಡಿಯ ಬದಲಿಗೆ ಕನ್ನಡವನ್ನು ಬಳಸಲು ಅನುವಾಗುವಂತೆ ಈ ಪದಕೋಶಗಳನ್ನು ರೂಪಿಸಿಕೊಡಲಾಗುತ್ತಿದೆ ಎಂಬುದು ಸರಕಾರದ ನೀತಿ ನಿರೂಪಕರ ನಿಲುವು. ಇಲ್ಲಿ ಎರಡು ತೊಂದರೆಗಳಿವೆ ಎಂಬುದು ಈಗ ಗೊತ್ತಾಗುತ್ತಿದೆ. ಒಂದು: ಹೀಗೆ ಕನ್ನಡದ ಪದಗಳನ್ನು ರೂಪಿಸುವಾಗ ಅನುಸರಿಸುತ್ತಿರುವ ಬಗೆಯಲ್ಲಿರುವ ತಪ್ಪು. ಹೆಚ್ಚಾಗಿ ಇಂಗ್ಲಿಶ್ ಪದಗಳಿಗೆ ಬದಲಾಗಿ ಕೊಡುವ ಕನ್ನಡದ್ದೆಂದು ಹೇಳಲಾಗುವ ಪದಗಳು ಸಂಸ್ಕೃತ ಪದಗಳಾಗಿರುತ್ತವೆ. ಇಲ್ಲವೇ ಸಂಸ್ಕೃತ ನುಡಿಯ ಕಟ್ಟುಗಳನ್ನು ಬಳಸಿ ಕಟ್ಟಿದ ಪದರಚನೆಗಳಾಗಿರುತ್ತವೆ. ಇದರಿಂದ ಕನ್ನಡಕ್ಕೆ ಆಗಿರುವ ನೆರವು ಏನೇನೂ ಇಲ್ಲ. ಹೆಚ್ಚೆಂದರೆ ಈ ಪದಗಳನ್ನು ಕನ್ನಡ ಲಿಪಿಯಲ್ಲಿ ಬರೆಯುತ್ತಿರುವುದರಿಂದ ಅವು ಕನ್ನಡದ ಪದಗಳೆಂಬ ಭ್ರಮೆಯನ್ನು ಹುಟ್ಟು ಹಾಕುತ್ತಿವೆ. ಎರಡು: ಪದಕೋಶದ ಮೂಲಕ 'ಕನ್ನಡ'ದ ಪದಗಳನ್ನು ಒದಗಿಸಿದ್ದರಿಂದಲೇ ಆಡಳಿತದಲ್ಲಿ ಕನ್ನಡವನ್ನು ಜಾರಿಗೆ ತರಲು ಆಗುತ್ತದೆ ಎಂದು ನಂಬಿರುವುದು. ಇದು ಹೇಗಿದೆಯೆಂದರೆ ಪದಕೋಶದ ಪದಗಳನ್ನು ಕಲಿತರೆ ಹೊಸ ನುಡಿಯೊಂದನ್ನು ಕಲಿತು ಬಳಸಬಹುದೆಂದು ತಿಳಿದಂತೆ. ಈ ಎರಡು ಕಾರಣಗಳ ಜೊತೆಗೆ ಕನ್ನಡವನ್ನು ಆಡಳಿತದಲ್ಲಿ ಬಳಸಲು ಬೇಕಾದ ಒತ್ತಡವನ್ನು ಉಂಟುಮಾಡಬೇಕಿದೆ. ಇದು ಸರಕಾರದ ಆದೇಶಗಳ ಮೂಲಕ ನಡೆಯುವಂತಹುದಲ್ಲ. ಎಲ್ಲಿಯವರೆಗೆ ಇಂಗ್ಲಿಶ ಮತ್ತು ಕನ್ನಡಗಳು ಆಡಳಿತದಲ್ಲಿ

ಜೊತೆನುಡಿಗಳಾಗಿರುತ್ತವೋ ಅಲ್ಲಿಯವರೆಗೆ ಈ ಗೊಂದಲ ತಪ್ಪಿದ್ದಲ್ಲ. ಅಲ್ಲದೆ ಇಂಗ್ಲಿಶ್ ಭಾಷೆಯಲ್ಲಿರುವುದು ಕನ್ನಡಕ್ಕೆ ತರ್ಜುಮೆಯಾಗುವ ಬಗೆ ತಪ್ಪಬೇಕು. ಕನ್ನಡದಲ್ಲಿ ದಾಖಲೆಗಳು ಮೊದಲು ಹುಟ್ಟಬೇಕೆಂದರೆ ಬಳಿಕ ಅವು ಇಂಗ್ಲಿಶಿಗೋ ಮತ್ತೊಂದು ನುಡಿಗೋ ತರ್ಜುಮೆಯಾಗಬೇಕು. ಆಗ ಮಾತ್ರ ಕನ್ನಡದ ಸಜ್ಜು ಕೆಲಸ ಮುನ್ನಡೆಯನ್ನು ಕಾಣಬಲ್ಲುದು.

ಶಿಕ್ಷಣದಲ್ಲಿ ಕನ್ನಡದ ಬಳಕೆಗೆ ಬೇಕಾದ ಸಜ್ಜುಗೊಳಿಸುವ ಕೆಲಸ ಹಲವು ನೆಲೆಗಳಲ್ಲಿ ನಡೆಯುತ್ತಿದೆ. ಆದರೆ ಹೆಚ್ಚಿನ ಗೊಂದಲಗಳು ಇಲ್ಲೇ ಇರುವಂತೆ ತೋರುತ್ತಿದೆ. ಕನ್ನಡ (=ಮೊದಲ ನುಡಿ)ದ ಮೂಲಕ ಕಲಿಯುವುದು ಸರಿ. ಆಗ ಮಾತ್ರ ಕಲಿಕೆ ಚೆನ್ನಾಗ ಬಲ್ಲುದು. ಈ ನಿಲುವು ಉನ್ನತ ಕಲಿಕೆಗಳ ಹಂತಕ್ಕೆ ಬಂದಾಗ ಹಿಂದಕ್ಕೆ ಸರಿಯುತ್ತದೆ. ಅಂದರೆ ಕನ್ನಡವನ್ನು ಕಲಿಕೆಯ ನುಡಿಯನ್ನಾಗಿ ಆಯ್ದುಕೊಂಡರೂ ಒದು ಮುಂದುವರೆದಂತೆ ಇಂಗ್ಲಿಶಿಗೆ ಬದಲಾಗುವುದು ತಪ್ಪಿದ್ದಲ್ಲ ಎಂಬ ನಿಲುವು ಈಗ ಜಾರಿಯಲ್ಲಿದೆ. ಕೆಳಹಂತದ ಕಲಿಕೆಗಳಿಗೆ ಕನ್ನಡ ಸರಿಯಾದುದಾದರೆ ಉನ್ನತ ಕಲಿಕೆಗಳಿಗೆ ಏಕೆ ಸರಿಯಾಗುವುದಿಲ್ಲ? ಈ ಗೊಂದಲದಿಂದಾಗಿಯೇ ಕೆಳಹಂತದಲ್ಲೂ ಇಂಗ್ಲಿಶಿನ ಮೂಲಕವೇ ಕಲಿಯಬೇಕೆಂಬ ನೆಲೆಗೆ ಜನರು ದಾಟುವಂತಾಗಿದೆ. ನಾಳೆ ಬಪ್ಪುದು ನಮಗೆ ಇಂದೇ ಬರಲಿ ಎಂದು ಅವರು ಇಂಗ್ಲಿಶಿಗೆ ಜೋತುಬೀಳುತ್ತಿದ್ದಾರೆ. ಕನ್ನಡ ಹೊಸ ಕಾಲದ ತಿಳುವಳಿಕೆಯನ್ನು ಹೇಳಲು ತಕ್ಕ ನುಡಿಯಲ್ಲ ಎಂಬ ನಿಲುವು ಹಲವು ನುಡಿಯರಿಗರಲ್ಲೇ ಬೇರುಬಿಟ್ಟಿದೆ. ಅವರು ಕನ್ನಡದ ಪರವಾಗಿಯೇ ಇರುವವರಾದರೂ ಕನ್ನಡದ ಕಸುವಿನ ಬಗೆಗೆ ಅವರಲ್ಲಿ ಬಲವಾದ ನಂಬಿಕೆ ಇಲ್ಲ. ಇದರಿಂದಲೂ ಕಲಿಕೆಯಲ್ಲಿ ಕನ್ನಡವನ್ನು ಕಲಿಕೆಯ ನುಡಿಯನ್ನಾಗಿ ಬಳಸುವುದು ಆಗುತ್ತಿಲ್ಲ.

ತಂತ್ರಜ್ಞಾನದ ಬೆಳವಣಿಗೆಗೆ ತಕ್ಕಂತೆ ಕನ್ನಡವನ್ನು ಸಜ್ಜುಗೊಳಿಸುವುದು ಇನ್ನೊಂದು ಕೆಲಸ. ಇಲ್ಲಿ ಒಟ್ಟುಗೂಡಿದ ಕೆಲಸಗಳು ನಡೆಯುತ್ತಿಲ್ಲ. ಬಿಡಿಬಿಡಿಯಾಗಿ ನಡೆಯುತ್ತಿರುವ ಕೆಲಸಗಳ ನಡುವೆ ತಾಳಮೇಳಗಳಿಲ್ಲದೆ ಅವು ಕೆಲಸಕ್ಕೆ ನೆರವಾಗುವಂತಿಲ್ಲ. ಇದರ ಜೊತೆಗೆ ತಂತ್ರಜ್ಞಾನ ಕೂಡ ದಿನದಿನವೂ ಹೊಸ ಅವಕಾಶ ಮತ್ತು ಹೊಸ ಸವಾಲುಗಳನ್ನು ಮುಂದಕ್ಕೆ ಎಸೆಯುತ್ತಿದೆ. ಕೆಲವು ವರುಷಗಳ ಹಿಂದೆ ಯೂನಿಕೋಡ್ ಬಗೆಗೆ ತಲೆಕೆಡಿಸಿಕೊಳ್ಳಲು ಯಾರೂ ಮುಂದಾಗುತ್ತಿರಲಿಲ್ಲ. ಈಗ ಅದರ ಬಗೆಗೆ ತಕ್ಕ ಕೆಲಸಗಳಾಗದೆ ಕನ್ನಡವನ್ನು ಹೊಸ ಹೊಸ ವಲಯಗಳಲ್ಲಿ ಬಳಸುವುದಕ್ಕೆ ಆಗುವುದೇ ಇಲ್ಲ. ಸಂವಹನದ ಹೊಸ ನೆಲೆಗಳಲ್ಲಿ ಕನ್ನಡವನ್ನು ಬಳಸಲು ತಕ್ಕ ಕೆಲಸಗಳು ನಡೆಯುತ್ತಿಲ್ಲ. ಇದಕ್ಕೆ ತಂತ್ರಜ್ಞರು, ಭಾಷಾಶಾಸ್ತ್ರಜ್ಞರು ಮತ್ತು ಬಳಕೆದಾರರು ಒಟ್ಟಾಗಿ ಕೆಲಸ ಮಾಡದಿರುವುದೇ ಕಾರಣವಾಗಿದೆ. ಬಳಕೆದಾರರಿಗೆ ಏನು ಬೇಕೋ ಅದನ್ನು ನಾವೆ ಕೊಡುತ್ತೇವೆ ಎಂದು ಬಹುರಾಷ್ಟ್ರೀಯ ಕಂಪನಿಗಳು ತಮ್ಮ ಹಾದಿಗಳನ್ನು ತಾವೇ ಹಿಡಿದುಕೊಂಡಿವೆ. ಮೈಕ್ರೋಸಾಫ್ಟ್, ಗೂಗಲ್ ಮತ್ತು ಯಾಹೂ ಕಂಪನಿಗಳು ಕನ್ನಡವನ್ನು ಅಳವಡಿಸಿಕೊಂಡಿರುವುದಕ್ಕೆ ಅವರಿಗಿರುವ ಮಾರುಕಟ್ಟೆಯ ಒತ್ತಡಗಳು ಕಾರಣ. ಆದರೆ ಈ ಒತ್ತಡಗಳಿಗೆ ಕನ್ನಡ ಜಗತ್ತಿನ ಬೇಕುಗಳು ಪೂರಕವಾಗಿವೆಯೇ ಎಂಬುದನ್ನು

ಅವರು ನೋಡುತ್ತಿಲ್ಲ. ಅವರು ಕೊಟ್ಟದ್ದನ್ನು ನಾವು ಒಪ್ಪಿಕೊಳ್ಳಬೇಕಾದ ಸ್ಥಿತಿಯಲ್ಲಿ ನಾವಿದ್ದೇವೆ. ಇದರಿಂದ ಕನ್ನಡದ ಬಹುಪಾಲು ಮಾಹಿತಿ ಈಗಲೂ ಅಂತರ್ಜಾಲದಲ್ಲಿ ಅಳವಡುವುದು ಆಗಿಲ್ಲ. ಹುಡುಕುತಾಣಗಳಲ್ಲಿ ಕನ್ನಡದ ಮಾಹಿತಿ ಸಿಗುತ್ತಿಲ್ಲ. ಮಾಹಿತಿ ಎಲ್ಲಿದೆ ಎಂಬುದು ಗೊತ್ತಾಗುತ್ತಿದೆಯೇ ಹೊರತು ಆ ಮಾಹಿತಿಯೇ ಸಿಗುತ್ತಿಲ್ಲ. ತಮಿಳು ಈ ನೆಲೆಯಲ್ಲಿ ಪಡೆದುಕೊಂಡಿರುವ ಹರವನ್ನು ಗಮನಿಸಿದರೆ ನನ್ನ ಈ ಮಾತಿನ ತಿರುಳು ಗೊತ್ತಾಗುತ್ತದೆ.

ಹೊಸಕಾಲಕ್ಕೆ ಕನ್ನಡವನ್ನು ಸಜ್ಜುಗೊಳಿಸುವಾಗ ಇರುವ ಕೊರತೆಗಳನ್ನು ತುಂಬಲು ಮುಂದಾಗುವುದೇನೋ ಸರಿ. ಆದರೆ ಅದರ ಜೊತೆಗೆ ಹೊಸ ಸವಾಲುಗಳನ್ನು ಬಿಡಿಸುವಾಗ ಹಳೆಯ ಮಾದರಿಗಳ ಬೆನ್ನು ಬೀಳುವುದು ತಪ್ಪಬೇಕು. ಹೊಸ ಪ್ರಶ್ನೆಗಳನ್ನು ಹಾಕಿಕೊಳ್ಳಬೇಕಿದೆ. ಎಲ್ಲಕ್ಕಿಂತ ಹೆಚ್ಚಾಗಿ ಹೀಗೆ ಸಜ್ಜುಗೊಳಿಸುವವರಿಗೆ ಕನ್ನಡದ ಒಳಕಸುವಿನ ಬಗೆಗೆ ನಂಬಿಕೆ ಇರಬೇಕು. ಹಾಗೆ ನಂಬಿಕೆ ಇಲ್ಲದೆ ಕನ್ನಡವನ್ನು ಸಜ್ಜುಗೊಳಿಸಲು ಹೊರಟರೆ ಆಗ ಕನ್ನಡ ಎಂದೂ ಹೊಸ ಕಾಲದ ನುಡಿಯಾಗಲಾರದು. ಕನ್ನಡದ ಒಳ ಕಸುವಿನ ಬಗೆಗೆ ನಂಬಿಕೆ ಎಂದರೇನು? ಇಂಗ್ಲಿಶ್ ಮತ್ತು ಸಂಸ್ಕೃತಗಳ ಪೋಷಣೆಯಿಲ್ಲದೆ ಕನ್ನಡ ಸೊರಗುವುದೆಂಬ ತಿಳಿವಳಿಕೆಯಿಂದ ಹೊರಬರಬೇಕು. ಕನ್ನಡದ ಕಸುವಿನ ಬಗೆಗೆ ಹೀಗೆ ನಂಬಿಕೆ ಇರುವುದು ಕುರುಡು ಮೆಚ್ಚಲ್ಲ. ಇದನ್ನೊಂದು ದಿಟವೆಂದು ತಿಳಿದು ಅದಕ್ಕೆ ಬೇಕಾದ ಬಗೆಯಲ್ಲಿ ಹೆಜ್ಜೆಗಳನ್ನು ಇರಿಸುತ್ತ ಹಾದಿಯನ್ನು ಕಂಡುಕೊಳ್ಳಬೇಕಾಗಿದೆ.

# ಕನ್ನಡ–ಕನ್ನಡ ನಿಘಂಟಿನ ಕಂಪ್ಯೂಟರೀಕರಣ

ಕನ್ನಡ ಸಾಹಿತ್ಯ ಪರಿಷತ್ತು ಸಿದ್ಧ ಪಡಿಸಿರುವ ಕನ್ನಡ–ಕನ್ನಡ ನಿಘಂಟಿನ ಎಂಟು ಸಂಪುಟಗಳು ಈಗ ಲಭ್ಯವಿವೆ. ಅಲ್ಲಿಗೆ ಸುಮಾರು ಅರ್ಧ ಶತಮಾನದ ಮಹಾನ್ ಯೋಜನೆಯೊಂದು ಪೂರ್ಣಗೊಂಡಂತಾಗುತ್ತದೆ. ಹಾಗೆ ನೋಡಿದರೆ ನಿಘಂಟು ರಚನೆಗೆ ಕೊನೆ ಎಂಬುದೇ ಇಲ್ಲ. ಭಾಷೆಯ ಬಳಕೆಯೊಡನೆ ನಡೆಯುತ್ತಿರುವ ಬದಲಾವಣೆಗಳನ್ನು ದಾಖಲು ಮಾಡುವ ಕೆಲಸ ನಿಘಂಟಿಗೆ ಇರುವುದರಿಂದ ನಿರಂತರವಾಗಿ ಅದು ಪರಿಷ್ಕಾರವಾಗುತ್ತಾ ಇರಬೇಕಾಗುತ್ತದೆ. ಕನ್ನಡದ ಈ ಶತಮಾನದ ವಿದ್ವತ್ ಪ್ರಪಂಚದ ಮಹನೀಯರ ನಿಡುಗಾಲದ ಪ್ರಯತ್ನವಾಗಿ ರೂಪುಗೊಂಡಿರುವ ಈ ನಿಘಂಟು ಇನ್ನು ಮುಂದಿನ ಶತಮಾನಕ್ಕೆ ಸಿದ್ಧವಾಗಬೇಕಾಗಿದೆ.

ಕನ್ನಡ–ಕನ್ನಡ ನಿಘಂಟು ಕನ್ನಡ ಭಾಷೆಯ ಅತಿ ದೊಡ್ಡ ಮಾಹಿತಿ ಕಣಜ. ಕನ್ನಡ ಸಾವಿರಾರು ಲಿಖಿತ ದಾಖಲೆಗಳಿಂದ ಪಡೆದ ಉಲ್ಲೇಖಗಳಿರುವ ಈ ನಿಘಂಟನ್ನು ಕೇವಲ ಸಾಂಪ್ರದಾಯಿಕ ನೆಲೆಯ ನಿಘಂಟನ್ನಾಗಿ ಮಾತ್ರ ಬಳಸಿದರೆ ಸಾಲದು. ಸಾಮಾನ್ಯವಾಗಿ ನಿಘಂಟನ್ನು ಬಳಸುವ ಸಂದರ್ಭಗಳಾವುವು? ಒಂದು ಪದದ ಅರ್ಥ ತಿಳಿಯದಿರುವಾಗ; ಅದರ ಬಳಕೆಯ ವಿವಿಧ ನೆಲೆಗಳನ್ನು ಕಂಡುಕೊಳ್ಳಬೇಕಾದಾಗ: ಸಮಾನಾರ್ಥಕಗಳನ್ನು ಅಥವಾ ಪರ್ಯಾಯ ರೂಪಗಳನ್ನು ಅರಿಯಬೇಕಾದಾಗ; ಆ ಪದದಿಂದ ಸಾಧಿತವಾದ ರೂಪಗಳನ್ನು ಕಂಡುಕೊಳ್ಳಬೇಕಾದಾಗ; ಅದು ಯಾವ ಭಾಷೆಯಿಂದ ಬಂದ ಪದ ಎಂಬುದನ್ನು ತಿಳಿಯಬೇಕಾದಾಗ– ಹೀಗೆ ಹತ್ತು ಹಲವು ಬಾರಿ ನಿಘಂಟನ್ನು ನಾವು ಬಳಸುತ್ತೇವೆ. ಆದರೆ ಈ ಅತಿ ಬೃಹತ್ ಭಾಷಾ ಮಾಹಿತಿಕಣಜಕ್ಕೆ ಇನ್ನೂ ಹಲವು ಸಾಧ್ಯತೆಗಳಿವೆ.

ಉದಾಹರಣೆಗೆ ಕನ್ನಡದಲ್ಲಿರುವ ನಾಮಸಾಧಕ ಪ್ರತ್ಯಯಗಳಲ್ಲಿ ಅತ್ಯಧಿಕ ಪ್ರಮಾಣದಲ್ಲಿ ಯಾವುದು ಎಂಬುದನ್ನು ತಿಳಿಯಬೇಕೆನ್ನಿ. ಅದನ್ನು ಈಗಿರುವಂತೆ ನಿಘಂಟಿನ ಒಂದೊಂದು ಉಲ್ಲೇಖವನ್ನೂ ಪರಿಶೀಲಿಸಿ ಅವುಗಳ ಪಟ್ಟಿಕೆಗಳನ್ನು ತಯಾರಿಸಿ ಅನಂತರ ಅವೆಲ್ಲವನ್ನು ಬಗೆಬಗೆಯಾಗಿ ಜೋಡಿಸಿ ಅನಂತರ ಒಂದು ನಿರ್ಣಯವನ್ನು ಮಾಡಬೇಕಾಗುತ್ತದೆ. ಇದಕ್ಕೆ ತಗಲುವ ಶ್ರಮ ಹಾಗೂ ಕಾಲ ಎಷ್ಟೆಂಬುದನ್ನು ಗಮನಿಸಿದರೆ ಇಂಥ ಶೋಧನೆಗಳನ್ನು ಮಾಡಲು ಯಾರೂ ಹೊರಡುವುದೇ ಇಲ್ಲವೆನ್ನಬೇಕಾಗುತ್ತದೆ.

ಆದರೆ ಕನ್ನಡ ಭಾಷೆಯ ರಚನೆ ಹಾಗೂ ಅದರ ಸಾಧ್ಯತೆಗಳನ್ನು ತಿಳಿಯಬೇಕನ್ನುವವರಿಗೆ ಇಂಥ ಮಾಹಿತಿಗಳು ಅತ್ಯವಶ್ಯ. ಹಾಗೆಯೇ ಕನ್ನಡಲ್ಲಿರುವ ಅಥವಾ ಕೊನೆಯ ಪಕ್ಷ ಕನ್ನಡ-ಕನ್ನಡ ನಿಘಂಟು ದಾಖಲೆ ಮಾಡಿರುವ ಪದಗಳಲ್ಲಿ ಪರ್ಸೋ ಅರಾಬಿಕ್ ಮೂಲದ ಪದಗಳನ್ನೆಲ್ಲ ಹೊರತೆಗೆದು ಪಟ್ಟಿ ಮಾಡಬೇಕೆನ್ನಿ. ಇದೂ ಸುಲಭದ ಕೆಲಸವಲ್ಲ. ಈ ಎಲ್ಲ ಮಾಹಿತಿಗಳು ಹಾಗೂ ಇಂಥ ಇನ್ನೂ ಹತ್ತಾರು ಬಗೆಯ ಮಾಹಿತಿಗಳು ಈ ಕಣಜದಲ್ಲಿವೆ. ಆದರೆ ಅವುಗಳನ್ನು ಪಡೆದುಕೊಳ್ಳುವುದು ಈಗಿರುವಂತೆ ಕಷ್ಟ ಸಾಧ್ಯವಾದ ಕೆಲಸ. ಹಾಗಾದರೆ ಏನು ಮಾಡಬೇಕು?

ಇನ್ನೂ ಒಂದು ಸಂಗತಿಯನ್ನು ಗಮನಿಸಿ. ನಿಘಂಟು ಈಗಿರುವಂತೆ ಪೂರ್ಣವಲ್ಲ. ಅದನ್ನು ಮತ್ತೆ ಪರಿಷ್ಕರಿಸುವುದು ಅವಶ್ಯ. ಈ ಮಾತನ್ನು ವಿದ್ವಾಂಸರು ಹೇಳುತ್ತಲೇ ಇದ್ದಾರೆ. ಹೊಸ ಪದಗಳನ್ನು ಸೇರಿಸಬೇಕು. ಸೇರಿರುವ ಪದಗಳ ಅರ್ಥಗಳಲ್ಲಿ ಉಂಟಾಗಿರುವ ವ್ಯತ್ಯಾಸಗಳನ್ನು ದಾಖಲೆ ಮಾಡಬೇಕು. ಹೊಸ ಉಲ್ಲೇಖಗಳನ್ನು ನೀಡಬೇಕು. ಹೀಗೆ ಹತ್ತಾರು ರೀತಿಗಳಲ್ಲಿ ಅದನ್ನು ತಿದ್ದಬೇಕಾಗುತ್ತದೆ. ವಿದ್ವಾಂಸರು ಈ ಕೆಲಸವನ್ನು ಮಾಡಲು ಸಿದ್ಧರಿದ್ದಾರಾದರೂ ಅವರ ಪರಿಷ್ಕರಣಗಳನ್ನು ನಿಘಂಟಿನಲ್ಲಿ ಅಳವಡಿಸಿ ಪರಿಷ್ಕೃತ ಆವೃತ್ತಿಗಳನ್ನು ಮುದ್ರಿಸಿ ಪ್ರಕಟಿಸುವುದು ಸುಲಭದ ಮಾತಲ್ಲ. ಮುದ್ರಣದ ಪ್ರತಿಗಳನ್ನು ಸಿದ್ಧಪಡಿಸಲು ಹಿಡಿಸುವ ಅಧಿಕ ಶ್ರಮ ಮತ್ತು ವೆಚ್ಚಗಳ ಜತೆಗೆ ಹೆಚ್ಚಿನ ಕಾಲವೂ ಬೇಕಾಗುತ್ತದೆ. ಮುದ್ರಣಗೊಳ್ಳಲು ಹತ್ತಿರ ಹತ್ತಿರ ಕೋಟಿ ರೂಪಾಯಿಗಳು ಬೇಕಾಗುತ್ತವೆ. ಇದು ಬರುವ ದಿನಗಳಲ್ಲಿ ಭಾರಿ ಸಮಸ್ಯೆಯಾಗಲಿದೆ.

ಈ ಸಮಸ್ಯೆಗಳನ್ನು ಎದುರಿಸಲು ಲಭ್ಯ ತಂತ್ರಜ್ಞಾನವನ್ನು ಬಳಸುವುದು ಅತ್ಯವಶ್ಯ. ಕಂಪ್ಯೂಟರ್‌ನಲ್ಲಿ ಈಗ ಪ್ರಕಟವಾಗಿರುವ ನಿಘಂಟಿನ ಮಾಹಿತಿಯನ್ನು ಯಥಾರೂಪದಲ್ಲಿ ದಾಖಲು ಮಾಡುವುದು ಮೊದಲ ಹಂತ. ಹೀಗೆ ರೂಪಿಸಿದ ಮಾಹಿತಿಕಣಜವನ್ನು ಮುಂದೆ ಮುಖ್ಯವಾಗಿ ಮೂರು ವಿಧದಲ್ಲಿ ಬಳಸಬಹುದು. ಮೊದಲನೆಯದು ಕೇವಲ ನಿಘಂಟನ್ನಾಗಿ ಬಳಸುವುದು. ಅದಕ್ಕಾಗಿ ಈ ಮಾಹಿತಿಕಣಜವನ್ನು ವಿಶೇಷ ವಿಧಾನದ ಮೂಲಕ ಕಾಂಪ್ಯಾಕ್ಟ್ ಡಿಸ್ಕ್‌ನಲ್ಲಿ ಸಂಗ್ರಹಿಸಬೇಕಾಗುತ್ತದೆ. ಈ ಡಿಸ್ಕ್‌ಗಳ ಪ್ರತಿಗಳನ್ನು ತಯಾರಿಸಬಹುದು. ಸುಮಾರು ಆರು ಅಂಗುಲ ವ್ಯಾಸವುಳ್ಳ ತಟ್ಟೆಗಳಿವು. ಇವುಗಳನ್ನು ಕಂಪ್ಯೂಟರ್‌ನಲ್ಲಿ ಅಳವಡಿಸಬಹುದಾದ ಕಾಂಪ್ಯಾಕ್ಟ್ ಡಿಸ್ಕ್‌ಡ್ರೈವ್‌ಗಳಲ್ಲಿಟ್ಟು ಬೇಕೆನಿಸಿದಾಗ ಕಂಪ್ಯೂಟರ್‌ನ ಪರದೆಯ ಮೇಲೆ ಓದಬಹುದು.(ಈ ಟಿಪ್ಪಣಿ ಬರೆದ ಮೇಲೆ ತಂತ್ರಜ್ಞಾನ ಮತ್ತಷ್ಟು ಮುಂದೆ ಸಾಗಿದೆ. ಕಾಂಪ್ಯಾಕ್ಟ್ ಡಿಸ್ಕ್‌ಗಳ ಜಾಗದಲ್ಲಿ ಡಿವಿಡಿಗಳೂ, ಬ್ಲೂ ರೇ ಡಿಸ್ಕ್‌ಗಳು ಬಂದಿವೆ. ನಿಘಂಟಿನಲ್ಲಿ ನಮಗೆ ಬೇಕಾದ ಮಾಹಿತಿಯನ್ನು ಪುಟ ತಿರುಗಿಸಿ ಪಡೆದುಕೊಳ್ಳುವ ಬಗೆಯಿದು. ಅವಶ್ಯವಿದ್ದಲ್ಲಿ ತೆರೆಯ ಮೇಲಿನ ಮಾಹಿತಿಯ ಮುದ್ರಿತ ರೂಪವನ್ನು ಬೇಕಾದರೆ ಪಡೆದುಕೊಳ್ಳಬಹುದು.

ಯಾರಾದರೂ ಈ ಹಂತದಲ್ಲೇ ಮೂಗೆಳೆಯುಬಹುದಾಗಿದೆ ಎಲ್ಲರಲ್ಲೂ ಕಂಪ್ಯೂಟರ್‌ಗಳು ಇರುವುದಿಲ್ಲವೆಂದು. ಇದ್ದರೂ ಕಾಂಪ್ಯಾಕ್ಟ್ ಡಿಸ್ಕ್ ಡ್ರೈವ್‌ಗಳು

ಇರುವುದಿಲ್ಲವೆಂದು ಹೇಳಬಹುದು. ವ್ಯಕ್ತಿಗಳ ಹಂತದಲ್ಲಿ ಇದು ಈಗ ನಿಜ. ಆದರೆ ಸಂಸ್ಥೆಗಳ ಮಟ್ಟಿಗೆ ಪರಿಸ್ಥಿತಿ ಹೀಗಿಲ್ಲ. ಎಲ್ಲ ಕಡೆಗಳಲ್ಲೂ ಈಗ ಕಂಪ್ಯೂಟರ್‌ಗಳು ಇವೆ. ಅವುಗಳಿಗೆ ಅಲ್ಪವೆಚ್ಚದೊಡನೆ ಅವಶ್ಯ ಡ್ರೈವ್‌ಗಳನ್ನು ಅಳವಡಿಸಬಹುದು. ಆಗ ಕಾಗದದಲ್ಲಿ ಮುದ್ರಣಗೊಂಡ ಸುಮಾರು ಹತ್ತು ಸಾವಿರ ಪುಟಗಳ ಸಂಪುಟಗಳ ಬದಲು ಆರು ಅಂಗುಲವ್ಯಾಸದ ತಟ್ಟೆಯೊಂದನ್ನು ಗ್ರಂಥಾಲಯಗಳು ಇರಿಸಿಕೊಂಡರೆ ಸಾಕಾಗುತ್ತದೆ. ಈಗಾಗಲೇ ಆಕ್ಸ್‌ಫರ್ಡ್ ಇಂಗ್ಲಿಷ್ ಡಿಕ್ಷನರಿಗೆ ಈ ಸೌಲಭ್ಯವಿರುವುದನ್ನು ಯಾರಾದರೂ ಗಮನಿಸಬಹುದಾಗಿದೆ.(ಇನ್ನು ಮೇಲೆ ಈ ನಿಘಂಟು ಮುದ್ರಣಗೊಳ್ಳುವುದೇ ಇಲ್ಲ. ಅದರ ಗಣಕರೂಪ ಮಾತ್ರ ಜನರಿಗೆ ಲಭ್ಯ.)

ಈ ಮಾಹಿತಿಕಣಜವನ್ನು ಬಳಸುವ ಇನ್ನೊಂದು ವಿಧಾನವಿದೆ. ಇನ್ನು ಮುಂದೆ ನಡೆಯಬಹುದಾದ ಎಲ್ಲ ಬಗೆಯ ಪರಿಷ್ಕರಣ ಕಾರ್ಯವನ್ನು ಈ ಮಾಹಿತಿ ಕಣಜದಲ್ಲಿಯೇ ಮಾಡಬಹುದಾಗಿದೆ. ಯಾವುದೇ ನಮೂದನ್ನು ಅಕ್ಷರಾನುಕ್ರಮದಲ್ಲಿ ಹೊಸದಾಗಿ ಸೇರಿಸಬಹುದು. ಇರುವ ನಮೂದುಗಳ ವಿವರಗಳನ್ನು ಬದಲಾಯಿಸಬಹುದು. ಹೊಸ ಅರ್ಥಗಳನ್ನು ಹೇಳಬಹುದು. ಹೊಸ ಉಲ್ಲೇಖಗಳನ್ನು ಸೇರಿಸಬಹುದು. ವಿದ್ವಾಂಸರು ಈ ಕೆಲಸವನ್ನು ಒಟ್ಟಾಗಿ ಸೇರಿ ಒಂದು ಕಛೇರಿಯಲ್ಲಿ ಮಾಡಬೇಕೆಂದಿಲ್ಲ. ಹಲವಾರು ಊರುಗಳಲ್ಲಿರುವವರು ತಮ್ಮ ಮನೆಗಳಲ್ಲಿ ಅಥವಾ ಸಂಸ್ಥೆಗಳಲ್ಲಿ ಈ ಮಾಹಿತಿಯನ್ನು ಸೇರಿಸಬಹುದು. ಹೀಗೆ ಸೇರಿಸಿದ ಮಾಹಿತಿಯನ್ನು ಇನ್ನೊಬ್ಬರು ತಮ್ಮ ಕಂಪ್ಯೂಟರ್‌ಗಳಲ್ಲಿ ಗಮನಿಸಲು ಸಾಧ್ಯ. ಮಾಹಿತಿ ವಿತರಣೆಗೆ ಈಗ ಇರುವ ಜಾಲವ್ಯವಸ್ಥೆಯಲ್ಲಿ ಇವೆಲ್ಲವೂ ಕ್ಷಣ ಮಾತ್ರದಲ್ಲಿ ಸಂಭವಿಸಬಹುದಾದ ಸಂಗತಿಗಳು ಪರಿಷ್ಕರಣ ಕಾರ್ಯದ ಸಂಪಾದಕ ಮಂಡಲಿ ಕಾಲದಿಂದ ಕಾಲಕ್ಕೆ ಈ ಬದಲಾವಣೆಗಳನ್ನು ಅಧಿಕೃತಗೊಳಿಸಿ ಎಲ್ಲರಿಗೂ ಲಭ್ಯವಾಗುವಂತೆ ಮಾಡಬಹುದಾಗಿದೆ.

ಇನ್ನು ಮೂರನೆಯ ಬಗೆಯ ಬಳಕೆ ಮೊದಲೇ ಹೇಳಿದಂತೆ ಈ ಮಾಹಿತಿಕಣಜದಿಂದ ಹಲವಾರು ಅಂತಸ್ಥ ಮಾಹಿತಿ ಸರಣಿಗಳನ್ನು ಸುಲಭವಾಗಿ ಹೆಕ್ಕಿ ತೆಗೆಯಬಹುದು. ನಿಘಂಟಿನಲ್ಲಿರುವ ಎಲ್ಲ ಕ್ರಿಯಾರೂಪಗಳ ಪಟ್ಟಿ; ಎಲ್ಲ–ಗಾರ ಅಥವಾ ಕಾರ ಪ್ರತ್ಯಯಗಳಿರುವ ಪದಗಳ ಪಟ್ಟಿ; ಎಲ್ಲ ಪರ್ಸೋ ಅರಾಬಿಕ್ ಪದಗಳ ಪಟ್ಟಿ; ವಿಕ್ರಮಾರ್ಜುನ ವಿಜಯದ ಉಲ್ಲೇಖಗಳ ಪಟ್ಟಿ; ಎಲ್ಲ ಶಾಸನೋಲ್ಲೇಖಗಳ ಪಟ್ಟಿ ಹೀಗೆ ಹತ್ತಾರು ಬಗೆಯ ಮಾಹಿತಿ ಸರಣಿಗಳನ್ನು ಪಡೆಯಬಹುದು ಈ ಮಾಹಿತಿ ಸರಣಿಗಳಿಂದೇನು ಪ್ರಯೋಜನ ಎಂದು ಕೇಳಬಹುದು. ಆದರೆ ಕನ್ನಡ ಭಾಷೆಯ ಅಧ್ಯಯನಕ್ಕೆ ವಿವಿಧ ಸಾಧ್ಯತೆಗಳನ್ನು ಒದಗಿಸಿಕೊಡಲು ಈ ಮಾಹಿತಿ ಸರಣಿಗಳು ಅವಶ್ಯ. ಈ ಮಾಹಿತಿಯನ್ನು ಈಗ ಪಡೆಯುವುದು ಅತಿ ಕಷ್ಟವಾಗಿರುವುದರಿಂದಾಗಿಯೇ ಮುಂದೆ ಹೋಗುತ್ತಿರುವ ಹಲವಾರು ನಿಟ್ಟಿನ ಅಧ್ಯಯನಗಳು ಈಗ ಸುಲಭವಾಗುತ್ತವೆ.

ಇವೆಲ್ಲದರ ಜತೆಗೆ ಇನ್ನೊಂದು ಬಗೆಯ ಬಳಕೆ ಕೂಡ ಸಾಧ್ಯ. ಇಡೀ ಮಾಹಿತಿ ಕಣಜವನ್ನು ಈಗಿರುವ ಸೌಲಭ್ಯಗಳಿಂದ ಕ್ಷಣ ಮಾತ್ರದಲ್ಲಿ ಹದಿನಾಲ್ಕು ವಿವಿಧ ದೇಶೀಯ ಮತ್ತು ಅನ್ಯ ದೇಶೀಯ ಲಿಪಿಗಳಿಗೆ ಲಿಪ್ಯಂತರಗೊಳಿಸಬಹುದು. ಅಂದರೆ ಇಡೀ

ನಿಘಂಟನ್ನು ಬೇಕೆಂದರೆ ದೇವನಾಗರಿ ಲಿಪಿಯಲ್ಲಿ ಓದಲು ಸಾಧ್ಯ. ಈ ಸೌಲಭ್ಯದ ಪ್ರಯೋಜನವೇನೆಂದು ಕೇಳಿದರೆ ಇದೇ ಎಂದು ಹೇಳುವುದು ಕಷ್ಟ. ಆದರೆ ಸಂಸ್ಕೃತ ಭಾಷಾರಚನೆಗಳನ್ನು ನಾವು ಕನ್ನಡ ಲಿಪಿಯಲ್ಲಿ ಓದಿ ಪ್ರಯೋಜನ ಪಡೆಯುತ್ತಿದ್ದೇವೆ ಎಂಬುದನ್ನು ಗಮನಿಸಿದರೆ ಬರಲಿರುವ ದಿನಗಳಲ್ಲಿ ಈ ಲಿಪ್ಯಂತರದಿಂದ ಯಾರಾದರೂ ಪ್ರಯೋಜನ ಪಡೆಯುವುದು ಸಾಧ್ಯ. ಮಾದರಿಯೊಂದನ್ನು ಇಲ್ಲಿ ತೋರಿಸಿದೆ..

**ಕನ್ನಡ**

[illegible]

**ದೇವನಾಗರಿ**

[illegible]

**ತೆಲುಗು**

[illegible]

**ತಮಿಳು**

[illegible]

**ಮಲಯಾಳಂ**

[illegible]

**ಗುಜರಾತಿ**

[illegible]

**ಒರಿಯಾ**

[illegible]

ಟಿಪ್ಪಣಿಯಲ್ಲಿ ಈವರೆಗೆ 'ಬಹುದು' ಎಂಬ ಮಾತನ್ನು ಹಲವಾರು ಬಾರಿ ಬಳಸಿದೆ. ಇದರಿಂದ ಇದು ಎಂದೋ ಆಗಲಿರುವ ಕೆಲಸವೆಂದು ತಿಳಿಯಬೇಕಿಲ್ಲ. ಕನ್ನಡ ವಿಶ್ವವಿದ್ಯಾಲಯ ಮತ್ತು ಕನ್ನಡ ಸಾಹಿತ್ಯ ಪರಿಷತ್ತು ಈ ಬಗೆಗೆ ಈಗಾಗಲೇ ಕಾರ್ಯ ಯೋಜನೆಯನ್ನು ರೂಪಿಸಿವೆ. ಕನ್ನಡ ವಿಶ್ವವಿದ್ಯಾಲಯದ ಕಂಪ್ಯೂಟರ್ ಕೇಂದ್ರದಲ್ಲಿ ಈಗ ಪ್ರಕಟವಾಗಿರುವ ಕನ್ನಡ-ಕನ್ನಡ ನಿಘಂಟಿನ ಏಳೂ ಸಂಪುಟಗಳು ಕಂಪ್ಯೂಟರ್‌ನ ಮಾಹಿತಿಕಣಜವಾಗಿ ಪರಿವರ್ತನೆ ಹೊಂದಿವೆ. ಪ್ರಕಟವಾಗುತ್ತಿರುವ ಎಂಟನೆಯ ಸಂಪುಟ ಮತ್ತು ಬಾಕಿ ಉಳಿದ ಅನುಬಂಧ ಸಂಪುಟದ ಮಾಹಿತಿಯನ್ನು ಪರಿಷತ್ತಿನ ಸಹಕಾರದೊಡನೆ ಕಂಪ್ಯೂಟರ್‌ನ ಈ ಮಾಹಿತಿಕಣಜಕ್ಕೆ ಸೇರಿಸುವುದಷ್ಟೇ ಬಾಕಿ ಉಳಿದಿರುವ ಕೆಲಸ ಇಲ್ಲಿಂದ ಮುಂದಕ್ಕೆ ಕನ್ನಡ ವಿದ್ವಾಂಸರು ಈ ಮಾಹಿತಿಕಣಜವನ್ನು ಹೇಗೆ ಬಳಸಿಕೊಳ್ಳುತ್ತಾರೆಂಬುದನ್ನು ಕಾಯ್ದು ನೋಡಬೇಕಾಗಿದೆ. ಇಡೀ ಯೋಜನೆ ಹೊಳೆಯಲ್ಲಿ ಹುಣಿಸೆಹಣ್ಣು ತೊಳೆದಂತೆ ಆಗಿದೆ. ಸಾಂಸ್ಥಿಕ ನೆಲೆಯ ಅಹಂಗಳಿಂದಾಗಿ ಮಾಡಿದ ಕೆಲಸವೆಲ್ಲ ಉಪಯೋಗಕ್ಕೆ ಬಾರದಂತೆ ಆಗಿಹೋಯಿತು.)

ಕನ್ನಡ-ಕನ್ನಡ ನಿಘಂಟಿನ ರಚನೆ ಈ ಶತಮಾನದ ಭಾಷಾಧ್ಯಯನದ ಅತ್ಯಂತ ಮಹತ್ವಪೂರ್ಣ ಸಾಧನೆ. ಭಾರತೀಯ ಭಾಷೆಗಳಲ್ಲೇ ಅಪೂರ್ವವೆನಿಸುವ ವಿಸ್ತೃತವಾದ ಮಾಹಿತಿಕೋಶವನ್ನು ನಮ್ಮ ಹಿರಿಯ ವಿದ್ವಾಂಸರು ರಚಿಸಿಕೊಟ್ಟಿದ್ದಾರೆ. ಅದಕ್ಕಾಗಿ ಅವರಿಗೆ ಕೃತಜ್ಞತೆ ಸಲ್ಲಿಸುವುದೆಂದರೆ ಆ ಮಾಹಿತಿ ಕಣಜವನ್ನು ವಿವಿಧ ರೀತಿಯಲ್ಲಿ ಬಳಸುವುದು. ನಿಘಂಟಿನಲ್ಲಿ ಅಂತರ್ಗತವಾಗಿರುವ ಮಾಹಿತಿಸರಣಿಗಳನ್ನು ಹೊರತೆಗೆದು ಅದರಿಂದ ಭಾಷೆಯ ಅಧ್ಯಯನದ ದಿಕ್ಕನ್ನು ವಿಸ್ತಾರಗೊಳಿಸುವುದು. ಬರಲಿರುವ ದಶಕಗಳಿಗೆ ಈ ಮಾಹಿತಿಕಣಜವನ್ನು ಪ್ರಕ್ರಿಯಾತ್ಮಕ ರೂಪದಲ್ಲಿ ಸಿದ್ಧಪಡಿಸದೇ ಹೋದರೆ ಮತ್ತು ಹೀಗೆ ಸಿದ್ಧಗೊಂಡ ರೂಪವನ್ನು ಬಳಸದೇ ಹೋದರೆ ಆ ವಿದ್ವಾಂಸರ ಶ್ರಮಕ್ಕೆ ಪ್ರತಿಫಲ ದೊರೆತಂತಾಗುವುದಿಲ್ಲ.

# ಮಾತು ಮತ್ತು ಬರೆಹ

ಕನ್ನಡ ಭಾಷೆಯ ಇತಿಹಾಸದಲ್ಲಿ ಮಾತು ಮತ್ತು ಬರೆಹಗಳ ನಡುವೆ ಏರ್ಪಟ್ಟ ಸಂಬಂಧಗಳು ಹಲವು ಪಲ್ಲಟಗಳನ್ನು ಕಂಡಿದೆ. ಕಳೆದ ಐವತ್ತು ವರ್ಷಗಳಲ್ಲಿ ಭಾಷಾಭಿವ್ಯಕ್ತಿಯ ಈ ಎರಡು ನೆಲೆಗಳ ನಡುವೆ ಉಂಟಾಗಿರುವ ಸಂಬಂಧಗಳ ಸ್ವರೂಪವನ್ನು ಚರ್ಚಿಸುವುದು ಈ ಅಧ್ಯಾಯದ ಉದ್ದೇಶ.

ಮಾತು ಮತ್ತು ಬರೆಹ ಇವೆರಡೂ ಭಾಷೆಯ ಅಭಿವ್ಯಕ್ತಿ ಕೌಶಲಗಳು. ಮಾತು ಕೇಳಿಸಿಕೊಳ್ಳುವುದನ್ನು, ಬರೆಹ ಓದುವುದನ್ನು ಗ್ರಹಿಕೆಯ ಕೌಶಲಗಳನ್ನಾಗಿ ನಿರೀಕ್ಷಿಸುತ್ತದೆ. ಕನ್ನಡದಲ್ಲಿ ಬರೆದುದನ್ನು ಓದುವ ಪರಂಪರೆ ಇದ್ದಂತೆ, ಓದಿ ಹೇಳುವ ಪರಂಪರೆಯು ಬಹು ದೃಢವಾಗಿ ನೆಲೆಗೊಂಡಿತ್ತು. ಹಾಗೆ ನೋಡಿದರೆ ಕನ್ನಡ ಬರೆಹವನ್ನು ಓದಿಕೊಳ್ಳುವ ಪರಂಪರೆಗೆ ಬಹುದೀರ್ಘ ಇತಿಹಾಸವಿಲ್ಲ. ಅಕ್ಷರಸ್ಥರ ಸಂಖ್ಯೆ ಕನಿಷ್ಠವಾಗಿದ್ದಾಗಲೂ ಬರೆದ ಕೃತಿಗಳು, ಓದಿ ಹೇಳುವ, ವಾಚನ ಪರಂಪರೆಗಳು ಜನಸಮುದಾಯದ ಭಾಗವಾಗಿದ್ದವು. ಹಾಗೆಯೇ ಕೇವಲ ಮಾತಿನ ರೂಪದಲ್ಲಿ, ಜನರ ನೆನಪಿನಲ್ಲಿ ಉಳಿದಿರುವ ಎಷ್ಟೋ ಸಾಮಗ್ರಿಗಳು ಕಾಲಾನುಕ್ರಮದಲ್ಲಿ ಬರೆಹರೂಪಕ್ಕೆ ಬಂದಿವೆ. ಹೀಗೆ ಬರೆಹ ರೂಪದಲ್ಲಿ ಇದ್ದರೂ ಅವುಗಳ ನಿಜ ಆವಿಷ್ಕಾರ ಅವುಗಳನ್ನು ಓದಿದಾಗ ಮಾತ್ರ ಸಾಧ್ಯ. ಶೂನ್ಯಸಂಪಾದನೆಗಳು ಇದಕ್ಕೆ ಅತ್ಯುತ್ತಮ ನಿದರ್ಶನಗಳಾಗಿವೆ. ಅಲ್ಲಿ ವಚನಗಳನ್ನು ಬರೆಹಕ್ಕೆ ಪರಿವರ್ತಿಸಲಾಗಿದ್ದರೂ ಇಡೀ ಶೂನ್ಯಸಂಪಾದನೆ ವಾಚನದ ಮೂಲಕವೇ ತನ್ನ ಸ್ವರೂಪವನ್ನು ಬಿಟ್ಟುಕೊಡುತ್ತದೆ. ಮುದ್ರಣದ ಆವಿಷ್ಕಾರವಾದ ಅನಂತರದ ಅವಧಿಯಲ್ಲಿ ಓದಿ ಹೇಳುವ ಕೃತಿಗಳ ಸಂಖ್ಯೆಗಿಂತ ಓದಿಕೊಳ್ಳುವ ಕೃತಿಗಳು ಹೆಚ್ಚಾದವು. ಈ ಬದಲಾವಣೆ ಕನ್ನಡ ಸಂಸ್ಕೃತಿಯಲ್ಲಿ ಸಾಕಷ್ಟು ಪರಿವರ್ತನೆಗಳನ್ನು ಉಂಟುಮಾಡಿದೆ.

ಕಳೆದ ಐವತ್ತು ವರ್ಷಗಳಲ್ಲಿ ಈ ಪರಿಸ್ಥಿತಿಯಲ್ಲಿ ಒಂದು ಗಮನಾರ್ಹ ಪಲ್ಲಟವಾಗಿರುವುದನ್ನು ನೋಡಬಹುದು. ಶಿಕ್ಷಣದ ಸಾರ್ವತ್ರಿಕತೆಯಿಂದಾಗಿ ಓದುವವರ ಮತ್ತು ಬರೆಯುವವರ ಸಂಖ್ಯೆಯಲ್ಲಿ ಆಗಾಧ ಪ್ರಮಾಣದ ಹೆಚ್ಚಳ ಉಂಟಾಗಬಹುದೆಂದು ನಿರೀಕ್ಷಿಸಲಾಗಿತ್ತು. ಆದರೆ ಕಳೆದ ಆರು ದಶಕಗಳಲ್ಲಿ ಶಿಕ್ಷಣದ ಸಾರ್ವತ್ರಿಕತೆ ನಿರೀಕ್ಷಿಸಿದ ಮಟ್ಟದಲ್ಲಿ ವ್ಯಾಪಕವಾಗಿಲ್ಲ. ಇದರ ಸಾಮಾಜಿಕ ಪರಿಣಾಮಗಳು ಬೇರೆಯೇ ಇವೆ. ನಮಗೆ ಈ ಪರಿಸ್ಥಿತಿಯಿಂದ ಉಂಟಾಗಿರುವ ಭಾಷಿಕ ಪರಿಣಾಮಗಳು ಮುಖ್ಯವಾಗಿವೆ. ಅಲ್ಲದೆ ಓದುವ ಸಾಮರ್ಥ್ಯ ಇರುವವರು ಬರೆಯುವವರೂ ಆಗಿರುತ್ತಾರೆ ಎಂಬುದು

ಒಂದು ಸಾಮಾನ್ಯ ನಿರೀಕ್ಷೆ. ಇದು ಸಹಜವಾಗಿಯೂ ಇದೆ. ಆದರೆ ಓದಬಲ್ಲವರು ಬರೆಯಬಲ್ಲವರಾಗಿರುತ್ತಾರಾದರೂ ಅವರು ಬರೆಯಬೇಕೆಂಬ ಒತ್ತಾಯ ಇರುವುದಿಲ್ಲ. ಈ ಅಂಶವನ್ನು ನಾವು ಪರಿಗಣಿಸಬೇಕು. ಇದೂ ಅಲ್ಲದೇ ಮಾತು, ಕೇಳುವ ಕೌಶಲವನ್ನು ಬಯಸುತ್ತದೆ. ಈಗ ಹೀಗೆ ಆಡುವ ಮಾತು ಸ್ವಯಂಸ್ಫೂರ್ತವಾಗಿಯೇ ಅಂದರೆ ಮಾತಾಡುತ್ತಿರುವಾಗಲೇ ಸೃಷ್ಟಿಯಾಗಬೇಕೆಂಬ ನಿಯಮವಿಲ್ಲ. ಈಗಾಗಲೇ ಸೃಷ್ಟಿ ಯಾದ ಮಾತನ್ನು ಯಾರೋ ಹೇಳುತ್ತಿರಬಹುದು.

ಕನ್ನಡದ ಮಾತು ಮತ್ತು ಬರಹ ಇವುಗಳ ಅಧಿಕೃತತೆಯ ಬಗೆಗೂ ಒಂದು ಮುಖ್ಯ ಪಲ್ಲಟ ಆದಂತೆ ತೋರುತ್ತದೆ. ಬಹು ಹಿಂದೆ ಸಾಂಸ್ಕೃತಿಕವಾದ ನೆಲೆಗಳಲ್ಲಿ ಮಾತಿಗೆ ಅಧಿಕೃತ ನೆಲೆ ಒದಗಿತ್ತು. ಅದನ್ನು ಬದಲಿಸಲು ಬರುವುದಿಲ್ಲ, ಮತ್ತು ಒಮ್ಮೆ ಮಾತಾಡಿದರೆ ಮಾತಾಡಿದ ವ್ಯಕ್ತಿ ತನ್ನ ಮಾತಿಗೆ ಬದ್ಧವಾಗಿರಬೇಕು ಎಂಬ ನಂಬಿಕೆಗಳು ಪ್ರಚಲಿತವಾಗಿದ್ದವು, ಆದರೆ ಈಗ ಮಾತಿಗಿಂತ ಬರಹಕ್ಕೆ ಹೆಚ್ಚು ಅಧಿಕೃತತೆ ಇದೆ. ಜನರು ಬರೆದುದನ್ನು ಒಪ್ಪುವಷ್ಟು, ನಂಬುವಷ್ಟು ಮಟ್ಟದಲ್ಲಿ ಮಾತನ್ನು ಪರಿಗ್ರಹಿಸಬೇಕಾಗಿಲ್ಲ ಎಂಬ ನೆಲೆಗೆ ಹೊರಳಿದ್ದಾರೆ. ಈ ಪರಿವರ್ತನೆಗೆ ಚಾರಿತ್ರಿಕ ವಾದ ಒತ್ತಡಗಳು ಕಾರಣವಾಗಿವೆ. ಬರೆದದ್ದು ಅಕ್ಷರಗಳಲ್ಲಿರುತ್ತದೆ. ಆದ್ದರಿಂದ ಅದನ್ನು ಬದಲಾಯಿಸಲು ಬರುವುದಿಲ್ಲ. ಹಾಗಾಗಿ ಅದು ಅಧಿಕೃತ ಎಂಬ ತಿಳುವಳಿಕೆ ಜಾರಿಯಲ್ಲಿದೆ. ಮಾತಿಗಿಂತ ಬರೆಹಕ್ಕೆ ದೊರೆತ ಹೆಚ್ಚಿನ ಮಹತ್ವ ಸಾಂಸ್ಕೃತಿಕವಾಗಿ ಸಿಂಧುವಾಗಿದೆಯೇ ಎಂಬುದನ್ನು ನಾವು ಪರಿಗಣಿಸಬೇಕಾಗಿದೆ.

ಮಾತಿನ ಒಂದು ಲಕ್ಷಣವೆಂದರೆ ಅದರ ರೇಖಾತ್ಮಕ ಚಲನೆ. ಒಮ್ಮೆ ಧ್ವನಿಗಳು ಹೊರಬಂದ ಮೇಲೆ ಅವುಗಳನ್ನು ಮತ್ತೆ ಕೇಳಿಸಿಕೊಳ್ಳುವುದು ಸಾಧ್ಯವಾಗುವುದಿಲ್ಲ. ಈ ಮಿತಿಯನ್ನು ಮೀರಲು ಮಾತಿನಲ್ಲಿ ಕೆಲವು ತಂತ್ರಗಳನ್ನು ಬಳಸುತ್ತೇವೆ. ಅವುಗಳಲ್ಲಿ ಮುಖ್ಯವಾದುದು ಪುನರಾವರ್ತನೆ. ಮರೆಯಬಹುದಾದ ಸಂಗತಿಗಳನ್ನು ಮೇಲಿಂದ ಮೇಲೆ ಹೇಳುವುದರಿಂದ ಈ ಅಪಾಯವನ್ನು ಮೀರಬಹುದು. ಬರಹದಲ್ಲಿ ಓದಿದ್ದನ್ನು ಮರಳಿ ಓದುವ ಅವಕಾಶವಿರುವುದರಿಂದ ಅದರಲ್ಲಿ ಅಭಿವ್ಯಕ್ತಿಯೂ ಹ್ರಸ್ವ ಮತ್ತು ಖಚಿತ ಎಂಬುದು ಒಂದು ತಿಳುವಳಿಕೆ. ಈ ಎಲ್ಲ ಲಕ್ಷಣಗಳು ಕನ್ನಡದ ಮಟ್ಟಿಗೆ ನಿಜ. ಆದರೆ ಇವೆಲ್ಲವೂ ಮತ್ತೊಮ್ಮೆ ಪರೀಕ್ಷೆಗೆ ಒಳಗಾಗುತ್ತಿರುವ ಲಕ್ಷಣಗಳು ಎಂಬುದೂ ಅಷ್ಟೇ ನಿಜ.

ಮಾತನ್ನು ಅನೌಪಚಾರಿಕ ಎಂದೂ ಬರಹವನ್ನು ಔಪಚಾರಿಕ ಎಂದೂ ವಿವರಿಸುವುದುಂಟು. ಆದರೆ ಅನೌಪಚಾರಿಕವಾದ ಬರೆಹಗಳು ಮತ್ತು ಔಪಚಾರಿಕವಾದ ಮಾತುಗಳು ಇರಲು ಸಾಧ್ಯ. ಆದ್ದರಿಂದ ಈ ಲಕ್ಷಣಗಳನ್ನು ಕೇವಲ ವಿಭಜನೆಗೆ ಅನುಕೂಲವಾಗುವ ಪರಿಕರಗಳು ಎಂದು ಭಾವಿಸಲು ಸಾಧ್ಯವಿಲ್ಲ. ಹೀಗಾದರೂ ಈ ಎರಡು ಬಗೆಗಳಲ್ಲಿ ಔಪಚಾರಿಕತೆ ಎನ್ನುವುದು ಸಾಪೇಕ್ಷವಾಗಿಯಾದರೂ ಮಹತ್ವವನ್ನು ಪಡೆದುಕೊಳ್ಳುತ್ತದೆ. ಹಾಗೆ ನೋಡಿದರೆ ಔಪಚಾರಿಕ ಮತ್ತು ಅನೌಪಚಾರಿಕ ಎಂಬ ವಿಭಜನೆಯೂ ಎಷ್ಟೋ ಸಂದರ್ಭಗಳಲ್ಲಿ ಕೃತಕ ಅನ್ನಿಸುತ್ತದೆ.

ಏಕೀಕರಣದ ಅನಂತರ ಕನ್ನಡದಲ್ಲಿ ಮುದ್ರಣ ರೂಪದಲ್ಲಿ ಸಿದ್ಧವಾಗುವ ಬರೆಹಗಳು ಅಗಾಧ ಪ್ರಮಾಣದಲ್ಲಿ ಹೆಚ್ಚಿವೆ. ಹಿಂದೆಂದೂ ಇಲ್ಲದಷ್ಟು ಪ್ರಮಾಣದಲ್ಲಿ ಪುಸ್ತಕಗಳು ಸಿದ್ಧಗೊಳ್ಳುತ್ತಿವೆ. ಪತ್ರಿಕೆಗಳು ಪ್ರಸಾರ ಪಡೆದಿವೆ. ಇದಲ್ಲದೆ ಇನ್ನೂ ಹಲವು ರೀತಿಗಳಲ್ಲಿ ಬರೆಹದ ವ್ಯಾಪ್ತಿ ಹೆಚ್ಚುತ್ತಿವೆ. ಹೀಗೆ ಬರೆಹ ರೂಪದಲ್ಲಿ ಸಿದ್ಧಗೊಂಡು ಹೊರಬಂದದ್ದು, ಅಷ್ಟೇ ವೇಗವಾಗಿ ನಾಶವೂ ಆಗುತ್ತಿದೆ. ಅಥವಾ ಜನರ ನೆನಪಿನಿಂದ ಜಾರಿಹೋಗುತ್ತಿದೆ. ಅತಿರೇಕದ ಸಂದರ್ಭಗಳಲ್ಲಿ ಬರೆಹ ರೂಪದಲ್ಲಿ ಸಿದ್ಧಗೊಂಡು ಪ್ರಕಟವಾದುದು ಕೆಲವು ವೇಳೆ ಓದಿನ ನೆಲೆಗೆ ಪ್ರವೇಶಿಸದೆ ಇರುವುದುಂಟು. ಪುಸ್ತಕ ರೂಪದಲ್ಲೇ ಅದು ಉಳಿದು ಬಿಡುತ್ತದೆ. ಕನ್ನಡದಲ್ಲಿ ಬರೆಹ ಈ ಪ್ರಮಾಣದಲ್ಲಿ ಸಿದ್ಧಗೊಂಡು ಅಷ್ಟೇ ತೀವ್ರವಾಗಿ ನಾಶವಾಗುತ್ತಿರುವುದು ಎದ್ದು ಕಾಣುವ ಒಂದು ಲಕ್ಷಣವಾಗಿದೆ. ಬರೆಹದ ಪ್ರಧಾನ ತಾತ್ವಿಕತೆಗೆ ಇದು ವಿರುದ್ಧವಾಗಿದೆ. ಬರೆಹ ಶಾಶ್ವತ ಎಂದು ಭಾವಿಸಿರುವಾಗಲೇ ಅದು ಕಾಲಕ್ರಮೇಣ ಓದುವವರ ನೆನಪಿನಿಂದ ಸರಿದು ಹೋಗಿಬಿಡಬಹುದು. ಅಲ್ಲದೆ ತಾಂತ್ರಿಕ ಕಾರಣಗಳಿಂದ ಅದರ ಲಭ್ಯತೆಯು ಕಡಿಮೆಯಾಗಿ ಬಿಡಬಹುದು. ಬರಹದ ಈ ಲಕ್ಷಣ ಕಳೆದ ಮೂರುನಾಲ್ಕು ದಶಕದ ಒಂದು ಮುಖ್ಯ ಬದಲಾವಣೆ ಎಂದು ಪರಿಗಣಿಸಲು ಅಡ್ಡಿಯಿಲ್ಲ.

ಮಾತು ಮೈತಳೆಯುವ ವಲಯಗಳು ಅಗಾಧ ಪ್ರಮಾಣದಲ್ಲಿವೆ. ಜನರು ತಮ್ಮ ದೈನಿಕಗಳಲ್ಲಿ ಮಗ್ನರಾಗಿ ಆಡುವ ಮಾತು ಅನೌಪಚಾರಿಕವಾದರೆ ಔಪಚಾರಿಕ ನೆಲೆಯಲ್ಲಿಯೂ ಭಾಷೆ ಮಾತಾಗಿ ರೂಪುಗೊಳ್ಳುತ್ತದೆ. ಈ ಮಾತು ಅನೌಪಚಾರಿಕ ನೆಲೆಯಲ್ಲಿ ಯಾವ ಯಾವ ಭಾಷಿಕ ಅಂಶಗಳನ್ನು ಒಳಗೊಂಡಿರುತ್ತದೆ ಎಂಬುದನ್ನು ನಾವು ಕಾಣುವುದು ಸಾಧ್ಯವಿಲ್ಲ. ಅದರಲ್ಲಿ ವೈವಿಧ್ಯಗಳು ಕನಿಷ್ಠ ಪ್ರಮಾಣದಲ್ಲಿ ಇರಬಹುದು. ಆದರೆ ಔಪಚಾರಿಕ ಮಾತುಕತೆಗಳಿಗೆ ಅಗಾಧ ಗಾಂಭೀರ್ಯವಿರುತ್ತದೆ. ಅಲ್ಲಿ ನಿರೀಕ್ಷೆಯ ಚೌಕಟ್ಟನ್ನು ಗಮನಿಸಿ ಅದಕ್ಕನುಗುಣವಾದ ಮಾತನಾಡಬೇಕೆಂಬ ಒತ್ತಡ ಇರುತ್ತದೆ. ಇದೂ ಅಲ್ಲದೆ ಔಪಚಾರಿಕ ಮಾತಿನ ಒಂದು ವಲಯದಲ್ಲಿ, ಮಾತಾಡುತ್ತಿರುವವರು ವಾಸ್ತವವಾಗಿ, ಬರೆದ ಮಾತನ್ನು ಓದುತ್ತಾ ಇರುವವರೂ ಆಗಿರಬಹುದು. ಉದಾ.ಗೆ ದೂರದರ್ಶನದ ವಾರ್ತಾವಾಚನವನ್ನು ಗಮನಿಸಿ. ಅಲ್ಲಿ ಈಗಾಗಲೇ ಬರೆದು ಸಿದ್ಧಪಡಿಸಿದ್ದನ್ನು ನಮಗೆ ಕಾಣದಂತೆ ಓದುತ್ತಾ ಅಂದರೆ ಮಾತಾಡುತ್ತಾ ಇರುತ್ತಾರೆ. ವಾರ್ತಾವಾಚಕರು ಕಣ್ಣಿಂದ ಓದಿ ಆ ಕೂಡಲೇ ಧ್ವನಿಯಾಗಿ ಪರಿವರ್ತಿಸುವವರು. ಇದಕ್ಕಿಂತ ಬೇರೆಯೇ ಆದ ಇನ್ನೊಂದು ನೆಲೆಯಿದೆ. ಮಾತಾಡುವವರು ಬರೆದದ್ದನ್ನು ಓದಿ, ಮನಸ್ಸಿನಲ್ಲಿ ಗ್ರಹಿಸಿ ಆ ನೆನಪಿನಿಂದಲೇ ಪುನರುಚ್ಚರಿಸುತ್ತಿರಬಹುದು. ನಾಟಕದ ಪಾತ್ರಗಳು ಇದಕ್ಕೊಂದು ನಿದರ್ಶನ. ಅಲ್ಲದೆ ಟಿ.ವಿ ಕಾರ್ಯಕ್ರಮಗಳಲ್ಲಿ ಕಾಣಿಸಿಕೊಳ್ಳುವ ನಿರೂಪಕರು ಹೀಗೆ ಒಮ್ಮೆ ಬರೆದುದನ್ನು ಓದಿಕೊಂಡು ಅದನ್ನು ನೆನಪಿನಿಂದ ಮಾತಾಡುವಂತೆ ಹೇಳಬೇಕು. ಈ ಅಂಶ ಮುಖ್ಯ. ಬರೆದುದನ್ನು ಓದುವಾಗ ಅದು ಬರೆದಂತೆಯೇ ಇರುವ ಹಾಗೆ ನೋಡಿಕೊಳ್ಳುವುದು ಒಂದು ಸಾಧ್ಯತೆ. ಇನ್ನೊಂದು ಬರೆದುದನ್ನು ಮಾತಾಗಿ ಪರಿವರ್ತಿಸುವುದು, ಅಥವಾ ಅದನ್ನು ಓದುವವರಿಗೆ ಅನುಕೂಲವಾಗುವಂತೆ ಬರವಣಿಗೆಯನ್ನು ಕೂಡಾ ಮಾತಿನ ಲಯದಲ್ಲಿ ಸಿದ್ಧಪಡಿಸುವುದು. ಕಳೆದ ಐವತ್ತು

ವರ್ಷಗಳಲ್ಲಿ ಕನ್ನಡ ಈ ಬಗೆಯ ಪರಿಣಾಮಗಳನ್ನು ಎದುರಿಸಿದೆ. ಮಾತನ್ನು ಸಹಜ ಎನ್ನುವಂತೆ ಪರಿವರ್ತಿಸುವುದು ನಿರೂಪಕರ ಕೌಶಲವೂ ಹೌದು. ಅವರಿಗೆ ನೆರವಾಗುವಂತೆ ಬರೆಹರೂಪದಲ್ಲಿ ಪರಿವರ್ತನೆ ಮಾಡಿಕೊಳ್ಳುವುದೂ ಅಷ್ಟೇ ಅಗತ್ಯವಾಗಿದೆ.

ಈ ಮೇಲೆ ಹೇಳಿದ ಲಕ್ಷಣ ಕನ್ನಡದ ಮಟ್ಟಿಗೆ ಹೊಸದು. ಇಂತಹ ಪ್ರಸಂಗಗಳು ಬಹಳ ಕಡಿಮೆ ಪ್ರಮಾಣದಲ್ಲಿ ಮಾತ್ರ ಈ ಹಿಂದೆ ಇದ್ದಿರಬಹುದು. ಹಳೆಗಾಲದ ಬರಹಗಾರರು ತಾವು ಬರೆಯುತ್ತಿದ್ದರೂ ಅದನ್ನು ಯಾರೋ ಕೇಳಿಸಿಕೊಳ್ಳುತ್ತಿದ್ದಾರೆ ಎಂದು ಭಾವಿಸಿ ಅದಕ್ಕನುಗುಣವಾಗಿ ತಮ್ಮ ಶೈಲಿಯನ್ನು ರೂಪಿಸಿಕೊಳ್ಳುತ್ತಿದ್ದರು. ಅಥವಾ ಬರೆಯುವವರು ಓದುತ್ತಿರುವವರ ಜೊತೆಯಲ್ಲಿ ತಾವು ಕುಳಿತು ಕೇಳುತ್ತಿದ್ದೇವೆ ಎಂಬ ಭಾವನೆ ಬರುವಂತೆ ನಡುನಡುವೆ ಓದುಗರನ್ನು ಉದ್ದೇಶಿಸಿ ಮಾತನಾಡುವಂತೆ ಬರೆಯುತ್ತಿದ್ದುದೂ ಉಂಟು. ಇವೆಲ್ಲವೂ ಇದ್ದರೂ ಈ ಐದು ದಶಕಗಳಲ್ಲಿ ಇಂತಹ ಬದಲಾವಣೆಯ ಸಾಧ್ಯತೆಗಳು ಅಗಾಧ ಪ್ರಮಾಣದಲ್ಲಿ ಹೆಚ್ಚಿಕೊಂಡಿವೆ.

ಬರೆಹ ಮತ್ತು ಮಾತುಗಳ ನಡುವೆ ಪ್ರಯೋಗದ ಹಂತದಲ್ಲಿ ಇರುವ ಬದಲಾವಣೆ ಮತ್ತು ಪಲ್ಲಟಗಳನ್ನು ಗಮನಿಸುವಾಗಲೇ ಭಾಷಿಕನೆಲೆಯಲ್ಲಿ ಅವುಗಳಿಗೆ ಇರುವ ಇನ್ನಷ್ಟು ವ್ಯತ್ಯಾಸಗಳನ್ನು ಗುರುತಿಸಬೇಕು. ಬರಹದ ಪದಕೋಶ ಸಾಕಷ್ಟು ಪ್ರಮಾಣದಲ್ಲಿ ಮಾತಿನ ಪದಕೋಶಕ್ಕಿಂತ ಬೇರೆಯಾಗಿರುತ್ತದೆ. ಬೇರೆ ಬೇರೆ ಪದಗಳನ್ನು ಬಳಸುವ ಜೊತೆಗೆ ಒಂದೇ ಪದದ ಭಿನ್ನರೂಪಗಳಲ್ಲಿ ಒಂದನ್ನು ಮಾತಿನಲ್ಲೂ ಇನ್ನೊಂದನ್ನು ಬರಹದಲ್ಲೂ ಬಳಸುತ್ತೇವೆ. ಈ ವ್ಯತ್ಯಾಸ ಅಭ್ಯಾಸ ಯೋಗ್ಯವಾದದ್ದು. ಏಕೆಂದರೆ ಬೇರೆ ಬೇರೆ ಉದ್ದೇಶಗಳಿಗಾಗಿ ಬರೆಯುತ್ತಿರುವವರು ಈ ಸೌಲಭ್ಯವನ್ನು ಬಳಸಿಕೊಂಡು ಸೂಕ್ಷ್ಮರೀತಿಯ ಪರಿವರ್ತನೆಗಳನ್ನು ಮಾಡಿಕೊಳ್ಳಬಹುದು.

ಕನ್ನಡದಲ್ಲಿ ಈ ಬಗೆಯ ತರಬೇತು ಇಲ್ಲವೇ ಇಲ್ಲ. ಎಲ್ಲೆಲ್ಲಿ ಮಾತಿಗೆ ಅಥವಾ ಮಾತಾಡಿದ ರೀತಿಗೆ ಬದಲಾಗುತ್ತದೆಯೋ ಅಂತಹ ಕಡೆಗಳಿಗೆ ಸೂಕ್ತವಾದ ರೀತಿಯ ಬರವಣಿಗೆ ಮಾತಾಗಬೇಕೆಂಬ ಅರಿವು ಇಲ್ಲ. ಒಂದು ವೇಳೆ ಅರಿವಿದ್ದರೂ ಅದನ್ನು ನಿರ್ವಹಿಸಲು ಅನುಕೂಲವಾಗುವ ಪರಿಕರಗಳು ಇಲ್ಲವಾಗಿವೆ. ಈಗಾಗಲೇ ಉದಾಹರಿಸಿದಂತೆ ಟಿ.ವಿ ವಾರ್ತಾವಾಚಕರ ಶೈಲಿಯನ್ನು ಗಮನಿಸಿದರೆ ಅವರ ಮಾತಿನ ಲಯ ಓದಿನಲಯವೂ ಹೌದು. ಆದರೆ ನೋಡಿಕೊಂಡು ಓದುತ್ತಿರುವವರ ಲಯ. ವಾಸ್ತವವಾಗಿಯೂ ಅವರು ಓದಲು ಅನುಕೂಲವಾಗುವ ತಂತ್ರಜ್ಞಾನ ಅವರಿಗೆ ಲಭ್ಯವಿರುತ್ತದೆ. ಆದರೆ ಅದೇ ಮಾಧ್ಯಮದಲ್ಲಿ ಬೇರೆ ಬೇರೆ ಕಾರ್ಯಕ್ರಮಗಳನ್ನು ನಡೆಸುವ ನಿರೂಪಕರ ಮಾತಿಗೆ ಬಂದರೆ ಅವರಿಗೆ ತಮ್ಮ ನಿರೂಪಣೆಯನ್ನು ಮಾಡಲು ಹೆಚ್ಚಿನ ಸ್ವಾತಂತ್ರ್ಯವನ್ನು ನೀಡಲಾಗಿರುತ್ತದೆ. ಆದರೆ ಅವರು ಒಂದು ಸ್ಕ್ರಿಪ್ಟಿಗೆ ಬದ್ಧರಾಗಿರಬೇಕು. ಅವರು ಆಡಬೇಕಾದ ಮಾತುಗಳನ್ನು ಮೊದಲೇ ಬರೆದು ಸಿದ್ಧಪಡಿಸಲಾಗಿರುತ್ತದಾದರೂ ಕಾರ್ಯಕ್ರಮ ಸಿದ್ಧಗೊಳ್ಳುವಾಗ ಅಥವಾ ಪ್ರಸಾರಗೊಳ್ಳುವಾಗ ನಿರೂಪಕರಿಗೆ ಅದು ಲಭ್ಯವಿರುವುದಿಲ್ಲ. ಒಂದು ವೇಳೆ ಅವರಿಗೆ ಸಿದ್ಧಪಡಿಸಿದ ಮಾತುಗಳು ಬರೆಹದ ಹಳೆಯ ಲಕ್ಷಣವನ್ನೇ ಬಳಸಿಕೊಂಡಿದ್ದರೆ ಆಗ ಸಂವಹನಕ್ಕೆ ಅಗಾಧ ಪ್ರಮಾಣದ ಪೆಟ್ಟು ಬೀಳುತ್ತದೆ. ನಿರೂಪಣೆ ಅಸಹಜವಾಗುತ್ತದೆ.

ಈ ಸಮಸ್ಯೆ ನಮ್ಮ ದೃಶ್ಯಮಾಧ್ಯಮಗಳಲ್ಲೂ ಇರುವುದನ್ನು ಸುಲಭವಾಗಿ ಗಮನಿಸಬಹುದು. ಒಂದೆರಡು ಸರಳ ಉದಾಹರಣೆಗಳನ್ನು ಗಮನಿಸೋಣ. ಕನ್ನಡ ಮಾತಿನಲ್ಲಿ ಯಾರೂ 'ಮತ್ತು' ಎಂಬ ಪದವನ್ನು ಬಳಸುವುದಿಲ್ಲ. ಅಂದರೆ ಈ ಪದವನ್ನು ಉಚ್ಚರಿಸುವುದಿಲ್ಲ ಎಂದಲ್ಲ. ಕನ್ನಡ ಮಾತಿನ ಲಯದಲ್ಲಿ ಈ ಪದಕ್ಕಿರುವ ಅರ್ಥದ ನಿಯೋಗನ್ನು ನಿರ್ವಹಿಸಲು ಬೇರೆಯ ಪರಿಕರಗಳೇ ಇವೆ. ಹಾಗಾಗಿ ಮಾತಿನಲ್ಲಿ ಅದನ್ನು ಬಳಸಬೇಕಾದ ಪ್ರಸಂಗ ಬರುವುದಿಲ್ಲ. ಆದರೆ ಈಗ ಯಾವುದೇ ವಾರ್ತಾವಾಚನದ ವಾದರಿಯನ್ನು ಕೇಳಿಸಿಕೊಂಡರೆ ಅಲ್ಲಿ ಈ ಪದ ಬಳಕೆಯಾಗುವುದನ್ನು ಗುರುತಿಸಬಹುದು. ಅದು ಓದುವವರ ದೋಷವಲ್ಲ. ಅವರಿಗೆ ಬರೆದುಕೊಟ್ಟದ್ದೇ ಹಾಗೆ. ಅದನ್ನು ಅವರು ಓದುತ್ತಿದ್ದಾರೆ. ಅಂದರೆ ಓದಿಕೊಳ್ಳಲು ಸಿದ್ಧವಾದ ಬರೆಹವನ್ನು ಓದಿ ಹೇಳಲು ಬಳಸುತ್ತಿದ್ದೇವೆ. ಇಂತಹದೇ ಇನ್ನೂ ಹಲವು ಉದಾಹರಣೆಗಳನ್ನು ಗುರುತಿಸಬಹುದು. ಮುಖ್ಯವಾಗಿ ಸಂಕಥನ ಸೂಚಕಗಳು ಮಾತು ಮತ್ತು ಬರಹಗಳಲ್ಲಿ ಹೇಗೆ ಬಳಕೆಯಾಗುತ್ತವೆ, ಅವುಗಳ ಪ್ರಸಾರದಲ್ಲಿ ಇರುವ ವ್ಯತ್ಯಾಸಗಳೇನು ಎಂಬ ಅರಿವು ಇಲ್ಲದಿದ್ದರೆ ಓದಿ ಹೇಳುವ ಬರೆಹ ಎಂಬ ಹೆಸರಿನಲ್ಲಿ, ಈಗಾಗಲೇ ಹೇಳಿದಂತೆ ಓದಿಕೊಳ್ಳುವ ಬರೆಹವನ್ನು ಸೃಷ್ಟಿಸಿಬಿಡುತ್ತೇವೆ.

ಈಗ ಬರೆಹದ ಲಕ್ಷಣವನ್ನು ಗುರುತಿಸುತ್ತಾ ಖಚಿತತೆ ಮತ್ತು ಸಂಕ್ಷಿಪ್ತತೆಗಳು ಅದರ ಒಂದು ಮುಖ್ಯ ಲಕ್ಷಣವೆಂದು ಹೇಳಿದ್ದೆವು. ಕನ್ನಡದಲ್ಲಿ ಈ ಲಕ್ಷಣ ಕೂಡ ಬದಲಾಗಿದೆ. ಬರೆಹವು ಅಗಾಧ ಪ್ರಮಾಣದಲ್ಲಿ ಸಿದ್ಧಗೊಂಡು ನಾಶವಾಗುತ್ತಿರುವ ಮಾತು ಬದಿಗಿರಲಿ. ಈ ಕ್ಷಣದಲ್ಲಿ ನಮ್ಮ ಓದಿಗೆಂದು ಸಿದ್ಧವಾಗುವ ಬರವಣಿಗೆಯಲ್ಲಿ ಅಗಾಧ ಪ್ರಮಾಣದಲ್ಲಿ ನಿರುಪಯುಕ್ತ ಅಂಶಗಳು ಇರುತ್ತವೆ. ಇಲ್ಲಿ ನಿರುಪಯುಕ್ತ ಎಂದರೆ, ಬರವಣಿಗೆಯಲ್ಲಿ ಆ ಭಾಗವನ್ನು ಓದದೇ ಬಿಟ್ಟರೂ ಅರ್ಥ ಸಂವಹನಕ್ಕೆ ಅಡ್ಡಿಯಾಗದಿರುವುದು ಎಂದೇ ಅರ್ಥ. ಪ್ರಯೋಗಾರ್ಥ ಒಂದು ದಿನ ಪತ್ರಿಕೆಯನ್ನು ಗಮನಿಸಿ. ಸರಾಸರಿ ಹತ್ತು ಪುಟಗಳು ಮುದ್ರಣಗೊಂಡಿದ್ದರೆ ಜಾಹೀರಾತುಗಳು ಸೇರಿದಂತೆ ಅದರಲ್ಲಿ ಲಕ್ಷಗಟ್ಟಲೇ ಪದಗಳು ಮುದ್ರಣಗೊಂಡಿರುತ್ತವೆ. ಆದರೆ ಆ ಎಲ್ಲಾ ಪದಗಳನ್ನೂ ಒಬ್ಬರೂ ಓದುವುದಿಲ್ಲ. ಎಷ್ಟೋ ಭಾಗಗಳ ಮೇಲೆ ಸುಮ್ಮನೇ ಕಣ್ಣಾಡಿಸುತ್ತೇವೆ. ಗಮನವಿಟ್ಟು ಯಾವುದಾದರೂ ಭಾಗವನ್ನು ಓದಿದರೂ, ಉದಾ.ಗೆ ಒಂದು ವರದಿ, ಅಲ್ಲಿಯೂ ಇರುವ ಎಲ್ಲ ಪದಗಳನ್ನೂ ವಾಕ್ಯಗಳನ್ನೂ ಓದುವುದಿಲ್ಲ. ಹಾಗೆ ಓದದಿದ್ದರೂ ಅರ್ಥಸಂವಹನಕ್ಕೆ ಅಡ್ಡಿಯಾಗುವುದಿಲ್ಲ. ಹಾಗೆ ನೋಡಿದರೆ ಓದುವವರು ಹೀಗೆ ಎಲ್ಲವನ್ನು ಓದದಿರಲಿ ಎಂಬ ಅಂತರ್ಗತ ಉದ್ದೇಶ ಅಂತಹ ಬರವಣಿಗೆಯಲ್ಲಿ ಇರುತ್ತದೆ. ಒಂದು ವೇಳೆ ಅಕ್ಷರಕ್ಷರವನ್ನೂ ಬಿಡದೆ ಒಂದು ಪತ್ರಿಕೆಯನ್ನು ಓದುತ್ತೇವೆಂದರೆ ಅದೊಂದು ಅಸಹಜ ಕೆಲಸವೆಂದೇ ಸಾಮಾನ್ಯವಾಗಿ ಭಾವಿಸಲಾಗುತ್ತದೆ. ಅಂದರೆ ಈ ಬಗೆಯ ಬರಹಗಳಲ್ಲಿ ಖಚಿತತೆ ಮತ್ತು ಸಂಕ್ಷಿಪ್ತತೆ ಎನ್ನುವ ಮಾತಿಗೆ ಹೊಸ ಅರ್ಥಗಳು ಅಗತ್ಯವಾಗುತ್ತವೆ. ಈ ಮೊದಲು ಹೇಳಿದ ಹಾಗೆ ಓದಿ ಹೇಳುವ ಉದ್ದೇಶಕ್ಕಾಗಿ ರೂಪಗೊಳ್ಳುವ ಬರೆಹಗಳು ತಮ್ಮೊಳಗೆ ನಿರರ್ಥಕತೆಯ ಮತ್ತು ನಿರುಪಯುಕ್ತತೆಯ ಅಂಶಗಳನ್ನು ಕನಿಷ್ಠ ಪ್ರಮಾಣಕ್ಕೆ ಇಳಿಸಿಕೊಂಡಿರುತ್ತದೆ. ಅಷ್ಟೇ ಆದರೂ ಅವುಗಳಲ್ಲಿ ನಿಜ ಓದಿಗೆ ನೆರವಾಗುವ ಬದಲಾವಣೆಗಳು ಇನ್ನೂ ಆಗಬೇಕಾಗಿದೆ.

ಕನ್ನಡದ ಮಾತು ಮತ್ತು ಬರಹಗಳಲ್ಲಿ ಆಗಿರುವ ಈ ಪರಿವರ್ತನೆಗಳ ಪರಿಣಾಮವನ್ನು ಮತ್ತೊಂದು ರೀತಿಯಿಂದ ಪರಿಗಣಿಸಬಹುದು. ಕನ್ನಡಿಗರು ಓದುವ ಹವ್ಯಾಸವನ್ನು ಕಡಿಮೆ ಮಾಡಿಕೊಂಡಿದ್ದಾರೆ ಎಂಬ ಮಾತನ್ನು ಆಗಾಗ ಕೇಳುತ್ತೇವೆ. ಅಕ್ಷರಸ್ಥರಾದವರೂ ತಮ್ಮ ಎಲ್ಲ ಭಾಷಾಕೌಶಲ್ಯಗಳನ್ನು ಸಮ ಪ್ರಮಾಣದಲ್ಲಿ ಯಾವ ಕಾಲದಲ್ಲೂ ಬಳಸುವುದಿಲ್ಲ. ಹಾಗೆ ಬಳಸಬೇಕೆಂಬ ಒತ್ತಾಯವೂ ಇರುವುದಿಲ್ಲ. ಬಳಸುವ ಅವಕಾಶಗಳೂ ಇರುವುದಿಲ್ಲ. ಆದರೂ ಓದುವ ಹವ್ಯಾಸ ಕಡಿಮೆಯಾಗಿದೆ ಎಂಬ ತೀರ್ಮಾನಕ್ಕೆ ಬರುವವರು ನೀಡುವ ತರ್ಕ ಸರಳವಾಗಿದೆ. ಕನ್ನಡದಲ್ಲಿ ಪ್ರಕಟವಾದ ಪುಸ್ತಕಗಳು ಖರ್ಚಾಗುವುದು ಕಷ್ಟ. ಪತ್ರಿಕೆಗಳಿಗೆ ಪ್ರಸಾರ ಸಂಖ್ಯೆ ಕಡಿಮೆ. ಈ ಅಂಕಿ ಅಂಶಗಳನ್ನು ನೀಡುವಾಗ ಸಾಮಾನ್ಯವಾಗಿ ಬೇರೊಂದು ಭಾಷೆಯ ನಿದರ್ಶನವನ್ನು ನೀಡುವುದುಂಟು. ಪ್ರಮಾಣದಲ್ಲಿ ಅಷ್ಟಿಷ್ಟು ವ್ಯತ್ಯಾಸವಿದ್ದರೂ ಎಲ್ಲಾ ಪ್ರಾಂತೀಯ ಭಾಷೆಗಳಲ್ಲೂ ಜನರು ಓದುವುದು ಕಡಿಮೆ. ಮತ್ತು ಹಾಗೆ ಓದಲು ಬಳಸುವ ಸಾಮಗ್ರಿಯೂ ಸೀಮಿತ ವಲಯಕ್ಕೆ ಮಿತಗೊಂಡಿರುತ್ತದೆ. ಅದರ ಅಗತ್ಯ ಬಿದ್ದ ಹೊರತು ಓದುವುದನ್ನು ಆಯ್ಕೆ ಮಾಡಿಕೊಳ್ಳುವ ಸಂದರ್ಭಗಳು ಕಡಿಮೆ. ಆದರೆ ಹೀಗೆ ಮಾಡುವ ಜನರು ಭಾಷೆಯೊಡನೆ ಸಂಪರ್ಕವನ್ನು ಕಡಿಮೆ ಮಾಡಿಕೊಂಡಿದ್ದಾರೆ ಎಂದು ಹೇಳಬರುವುದಿಲ್ಲ. ಅನೌಪಚಾರಿಕವಾಗಿ ಮಾತಾಡುವುದು ಮತ್ತು ಮಾತು ಕೇಳುವುದು ಇವುಗಳನ್ನು ಹೊರತುಪಡಿಸಿಯೂ ಜನರು ಭಾಷೆಯೊಡನೆ ಅಗಾಧ ಪ್ರಮಾಣದಲ್ಲಿ ಸಂಪರ್ಕ ಪಡೆದಿರುತ್ತಾರೆ. ಆದರೆ ಈ ಸಂಪರ್ಕದ ಸ್ವರೂಪ ಮಾತ್ರ ತೀರ ಇತ್ತೀಚಿನ ದಶಕಗಳಲ್ಲಿ ರೂಪುಗೊಂಡಿರುವುದು.

ಹೀಗೆ ಜನರು ಮಾತಿನ ಸಂಪರ್ಕ ಪಡೆಯುವ ವಲಯಗಳನ್ನು ಸ್ಥೂಲವಾಗಿ ದೃಶ್ಯ ಮತ್ತು ಶ್ರವ್ಯ ಎಂದು ವಿಭಜಿಸಬಹುದು. ಈ ವಿಭಜನೆ ಕೊಂಚ ದಾರಿ ತಪ್ಪಿಸುವಂತಹದ್ದು. ಏಕೆಂದರೆ ಶುದ್ಧ ದೃಶ್ಯಾನುಭವದಲ್ಲಿ ಭಾಷೆಗೆ ಜಾಗವಿಲ್ಲ. ಆದ್ದರಿಂದ ಒಂದು ಕಡೆ ಕಣ್ಣು ಕಿವಿಗಳೆರಡನ್ನೂ ಬಳಸಿದರೆ ಮತ್ತೊಂದು ಕಡೆ ಹೆಚ್ಚಾಗಿ ಕಿವಿಯನ್ನು ಮಾತ್ರ ಬಳಸುತ್ತೇವೆ ಎಂದು ಹೇಳುವುದು ಸರಿ. ದೃಶ್ಯ ಎಂದು ಗುರುತಿಸುವ ವಲಯಗಳು ಚಲನಚಿತ್ರ, ರಂಗಭೂಮಿ ಮತ್ತು ಟೆಲಿವಿಜನ್. ಶುದ್ಧ ಶ್ರವ್ಯ ಎನ್ನುವುದು ಮುಖ್ಯವಾಗಿ ರೇಡಿಯೋ. ಇಲ್ಲೆಲ್ಲಾ ಕೇಳುಗರು ನೋಡುಗರು ಇರಲೇ ಬೇಕು. ಭಾಷೆಗೊಂದು ಮಹತ್ವದ ಸ್ಥಾನವಿದೆ. ಆದರೆ ಇಲ್ಲಿ ಭಾಷೆ ನಮ್ಮ ಕಿವಿಯ ಅನುಭವ ಆಗಿದ್ದರೂ ವಾಸ್ತವವಾಗಿ ಈ ಮಾಧ್ಯಮಗಳಿಗಾಗಿ ಮೊದಲು ಬರೆಹ ರೂಪದಲ್ಲಿ ಸಾಮಗ್ರಿ ಸಿದ್ಧವಾಗಬೇಕು. ಹಾಗೆ ಸಿದ್ಧಗೊಂಡ ಸಾಮಗ್ರಿಯನ್ನು ಜನರು ಮಾತಾಡುತ್ತಾರೆ ಅಥವಾ ಓದಿ ಹೇಳುತ್ತಾರೆ, ಅಂದರೆ ನೋಡುಗ/ಕೇಳುಗ ಸಮುದಾಯ ಕನ್ನಡ ಬರವಣಿಗೆಯನ್ನು ಪರೋಕ್ಷವಾಗಿ ಓದುತ್ತಿವೆ ಎಂದೇ ತಿಳಿಯಬೇಕು. ಜನರೇ ಬರೆದದ್ದನ್ನು ಓದುವುದಿಲ್ಲ. ಅವರಿಗಾಗಿ ಇತರರು ಅದನ್ನು ಉಚ್ಚರಿಸುತ್ತಾರೆ. ಉಳಿದವರು ಕೇಳುತ್ತಾರೆ. ಕನ್ನಡ ಸಂಸ್ಕೃತಿಗೆ ಇದು ಅಪರಿಚಿತವಾದ ಸಂದರ್ಭವಲ್ಲ. ಈ ಹಿಂದೆಯೂ ಇಂತಹ ಪ್ರಸಂಗಗಳು ಇದ್ದವು. ಉದಾ.ಗೆ ಯಕ್ಷಗಾನ ಪ್ರಸಂಗವೊಂದನ್ನು ಕೃತಿಕಾರರೊಬ್ಬರು ರಚಿಸಿದ್ದಾರೆಂದು ಕೊಳ್ಳೋಣ. ಆ ಪ್ರಸಂಗದ ಬರೆಹರೂಪ ತಾಳೆಗರಿಯಲ್ಲಿ ಅಥವಾ ಕೋರಿಕಾಗದದ

ಪ್ರತಿಯಲ್ಲಿ ಇರಬಹುದು. ಅದನ್ನು ಕಣ್ಣೋದು ಮಾಡುವ ಜನರು ಅಷ್ಟಿಷ್ಟು ಇದ್ದಾರೆ. ಆದರೆ ಆ ಪ್ರಸಂಗವನ್ನು ರಂಗದ ಮೇಲೆ ತಂದಾಗ ಭಾಗವತರು ವಾದ್ಯಗಾರರೊಡನೆ ಹಾಡಲು ತೊಡಗುತ್ತಾರೆ. ಈಗ ಬರೆದದ್ದು ಸಾವಿರಾರು ಜನರ ಕಿವಿಯ ಮೂಲಕ ಅವರಿಗೆ ತಲುಪುತ್ತವೆ. ಹೀಗೆಯೇ ಸುಮಾರು ಒಂದು ಸಾವಿರ ವರ್ಷಕಾಲ ಕನ್ನಡ ಸಂಸ್ಕೃತಿ ಬರೆಹವನ್ನು ತಾನೇ ನೇರವಾಗಿ ಓದದೆ ಓದುವವರ ಮೂಲಕ ಪಡೆದುಕೊಳ್ಳುತ್ತಿತ್ತು.

ಈಗ ಇಂತಹದೇ ಸಂದರ್ಭ ಇದೆ ಎಂದು ಹೇಳಿದರೆ ಸಾಕಾಗುವುದಿಲ್ಲ. ಈಗಿನ ಸಂದರ್ಭದಲ್ಲಿ ಕೆಲವು ಮೂಲಭೂತ ವ್ಯತ್ಯಾಸಗಳಿವೆ. ಆ ವ್ಯತ್ಯಾಸಕ್ಕೆ ತಂತ್ರಜ್ಞಾನ ಕಾರಣವಾಗಿದೆ. ಈ ಹಿಂದಿನ ಸಂದರ್ಭದಲ್ಲಿ ನೆನಪು ಬಹುದೊಡ್ಡ ಪಾತ್ರ ವಹಿಸುತ್ತಿತ್ತು. ಬರೆದುದನ್ನು ನಿರೂಪಿಸುವವರು ಮತ್ತು ಕೇಳುವವರು ಇಬ್ಬರಲ್ಲೂ ನೆನಪು ವ್ಯಾಪಕವಾಗಿ ಪ್ರವೃತ್ತವಾಗುತ್ತದೆ. ತಂತ್ರಜ್ಞಾನದ ನೆರವಿನ ಇಂದಿನ ನವ ಮೌಖಿಕತೆಯಲ್ಲಿ ನೆನಪಿಗೆ ಅಷ್ಟು ಪ್ರಧಾನ ಪಾತ್ರವಿಲ್ಲ. ಅಲ್ಲದೇ ಹಿಂದಿನ ಸಂದರ್ಭದಲ್ಲಿ ನಿರೂಪಣೆ ಮತ್ತು ಅದನ್ನು ಪಡೆಯುವ ಶ್ರೋತೃವರ್ಗ ಒಂದೇ ಕಾಲದೇಶಕ್ಕೆ ಸೇರಿರಬೇಕಿತ್ತು. ಆ ಪ್ರದರ್ಶನವನ್ನು ಮರಳಿ ಆವೃತ್ತಿಸಬಹುದೇ ಹೊರತು ಅದನ್ನೇ ಇನ್ನೊಮ್ಮೆ ಪಡೆಯುವುದು ಅಸಾಧ್ಯ. ಪ್ರತಿ ಪ್ರದರ್ಶನವೂ ಭಿನ್ನವೇ ಆಗುತ್ತಿತ್ತು. ತಂತ್ರಜ್ಞಾನವು ನವ ಮೌಖಿಕತೆಯಲ್ಲಿ ನಿರೂಪಕರು ಮತ್ತು ಕೇಳುಗರು ಒಂದೇ ಕಾಲ ಮತ್ತು ದೇಶಕ್ಕೆ ಸೇರಿರಬೇಕೆಂದು ಶರತ್ತು ಹಾಕುವುದಿಲ್ಲ. ಪ್ರದರ್ಶನಗಳು ಯಥಾವತ್ತಾಗಿ ಮರಳಿ ಆವರ್ತನಗೊಳ್ಳುವುದು ಈಗ ಸಾಧ್ಯ. ಇನ್ನೂ ಕೆಲವು ವ್ಯತ್ಯಾಸಗಳನ್ನು ಉಂಟುಮಾಡುವಲ್ಲಿ ತಂತ್ರಜ್ಞಾನ ಕಾರಣವಾಗಿದೆ. ಬರೆದುದನ್ನು ಮಾತಾಡುವ ವ್ಯಕ್ತಿ ತನ್ನ ಪ್ರದರ್ಶನವನ್ನು ಪರಿಷ್ಕರಿಸಿಕೊಳ್ಳಲು ಅವಕಾಶಗಳಿವೆ. ಆದ್ದರಿಂದ ಕೇಳುಗ/ ನೋಡುಗರಿಗೆ ಪ್ರದರ್ಶನ ರೂಪುಗೊಳ್ಳುವ ಸಂದರ್ಭವನ್ನೇ ತಮ್ಮ ಅನುಭವದ ಭಾಗವನ್ನಾಗಿ ಮಾಡಿಕೊಳ್ಳಬೇಕೆಂಬ ಒತ್ತಾಯವಿಲ್ಲ.

ಒಟ್ಟಾರೆ ಕನ್ನಡ ಸಮುದಾಯ ಕನ್ನಡ ಬರವಣಿಗೆಯನ್ನು ಅದರ ಮಾತಿನ ಸ್ತರದಲ್ಲಿ ತನ್ನದನ್ನಾಗಿ ಮಾಡಿಕೊಳ್ಳುತ್ತಿದೆ. ಇಂತಹ ಕಡೆ ಬಳಕೆಯಾಗುವ ಕನ್ನಡದ ಬಗೆಗೆ ಕೆಲವು ಮಾತುಗಳನ್ನು ಹೇಳಬಹುದಾಗಿದೆ. ಬೇರೊಂದು ಪ್ರಸಂಗದಲ್ಲಿ ಕನ್ನಡದ ವೈವಿಧ್ಯಮಯ ಪ್ರಭೇದಗಳು ಪ್ರಮಾಣ ಭಾಷೆಯ ಒತ್ತಡದಿಂದಾಗಿ ತಮ್ಮ ಅವಕಾಶಗಳನ್ನು ಕಳೆದುಕೊಳ್ಳುತ್ತಿರುವ ಸಂಗತಿಯನ್ನು ಗಮನಿಸಿದ್ದೆವು. ಆದರೆ ಈ ನವ ಮೌಖಿಕ ಪರಂಪರೆಯು ಕನ್ನಡ ಪ್ರಭೇದಗಳನ್ನು ತನ್ನದೇ ಆದ ರೀತಿಯಲ್ಲಿ ಬಳಸುತ್ತಿದೆ. ಚಲನಚಿತ್ರಗಳಲ್ಲಿ, ರಂಗಭೂಮಿಯಲ್ಲಿ ಈ ಪ್ರಯತ್ನಗಳು ವ್ಯಾಪಕವಾಗಿರುವುದನ್ನು ಸುಲಭವಾಗಿ ಗಮನಿಸಬಹುದು. ಹೀಗೆ ಬಳಸುವಾಗ ಕೆಲವು ಸಾಮಾಜಿಕ ತೀರ್ಮಾನಗಳನ್ನು ಬೇಶರತ್ತಾಗಿ ಪಾಲಿಸಲಾಗುತ್ತದೆ ಎಂಬುದೂ ನಿಜ. ಉದಾ.ಗೆ ಕನ್ನಡದ ಸಾಮಾಜಿಕ ಪ್ರಭೇದಗಳನ್ನು ಚಲನಚಿತ್ರದ ಸಂಭಾಷಣೆಗಳಲ್ಲಿ ಬಳಸಲಾಗುತ್ತದೆ. ಹಾಗೆ ಬಳಸಲು ಕೆಲವು ಪೂರ್ವಶರತ್ತುಗಳಿವೆ. ಒಂದು: ಆ ಪಾತ್ರ ಅಶಿಕ್ಷಿತ ಇಲ್ಲವೆ, ಗ್ರಾಮೀಣ ಪ್ರದೇಶದಿಂದ ಬಂದಿರಬೇಕು. ಎರಡು: ಸಮಾಜದ ಅಂಚಿನ ವಲಯಕ್ಕೆ ಸೇರಿರಬೇಕು. ಮುಖ್ಯ ಪ್ರವಾಹದ ಪಾತ್ರವಾಗಿರಬಾರದು. ಮೂರು: ಉದ್ದೇಶ

ಪೂರ್ವಕವಾಗಿ ನಗೆ ಉಕ್ಕಿಸುವ ಪ್ರಸಂಗಗಳಲ್ಲಿ. ಹೀಗೆ ಭಾಷಾಪ್ರಭೇದಗಳನ್ನು ಬಳಸಲಾಗುತ್ತದೆ. ಆದ್ದರಿಂದ ಬರೆಹ ರೂಪದಲ್ಲಿ ಕೂಡ ಕನ್ನಡ ಪ್ರಭೇದಗಳು ತಮ್ಮ ಸ್ಥಾನವನ್ನು ಉಳಿಸಿಕೊಂಡಿವೆ ಎಂದು ತೀರ್ಮಾನಿಸಬಹುದು. ಆದರೆ ಇಲ್ಲಿ ಮತ್ತಷ್ಟು ಸೂಕ್ಷ್ಮ ವಿಶ್ಲೇಷಣೆ ಅಗತ್ಯ. ಮೊದಲನೆಯದಾಗಿ ಅಕ್ಷರಸ್ಥ ಸಮುದಾಯದ ಜನರು ಮಾತ್ರ ಈ ನವ ಮೌಖಿಕ ಪರಂಪರೆಯ ಶ್ರೋತೃಗಳಲ್ಲ. ಎರಡನೆಯದಾಗಿ ಅವರು ತಮ್ಮ ಕಣ್ಣೋದಿನ ಭಾಗವಾಗಿ ಪ್ರಭೇದಗಳನ್ನು ಎದುರಿಸುತ್ತಿಲ್ಲ. ಅವುಗಳು ಕಿವಿಗೆ ಮಾತ್ರ ಬೀಳುತ್ತಿವೆ. ಮೂರನೆಯದಾಗಿ ಈ ಪ್ರಭೇದಗಳು ಜನರ ಅನುಭವದ ಭಾಗವಾಗುವಾಗಲೇ ಆ ಪ್ರಭೇದಗಳನ್ನಾಡುವ ವ್ಯಕ್ತಿಗಳ ಬಗೆಗೆ ಈಗಾಗಲೇ ನೀಡಲಾದ ತೀರ್ಮಾನಗಳನ್ನು ಒಪ್ಪಬೇಕಾಗುತ್ತದೆ. ಅಂದರೆ ಹಳ್ಳಿಯವರು ಮತ್ತು ಅಶಿಕ್ಷಿತರು ಮಾತ್ರ ಈ ಉಪಭಾಷೆಯನ್ನು ಬಳಸುತ್ತಾರೆ. ಸಮಾಜದ ಅಂಚಿನವರು ಮಾತ್ರ ಈ ಬಗೆಯ ಭಾಷೆಯನ್ನು ಪೋಷಿಸುತ್ತಾರೆ ಎಂಬ ತೀರ್ಮಾನಗಳಿಗೆ ಬರಬೇಕಾಗುತ್ತದೆ. ಇದೂ ಅಲ್ಲದೆ ಪ್ರಭೇದಗಳನ್ನು ಕೇಳುತ್ತಿರುವುದು ಮಾತ್ರ ನಿಜ. ಅವುಗಳನ್ನು ಕಣ್ಣೋದಿನಲ್ಲಿ ಎದುರಿಸಬೇಕಾಗಿಲ್ಲ. ಇದು ಸದ್ಯ ಕನ್ನಡ ಪರಿಸರ ಎದುರಿಸುತ್ತಿರುವ ಮಾತು ಮತ್ತು ಬರೆಹಗಳ ನಡುವಣ ಇನ್ನೊಂದು ಸಂಘರ್ಷದ ನೆಲೆಯನ್ನು ಮುಂದಿಡುತ್ತದೆ.

ಈ ಸಂಘರ್ಷದಂತೆ ಮಾತು ವೈವಿಧ್ಯಗಳಿಂದ ಕೂಡಿರಬಹುದು. ವೈವಿಧ್ಯ ಅದರ ಜೀವಾಳವಾಗಿರುವಂತೆ ಅದರ ಮಿತಿಯೂ ಹೌದು. ಏಕೆಂದರೆ ವೈವಿಧ್ಯವು ತನಗೆ ತಾನೇ ಆಕರ್ಷಕವಾದ ವಿಷಯ. ಆದರೆ ಅದು ಮತ್ತೇನನ್ನೂ ತನ್ನ ಮೂಲಕ ಸಮರ್ಥಿಸಲಾರದು. ಮತ್ತೆ ಯಾವುದಕ್ಕೂ ಮಹತ್ವವನ್ನು ಪ್ರಧಾನ ಮಾಡಲಾರದು. ವೈವಿಧ್ಯಗಳನ್ನು ಪ್ರಜ್ಞಾಪೂರ್ವಕವಾಗಿಯೇ ನಿರಾಕರಿಸುವ ಕಣ್ಣೋದಿನ ಬರಹ ಹೆಚ್ಚು ಅಧಿಕೃತವಾದುದು. ಇಲ್ಲಿ ಅಧಿಕೃತ ಎನ್ನುವ ಮಾತನ್ನು ಅದು ನೀಡುವ ಅನುಭವದ ಧಾರಣಾಸಾಮರ್ಥ್ಯವನ್ನು ಗಮನಿಸಿ ಹೇಳಲಾಗಿದೆ. ಇಲ್ಲಿ ಒಂದು ಪ್ರಶ್ನೆ ಮೂಡುತ್ತದೆ. ಪ್ರಭೇದಗಳನ್ನು ಅಳವಡಿಸಿಕೊಳ್ಳುವ ಬರಹವು ಕೂಡಾ ಅಧಿಕೃತವೇ ಅಲ್ಲವೇ? ಅಂದರೆ ಸಿನಿಮಾಗಾಗಲೀ ರಂಗಭೂಮಿಗಾಗಲೀ ಸಿದ್ಧಗೊಂಡ ಕೃತಿಗಳಲ್ಲಿ ಈ ಪ್ರಭೇದಗಳು ಬಳಕೆಯಾಗುತ್ತವೆ ಎಂದ ಮೇಲೆ ಅವುಗಳಿಗೆ ಬರಹದ ಲಕ್ಷಣ ಒದಗಿದಂತಲ್ಲವೆ? ಅಲ್ಲ; ಅದು ಹಾಗಲ್ಲ. ಇಲ್ಲಿ ಈ ಮಾಧ್ಯಮಗಳಲ್ಲಿ ಸಿದ್ಧಗೊಳ್ಳುವ ಬರೆಹಕ್ಕೆ ಮಧ್ಯವರ್ತಿ ಸ್ಥಾನವಿದೆಯೇ ಹೊರತು ಅದೇ ಅಂತಿಮ ಗುರಿಯಾಗಲಾರದು. ಚಲನಚಿತ್ರಗಳ ಸಂಭಾಷಣೆಗಳನ್ನೇ ಯಾರೂ ಒಂದು ಗ್ರಂಥವನ್ನಾಗಿ ಓದಲಾರರು. ಅದರ ಧ್ವನಿವಾಹಿನಿಯನ್ನು ದೃಶ್ಯದಿಂದ ಬೇರ್ಪಡಿಸಿ ಪ್ರಸ್ತುತ ಪಡಿಸಿದರೂ ಅಲ್ಲಿಯೂ ಕಿವಿಯೇ ಮುಖ್ಯವಾಗುತ್ತದೆ. ಈ ಮಾಧ್ಯಮಗಳ ಬಳಕೆಗಾಗಿ ಸಿದ್ಧಗೊಳ್ಳುವ ಬರವಣಿಗೆ ಒಂದು ಸಂಚಾರಿ ಅವಸ್ಥೆಯನ್ನು ಪಡೆದುಕೊಳ್ಳುತ್ತದೆ. ಒಬ್ಬರು ಅದನ್ನು ತಂತ್ರಜ್ಞಾನದ ಚೌಕಟ್ಟಿನಲ್ಲಿ ಉಚ್ಚರಿಸಿ ಬಿಟ್ಟರೆ ಅನಂತರ ಈ ಬರವಣಿಗೆಗೆ ಯಾವ ಬೆಲೆಯೂ ಇರುವುದಿಲ್ಲ. ಹೆಚ್ಚೆಂದರೆ ಅಧ್ಯಯನಕಾರರಿಗೆ ಸರಕಾಗಿ ಮಾತ್ರ ಬೇಕಾಗಬಹುದು.

ಶುದ್ಧ ಶ್ರವ್ಯನೆಲೆಯ ರೇಡಿಯೋ ಕೂಡ ತನ್ನ ಹಲವು ಕಾರ್ಯಕ್ರಮಗಳಲ್ಲಿ ಲಿಖಿತ ರೂಪವನ್ನು ಮೌಖಿಕವಾಗಿ ಪರಿವರ್ತಿಸಿಕೊಳ್ಳುತ್ತದೆ. ಕಳೆದ ಐದು ದಶಕಗಳಲ್ಲಿ

ರೇಡಿಯೋ ತನ್ನ ಸಾಮಾಜಿಕ ಸ್ಥಾನವನ್ನು ಗಳಿಸಿ,ಅದನ್ನು ಕಳೆದುಕೊಂಡು ಮತ್ತೆ ಪಡೆದುಕೊಳ್ಳುವ ನೆಲೆಯಲ್ಲಿದೆ. ಈಗ ಮರಳಿ ನೆಲೆಗೊಂಡಿರುವ ರೇಡಿಯೋದಲ್ಲಿ ನಾವು ತಿಳಿದಂತೆ ಬರೆಹವನ್ನು ಪೂರ್ವಭಾವಿಯಾಗಿ ಸಿದ್ಧಪಡಿಸಬೇಕಾದ ಅಗತ್ಯ ಇಲ್ಲ. ಅಲ್ಲಿ ರೇಡಿಯೋ ಜಾಕಿಗಳು ನಿರರ್ಗಳವಾಗಿ ಮತ್ತು ಸ್ವಯಂಸ್ಫೂರ್ತವಾಗಿ ಮಾತಾಡುತ್ತಾರೆ. ಅದಕ್ಕೂ ಬರೆಹಕ್ಕೂ ಸಂಬಂಧವಿಲ್ಲ. ಈ ಪುನರಾವತಾರ ಪಡೆದ ಎಫ್.ಎಮ್. ರೇಡಿಯೋಗಳಲ್ಲಿ ಭಾಷೆ ಇರುವುದು ಕೇವಲ ಹೊದಿಕೆಯಾಗಿ. ಅಲ್ಲಿಯ ಬಹುಪಾಲು ಕಾರ್ಯಕ್ರಮಗಳು ಗೀತಗಳನ್ನು ಅವಲಂಬಿಸುತ್ತವೆ. ಆದ್ದರಿಂದ ಇಲ್ಲಿ ನವ ಮೌಖಿಕತೆಯ ಸಂದರ್ಭದ ಲಕ್ಷಣಗಳು ಮತ್ತೆ ಪರಿವರ್ತನೆ ಹೊಂದುತ್ತಿರುವುದು ಗೋಚರಿಸುತ್ತಿರುತ್ತದೆ. ಇಲ್ಲಿನ ನಿರೂಪಣೆಗಳನ್ನು ಕುರಿತು ಅಧ್ಯಾಯದಲ್ಲಿ ಮತ್ತೆ ಈ ಚರ್ಚೆಯನ್ನು ಬೆಳೆಸಲಿದ್ದೇವೆ.

ಅಂದರೆ ನಾವೀಗ ಭಾಷೆಯ ಮೂರು ರೂಪಗಳನ್ನು ಒಪ್ಪುತ್ತಿದ್ದೇವೆ. ಒಂದು: ಮಾತು. ಎರಡು: ಬರಹ. ಮೂರು: ಬರಹವಾಗಿಯೂ ಮಾತಾಗುವುದು. ಮೂರನೆಯ ಬಗೆಯನ್ನು ನಾವು ಇದುವರೆಗೂ ಗಮನಿಸಿ ಅದರ ಲಕ್ಷಣ ನಿರ್ವಚನವನ್ನು ಮಾಡಿದ್ದೇವೆ. ಈ ಮೂರು ಪ್ರಭೇದಗಳಲ್ಲಿ ಬಳಸುವ ಕನ್ನಡದ ಬಗೆಗೆ ಇನ್ನಷ್ಟು ಸಂಗತಿಗಳನ್ನು ತಿಳಿಯಬಹುದು. ಮಾತಿನಲ್ಲಿ ಮತ್ತು ಮಾತಾಗುವ ಬರಹದಲ್ಲಿ ಕನ್ನಡದ ಶುದ್ಧತೆಯ ಬಗೆಗೆ ಹೆಚ್ಚು ಗಮನ ಹರಿಸುವುದಿಲ್ಲ. ಇಲ್ಲಿ ಶುದ್ಧತೆ ಎಂಬ ಪದದ ಅರ್ಥವ್ಯಾಪ್ತಿಯನ್ನು ಸ್ಪಷ್ಟಪಡಿಸಬೇಕು. ಇದೊಂದು ಶುದ್ಧ ಪರಿಕಲ್ಪನೆಯಲ್ಲ. ಸಾಪೇಕ್ಷವಾದುದು. ಅದು ಇರುವುದು ಅಥವಾ ಇಲ್ಲದಿರುವುದು ಒಂದು ಅಂತಸ್ಥ ಗುಣವಾಗಿರದೆ ಹೊರಗಿನಿಂದ ನೋಡಿದಾಗ ಕಾಣುವ ಲಕ್ಷಣಗಳಾಗಿವೆ. ಕೆಲವು ಅಂತಹ ಲಕ್ಷಣಗಳನ್ನು ನೋಡೋಣ.

ಮಾತಿನಲ್ಲಿ ಮತ್ತು ಮಾತಾಗುವ ಬರಹದಲ್ಲಿ ಕನ್ನಡ ಮತ್ತು ಇಂಗ್ಲಿಶ್ ಭಾಷೆಗಳ ನುಡಿಮಿಶ್ರಣಕ್ಕೆ ವಿರೋಧ ಕಡಿಮೆ. ಅದನ್ನು ಬೇರೆ ಬೇರೆ ಉದ್ದೇಶಗಳಿಗಾಗಿ ಮಾಧ್ಯಮಗಳು ಬಳಸಿಕೊಳ್ಳುತ್ತಿವೆ. ಈ ಪ್ರವೃತ್ತಿ ಕನ್ನಡದ ಮಟ್ಟಿಗೆ ಸುಮಾರು ಐವತ್ತು ವರ್ಷಗಳಷ್ಟು ಹಳೆಯದ್ದು. ನಿದರ್ಶನಕ್ಕಾಗಿ ೧೯೫೮ರಲ್ಲಿ ಸಿದ್ಧಗೊಂಡು ಬಿಡುಗಡೆಯಾದ 'ಅಣ್ಣತಂಗಿ' ಎಂಬ ಚಿತ್ರವನ್ನು, ಅದರ ಭಾಷಾನೆಲೆಯನ್ನು ನೋಡಬಹುದು. ಅದು ಹಳ್ಳಿಯ ಕುಟುಂಬಗಳ ಕತೆ. ಹಾಗಾಗಿ ಅಲ್ಲಿ ಆ ಹೊತ್ತಿಗೆ ಹಳ್ಳಿಯ ಭಾಷೆಯೆಂದು ತಿಳಿದಿದ್ದ ಮಾದರಿಯೊಂದನ್ನು ಬಳಸಿಕೊಳ್ಳುತ್ತಾರೆ. ಇಂಗ್ಲಿಶ್ ಪ್ರವೇಶಿಸಿರುವುದು ಕಲಿತವರ ನುಡಿಯಲ್ಲಿ. ನಗರಕ್ಕೆ ಹೋಗಿ ಓದಿ ಬಂದ ಹುಡುಗ ಹುಡುಗಿಯರು ಪರಸ್ಪರ ಮಾತಾಡಿಕೊಳ್ಳುವುದು ಈ ನುಡಿಬೆರಕೆಯ ಕನ್ನಡದಲ್ಲಿ. ಅವರು ಇತರರೊಡನೆ ಮಾತಾಡುವಾಗಲೂ ತಮ್ಮನ್ನು ತಾವು ಬೇರೆ ಮಾಡಿಕೊಳ್ಳಲು ಇಂಗ್ಲಿಶನ್ನು ಕನ್ನಡದ ನಡುವೆ ಬಳಸುತ್ತಾರೆ. ಹೆಚ್ಚು ವಿವರಗಳಿಗೆ ಹೋಗುವುದು ಅನಗತ್ಯ. ಮುಖ್ಯ ಸಂಗತಿ ಇಷ್ಟೇ. ಇಂಗ್ಲಿಶ್ ಕನ್ನಡಗಳ ನುಡಿಬೆರಕೆ ಉದ್ದೇಶಪೂರ್ವಕವಾಗಿ ಬಳಕೆಯಾದರೂ ಅದು ದೋಷಪೂರ್ಣ ಭಾಷಾ ಬಳಕೆಯೆಂದು ಪರಿಭಾವಿತವಾಗುವುದಿಲ್ಲ. ಆದರೆ ಶುದ್ಧ ಬರಹಗಳಲ್ಲಿ ಅಂದರೆ ಕಣ್ಣೋದಿನ ಬರಹಗಳಲ್ಲಿ ಇಂಗ್ಲಿಶ್ ಕನ್ನಡ ನುಡಿಬೆರಕೆಯನ್ನು ಅಶುದ್ಧ ಭಾಷಾ ಪ್ರಯೋಗವೆಂದೇ ತೀರ್ಮಾನಿಸಲಾಗುತ್ತದೆ. ಮತ್ತೆ

ನಮ್ಮ ಹಳೆಯ ವ್ಯಾಖ್ಯೆಗೆ ಮರಳುವುದಾದರೆ ವೈವಿಧ್ಯದ ನೆಲೆಯಲ್ಲಿ ಕನ್ನಡ, ಇಂಗ್ಲಿಶ್ ಬೆರಕೆ ದೋಷವೆಂದು ಪರಿಗಣಿತವಾಗುವುದಿಲ್ಲ. ಅಧಿಕೃತ ನಿಯತತೆಯ ನೆಲೆಯಲ್ಲಿ ಅದನ್ನು ದೋಷಪೂರ್ಣವೆಂದು ತಿಳಿಯಲಾಗುತ್ತಿದೆ

ಶುದ್ಧಬರೆಹದಲ್ಲಿ ಅನ್ಯಭಾಷಾ ಪದಗಳನ್ನು ಆಯ್ಕೆ ಮಾಡಿಕೊಳ್ಳುವ ಕನ್ನಡ, ಸಂಸ್ಕೃತ ಪದಗಳನ್ನು ಧಾರಾಳವಾಗಿ ಅಳವಡಿಸಿಕೊಳ್ಳುತ್ತದೆ. ಬೇರೆ ಬೇರೆ ವಲಯದ ಬರೆಹಗಳಲ್ಲಿ ಸಂಸ್ಕೃತ ಪದಗಳ ಬಳಕೆಯ ಪ್ರಮಾಣ ವ್ಯತ್ಯಾಸವಾಗುತ್ತಾ ಹೋಗುತ್ತದೆ. ಆದರೂ ಶುದ್ಧಬರೆಹದ ಮಾದರಿಯಲ್ಲಿ ಭಾಷಾಪ್ರಭೇದದ ಬಳಕೆಗೆ ಅಡ್ಡಿ ಇದ್ದರೂ ಸಂಸ್ಕೃತ ಪದಗಳನ್ನು ಮತ್ತು ಅವುಗಳಿಂದ ಸಾಧಿತವಾದ ರೂಪಗಳನ್ನು ಬಳಸಲು ಯಾವುದೇ ಮಿತಿ ಇಲ್ಲ. ಎಷ್ಟೋ ಕಡೆ ತೀರ ಸರಳವಾಗಿ ಕನ್ನಡದ ಪದಗಳಿಂದ ಹೇಳಬಹುದಾದ ಸಂಗತಿಗಳನ್ನು ಈ ಬಗೆಯ ಬರೆಹಗಳಲ್ಲಿ ಸಂಸ್ಕೃತದ ಮೂಲಕ, ಆ ಭಾಷೆಯ ಪದಗಳನ್ನು ಧಾರಾಳವಾಗಿ ಬಳಸುವ ಮೂಲಕ ನಿರ್ವಹಿಸಲಾಗುತ್ತಿದೆ. ಹೀಗೆ ಈ ಮಾದರಿಯ ಕನ್ನಡದಲ್ಲಿ ಸಂಸ್ಕೃತವನ್ನು ಒಪ್ಪಿಕೊಳ್ಳುವುದಕ್ಕೆ ತರ್ಕಗಳು ಹಲವಾರಿವೆ. ಅವೆಲ್ಲವನ್ನೂ ನಾವಿಲ್ಲಿ ಗಮನಿಸಬೇಕಾಗಿಲ್ಲ. ಒಂದು ಮಾತು ಮಾತ್ರ ಚರ್ಚೆಯಾಗಬೇಕು. ಅದೆಂದರೆ ಸಂಸ್ಕೃತ ಪದಗಳ ಬಳಕೆಯಿಂದ ನಾವು ಮಂಡಿಸಬೇಕಾದ ವಿಷಯ ಖಚಿತಗೊಳ್ಳುತ್ತದೆ; ನಿರ್ದಿಷ್ಟಗೊಳ್ಳುತ್ತದೆ; ಏಕೆಂದರೆ ಆ ಭಾಷೆಯಲ್ಲಿ ವಿಪುಲ ಪದ ಸಂಪತ್ತಿದ್ದು ಅದನ್ನು ಕನ್ನಡ ಪಡೆದು ಬಳಸುವುದು ಅನುಕೂಲಕರವಾದ ತಂತ್ರ ಎಂಬ ವಾದವನ್ನು ಒಪ್ಪುವುದು ಬಿಡುವುದು ಪ್ರತ್ಯೇಕ ಮಾತು. ಆದರೆ ಖಚಿತತೆಗಾಗಿ ಸಂಸ್ಕೃತ ಪದಗಳು ಎಂಬ ಹೇಳಿಕೆಯ ಮೂಲಕ ಕಣ್ಣೋದಿನ ಬರೆಹಕ್ಕೆ ಕಲ್ಪಿಸಲಾದ ನಿಖರತೆಯ ಲಕ್ಷಣವನ್ನು ಖಚಿತಪಡಿಸಿದಂತಾಗಿದೆ. ಸಂಸ್ಕೃತ ಪದಗಳನ್ನು ಬಳಸುವವರು ನೀಡುವ ಮುಖ್ಯ ಕಾರಣಗಳು ಹೀಗಿವೆ. ಒಂದು: ಬಹಳ ಹಿಂದಿನಿಂದಲೂ ಆ ಪದಗಳನ್ನು ನಾವು ಬಳಸುತ್ತಾ ಬಂದಿದ್ದೇವೆ. ಹಾಗಾಗಿ ಅವು ಕನ್ನಡದ ಪದಗಳೇ ಎನ್ನುವಷ್ಟರಮಟ್ಟಿಗೆ ಬೆರೆತು ಹೋಗಿವೆ. ಎರಡು: ಕನ್ನಡದಲ್ಲಿ ಎಲ್ಲಾ ವಿಚಾರಗಳನ್ನೂ ಹೇಳಲು ಸಾಕಷ್ಟು ಸೂಕ್ತವಾದ ಪದಗಳಿಲ್ಲ. ಆದ್ದರಿಂದ ಸಂಸ್ಕೃತ ಪದಗಳನ್ನು ಬಳಸಿಕೊಳ್ಳುವುದು ಸರಿಯಾದ ಮಾರ್ಗ. ಮೂರು: ಸಂಸ್ಕೃತ ಭಾಷೆಯ ವ್ಯಾಕರಣ ಪ್ರಕ್ರಿಯೆಯಿಂದಾಗಿ ಹೊಸ ಪದಗಳನ್ನು ಸೃಷ್ಟಿಸುವುದು ಸಾಧ್ಯ. ಕನ್ನಡದ ಪದಗಳಿಗೆ ಈ ಸಾಧ್ಯತೆ ಇಲ್ಲ. ಆದ್ದರಿಂದ ಸಂಸ್ಕೃತ ಪದಗಳನ್ನು ಬಳಸುವುದು ಅನುಕೂಲ. ನಾಲ್ಕು: ಸಂಸ್ಕೃತ ಪದಗಳಿಗೆ ನಿಖರವಾದ ಅರ್ಥ ಇರುವುದರಿಂದ ಶಾಸ್ತ್ರೀಯ ಮತ್ತು ವೈಚಾರಿಕ ಬರವಣಿಗೆಗೆ ಈ ಪದಗಳು ಸರಿಯಾಗಿ ಹೊಂದಿಕೊಳ್ಳುತ್ತವೆ. ಈ ವಿವರಣೆ ಇನ್ನೂ ಬೇರೆ ಬೇರೆ ಬಗೆಯಲ್ಲಿ ಮುಂದುವರೆಯಬಹುದು. ಕನ್ನಡದ ಸಾಧ್ಯತೆಯನ್ನು ಕುರಿತು ಹೇಳುವ ವಿವರಣೆಗಳನ್ನು ಕೆಲವೊಮ್ಮೆ ನಿರಾಕರಿಸುವುದು ಕಷ್ಟ. ಆದರೆ ಇದಕ್ಕೆ ಭಾಷೆ ಕಾರಣವಲ್ಲ. ಅದನ್ನು ಬಳಸುವವರು ಮಾಡಿರುವ ಯತ್ನದಲ್ಲಿ ಇರುವ ಕೊರತೆ ಕಾರಣ.

ಚಾರಿತ್ರಿಕವಾಗಿ ಕನ್ನಡ ಬರವಣಿಗೆ ತನ್ನ ಚಹರೆಯನ್ನು ಕಾಯ್ದುಕೊಳ್ಳಲು ಮಾಡಿದ ಯತ್ನ ಪರೋಕ್ಷವಾಗಿ ಈಗ ಹೇಗೆ ಒಂದು ತೊಡರಾಗಿದೆ ಎಂಬುದನ್ನು ಗಮನಿಸೋಣ:

ಸಂಸ್ಕೃತ ಪದಗಳನ್ನು ಕನ್ನಡಕ್ಕೆ ಪಡೆದುಕೊಂಡಾಗ ಅವುಗಳನ್ನು ಉಚ್ಚರಿಸುವ ರೀತಿಯಲ್ಲಿ ಸಹಜವಾಗಿಯೇ ಹಲವು ಬದಲಾವಣೆಗಳಾದವು. 'ಅ' ಕಾರಾಂತ ನಾಮಪದಗಳನ್ನು 'ಎ' ಕಾರಾಂತ ಮಾಡಿಕೊಂಡದ್ದು, 'ಲ' ಧ್ವನಿಯನ್ನು 'ಳ' ಆಗಿ ಪರಿವರ್ತಿಸಿದ್ದು, ವಿಜಾತೀಯ ದ್ವಿತ್ವಗಳ ನಡುವೆ 'ಉ' ಕಾರವನ್ನು ಸ್ವರಭಕ್ತಿ ಮಾಡಿದ್ದು, ಅಲ್ಲದೇ ಪ್ರಾಕೃತದ ಮಾದರಿಯಲ್ಲಿ ತದ್ಭವಗಳನ್ನು ಮಾಡಿಕೊಂಡದ್ದು ಇವೆಲ್ಲಾ ಇಂತಹ ಬದಲಾವಣೆಗಳೇ ಆಗಿವೆ. ಆದರೆ ಉಚ್ಚಾರಣೆಯಲ್ಲಿ, ಅಂದರೆ ಮಾತಿನಲ್ಲಿ ಮಾಡಿಕೊಂಡ ಪರಿವರ್ತನೆಗಳನ್ನು ಬರೆಹದ ಭಾಷೆಗೆ ರವಾನಿಸಲು ಕನ್ನಡಿಗರು ಹಿಂಜರಿದಂತೆ ತೋರುತ್ತದೆ. ಅದಕ್ಕಾಗಿ ಕನ್ನಡ ಲಿಪಿವ್ಯವಸ್ಥೆಯಲ್ಲೇ ಬದಲಾವಣೆ ಮಾಡಿಕೊಂಡರು. ಮಹಾಪ್ರಾಣಗಳಿಗಾಗಿ, ತಾಲವ್ಯ ಮತ್ತು ಮೂರ್ಧನ್ಯ ಘರ್ಷಧ್ವನಿಗಳಿಗಾಗಿ ವಿಶೇಷ ಲಿಪ್ಯಕ್ಷರಗಳನ್ನು ರೂಪಿಸಿಕೊಂಡರು. ಇದರಿಂದ ಸಂಸ್ಕೃತ ಪದಗಳ ಮೂಲ ಉಚ್ಚಾರಣೆಯನ್ನು ಕನ್ನಡ ಬರವಣಿಗೆಯಲ್ಲಿ ದಾಖಲಿಸುವುದು ಸಾಧ್ಯವಾಯಿತು. ಉಚ್ಚಾರಣೆಯಲ್ಲಿ ಉಳಿಸಿಕೊಳ್ಳಲಾಗದ ಧ್ವನಿಗಳನ್ನು ಬರಹದಲ್ಲಿ ಕಾಯ್ದುಕೊಂಡರು. ಇದರಿಂದ ಸಂಸ್ಕೃತ ಭಾಷೆಯ ದಾಖಲೆಗಳನ್ನು ಯಥಾವತ್ತಾಗಿ ಉಚ್ಚಾರಣೆಯ ಸಹಿತ ಕನ್ನಡ ಲಿಪಿಯಲ್ಲಿ ಬರೆಯುವುದು ಸಾಧ್ಯವಾಯಿತು. ಕನ್ನಡ ಲಿಪಿಯ ಈ ಸುಧಾರಣೆ ಒಂದು ದೃಷ್ಟಿಯಿಂದ ಕನ್ನಡಕ್ಕೆ ವಿಶೇಷವಾದ ಬರೆಹದ ಮಾದರಿಯನ್ನು ನೀಡಿತಾದರೂ ಆ ಮೂಲಕ ಬಹುದೀರ್ಘ ಸಂಸ್ಕೃತ ಪದಗಳು ಕನ್ನಡದಲ್ಲಿ, ಕೊನೆಯ ಪಕ್ಷ ಕನ್ನಡ ಬರವಣಿಗೆಯಲ್ಲಿ ಮೂಲರೂಪದಲ್ಲೇ ಉಳಿದುಕೊಂಡವು. ಈ ಚಾರಿತ್ರಿಕ ಸಂಗತಿಯನ್ನು ಗಮನದಲ್ಲಿ ಇಟ್ಟುನೋಡಿದರೆ ಕನ್ನಡ ಭಾಷೆಯು ಸಂಸ್ಕೃತದ ದೂರತ್ವವನ್ನು ಕಡಿಮೆ ಮಾಡಲು ಬಳಸಿದ ತಂತ್ರವೇ ಕನ್ನಡ ಭಾಷೆಗೆ ಅಡ್ಡಿಯಾಗಿದ್ದು ಗಮನಿಸಬೇಕಾದ ವಿಚಾರ.

ಒಂದು ವೇಳೆ ವಿಚಾರವಂತರು ಹೇಳುವಂತೆ ಕನ್ನಡ ಬರವಣಿಗೆಯಲ್ಲಿ ಸಂಸ್ಕೃತವನ್ನು ಬಳಸಿದ್ದರಿಂದ ಅವು ಹೆಚ್ಚು ಪರಿಚಿತವಾಗಿವೆ ಎನ್ನುವುದಾದರೆ ಆ ಪದಕೋಶ ಜನರ ಆಡುಮಾತಿನ ಭಾಗವಾಗಬೇಕಿತ್ತು. ಅಂದರೆ ಆ ಪದಗಳನ್ನು ಜನರು ಗ್ರಹಿಕೆಗೆ ಮಾತ್ರವಲ್ಲದೆ ಅಭಿವ್ಯಕ್ತಿಗೂ ಬಳಸಲು ಸಿದ್ಧರಿರಬೇಕಿತ್ತು. ವಾಸ್ತವವಾಗಿ ಹಾಗಾಗಿಲ್ಲ. ಬರೆಹದಲ್ಲಿ ಬಳಕೆಯಾಗುವ ಸಾವಿರಾರು ಸಂಸ್ಕೃತ ಪದಗಳನ್ನು ಜನರು ಬರವಣಿಗೆಯಲ್ಲಿ ಗಮನಿಸುವುದು ಸಾಧ್ಯವಾಗಿವೆಯೇ ಹೊರತು ತಮ್ಮ ಆಡುಮಾತಿನಲ್ಲಲ್ಲ. ಈ ಕಾರಣದಿಂದ ಕನ್ನಡ ಬರವಣಿಗೆಯಲ್ಲಿ ಸಂಸ್ಕೃತದ ಹೆಚ್ಚುವರಿ ಸೇರ್ಪಡೆಗೆ ನೀಡುವ ಸಮರ್ಥನೆಗಳು ಸಂಪೂರ್ಣವಾಗಿ ಸರಿಯಾಗುವುದಿಲ್ಲ.

ಮಾತಿನ ರೂಪಗಳಿಗೂ ಬರೆಹದ ರೂಪಗಳಿಗೂ ವ್ಯತ್ಯಾಸ ಇರುವುದು ಎಲ್ಲಾ ಭಾಷೆಗಳಲ್ಲೂ ಸಹಜ. ಆದರೆ ಈ ವ್ಯತ್ಯಾಸ ಅಗಾಧ ಪ್ರಮಾಣದಲ್ಲಿ ಬೆಳೆದರೆ ಆಗ ಮಾತನಾಡಬಲ್ಲವರೆಲ್ಲರೂ ಓದುತ್ತಾರೆ ಅಥವಾ ಬರೆಯುತ್ತಾರೆ ಎಂದು ಸ್ಪಷ್ಟವಾಗಿ ಹೇಳಲು ಸಾಧ್ಯವಿಲ್ಲ. ಕನ್ನಡದಲ್ಲಿ ಹೀಗಾಗಿರುವ ಕಾರಣದಿಂದಲೇ ಕನ್ನಡದ ಬರವಣಿಗೆ ಓದುಗರನ್ನು ಹೆಚ್ಚಿನ ಸಂಖ್ಯೆಯಲ್ಲಿ ಪಡೆದುಕೊಳ್ಳುವಲ್ಲಿ ಸೋತಿದೆ. ಈ ಪರಿಸ್ಥಿತಿಯನ್ನು

ಸಾಮಾನ್ಯವಾಗಿ ಅಕ್ಷರಸ್ಥರ ನಿರಾಸಕ್ತಿ ಎಂತಲೂ ಅವರ ಅಸಾಮರ್ಥ್ಯ ಎಂತಲೂ ವಾದ ಮಾಡಲಾಗುತ್ತದೆ. ಆದರೆ ಈ ಪರಿಸ್ಥಿತಿಯನ್ನು ಬೇರೊಂದು ರೀತಿಯಲ್ಲೂ ನೋಡಬೇಕು. ಓದುವವರು ತಾವು ಓದುತ್ತಿರುವ ಕನ್ನಡ ತಮ್ಮ ಪರಿಚಿತ ಕನ್ನಡಕ್ಕಿಂತ ತುಂಬ ಬೇರೆಯಾಗಿದೆ ಎಂದು ತಿಳಿಯುವುದರಿಂದ ಅಂತಹ ಬರವಣಿಗೆಯನ್ನು ಓದಲು ಹಿಂಜರಿಯುತ್ತಾರೆ, ನಿರಾಕರಿಸುತ್ತಾರೆ, ಪ್ರತಿಭಟಿಸುತ್ತಾರೆ. ಓದದಿರುವುದು ಒಂದು ರೀತಿಯ ನಿರಾಕರಣೆ ಮತ್ತು ಪ್ರತಿಭಟನೆಗಳೇ ಆಗಿವೆ. ಈ ಮಾತನ್ನು ಓದದಿರುವವರ ವರ್ತನೆಯನ್ನು ಸಮರ್ಥಿಸಲು ಹೇಳುತ್ತಿಲ್ಲ. ಅವರ ಸಾಂಸ್ಕೃತಿಕ ವಿನ್ಯಾಸದಲ್ಲಿ ಬರೆಹಕ್ಕೆ ಗೌಣಸ್ಥಾನ ದೊರಕಿರುತ್ತದೆ. ಅಷ್ಟೇ ಅಲ್ಲ ಇಂತಹ ಬರೆಹವನ್ನು ಓದಿ ಹೇಳಿದಾಗಲೂ ಅದು ಕೂಡಾ ಸಮ್ಮತಿಯನ್ನು ಪಡೆದುಕೊಳ್ಳುತ್ತಿಲ್ಲ. ಜನರು ಅಂಥಾ ಭಾಷಾಶೈಲಿಯನ್ನು ಪಾಂಡಿತ್ಯದ ಲಕ್ಷಣವೆಂದು ಗುರುತಿಸಿಕೊಳ್ಳುತ್ತಾರೆಯೇ ಹೊರತು ಅದನ್ನು ತಮ್ಮದನ್ನಾಗಿ ಮಾಡಿಕೊಳ್ಳಲು ಸಿದ್ಧರಿರುವುದಿಲ್ಲ.

ಬರವಣಿಗೆಯ ಈ ಜನವಿದೂರತೆ ಉತ್ಪ್ರೇಕ್ಷೆಯಲ್ಲ. ಏಕೆಂದರೆ ಏಕೀಕರಣದ ಅನಂತರದ ಕರ್ನಾಟಕದಲ್ಲಿ ಓದುವವರ ಸಂಖ್ಯೆ ಹೆಚ್ಚಾಗಿದೆ ಎಂಬ ಕೆಲವು ಅಂಕಿ ಅಂಶಗಳು ಏನನ್ನೂ ಸೂಚಿಸಲಾರವು. ಓದುಗರ ಸಂಖ್ಯೆಯ ಹೆಚ್ಚಳ ಎನ್ನುವುದು ಜನಸಂಖ್ಯಾ ಬೆಳವಣಿಗೆಯು ಪ್ರಮಾಣಬದ್ಧವಾಗಿ ಇರುತ್ತದೆಯೇ? ಹಾಗಿಲ್ಲದಿದ್ದಾಗ ಓದುವವರು ಹೆಚ್ಚಿದ್ದಾರೆ ಎಂಬ ಮಾತನ್ನು ಎಚ್ಚರದಿಂದ ಗಮನಿಸಬೇಕು. ಓದುವವರು ಏನನ್ನು ಓದುತ್ತಾರೆ ಮತ್ತು ಹೇಗೆ ಓದುತ್ತಾರೆ ಎಂಬುದು ಇನ್ನೊಂದು ಬೇರೆಯ ಚರ್ಚೆಯ ವಿಷಯ. ಸದ್ಯ ನಮಗೆ ಕನ್ನಡ ಬರವಣಿಗೆಯ ಯಾವ ಲಕ್ಷಣ ಅದನ್ನು ಜನರಿಂದ ದೂರವಿರಿಸಿದೆ ಎಂಬುದನ್ನು ಕಂಡುಕೊಳ್ಳಬೇಕಾಗಿದೆ.

ಸಂಸ್ಕೃತ ಪದಗಳು ಕನ್ನಡದಲ್ಲಿ ಬಳಕೆಯಾಗುತ್ತದೆಂದ ಮಾತ್ರಕ್ಕೆ ಅವು ಕನ್ನಡದವಾಗಿ ಬಿಟ್ಟಿವೆ ಎಂದು ನಿರ್ಣಯಿಸುವುದು ಸರಿಯಾಗಲಾರದು. ಈ ಪದಗಳು ಕನ್ನಡದ ಪದಕೋಶದಲ್ಲಿ ಕೆಳಗಿಳಿಯುವ ವಿಧಾನ ವಿಚಿತ್ರವಾಗಿದೆ. ವಿಚಿತ್ರ ಏಕೆಂದರೆ ಅವು ಯಾವುದೋ ಒಂದು ನಿರ್ದಿಷ್ಟ ನೆಲೆಯಿಂದ ಆಚೆಗೆ ದಾಟುವುದೇ ಇಲ್ಲ. ಅಂದರೆ ಅವುಗಳಲ್ಲಿ ಬಹುಪಾಲಿನವು ಕನ್ನಡಿಗರು ತಮ್ಮ ಕಿಸೆಯಲ್ಲಿಟ್ಟು ಸಂತೋಷ ಪಡುವ ಆದರೆ ಬಳಸಲಾಗದ ನಾಣ್ಯದಂತಿವೆ. ಈ ಮಾತನ್ನು ಕೊಂಚ ಸ್ಪಷ್ಟಪಡಿಸಬೇಕಾಗಿದೆ. ಶಬ್ದ ಜಗತ್ತನ್ನು ಏನೋ ಕಾರಣದಿಂದ ನಾಣ್ಯಜಗತ್ತಿಗೆ ಸಮೀಕರಿಸುತ್ತೇವೆ. ಎರವಲು ಪಡೆ, ಸ್ವೀಕರಿಸು, ಚಲಾವಣೆ ಮಾಡು, ಟಂಕಿಸು ಇತ್ಯಾದಿ ಪದಗಳೆಲ್ಲಾ ಎರಡೂ ವಲಯಗಳಿಗೆ ಸಮಾನವಾಗಿವೆ. ಸಂಸ್ಕೃತ ಪದಗಳು ಈ ದೃಷ್ಟಿಯಲ್ಲಿ ಕನ್ನಡದ ಅಹಂ ಅನ್ನು ವೃದ್ಧಿಗೊಳಿಸುವ ನೆಲೆಯಲ್ಲಿ ನೆರವಾಗಿವೆ. ಆದರೆ ಅವುಗಳು ದಿನನಿತ್ಯದ ವ್ಯವಹಾರಿಕ ಜಗತ್ತಿನಲ್ಲಿ ನಿಷ್ಫಲವಾಗುತ್ತವೆ. ಯಾವುದೋ ದೇಶದ ನಾಣ್ಯವೊಂದನ್ನು ಇನ್ನೊಂದು ದೇಶದಲ್ಲಿ ಬಳಸಲು ಯತ್ನಿಸಿದಂತಿದೆ. ಆ ನಾಣ್ಯಗಳಿಗೆ ಬೆಲೆಯಿಲ್ಲವೆಂದಲ್ಲ, ಆದರೆ ಗೊತ್ತಾದ ಸಂದರ್ಭದಲ್ಲಿ ಅವನ್ನು ಬಳಸಲು, ಅರ್ಥ ಸಾಧ್ಯತೆಯನ್ನು ಶೋಧಿಸಲು ಉಪಯೋಗಕ್ಕೆ ಬರುವುದಿಲ್ಲ.

ಈ ತರ್ಕವನ್ನು ಸಂಸ್ಕೃತ ವಿರೋಧೀ ನೆಲೆಯಲ್ಲಿ ನೋಡಬಾರದು. ಕನ್ನಡದ ಬಳಕೆಯ ವಲಯಗಳನ್ನು ಸದೃಢಗೊಳಿಸಲು ಬಯಸುವವರು ಕನ್ನಡದಲ್ಲಿ ಸಂಸ್ಕೃತವು ಈಗ ವಹಿಸುತ್ತಿರುವ ಪಾತ್ರದಲ್ಲಿ ಯಾವ ಯಾವ ವಿಚಾರಗಳು ಅಡಕಗೊಂಡಿವೆ ಎಂಬುದನ್ನು ಗೊತ್ತುಮಾಡಲೇ ಬೇಕು. ಹಾಗೆ ನೋಡಿದರೆ ಕನ್ನಡಿಗರ ಭಾಷಾ ಪ್ರಯೋಗದ ಪರಿಕಲ್ಪನೆಯೇ ದೋಷಪೂರಿತವಾಗಿದೆ. ಇದರಿಂದ ಮಾತು ಮತ್ತು ಬರಹಗಳು ಒಂದಕ್ಕೊಂದು ಪೂರಕ ಮತ್ತು ಪ್ರೇರಕ ಎಂಬ ನೆಲೆಯನ್ನು ಕಳೆದುಕೊಂಡಿವೆ. ಅವುಗಳ ನಡುವಣ ಮೌಲ್ಯಾತ್ಮಕ ವ್ಯತ್ಯಾಸಗಳಲ್ಲೂ ಆಸಕ್ತಿಯನ್ನು ಕಾಯ್ದುಕೊಳ್ಳುವುದು ಸಾಧ್ಯವಾಗಿಲ್ಲ.

**ಕನ್ನಡ ನಿರೂಪಣೆಗಳು**

ಕನ್ನಡ ಭಾಷೆಯ ಬಳಕೆಯ ವಲಯಗಳು ಹೆಚ್ಚುತ್ತಾ ಹೋಗಿರುವುದು ಒಂದು ಪ್ರಕ್ರಿಯೆಯಾದರೆ ಆ ವಲಯಗಳಲ್ಲಿ ಕನ್ನಡವನ್ನು ನಿರೂಪಿಸುವ ಬಗೆಗಳು ಬದಲಾಗುತ್ತಾ ಹೋಗಿರುವುದು ಇನ್ನೊಂದು ಪ್ರಕ್ರಿಯೆ. ಕಳೆದ ಐವತ್ತು ವರ್ಷಗಳಲ್ಲಿ ಈ ನಿರೂಪಣೆಗಳ ಸ್ವರೂಪವು ಹೇಗೆ ಬದಲಾಗುತ್ತಾ ಬೆಳೆದಿದೆ ಎನ್ನುವುದನ್ನು ಈ ಅಧ್ಯಾಯದಲ್ಲಿ ವಿವರಿಸಲಾಗುತ್ತದೆ.

ಸಾಮಾನ್ಯವಾಗಿ ನಿರೂಪಣೆಗಳನ್ನು ಬರೆಹ ಮತ್ತು ಮಾತು ಎಂದು ವರ್ಗೀಕರಿಸುವುದುಂಟು. ಆದರೆ ನಾವು ಬರೆಹ ಎಂದು ಪರಿಗಣಿಸುವ ನಿರೂಪಣೆಯಲ್ಲಿ ಹಲವು ಮಾದರಿಗಳು ರೂಪಗೊಳ್ಳುತ್ತಿವೆ. ಈ ನಿರೂಪಣೆಯ ಬಗೆಗಳು ಬೇರೆಯಾಗಲು ನಿರೂಪಿತ ವಸ್ತು, ನಿರೂಪಕರ ಸ್ವರೂಪ, ನಿರೂಪಣೆಯ ಸಂದರ್ಭ, ನಿರೂಪಣೆಯು ಉದ್ದೇಶಿತವಾಗಿರುವ ವ್ಯಕ್ತಿ ಮತ್ತು ನಿರೂಪಣೆಯ ಮಾಧ್ಯಮ ಇವೆಲ್ಲವೂ ಕಾರಣವಾಗುತ್ತವೆ. ಬಹು ಹಿಂದಿನಿಂದಲೂ ಬರೆಹ ಎಂಬುದು ಮಾತಿನ ದಾಖಲೆ ಎಂಬ ಸರಳ ವ್ಯಾಖ್ಯೆಯನ್ನು ಒಪ್ಪಿಕೊಂಡು ಬರಲಾಗಿದೆ. ಅಂದರೆ ಮಾತಾಗಬಹುದಾದದ್ದು, ನಾಶವಾಗುವ ಸಾಧ್ಯತೆ ಇರುವುದರಿಂದ ಅದನ್ನು ಲಿಪೀಕರಿಸಿ ಕಾಲ,ದೇಶ ಬದ್ಧತೆಯಿಂದ ಮುಕ್ತಗೊಳಿಸುವ ಉದ್ದೇಶದಿಂದ ಬರೆಹವನ್ನು ಬಳಸಲಾಗುತ್ತದೆ. ಇದು ತೀರಾ ಸರಳ ವ್ಯಾಖ್ಯೆ. ಇಂದಿನ ಅಗತ್ಯಗಳಿಗೆ ಅನುಗುಣವಾಗಿ ಬರೆಹವೆಂಬ ನಿರೂಪಣೆ ತನ್ನ ಸ್ವರೂಪವನ್ನು ಬದಲಾಯಿಸಿಕೊಳ್ಳುತ್ತಿದೆ. ಅಂತಹ ಕೆಲವು ನಿರೂಪಣೆಗಳನ್ನು ನಾವಿಲ್ಲಿ ಪರಿಶೀಲಿಸುತ್ತೇವೆ. ವರದಿಗಳು ಎಂಬ ನಿರೂಪಣೆ ಈಗ ವ್ಯಾಪಕವಾಗಿ ಬೆಳೆದಿದೆ. ಪತ್ರಿಕೆಗಳ ಉಗಮದೊಂದಿಗೆ ಬೇರುಬಿಟ್ಟ ಈ ಮಾದರಿ ಹೆಚ್ಚು ವ್ಯಾಪಕವಾದ ಸಾಮಾಜಿಕ ಚಟುವಟಿಕೆಗಳನ್ನು ಒಳಗೊಳ್ಳುತ್ತಿದೆ. ವರದಿಗಳಲ್ಲಿ ಒಬ್ಬ ನಿರೂಪಕರು ಇರುತ್ತಾರೆ. ಅವರು ಘಟನೆಯ ಪ್ರತ್ಯಕ್ಷದರ್ಶಿ ಆಗಿರಬಹುದು, ಇಲ್ಲವೇ ಬೇರೆ ಮೂಲದಿಂದ ದೊರೆತ ಮಾಹಿತಿಯನ್ನು ನಿರೂಪಿಸುತ್ತಿರಬಹುದು. ಪ್ರತ್ಯಕ್ಷದರ್ಶಿ ವರದಿಗಳಲ್ಲಿ ಘಟನೆ ನಡೆಯುವ ಸಂದರ್ಭದಲ್ಲಿ ನಿರೂಪಕರು ಭಾಗಿಯಾಗುವ ಬಗೆ ಒಂದಾದರೆ, ಘಟನೆಯ ಅನಂತರ ಅಲ್ಲಿಗೆ ನಿರೂಪಕರು ವರದಿ ಮಾಡಲು ಹೋಗುವುದು ಇನ್ನೊಂದು ಬಗೆ.

ನಿರೂಪಕರು ಘಟನೆಯಲ್ಲಿ ಭಾಗಿಯಾಗುವ ಸಂದರ್ಭ ಇದ್ದಾಗ ಅವರು ಆ ಘಟನೆಯ ಪಾತ್ರಧಾರಿಯೂ ಆಗಿರಬಹುದು ಅಥವಾ ಅದನ್ನು ಹೊರಗಿನವರಾಗಿ ನೋಡುತ್ತಿರುವವರೂ ಆಗಿರಬಹುದು. ಇವಿಷ್ಟು ವಿನ್ಯಾಸಗಳಲ್ಲಿ ನಿರೂಪಣೆಯು ಬಯಸುವ ಭಾಷೆಯ ಸ್ವರೂಪ ಬೇರೆ ಬೇರೆಯೇ ಆಗಿರುತ್ತದೆ. ಇದಲ್ಲದೆ ವರದಿಗಳು ಯಾರನ್ನು ಉದ್ದೇಶಿಸಿರುತ್ತವೆ ಎನ್ನುವುದು ಇನ್ನೊಂದು ಪ್ರಭಾವಶಾಲಿ ಅಂಶ. ಒಂದು ಪತ್ರಿಕೆಗಾಗಿ ವರದಿಮಾಡುವವರು ಆ ಪತ್ರಿಕೆಯ ಓದುಗರ ಸ್ವರೂಪವನ್ನು ಗಮನದಲ್ಲಿ ಇರಿಸಿಕೊಳ್ಳುತ್ತಾರೆ. ಇದರ ಪರಿಣಾಮಗಳು ಅವರು ವರದಿಯಲ್ಲಿ ಬಳಸುವ ಭಾಷೆಯಲ್ಲಿ ಕಾಣುತ್ತವೆ. ಏಕೆಂದರೆ ಪತ್ರಿಕೆ ಒಂದು ದಿನದ ಓದಿಗಾಗಿ ರೂಪಗೊಂಡದ್ದು. ಅದಕ್ಕೆ ನಿನ್ನೆ ಮತ್ತು ನಾಳೆಗಳು ಇರುವುದಾದರೂ ಅದು ಕೇವಲ ಔಪಚಾರಿಕ. ಆ ವರದಿಯ ಸ್ಥಾನದಲ್ಲಿ ಮತ್ತೊಂದು ವರದಿ ಬಂದು ಕೂಡುತ್ತದೆ. ಅಪರಾಧದ, ಅಪಘಾತದ ವಸ್ತವನ್ನುಳ್ಳ ವರದಿಗಳನ್ನು ಈ ನಿಟ್ಟಿನಲ್ಲಿ ಗಮನಿಸಬಹುದು. ಇಲ್ಲಿ ಸದ್ಯತನ ಮುಖ್ಯವಾಗಿರುತ್ತದೆ. ಅಂದರೆ ಆ ಘಟನೆಯ ತಾಜಾತನವನ್ನು ನಿರೂಪಣೆಯ ಭಾಷೆಯಲ್ಲಿ ಸಾಧಿಸುವುದು ಅಗತ್ಯ. ಅದರಾಚೆಗೆ ಅದಕ್ಕೆ ನಿರಂತರತೆ ಪತ್ರಿಕೆಯ ದೃಷ್ಟಿಯಿಂದ ಅನಗತ್ಯ. ಏಕೆಂದರೆ ಅಂಥದ್ದೇ ಮತ್ತೊಂದು ನಿರೂಪಣೆಗಾಗಿ ನಾಳಿನ ಪತ್ರಿಕೆಯಲ್ಲಿ ಅವಕಾಶವಿರುತ್ತದೆ.

ಇದಲ್ಲದೆ ಸದ್ಯ ನಿರೂಪಿತವಾಗುವ ಸಂಗತಿಯಲ್ಲಿ ನಿನ್ನೆ, ನಾಳೆಗಳನ್ನು ಕೊನೆಯ ಪಕ್ಷ ನಿನ್ನೆಗಳನ್ನು ಸೇರ್ಪಡೆ ಮಾಡಿಕೊಳ್ಳುವ ವರದಿಗಳು ಇರುತ್ತವೆ. ಈ ವರದಿಗಳಲ್ಲಿ ನಿರೂಪಕರು ಸದ್ಯದ ಘಟನೆಗಳನ್ನು ಮತ್ತು ಅದರ ಉಗಮ ಬೆಳವಣಿಗೆಗಳನ್ನು ಚರಿತ್ರೆಯನ್ನಾಗಿ ನಿರೂಪಿಸುತ್ತಾರೆ. ಎಲ್ಲ ಚರಿತ್ರೆಗಳೂ ರಚನೆಗಳೇ ಆಗಿರುತ್ತವೆ. ಅಂದರೆ ಆಯ್ಕೆ ಮತ್ತು ನಿರಾಕರಣೆಗಳ ಮೂಲಕ ಸಂಗತಿಗಳನ್ನು ಒಂದು ತರ್ಕಸಾಂಗತ್ಯಕ್ಕೆ ತರುವ ಪ್ರಯತ್ನ ಅಲ್ಲಿ ನಡೆಯುತ್ತದೆ. ಆದ್ದರಿಂದ ಇಲ್ಲಿಯೂ ಕೂಡಾ ಭಾಷೆಯ ಸ್ವರೂಪ ಅದಕ್ಕೆ ತಕ್ಕಂತೆ ಬದಲಾಗಬೇಕಾಗುತ್ತದೆ.

ಇದಲ್ಲದೆ ವರದಿಗಳಲ್ಲಿ ಈಗ ನಿರೂಪಣೆ ಆಗುತ್ತಿದ್ದರೂ ಎಂದೋ ನಡೆದ ಅಥವಾ ನಡೆದಿರಬಹುದಾದ ಅಥವಾ ಹೀಗೆಯೇ ನಡೆಯಿತೆಂದು ಕಲ್ಪಿಸಲಾದ ಘಟನೆಗಳೂ ಇರುತ್ತವೆ. ಇಂತಹ ಸಂದರ್ಭದಲ್ಲಿ ಇಂದಿನ ಓದುಗರಿಗೆ ಎಂದೋ ನಡೆದಿರಬಹುದಾದ ಘಟನೆಯನ್ನು ಚಿತ್ರವತ್ತಾಗಿಸುವುದು ಅಗತ್ಯವಾಗುತ್ತದೆ. ಆಗ ಕನ್ನಡ ಭಾಷೆಯಲ್ಲಿ ಕ್ರಿಯಾಪದಗಳನ್ನು ಬಳಸುವ ರೀತಿಯಲ್ಲಿ ಎದ್ದು ಕಾಣುವ ವ್ಯತ್ಯಾಸ ಕಾಣುತ್ತದೆ. ಉದಾ.ಗೆ ಒಂದು ಕೊಲೆಯ ಘಟನೆಯನ್ನು ವರದಿ ಮಾಡುತ್ತಾರೆ ಎಂದುಕೊಳ್ಳೋಣ. ಅದು ಆಗಿ ಹೋದ ಘಟನೆ. ವರದಿಗಾರರು ತಾವು ಆ ಘಟನೆಗೆ ಪ್ರತ್ಯಕ್ಷ ಸಾಕ್ಷಿಗಳಾಗಿರುವ ಸಂಭವ ಇರುವುದಿಲ್ಲ. ಹಾಗಿದ್ದರೂ ವರದಿಗಾರರಾಗಿರುವಾಗ ಆ ಪಾತ್ರವನ್ನು ಬದಿಗಿರಿಸುತ್ತಾರೆ. ಆ ಕೊಲೆಯ ಘಟನೆ ಯಾವ ಅನುಕ್ರಮದಲ್ಲಿ ಹಂತ ಹಂತವಾಗಿ ನಡೆದಿದೆ ಎನ್ನುವುದನ್ನು ನಿರೂಪಿಸುವಾಗ ಕ್ರಿಯಾಪದಗಳು ವಿಶಿಷ್ಟ

ಬಗೆಯಲ್ಲಿರುತ್ತವೆ. ಘಟನೆ ಭೂತಕಾಲದ್ದಾದರೂ ಕ್ರಿಯಾಪದದ ಕಾಲಸೂಚಕ ಪ್ರತ್ಯಯಗಳು ಸಂಭಾವ್ಯ ಭವಿಷ್ಯತ್‌ನಲ್ಲಿ ಇರುತ್ತವೆ. ಅಂದರೆ ಬಂದನು, ಹೋದನು ಎನ್ನುವ ಭೂತಕಾಲದ ರೂಪಗಳ ಬದಲು ಬರುತ್ತಾನೆ, ಹೋಗುತ್ತಾನೆ ಎಂಬ ಅಭೂತರೂಪಗಳನ್ನು ಬಳಸುವುದಿಲ್ಲ. ಬದಲಿಗೆ ಬಂದಿದ್ದಾನೆ, ನೋಡಿದ್ದಾನೆ, ತೆಗೆದಿದ್ದಾನೆ ಎಂಬ ಮಾದರಿಯ ರೂಪಗಳನ್ನು ಬಳಸುತ್ತಾರೆ, ಈ ರೂಪಗಳ ಬಳಕೆಯ ಚರಿತ್ರೆ ಕನ್ನಡದಲ್ಲಿ ಬಹಳ ದೀರ್ಘವಾಗಿಲ್ಲ. ಈಚಿನ ದಶಕಗಳಲ್ಲಿ ಇಂತಹ ನಿರೂಪಣೆಗಳಿಗಾಗಿಯೇ ಈ ಕ್ರಿಯಾರೂಪಗಳನ್ನು ವ್ಯವಸ್ಥಿತವಾಗಿ ಬಳಸಲಾಗುತ್ತಿದೆ. ಮಾದರಿಗಾಗಿ ಈ ಕೆಳಗಿನ ವಾಕ್ಯವನ್ನು ನೋಡೋಣ. 'ರಾತ್ರಿಯಲ್ಲಿ ಬಾಡಿಗೆ ಕಾರಿನಲ್ಲಿ ಬಂದಿದ್ದಾನೆ' ಎಂಬ ವಾಕ್ಯ ಸ್ವತಂತ್ರವಾಗಿದ್ದಾಗ ಈಗ ನಡೆದಿರುವ ಘಟನೆಯೊಂದನ್ನು ನಿರೂಪಿಸಿದಂತೆ ತೋರುತ್ತವೆ. ಆದರೆ ನಾವು ಚರ್ಚಿಸುತ್ತಿರುವ ಸಂದರ್ಭದಲ್ಲಿ ಕೊಲೆಗೆ ಕಾರಣನಾದ ವ್ಯಕ್ತಿಯೂ ಹಾಗೆ ಕಾರಿನಲ್ಲಿ ಬಂದದ್ದನ್ನು ಊಹಿಸಿ ವಿವರಿಸಿದರೆ ಆಗಲೂ ಈ ವಾಕ್ಯದ ಸ್ವರೂಪ ಹೀಗೆಯೇ ಇರುತ್ತದೆ. ಆದರೆ ಕೊಲೆ ಮಾಡಿದವನು ಬಾಡಿಗೆ ಕಾರಿನಲ್ಲಿ ಬಂದ ಘಟನೆ ವರದಿಗಾರರು ನಿರೂಪಿಸುತ್ತಿರುವ ಅಥವಾ ಓದುಗರು ಓದುತ್ತಿರುವ ಕಾಲದಲ್ಲಿ ಸಂಭವಿಸಿರುವುದಿಲ್ಲ. ಆದರೆ ಆ ಕಾಲಗಳಲ್ಲಿ ಅದು ಸಂಭವಿಸಿತೇನೋ ಎಂಬಂತೆ ಈ ಕ್ರಿಯಾಪದದ ಬಳಕೆಯಿಂದ ಭಾಸವಾಗುತ್ತದೆ. ಇದೊಂದು ವಿಶಿಷ್ಟವಾದ ಭಾಷಾತಂತ್ರ, ಈಗಾಗಲೇ ಹೇಳಿದಂತೆ ಕನ್ನಡದಲ್ಲಿ ತೀರಾ ಹೊಸದಾಗಿ ಬಳಕೆಯಾಗುತ್ತಿರುವ ಪ್ರಸಂಗ.

ಇಂತಹುದೇ ಇನ್ನೊಂದು ಬಳಕೆ ಸ್ವಲ್ಪ ಹಿಂದಿನಿಂದಲೂ ಕಂಡುಬರುತ್ತಿದೆ. ಒಂದು ಘಟನೆ ಇನ್ನೂ ನಡೆಯಬೇಕಾಗಿರುವಾಗ ಅದು ಹೇಗೆ ನಡೆಯಬೇಕು ಎನ್ನುವುದನ್ನು ಸೂಚಿಸಲು, ನಿರೂಪಣೆಯಲ್ಲಿ ಕ್ರಿಯಾಪದಗಳನ್ನು ಭಿನ್ನ ರೀತಿಯಲ್ಲಿ ಬಳಸಲಾಗುತ್ತದೆ.. ಉದಾ.ಗೆ ಒಂದು ಚಲನಚಿತ್ರದ ದೃಶ್ಯಾವಳಿಯನ್ನು ಚಿತ್ರೀಕರಿಸಲು ಅನುಕೂಲವಾಗುವಂತೆ ಬರೆದ ಚಿತ್ರಕಥೆಯನ್ನು ಗಮನಿಸಬಹುದು. ಆ ಚಿತ್ರಕತೆಯ ಆ ಭಾಗದಲ್ಲಿ ನಿರೂಪಿತವಾದ ಘಟನೆ ಇನ್ನೂ ನಡೆದಿರುವುದಿಲ್ಲ. ಆದರೆ ಹೇಗೆ ನಡೆಯಬೇಕು, ಅಂದರೆ ಹೇಗೆ ಚಿತ್ರೀಕರಣವಾಗಬೇಕು ಎಂಬ ಪೂರ್ವಕಲ್ಪನೆಯೊಡನೆ ಈ ವರದಿಯನ್ನು ಬರೆದಿರುತ್ತಾರೆ. ಅಲ್ಲಿ ಬಳಸುವ ಕ್ರಿಯಾಪದದಲ್ಲಿ ಅಭೂತಕಾಲ ಪ್ರತ್ಯಯದ ಬಳಕೆ ಅಗತ್ಯ ಮತ್ತು ಅನಿವಾರ್ಯವೆಂಬಂತೆ ಮಾಡಲಾಗಿದೆ. ಉದಾ.ಗೆ ಎಕ್ಸ್ ಅಥವಾ ವೈ ಪಾತ್ರಧಾರಿ ಬಾಗಿಲು ತೆಗೆದು ಒಳಗೆ ಬರುತ್ತಾರೆ. ಬಲಬದಿಯ ಗೋಡೆಯತ್ತ ಕಣ್ಣು ಹಾಯಿಸುತ್ತಾರೆ. ಅಲ್ಲಿ ಇರುವ ಗಡಿಯಾರದಲ್ಲಿ ೩ ಗಂಟೆ ಬಾರಿಸುತ್ತದೆ. ಈ ಮಾದರಿಯ ವಾಕ್ಯಗಳನ್ನು ಗಮನಿಸೋಣ. ಇಲ್ಲಿ ಮೂರು ಚಿತ್ರಪಟ್ಟಿಕೆಗಳ ಜೋಡಣೆ ಇದೆ. ಇಲ್ಲಿ ಆ ಘಟನೆಗಳು ಇನ್ನೂ ನಡೆದಿಲ್ಲ. ಹಾಗೆ ನಡೆಯಬೇಕಾದ ಘಟನೆಗಳನ್ನು ಸೂಚಿಸುವಂತೆ ಹೀಗೆ ಕ್ರಿಯಾಪದಗಳನ್ನು ಬಳಸಿ ನಿರೂಪಣೆ ಮಾಡಲಾಗುತ್ತದೆ. ನಾವು ಹಿಂದೆ ಚರ್ಚಿಸಿದ ಸಂದರ್ಭದಲ್ಲಿ ಘಟನೆ ಆಗಿ ಹೋಗಿದೆ. ಅದು ಈಗ ಆಗುತ್ತಿರುವಂತೆ ವರದಿ

ಮಾಡಲಾಗುತ್ತಿದೆ. ಈಗ ನೀಡಿದ ಉದಾಹರಣೆಯಲ್ಲಿ ಘಟನೆ ನಡೆದಿಲ್ಲ, ಆದರೆ ಹೇಗೆ ನಡೆಯಬೇಕು ಎಂಬುದನ್ನು ಸೂಚಿಸುವ ಹಾಗೆ ನಿರೂಪಿಸಲಾಗಿದೆ. ಇಲ್ಲಿ ನೀಡಿದ ಎರಡನೇ ಉದಾಹರಣೆಯಲ್ಲಿ ಸಾಮಾನ್ಯವಾಗಿ ಆ ನಿರೂಪಣೆಗಳು ಬಹು ಸೀಮಿತ ವ್ಯಾಪ್ತಿಯನ್ನು ಪಡೆದಿವೆ ಎಂದು ಮೇಲುನೋಟಕ್ಕೆ ಅನಿಸಬಹುದು. ಆದರೆ ಅದು ಹಾಗಲ್ಲ, ಏಕೆಂದರೆ ಇಂತಹ ನಿರೂಪಣೆಗಳು ಇನ್ನೂ ವ್ಯಾಪಕವಾದ ರೀತಿಯಲ್ಲಿ ಕಾಣಿಸಿಕೊಳ್ಳುತ್ತವೆ. ಉದಾ.ಗೆ ಒಂದು ನಾಟಕದಲ್ಲಿ ಪಾತ್ರಕೊಂದು ರಂಗದ ಮೇಲೆ ಆಡುವ ಮಾತಿನೊಡನೆ ಮಾಡಬೇಕಾದ ಚಟುವಟಿಕೆಯನ್ನು ಸೂಚಿಸುವಾಗ ಕೂಡಾ ಇದೇ ಬಗೆಯ ಕ್ರಿಯಾಪದಗಳ ಬಳಕೆ ಕಾಣುತ್ತದೆ. ಇದಲ್ಲದೆ ಪತ್ರಿಕೆಗಳಲ್ಲಿ ಕೂಡಾ ಒಂದು ಘಟನೆ ಇನ್ನೂ ನಡೆಯದಿರುವಾಗ ಆದರೆ ಅದು ಹೇಗೆ ನಡೆಯುವುದೆಂದು ಖಚಿತವಾಗಿ ತಿಳಿದಿರುವಾಗ ಇದೇ ರೀತಿ ಕ್ರಿಯಾಪದಗಳನ್ನು ಬಳಸುತ್ತಾರೆ. ಮತ್ತೂ ಒಂದು ಸಂದರ್ಭವೆಂದರೆ ನಾವೀಗ ಉದಾಹರಿಸಿದ ಚಿತ್ರದ ಸಂದರ್ಭವನ್ನು ಗಮನಿಸಿ. ಆ ಚಿತ್ರ ನಿರ್ಮಾಣಗೊಂಡು ನೋಡಲು ಸಾಧ್ಯವಾದ ಮೇಲೆ ಆ ಘಟನೆಯನ್ನು ನಿರೂಪಿಸುವಾಗ ಕೂಡಾ ಇದೇ ಮಾದರಿಯ ಕ್ರಿಯಾಪದಗಳು ಕಾಣಿಸಿಕೊಳ್ಳುತ್ತವೆ. ಇದು ಬಹು ಹಿಂದಿನಿಂದಲೂ ನಿರೂಪಣೆಗಳಲ್ಲಿ ಕಂಡುಬರುತ್ತಿದೆ ಎಂದು ಹೇಳಿದೆವಷ್ಟೆ. ಎಂದರೆ ಈ ಬಗೆಯ ನಿರೂಪಣೆಗಳು ಮಾತಿನಲ್ಲೇ ಕಾಣಿಸಿಕೊಳ್ಳುತ್ತಿದ್ದವು. ಈಗಲೂ ಜನಪದ ಕತೆಯೊಂದನ್ನು ನಿರೂಪಿಸುವ ಬಗೆಯನ್ನು ಗಮನಿಸಿ. ಒಂದೂರಿನಲ್ಲಿ ಒಬ್ಬ ರಾಜ ಇರುತ್ತಾನೆ. ಅವನಿಗೆ ನಾಲ್ಕು ಜನ ಮಕ್ಕಳು ಇರುತ್ತಾರೆ ಎಂದು ಮೊದಲಾಗುವುದೇ ಹೊರತು ನಾವು ಸಾಮಾನ್ಯವಾಗಿ ಬರಹದಲ್ಲಿ ಕಾಣುವಂತೆ ಒಂದೂರಿನಲ್ಲಿ ಒಬ್ಬ ರಾಜ ಇದ್ದನು; ಅವನಿಗೆ ನಾಲ್ಕು ಜನ ಮಕ್ಕಳು ಇದ್ದರು ಎಂದು ಮೊದಲಾಗುವುದಿಲ್ಲ. ಎರಡು ನಿರೂಪಣೆಗಳಲ್ಲೂ ಇರುವ ಕ್ರಿಯಾಪದಗಳ ಕಾಲಸೂಚಕ ಪ್ರತ್ಯಯಗಳಲ್ಲಿ ವ್ಯತ್ಯಾಸವಿದೆ. ಅಂದರೆ ಮಾತಿನ ನಿರೂಪಣೆಯಲ್ಲಿ ವ್ಯಾಪಕವಾಗಿ ಇದ್ದ ಮಾದರಿಯೊಂದು ಈಗ ಬರೆಹಕ್ಕೆ ರವಾನೆಯಾಗಿದೆ. ಇಂತಹ ನಿರೂಪಣೆಗಳು ಘಟನೆಗಳ ಸಂಭಾವ್ಯತೆಯನ್ನು ಮತ್ತು ಸ್ವರೂಪವನ್ನು ಪೂರ್ವಭಾವಿಯಾಗಿ ಕಲ್ಪಿಸಿಕೊಂಡಿರುತ್ತವೆ. ಈ ಅಂತಸ್ಥ ರೂಪವನ್ನು ಬಹಿರ್ ಜಗತ್ತಿನಲ್ಲಿ ಮಂಡಿಸುವಾಗ ಕ್ರಿಯಾಪದಗಳ ಚರ್ಚಿತ ರೂಪವನ್ನು ನೆರವಿಗೆ ತೆಗೆದುಕೊಳ್ಳಲಾಗುತ್ತದೆ. ಅಂದರೆ ಮಾತಿನ ನಿರೂಪಣೆಗಳಲ್ಲಿ ಬಳಕೆಯಲ್ಲಿದ್ದ ಒಂದು ಮಾದರಿ ಈಗ ಲಿಖಿತ ರೂಪಗಳಲ್ಲಿ ಹೆಚ್ಚಾಗಿ ಬಳಕೆಯಾಗುವ ಅಗತ್ಯ ಕಂಡುಬರುತ್ತಿದೆ.

ವರದಿಯಲ್ಲದೆ ಈಗ ವಿಶ್ಲೇಷಣೆಯ ಬರೆಹ ಇನ್ನೊಂದು ಮಾದರಿಯಾಗಿ ಬೆಳೆಯುತ್ತಿದೆ. ಈ ಹಿಂದೆ ಟೀಕೆ ವ್ಯಾಖ್ಯಾನ ಎಂಬ ಮಾದರಿಯ ಬರಹಗಳು ಇದ್ದವು. ಒಂದು ಸೂತ್ರ ರೂಪದ ಮಾತು ಇಲ್ಲವೇ ಹೇಳಿಕೆಗಳನ್ನು ನಿರ್ದಿಷ್ಟ ತಾತ್ವಿಕ ಚೌಕಟ್ಟಿನಲ್ಲಿ ವಿಶದೀಕರಿಸುವ ಬಗೆಯನ್ನು ಈ ಟೀಕೆಗಳಲ್ಲಿ ಕಾಣುತ್ತೇವೆ. ಕೆಲವೊಮ್ಮೆ ಟೀಕಾಕಾರರ ಸ್ವತಂತ್ರ ವಿಚಾರಗಳು ಅದರಲ್ಲಿ ಸೇರಬಹುದು. ಈಗ ವಿಶ್ಲೇಷಣೆಯಲ್ಲಿ ಯಾವುದೇ

ಮೂಲವಿಚಾರದ ಉಲ್ಲೇಖ ಇರಬೇಕಾಗಿಲ್ಲ. ಅದರ ಬದಲು ನಡೆದಿರುವ, ನಡೆಯುತ್ತಿರುವ ಮತ್ತು ನಡೆಯಬಹುದಾದ ಘಟನೆಗಳನ್ನು ಆಧಾರವಾಗಿರಿಸಿಕೊಂಡು ವಿಶ್ಲೇಷಣಾಕಾರರು ತಮ್ಮ ವಿಚಾರಗಳನ್ನು ಬೆಳೆಸುತ್ತಾರೆ. ಇಂತಹ ಬರೆಹಗಳಲ್ಲಿ ವಿಶ್ಲೇಷಣಾಕಾರರು ಕೆಲವೊಮ್ಮೆ ಅನಾಮಿಕರಾಗಿ ಇರುತ್ತಾರೆ. ಮತ್ತೆ ಕೆಲವೊಮ್ಮೆ ತಾವು ಮುಂಚೂಣಿಯಲ್ಲಿ ಇದ್ದು ವಿವರಣೆಗಳನ್ನು ನೀಡುತ್ತಾರೆ. ಈ ಎರಡೂ ಬಗೆಗಳಲ್ಲಿ ಭಾಷೆಯು ಬೇರೆ ಬೇರೆ ರೀತಿಗಳಲ್ಲಿ ಬಳಕೆಯಾಗಬೇಕು, ವಿಶ್ಲೇಷಣೆಯ ನಿರೂಪಕರು ತಾವು ಆ ಪ್ರಕ್ರಿಯೆಯಿಂದ ಹೊರಗೆ ಉಳಿದರೆ ಆಗ ಬರವಣಿಗೆಯು ತೃತೀಯ ಪುರುಷದಲ್ಲಿ ಇರುತ್ತದೆ. ಅಲ್ಲದೇ ತಮ್ಮ ವಿಚಾರಗಳನ್ನು ಸಮರ್ಥಿಸುವ ಇಲ್ಲವೇ ವಿಶ್ಲೇಷಿಸುವ ಅವಕಾಶವನ್ನು ನಿರೂಪಕರು ಬಿಟ್ಟುಕೊಡುತ್ತಾರೆ. ಪತ್ರಿಕೆಗಳ ಸಂಪಾದಕೀಯಗಳು ಇದಕ್ಕೆ ಒಳ್ಳೆಯ ಉದಾಹರಣೆ. ಸಾಂದರ್ಭಿಕವಾದ ಒಂದು ಸಂಗತಿಯನ್ನು ಉಲ್ಲೇಖಿಸಿ ಅದನ್ನು ಕುರಿತು ಚರ್ಚೆಯೊಂದನ್ನು ಬೆಳೆಸುವ ಮುಖ್ಯ ಗುರಿ ನಿರೂಪಕರಿಗೆ ಇರುತ್ತದೆ. ಆದರೆ ತಾವೇ ನಿರೂಪಕರಾದಾಗ ತಮ್ಮ ವಿಶ್ಲೇಷಣೆಯ ಪರಿಕರಗಳನ್ನು ತಾವು ಸಂರಕ್ಷಿಸಿಕೊಳ್ಳಲು ಸಾಕಷ್ಟು ಪ್ರಯತ್ನಗಳನ್ನು ಮಾಡುತ್ತಾರೆ. ತಮ್ಮ ಅಭಿಪ್ರಾಯ ಎಂದು ಸ್ಪಷ್ಟಪಡಿಸಲು ಪ್ರಥಮ ಪುರುಷ ನಿರೂಪಣೆಗಳು ಕಾಣಸಿಗುತ್ತವೆ. ಇಂತಹ ಬರೆಹಗಳನ್ನು ಬರೆಯುವವರು ತಮಗೇ ಗೊತ್ತಿಲ್ಲದಂತೆ ಅಥವಾ ಉದ್ದೇಶ ಪೂರ್ವಕವಾಗಿಯೇ ಒಂದು ದೃಷ್ಟಿಕೋನವನ್ನು ಹೊಂದಿರುವುದು ಸರ್ವೇಸಾಮಾನ್ಯ. ಇದನ್ನು ಅವರು ಭಾಷಾಬಳಕೆಯಲ್ಲಿ ಸ್ಪಷ್ಟಪಡಿಸುತ್ತಾರೆ. ಒಂದು ನಿದರ್ಶನವನ್ನು ಗಮನಿಸೋಣ. ಕ್ರೀಡೆಯೊಂದನ್ನು ವರ್ಣಿಸುವಾಗ ತಮ್ಮ ವಿಶ್ಲೇಷಣೆಗೆ ಕೊಡುವ ಶೀರ್ಷಿಕೆಯನ್ನು ಗಮನಿಸಿ "ಭಾರತಕ್ಕೆ ಸೋಲು". ಈ ವಾಕ್ಯ ಮೇಲುನೋಟಕ್ಕೆ ಒಂದು ವರದಿಯಂತಿದೆ. ಪಂದ್ಯದಲ್ಲಿ ಭಾಗಿಗಳಾದ ತಂಡಗಳು ಎರಡು ಇರುತ್ತವೆ. ಭಾರತ, ಇಂಗ್ಲೆಂಡ್ ವಿರುದ್ಧ ಆಡಿರಬಹುದು, ಆಗ ವಾಕ್ಯ ಇಂಗ್ಲೆಂಡ್‌ಗೆ ಜಯ ಅಥವಾ ಗೆಲುವು ಎಂದು ಇರಬಹುದು. ಅದರ ಬದಲು ಭಾರತಕ್ಕೆ ಸೋಲು ಎಂದಾಗ ಘಟನೆಯನ್ನು ನೋಡುವ ದೃಷ್ಟಿಯೊಂದು ನಿಖರವಾಗುತ್ತದೆ. ಭಾರತೀಯರ ದೃಷ್ಟಿಯಿಂದ ಅವರ ಆತ್ಮಾಭಿಮಾನವನ್ನು ಕುಗ್ಗಿಸುವ ಉದ್ದೇಶವುಳ್ಳ ವಾಕ್ಯ ಇದೆಂದು ಸ್ಪಷ್ಟವಾಗಿ ಹೇಳಬಹುದು. ಇದು ಒಂದು ವಾಕ್ಯದಲ್ಲಿ ಕಂಡುಬರುವ ನಿದರ್ಶನವಾದರೆ ದೀರ್ಘ ಸಂಕಥನಗಳು ಈ ಬಗೆಯ ಬಳಕೆಯನ್ನು ಕೆಲವೊಮ್ಮೆ ನಿರೀಕ್ಷಿಸುತ್ತವೆ. ನಿರೂಪಣೆಯಲ್ಲಿ ಅದು ಯಾವಾಗ ವರದಿಯಾಗುತ್ತದೆ ಅಥವಾ ಅದು ಯಾವಾಗ ವಿಶ್ಲೇಷಣೆಯಾಗುತ್ತದೆ ಎನ್ನುವುದನ್ನು ಗುರುತಿಸಿಕೊಳ್ಳುವುದು ಅಗತ್ಯ. ಇವೆರಡರ ನಡುವೆ ಇರುವ ಗೆರೆ ತೀರಾ ತೆಳುವಾದದ್ದು.

ಕಳೆದ ಐದು ದಶಕಗಳಲ್ಲಿ ಈವರೆಗೆ ಇದ್ದ ಮಾದರಿಗಳಿಗಿಂತ ಇಂತಹ ನಿರೂಪಣೆಗಳು ಹೆಚ್ಚಾಗುವುದು ಇಂದು ಅನಿವಾರ್ಯವಾಗಿದೆ. ಏಕೆಂದರೆ ಪತ್ರಿಕೆಗಳು ದಿನದಿನವೂ ಯಾವುದಾದರೊಂದು ವಿಷಯವನ್ನು ಕುರಿತು ಹೀಗೆ ತಮ್ಮ ವಿಶ್ಲೇಷಣೆಗಳನ್ನು ಮಂಡಿಸುತ್ತಲೇ ಇರುತ್ತವೆ. ಆ ನಿಲುವುಗಳು ಸ್ಪಷ್ಟವಾಗುವುದು ಈ ವಿಶ್ಲೇಷಣೆಯ

ನಿರೂಪಣೆಗಳಲ್ಲೇ. ಹಾಗೆ ನೋಡಿದರೆ ಕಳೆದ ಐವತ್ತು ವರ್ಷಗಳಲ್ಲಿ ಇಂತಹ ಬರೆಹಗಳು ಜಾಗತಿಕವಾಗಿಯೂ ಹೇಗೆ ಪ್ರಭಾವಶಾಲಿಯಾಗಿವೆ ಎಂಬ ಚರ್ಚೆಯೊಂದನ್ನು ಖ್ಯಾತ ಚಿಂತಕ ನೋಮ್ ಚಾಮ್ಸ್ಕಿ ಮಂಡಿಸಿದ್ದಾರೆ. ಅವರು ತಮ್ಮ ಸಹೋದ್ಯೋಗಿ ಹರ್ಬರ್ಟ್ ಜೊತೆಕೂಡಿ ಮಂಡಿಸಿದ 'ಮ್ಯಾನುಫ್ಯಾಕ್ಚರಿಂಗ್ ಕನ್‌ಸೆಂಟ್' ಕೃತಿಯಲ್ಲಿ ಈ ಚರ್ಚೆ ಬೆಳೆದಿದೆ. ಆಳುವ ವರ್ಗಗಳು ತಮ್ಮ ಅಧಿಕಾರದ ಬೇರುಗಳನ್ನು ಬಲಪಡಿಸಿಕೊಳ್ಳಲು ಎಷ್ಟೇ ತಂತ್ರಗಳನ್ನು ಬಳಸಿದರೂ ಸಾರ್ವಜನಿಕ ಅಭಿಪ್ರಾಯ ಅದಕ್ಕೆ ಪೂರಕವಾಗಿರ ಬೇಕಾದದ್ದು ಪ್ರಜಾಪ್ರಭುತ್ವದ ಒಂದು ಲಕ್ಷಣ. ಪತ್ರಿಕೆಗಳು ತಮ್ಮ ವಿಶ್ಲೇಷಣೆಗಳಲ್ಲಿ ಮಂಡಿಸುವ ದೃಷ್ಟಿಕೋನಗಳು ಹೇಗೆ ಅವರಿಗೇ ತಿಳಿಯದಂತೆ ಸರ್ಕಾರದ ದೃಷ್ಟಿಕೋನವನ್ನು ಪ್ರತಿಪಾದಿಸುತ್ತವೆ ಎನ್ನುವುದು ಭಾಷಿಕವಾಗಿ ಕುತೂಹಲಕಾರಿ. ಏಕೆಂದರೆ ಈ ಪ್ರಯತ್ನ ಯಶಸ್ವಿಯಾಗುವುದು ವಾಸ್ತವವಾಗಿ ಭಾಷೆಯ ನೆರವಿನಿಂದ. ಕನ್ನಡದಲ್ಲೂ ಕಳೆದ ಒಂದೆರಡು ದಶಕಗಳಿಂದ ಹೀಗೆ ಅಭಿಪ್ರಾಯ ರೂಪಿಸುವ ಉದ್ದೇಶದ ಬರವಣಿಗೆಗಳು ಅಧಿಕ ಪ್ರಮಾಣದಲ್ಲಿ ಹೆಚ್ಚುತ್ತಿವೆ. ವಿಶ್ಲೇಷಣೆಯ ಭಾಷೆಯಲ್ಲಿ ಓದುವವರ ಮನಸ್ಸಿಗೆ ಒಂದು ಭ್ರಾಂತಿ ಕವಿಯುವಂತೆ ಮಾಡುವ ಸಾಮರ್ಥ್ಯವಿರುತ್ತದೆ. ಈ ಕೆಲಸವನ್ನು ಕನ್ನಡ ಎಷ್ಟು ಅಧಿಕೃತವಾಗಿ ಮಾಡುತ್ತಿದೆ ಎಂಬುದು ಕುತೂಹಲದ ವಿಷಯ. ಏಕೆಂದರೆ ಹೆಚ್ಚಿನ ಸಂದರ್ಭಗಳಲ್ಲಿ ಹೀಗೆ ದೃಷ್ಟಿಕೋನವನ್ನು ಓದುಗರು ಪಡೆದುಕೊಳ್ಳುವುದು ಅಖಿಲ ಭಾರತ ಇಲ್ಲವೇ ಅಂತಾರಾಷ್ಟ್ರೀಯ ಪತ್ರಿಕೆಗಳಿಂದ. ಈ ಬಗೆಗೆ ಪ್ರತ್ಯೇಕ ಚರ್ಚೆಯನ್ನು ಮುಂದೆ ಬೆಳೆಸಲಾಗುವುದು.

ಮತ್ತೊಂದು ಹೊಸ ಮಾದರಿ ಈಗ ಸಂದರ್ಶನಗಳಲ್ಲಿ ಅನಿವಾರ್ಯವಾಗಿ ರೂಪುಗೊಳ್ಳುತ್ತಿದೆ. ಸಂದರ್ಶನಗಳು ನಮಗೆ ತಿಳಿದಂತೆ ಮೌಖಿಕವಾಗಿಯೇ ನಡೆಯುತ್ತವೆ. ಸಂದರ್ಶಕರು ಮತ್ತು ಸಂದರ್ಶಿತರು ಪರಸ್ಪರ ಮಾತಾಡಿದ್ದನ್ನು ಅನಂತರ ಲಿಖಿತರೂಪಕ್ಕೆ ತರಲಾಗುತ್ತಿದೆ. ಹೀಗೆ ಲಿಖಿತರೂಪಕ್ಕೆ ತರುವಾಗ ಎರಡು ಮುಖ್ಯ ಮಾದರಿಗಳಿವೆ. ಒಂದು: ಸಂದರ್ಶಕರು ಲಿಖಿತಪ್ರಶ್ನೆಗಳನ್ನು ನೀಡಿ ಅವುಗಳಿಗೆ ಸಂದರ್ಶಿತರು ಮೌಖಿಕವಾಗಿ ಉತ್ತರಿಸುವುದು. ಎರಡು: ಇಬ್ಬರೂ ಮಾತಾಡಿಯೇ ಅನಂತರ ಅದನ್ನು ಲಿಖಿತಗೊಳಿಸುವುದು. ಎರಡೂ ಸಂದರ್ಭಗಳಲ್ಲಿ ಭಾಷೆಯ ಸ್ವರೂಪ ಬೇರೆಯಾಗುತ್ತದೆ. ಇಬ್ಬರೂ ಮಾತಾಡುತ್ತಿದ್ದರೆ ಅದರ ಲಿಖಿತರೂಪ ಒಂದು ನಿಶ್ಚಿತ ಆಕಾರವನ್ನು ತಾಳಬೇಕಾದರೆ ಹಲವು ಸ್ತರಗಳ ಸಂಪಾದನಾಕಾರ್ಯ ಅಗತ್ಯ. ಇದೇನೇ ಇರಲಿ. ಸಂದರ್ಶನಗಳು ಮೌಖಿಕ ಮಾತಿನ ನೆಲೆಗಳಿಂದ ಬರೆಹಕ್ಕೆ ಪರಿವರ್ತಿತವಾಗುವ ಸ್ವರೂಪವನ್ನು ಹೊಂದಿದೆ. ಇದು ಈಗಾಗಲೇ ನಾವು ಚರ್ಚಿಸಿದ ಒಂದು ಮಾದರಿಯಂತೆ ಇದೆ. ಒಂದು ಮುಖ್ಯ ವ್ಯತ್ಯಾಸವೆಂದರೆ ಲಿಖಿತರೂಪಕ್ಕೆ ಬಂದ ಮೇಲೆ ಹಲವು ಹಂತಗಳ ಪರಿಷ್ಕರಣೆ ಸಾಧ್ಯವಿರುತ್ತದೆ. ಈ ಪರಿಷ್ಕರಣೆ ಕೇವಲ ಭಾಷಾದೋಷಗಳನ್ನು ತಿದ್ದುವುದಕ್ಕೆ ಸೀಮಿತಗೊಳ್ಳದೇ ವಿಚಾರಗಳ ಸ್ಪಷ್ಟತೆಗೋಸ್ಕರವೂ ನಡೆಯುತ್ತಿರುತ್ತದೆ. ಹೇಳುತ್ತಿರುವ ವಿಷಯಗಳು ಹೆಚ್ಚು ಸ್ಪಷ್ಟಗೊಳ್ಳಲು ಮತ್ತೆ ತಿದ್ದುಪಡಿಗಳನ್ನು ಮಾಡಲಾಗುತ್ತದೆ.

ಇದೆಲ್ಲವೂ ಭಾಷೆಯ ವಿಶೇಷ ರೀತಿಯ ಬಳಕೆಯನ್ನು ಅಪೇಕ್ಷಿಸುತ್ತದೆ. ಸಂದರ್ಶನಗಳ ಯಥಾರೂಪಗಳು ಕೆಲವೊಮ್ಮೆ ಬರೆಹಕ್ಕೆ ಬರುವುದುಂಟು ಕನ್ನಡದಲ್ಲಿ ಇಂತಹ ಸಂದರ್ಭಗಳು ತುಂಬಾ ಕಡಿಮೆ. ಜಾಗತಿಕವಾಗಿ ಬಿ.ಬಿ.ಸಿ ರೇಡಿಯೋ ಇಂತಹ ಯಥಾ ವರದಿಗಳನ್ನು ನಿಯತವಾಗಿ ಒದಗಿಸುತ್ತದೆ.

ಬರೆಹದ ಹೊಸ ನಿರೂಪಣೆಗಳು ಒಂದೆಡೆಯಾದರೆ ಮಾತುಗಳ ನೆಲೆಯ ಹೊಸ ನಿರೂಪಣೆಗಳು ಮತ್ತೂ ಹಲವಿವೆ. ಕಳೆದ ಶತಮಾನವೇ ಮಾತನ್ನು ಸಾರ್ವಜನಿಕಗೊಳಿಸಿದ ಕಾಲಾವಧಿ. ಅಂದರೆ ಜನರು ತಮ್ಮತಮ್ಮಲ್ಲಿ ಮಾತಾಡುವ ವಲಯದಿಂದ ಹೆಚ್ಚು ಸಾರ್ವಜನಿಕವಾಗಿ ಭಾಷೆಯನ್ನು ಬಳಸುವ ಮತ್ತು ಗ್ರಹಿಸುವ ವಲಯಗಳಿಗೆ ದಾಟಿದ್ದಾರೆ. ಏಕೀಕರಣದ ಹಿಂದೆಯೂ ಇಂತಹ ಕೆಲವು ಸಂದರ್ಭಗಳು ಮೈದೋರಿದ್ದರೂ ಈಗ ಅವುಗಳ ಸ್ವರೂಪ ಮತ್ತು ಪ್ರಮಾಣ ಅಧಿಕವಾಗಿದೆ. ಅಂತಹ ಕೆಲವನ್ನು ನಾವು ಗಮನಿಸಬಹುದು. ಮುಖ್ಯವಾಗಿ ಇಂತಹ ನಿರೂಪಣೆಗಳಲ್ಲಿ ಮಾತಾಡುವವರು ಮತ್ತು ಕೇಳುವವರು ಒಂದೇ ಜಾಗದಲ್ಲಿ ಇರುವ ಸಾಧ್ಯತೆಗಳು ಒಂದು ಬಗೆಯಲ್ಲಿದ್ದರೆ, ಮತ್ತೊಂದು ಬಗೆಯಲ್ಲಿ ಇವರಿಬ್ಬರೂ ಬೇರೆ ಬೇರೆ ಸ್ಥಳಗಳಲ್ಲಿ ಇರುವ ಸಾಧ್ಯತೆಗಳು ಹೆಚ್ಚಾಗಿದೆ. ಎರಡನೆಯ ಬಗೆಗೆ ನಾವು ನೇರ ಪ್ರಸಾರಗಳನ್ನು ಉದಾಹರಣೆಯನ್ನಾಗಿ ತೆಗೆದುಕೊಳ್ಳಬಹುದು. ಇದು ಬರೆಹದ ವರದಿಯ ಮಾದರಿಯ ನಿರೂಪಣೆ. ಆದರೆ ಇಲ್ಲಿ ಮಾತು ಬಳಕೆಯಾಗುತ್ತದೆ. ಕಣ್ಣೆದುರು ನಡೆಯುತ್ತಿರುವ ಪ್ರಸಂಗವೊಂದನ್ನು ವರದಿಗಾರರು ತಾವು ನೋಡುತ್ತಿರುವಂತೆಯೇ ಎಲ್ಲೋ ದೂರದಲ್ಲಿರುವ ಕೇಳುಗರಿಗಾಗಿ ಹೇಳುವ ನಿರೂಪಣೆ ಇದು. ಇಲ್ಲಿ ಭಾಷೆಯ ಬಳಕೆಯ ಹೊಸ ಬಗೆ ಕಾಣಿಸಿಕೊಳ್ಳುತ್ತದೆ. ಘಟನೆಯ ವಿವರಗಳನ್ನು ಆಯ್ಕೆ ಮಾಡಿ ಅವುಗಳನ್ನು ಆ ಕೂಡಲೇ ಮರುಸಂಯೋಜಿಸಿ ಕೇಳುತ್ತಿರುವವರಿಗೆ ತಾವು ಆ ಪ್ರಸಂಗವನ್ನು ಈಗಲೇ ತಾವೇ ನೋಡುತ್ತಿರುವಂತೆ ಭಾಸವಾಗುವಂತೆ ವರ್ಣಿಸಬೇಕಾಗುತ್ತದೆ. ಇದು ಕೇವಲ ಜಾಣತನದ ಕೆಲಸವಲ್ಲ. ಭಾಷಾಸಾಮಗ್ರಿಗಳನ್ನು ಸೂಕ್ತ ರೀತಿಯಲ್ಲಿ ಸಂಯೋಜಿಸಿ ಕೊಳ್ಳುವ ಸಾಮರ್ಥ್ಯವಿರುವುದೂ ಅಗತ್ಯ. ಕೆಲವೊಮ್ಮೆ ಹೀಗೆ ವರ್ಣಿಸುತ್ತಿರುವ ಘಟನೆಗಳು ತೀರಾ ಅನನ್ಯ ಆಗಿರದೆ, ಈ ಹಿಂದೆಯೂ ಅಂಥ ಘಟನೆಗಳು ನಡೆದಿದ್ದರೆ ಆಗ ಈ ನಿರೂಪಣೆಗಳು ಮತ್ತೆ ಬೇರೊಂದು ಸ್ವರೂಪವನ್ನು ಪಡೆದುಕೊಳ್ಳಬೇಕಾಗುತ್ತದೆ. ಉದಾ.ಗೆ ಒಂದು ಕ್ರೀಡೆಯ ವರದಿಯನ್ನು ವಿವರಿಸುತ್ತಿರುವ ಪ್ರಸಂಗದಲ್ಲಿ ಈಗ ನಡೆಯುತ್ತಿರುವ ಆಟದ ಜೊತೆಗೆ ಹಿಂದೆ ಇನ್ನೆಲ್ಲೋ ನಡೆದ ಆಟದ ಉಲ್ಲೇಖಗಳನ್ನು ತರಬೇಕಾಗುತ್ತದೆ. ಇದು ವ್ಯವಧಾನದಿಂದ ಸಮಯಾವಕಾಶ ಪಡೆದು ನಿರ್ಮಾಣಗೊಳ್ಳುವ ನಿರೂಪಣೆಯಲ್ಲಿ ಆಗಲೇ ಮೈತಳೆಯಬೇಕು.

ಈಚಿನ ದಿನಗಳಲ್ಲಿ ಈ ನಿರೂಪಣೆ ಇನ್ನೊಂದು ಹೊಸ ತಿರುವನ್ನು ಪಡೆದುಕೊಳ್ಳುತ್ತಿದೆ. ಅದೆಂದರೆ ರೇಡಿಯೋ ಬದಲಿಗೆ ಟಿ.ವಿ. ಬಂದಿರುವುದರಿಂದ

ನಿರೂಪಣೆ ಮಾಡುತ್ತಿರುವವರು ಏನನ್ನು ನೋಡುತ್ತಿರುತ್ತಾರೋ ಅದನ್ನು ಕೇಳುವವರೂ ಟಿವಿ ವೀಕ್ಷಕರೂ ನೋಡುತ್ತಿರುತ್ತಾರೆ. ಆದ್ದರಿಂದ ಈ ನಿರೂಪಣೆಯಲ್ಲಿ ವಿವರಗಳ ಅಗತ್ಯ ಕಡಿಮೆಯಾಗಿದೆ. ಆದರೂ ಕೇವಲ ದೃಶ್ಯಾವಳಿಗಳನ್ನು ಮಾತ್ರ ಪ್ರಸಾರ ಮಾಡುವುದು ಸಾಧ್ಯವಾಗುವುದಿಲ್ಲ. ಇಂತಹ ಪ್ರಯೋಗಗಳು ನಡೆದಿವೆ. ಭಾಷೆಯ ವ್ಯಾಖ್ಯೆಯ ನೆರವಿಲ್ಲದೆ ಪ್ರತ್ಯಕ್ಷ ವರದಿಗಳು ಸಾಧ್ಯವಾಗವು. ಹಾಗಾದರೆ ಇಲ್ಲಿ ಭಾಷೆಯ ಕೆಲಸವೇನು? ಜಾಗತಿಕವಾಗಿ ಈ ವಲಯದಲ್ಲಿ ತುಂಬಾ ವೃತ್ತಿಪರತೆ ಬೆಳೆದು ಬಂದಿದೆ. ಆದರೆ ಕನ್ನಡವು ಇಂತಹ ಪ್ರಸಂಗಗಳಲ್ಲಿ ಬಳಕೆಯಾಗುವ ಸಾಧ್ಯತೆಗಳು ಮೂಡಿರುವುದು ತೀರಾ ಈಚಿನ ವರ್ಷಗಳಲ್ಲಿ. ಹಾಗಾಗಿ ಇಲ್ಲಿ ವೃತ್ತಿಪರತೆಯ ಕೊರತೆ ಎದ್ದು ಕಾಣುತ್ತಿದೆ. ಒಂದು ಘಟನಾವಳಿಯನ್ನು ತೋರಿಸುತ್ತಲೇ ಹೇಗೆ ವರ್ಣಿಸಬೇಕು ಎಂಬುದನ್ನು ಇನ್ನೂ ಸ್ಪಷ್ಟವಾಗಿ ಗುರುತಿಸಿಕೊಂಡಂತಿಲ್ಲ. ಅದರಲ್ಲೂ ನಡೆಯುತ್ತಿರುವ ಪ್ರಸಂಗಗಳು ಅನಿಯಂತ್ರಿತ ಮತ್ತು ಅನಿಯೋಜಿತ ಆದಾಗ ಈ ಕೊರತೆ ಮತ್ತಷ್ಟು ಎದ್ದು ಕಾಣುತ್ತದೆ.

ಈ ಪ್ರಸಂಗಗಳಲ್ಲಿ ಕೇಳುಗರಂತೆಯೇ ನಿರೂಪಕರೂ ಘಟನೆಯ ಸ್ಥಳದಿಂದ ದೂರವಿರುವ ಸಂದರ್ಭಗಳು ಈಗ ಹೆಚ್ಚಾಗಿವೆ. ಅಂದರೆ ಒಂದು ಪ್ರಸಂಗದ ದೃಶ್ಯಾವಳಿಗಳು ಪ್ರಸಾರವಾಗುತ್ತಿರುವಾಗಲೇ ನಿರೂಪಕರು ತಾವು ಆ ಪ್ರಸಾರದ ದೃಶ್ಯಗಳನ್ನು ನೋಡುತ್ತಾ ವ್ಯಾಖ್ಯಾನ ಮಾಡಬೇಕಾದ ಪ್ರಸಂಗಗಳಿವೆ. ಇಲ್ಲಿಯೂ ಕೂಡಾ ಭಾಷೆಯ ಬಳಕೆಯ ತುರ್ತು ಬೇರೆಯ ನೆಲೆಯನ್ನು ಕಂಡುಕೊಳ್ಳುತ್ತದೆ. ಇಂತಹ ಸಂದರ್ಭಗಳನ್ನು ಎಚ್ಚರಿಕೆಯಿಂದ ಅಭ್ಯಾಸಮಾಡಿದರೆ ನಿರೂಪಣೆಗಳಿಗೂ ದೃಶ್ಯಾವಳಿಗಳಿಗೂ ಎಷ್ಟೋ ಸಂದರ್ಭಗಳಲ್ಲಿ ನೇರ ಸಂಬಂಧ ಇರುವುದಿಲ್ಲವೆಂಬುದು ಗೊತ್ತಾಗುತ್ತದೆ. ಹಾಗಾಗುವುದು ಅಪೇಕ್ಷಣೀಯವಲ್ಲ. ಕೇಳುವವರು ಎರಡು ಭಿನ್ನ ನೆಲೆಗಳಿಂದ ಗ್ರಹಿಸುವವರಾಗಿರುತ್ತಾರೆ. ಒಂದು ಕಣ್ಣಿನ ಗ್ರಹಿಕೆ. ಇನ್ನೊಂದು ಕಿವಿಯ ಗ್ರಹಿಕೆ. ಈ ಎರಡು ಗ್ರಹಿಕೆಗಳೂ ಬೀರುವ ಪರಿಣಾಮಗಳು ಪರಸ್ಪರ ಪೂರಕವಾಗಿರಬೇಕು ಎಂದು ನಾವು ನಿರೀಕ್ಷಿಸುತ್ತೇವೆ. ಆದರೆ ವಾಸ್ತವದಲ್ಲಿ ಹಾಗಾಗುವುದೇ ಇಲ್ಲ. ಹಾಗಾಗದಿರುವುದು ಒಂದು ಕೊರತೆ ಎಂದೂ ಕೂಡ ಭಾವಿಸುತ್ತಿಲ್ಲ. ಕಿವಿಯನ್ನು ಮುಟ್ಟುವ ಭಾಷೆಗೆ ಇಲ್ಲಿ ಕೆಲಸವೇನು? ಅದು ಸ್ವತಂತ್ರವೇ? ಪೂರಕವೇ? ಅಥವಾ ವೈರುಧ್ಯದ ನೆಲೆಯಲ್ಲಿರುತ್ತದೆಯೇ? ಈ ಸಮಸ್ಯೆಗಳನ್ನು ಕನ್ನಡ ಸಂಸ್ಕೃತಿ ಈಗ ಎದುರಿಸತೊಡಗಿದೆ.

ಇಂತಹದೇ ಮತ್ತೊಂದು ನಿರೂಪಣೆಯನ್ನು ದೃಶ್ಯಮಾಧ್ಯಮದಿಂದಲೇ ನಾವು ನೋಡಬಹುದು. ಇದು ಟಿ.ವಿ. ವಾಹಿನಿಗಳಲ್ಲಿ ಕಾರ್ಯಕ್ರಮಗಳನ್ನು ನಡೆಸಿಕೊಡುವ ನಿರ್ವಾಹಕರ ಭಾಷಾನಿರೂಪಣೆಗಳು. ಅವರು ಈಗಾಗಲೇ ಸಿದ್ಧಗೊಂಡ ದೃಶ್ಯದ ತುಣುಕುಗಳನ್ನು ಇರಿಸಿಕೊಂಡು ನಡುವೆ ಕೇಳುಗರೊಡನೆ ಮಾತನಾಡುತ್ತಾ ಅವರ ಪ್ರಶ್ನೆಗಳಿಗೆ ಉತ್ತರಿಸುತ್ತಾ ಕಾರ್ಯಕ್ರಮ ನಿರ್ವಹಿಸುತ್ತಾರೆ. ಕೇಳುಗರು ತಾವು ನಿಷ್ಕ್ರಿಯವಾಗಿ ಮಾತು ಕೇಳುವ ಜೊತೆಗೆ ದೃಶ್ಯ ನೋಡುವ ಬಗೆ ಒಂದಿದೆ. ಅಲ್ಲಿ ನಿರೂಪಕರಿಗೆ

ಈಗಾಗಲೇ ಸಿದ್ಧಗೊಂಡ ಪಠ್ಯವೊಂದನ್ನು ಮಾತನಾಡಲು ಒದಗಿಸಲಾಗುತ್ತದೆ. ಆದರೆ ಇನ್ನೊಂದು ಬಗೆಯಲ್ಲಿ ಕೇಳುಗರಿಗೆ ಕೂಡಾ ಮಾತನಾಡುವ ಅವಕಾಶವನ್ನು ಕಲ್ಪಿಸಲಾಗುತ್ತದೆ. ಕನ್ನಡ ವಾತಾವರಣಕ್ಕೆ ಇದು ಅತ್ಯಂತ ಹೊಸ ಅನುಭವ. ವೈಯಕ್ತಿಕ ಮತ್ತು ಸಾರ್ವಜನಿಕಗಳೆರಡೂ ವಿಚಿತ್ರ ರೀತಿಯಲ್ಲಿ ಬೆರೆಯುತ್ತಿವೆ. ಇಲ್ಲಿ ಭಾಷೆ ಕೇವಲ ಲೋಕಾಭಿರಾಮವಾದ ಕಾಡು ಹರಟೆಯ ಕೆಲಸ ಮಾಡುತ್ತಿದೆ ಎಂದು ತಿಳಿಯುವಂತಿಲ್ಲ. ಹಾಗಿದ್ದಾಗಲೂ ಖಾಸಗಿ ವಲಯದ ಕಾಡುಹರಟೆಯಷ್ಟು ಈ ಕೆಲಸ ಸುಲಭವಲ್ಲ. ನಾವೀಗ ಬಣ್ಣಿಸಿದ ಪ್ರಸಂಗದಲ್ಲಿ ನಿರೂಪಣೆ ಮಾಡುತ್ತಿರುವವರು ಕಿವಿಗೆ ತಲುಪುವ ಮಾತುಗಳನ್ನು ಆಗಲೇ ಅಲ್ಲೇ ಸೃಷ್ಟಿಸಬೇಕು, ಮಾತಾಡಬೇಕು. ಆ ವೇಳೆಯಲ್ಲಿ ಅವರು ಸಾರ್ವಜನಿಕ ದೃಷ್ಟಿಗೆ ನಿರಂತರವಾಗಿ ಒಳಗಾಗುತ್ತಿರಬೇಕು. ಪ್ರಸಂಗಾವಧಾನದಿಂದ ಎಲ್ಲವನ್ನೂ ಭಾಷಿಕವಾಗಿ ನಿರ್ವಹಿಸುವ ಸಾಮರ್ಥ್ಯ ಇರಬೇಕು. ಇದು ಬುದ್ಧಿವಂತಿಕೆಯಷ್ಟೇ ಅಲ್ಲ, ಭಾಷೆಯ ಸಾಧ್ಯತೆಗಳ ಮೇಲಿರುವ ಪ್ರಭುತ್ವವೂ ಹೌದು.

ಈ ಎರಡು ವಲಯಗಳ ಮುಖಾಮುಖಿ ಹಿಂದೆ ಇದ್ದ ರಂಗಭೂಮಿಯ ನಟನಟಿಯರ ಸ್ವರೂಪಕ್ಕಿಂತ ಭಿನ್ನವಾದದ್ದು, ಅವರು ಈಗಾಗಲೇ ಸಿದ್ಧಗೊಂಡ ಮಾತಿನ ಲೋಕಕ್ಕೆ ತೆತ್ತುಕೊಂಡು ಸಾರ್ವಜನಿಕರು ನೋಡದ ವಲಯದಲ್ಲಿ ಯಾವ ಮುಜುಗರವೂ ಇಲ್ಲದೇ ಭಾಗಿಯಾಗಬಹುದಿತ್ತು. ಆದರೆ ನಾವೀಗ ವರ್ಣಿಸುತ್ತಿರುವ ಸ್ಥಿತಿಯಲ್ಲಿ ಮಾತು 'ಅಲ್ಲೇ ಮತ್ತು ಆಗಲೇ' ಸಾರ್ವಜನಿಕ ಗ್ರಹಿಕೆಗೆ ಸಿದ್ಧವಾಗಬೇಕು. ಇನ್ನೊಂದು ಸಂದರ್ಭದೊಡನೆ ಇದನ್ನು ಹೋಲಿಸಿ ನೋಡೋಣ. ಯಾವುದೋ ಅಪಘಾತ, ನೈಸರ್ಗಿಕ ಪ್ರಕೋಪ ಇಲ್ಲವೇ ಅಪರಾಧ ಅಥವಾ ಸಾಧನೆಗಳನ್ನು ವರದಿ ಮಾಡುವಾಗ ಕ್ಯಾಮೆರಾದೊಡನೆ ನಿರೂಪಕರು ಆಯಾ ಜಾಗಗಳಿಗೆ ಹೋಗುತ್ತಾರೆ. ಅಲ್ಲಿ ಪ್ರಸಂಗವನ್ನು ವರದಿ ಮಾಡುತ್ತಲೇ ಭಾಗೀದಾರರನ್ನು ಇಲ್ಲವೇ ಅನುಭೋಗಿಗಳನ್ನು ಮಾತನಾಡಿಸುತ್ತಾರೆ. ಇಲ್ಲಿ ಕೂಡಲೇ ಖಾಸಗಿಯಾದದ್ದು ಸಾರ್ವಜನಿಕವಾಗುವ ಪ್ರಸಂಗ ಸೃಷ್ಟಿಯಾಗುತ್ತದೆ. ಇಂತಹ ದೃಶ್ಯಗಳನ್ನು ಗಮನಿಸಿದರೆ ನಿರೂಪಕರೊಡನೆ ಭಾಗಿಯಾಗುವ ಆ ಪ್ರಸಂಗದ ಭಾಗೀದಾರರೂ ಮಾತಿನ ಬಗೆಗೆ ತೀವ್ರಗೊಂದಲದಲ್ಲಿರುವುದು ಗೊತ್ತಾಗುವಂತಿರುತ್ತದೆ. ಖಾಸಗಿ ಮತ್ತು ಸಾರ್ವಜನಿಕಗಳ ಗಡಿಗೆರೆಗಳನ್ನು ಅಳಿಸಿ ಹಾಕಲು ಕನ್ನಡ ಇನ್ನೂ ಸಮರ್ಥವಾಗಿಲ್ಲ ಎಂಬುದನ್ನು ಇಂತಹ ಪ್ರಸಂಗಗಳು ನಮಗೆ ತೋರಿಸಿಕೊಡುತ್ತವೆ. ಹೀಗೆ ಮಾತನಾಡುವ ಭಾಗೀದಾರರು ಮಾತುಗಳನ್ನು ಸಂಯೋಜಿಸುವಲ್ಲಿ ಅನುಭವಿಸುವ ಗೊಂದಲವನ್ನೇ ಅವರ ಆಂಗಿಕಗಳಲ್ಲೂ ತೋರಿಸುತ್ತಾರೆ. ಕಣ್ಣುಗಳು ದೃಶ್ಯವನ್ನು ರವಾನಿಸುತ್ತಿರುವ ಕ್ಯಾಮೆರಾದ ಕಡೆಗೆ ಇರಬೇಕೋ ಅಥವಾ ಮಾತನ್ನು ರವಾನಿಸುತ್ತಿರುವ ಮೈಕ್ರೋಫೋನ್ ಕಡೆಗೆ ಇರಬೇಕೋ ಅಥವಾ ಈ ಸಂದರ್ಭವನ್ನು ನಿರೂಪಿಸುತ್ತಿರುವವರ ಕಡೆಗೆ ಇರಬೇಕೋ ಎಂಬ ಗೊಂದಲ ಎದ್ದು ಕಾಣುತ್ತದೆ. ಅವರ ಭಾಷೆಯೂ ಕೂಡಾ ಈ ಮೂರು ನೆಲೆಗಳಲ್ಲಿ ತುಯ್ದಾಟವಾಡುತ್ತಿರುತ್ತದೆ.

ದೃಶ್ಯಮಾಧ್ಯಮದ ಬೆಳವಣಿಗೆಯಿಂದಾಗಿ ಮಾತಿನ ನಿರೂಪಣೆಗಳು ಇನ್ನೂ ಹಲವು ಸ್ವರೂಪಗಳನ್ನು ಹೊಸದಾಗಿ ಪಡೆದುಕೊಳ್ಳುತ್ತಿವೆ. ಮುಖ್ಯವಾಗಿ ನಿರೂಪಕರು ನಿರೂಪಣೆ ಮಾಡುತ್ತಿರುವ ಸಂದರ್ಭದಲ್ಲೇ ನೋಡುಗ ಕೇಳುಗರು ಅದನ್ನು ಗ್ರಹಿಸುತ್ತಿರುವುದು, ಮತ್ತು ಹೀಗೆ ಕೇಳುತ್ತಿರುವವರು ಕೂಡಾ ನಿರೂಪಕರೊಡನೆ ಮಾತನಾಡಲು ಸಾಧ್ಯವಿದ್ದು ಅದಕ್ಕೂ ನಿರೂಪಕರು ತಮ್ಮ ನಿರೂಪಣೆಯಲ್ಲಿ ಅವಕಾಶ ಕಲ್ಪಿಸಿಕೊಳ್ಳಬೇಕಾಗುತ್ತದೆ. ಇದು ಭಾಷೆಯ ಬಳಕೆ ಮತ್ತು ನಿರ್ವಹಣೆಗೆ ಹೊಸ ಸವಾಲನ್ನು ತಂದೊಡ್ಡಿದೆ. ಇಲ್ಲಿ ಮಾತಿನ ವಿಷಯಕ್ಕಿಂತ ಮುಖ್ಯವಾಗಿ ಅದರ ರೀತಿಗೆ ಹೆಚ್ಚಿನ ಒತ್ತು ಬೀಳುತ್ತದೆ. ಜೊತೆಗೆ ಮಾತು ಮತ್ತು ಮೌನಗಳ ಸಮತೋಲನವನ್ನು ಹೇಗೆ ಕಾಯ್ದುಕೊಳ್ಳಬೇಕು ಎಂಬ ಸಮಸ್ಯೆಯೂ ಮುಂಚೂಣಿಗೆ ಬರತೊಡಗಿದೆ. ಇಂತಹ ನಿರೂಪಣೆಗಳ ಮತ್ತೊಂದು ಆಯಾಮವೆಂದರೆ ನಿರೂಪಕರ ಮತ್ತು ಪ್ರಾಸಂಗಿಕವಾಗಿ ಅವರೊಡನೆ ಸಂಭಾಷಣೆ ಮಾಡುತ್ತಿರುವವರ ಮಾತುಗಳನ್ನು ಅಸಂಖ್ಯಾತ ಪ್ರೇಕ್ಷಕರು ಅಥವಾ ನೋಡುಗರು ನೋಡುತ್ತಿರುತ್ತಾರೆ/ಕೇಳುತ್ತಿರುತ್ತಾರೆ. ಅಂದರೆ ಇದು ಖಾಸಗಿ ಮತ್ತು ಸಾರ್ವಜನಿಕಗಳು ವಿಶಿಷ್ಟ ರೀತಿಯಲ್ಲಿ ಮುಖಾಮುಖಿಯಾಗುವ ಸನ್ನಿವೇಶ.

ಟಿ.ವಿ.ಯಲ್ಲಿ ಒಂದು ಕಾರ್ಯಕ್ರಮ ಪ್ರಸಾರವಾಗುತ್ತಿದೆ ಎಂದುಕೊಳ್ಳಿ. ನಿರೂಪಕರು ಕೇಳುಗರೊಬ್ಬರ ದೂರವಾಣಿ ಕರೆಗೆ ಓಗೊಟ್ಟು ಅವರೊಡನೆ ಮಾತನಾಡುತ್ತಾರೆ. ಕರೆ ಮಾಡುತ್ತಿರುವವರು ಮಾತಾಡುತ್ತಿರುವ ಹೊತ್ತಿನಲ್ಲಿ, ಅದು ಕೆಲವೇ ಸೆಕೆಂಡುಗಳು ಇರಬಹುದು, ಅಷ್ಟೂ ಹೊತ್ತು ನಿರೂಪಕರು ಒಂದು ದೃಶ್ಯದ ಭಾಗವಾಗಿ ಇರಬೇಕಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಭಾಷೆಯ ಕಿವಿಯ ಕೆಲಸ ಮತ್ತು ಕಣ್ಣಿನ ಕೆಲಸಗಳು ಈವರೆಗೆ ಎದುರಿಸದಿದ್ದ ಹೊಸ ಇಕ್ಕಟ್ಟಿಗೆ ಸಿಲುಕುತ್ತಿವೆ. ಈ ಬಗೆಯ ಆಧುನೀಕರಣಕ್ಕೆ ಕನ್ನಡವನ್ನು ಸಜ್ಜುಗೊಳಿಸುವ ಯೋಜಿತ ಪ್ರಯತ್ನಗಳು ನಡೆದಿಲ್ಲ. ಅವು ತಮ್ಮ ಪಾಡಿಗೆ ತಾವು ಸಮಸ್ಯೆಯಲ್ಲಿ ಮುಳುಗಿ ಹೇಗೋ ಪಾರಾಗಲು ಯತ್ನಿಸುತ್ತಿವೆ.

ಜಾಹೀರಾತಿನ ಮತ್ತು ವಾರ್ತಾಪ್ರಸಾರದ ನಿರೂಪಣೆಗಳನ್ನು ಕೂಡಾ ಈ ದೃಷ್ಟಿಯಿಂದ ನೋಡಬಹುದು. ಜಾಹೀರಾತಿನಲ್ಲಿ ಭಾಷೆಯ ಕೆಲಸವೇನು? ಮಾಹಿತಿ ರವಾನೆಮಾಡುವ ಅತ್ಯಂತ ಪ್ರಾಥಮಿಕ ಕೆಲಸ ಅದಕ್ಕಿದೆ ಎಂದು ಹೇಳಿದರೂ ವಾಸ್ತವವಾಗಿ ದೃಶ್ಯಮಾಧ್ಯಮದ ಜಾಹೀರಾತಿನ ಭಾಷೆಯು ಆ ಕೆಲಸವನ್ನು ಮಾಡುತ್ತಿಲ್ಲ. ಮಾಡಬೇಕೆಂಬ ಅಪೇಕ್ಷೆ ಕೂಡಾ ಇದ್ದಂತಿಲ್ಲ. ಜಾಹೀರಾತಿನಲ್ಲಿ ಮಾತಿನ ಜೊತೆಗೆ ಕನಿಷ್ಠ ಪ್ರಮಾಣದ ಬರೆಹವು ಕೂಡಾ ಅಳವಟ್ಟಿರುತ್ತದೆ ಕೆಲವು ಪದಗಳು ಅತಿ ಚಿಕ್ಕ ವಾಕ್ಯಗಳು ಕಾಣಿಸಿಕೊಳ್ಳುತ್ತವೆ. ಉಳಿದಂತೆ ದೃಶ್ಯಗಳು ಮತ್ತು ನಾದ ಸೇರಿ ಒಟ್ಟು ಜಾಹೀರಾತು ರೂಪಗೊಂಡಿರುತ್ತದೆ. ಈ ಸಂವಹನದಲ್ಲಿ ಬಳಕೆಯಾಗುವ ಭಾಷೆಯಲ್ಲಿ, ಅದರ ಮೂಲಭೂತ ಉದ್ದೇಶವಾದ ಅರ್ಥ ಸಂಯೋಜನೆ ಎನ್ನುವುದು ಕನಿಷ್ಠ ಪ್ರಮಾಣಕ್ಕೆ

ಇಳಿದಿರುತ್ತದೆ. ಎಷ್ಟೋ ವೇಳೆ ದೃಶ್ಯ ವಿವರಗಳಿಗೂ ಬಳಕೆಯಾದ ಭಾಷೆಗೂ ನೇರ ಸಂಬಂಧ ಇರುವುದಿಲ್ಲ. ಅಂದರೆ ಇಲ್ಲಿನ ಭಾಷೆಯ ನಿರೂಪಣೆ ಕೂಡ ಕನ್ನಡಕ್ಕೆ ಹೊಸದು. ನೂರಕ್ಕೆ ನೂರು ಪಾಲು ಜಾಹೀರಾತುಗಳಲ್ಲಿ ಕನ್ನಡ ಅನುವಾದವಾಗಿ ಮಾತ್ರ ಬಳಕೆಯಾಗುತ್ತದೆ. ಆದ್ದರಿಂದ ಕನ್ನಡವೇ ಈ ಪರಿಸ್ಥಿತಿಗೆ ತನ್ನ ಸಾಮಗ್ರಿಗಳನ್ನು ಬಳಸಿಕೊಂಡೇ ಸನ್ನದ್ಧವಾಗಬೇಕು ಎಂಬ ಒತ್ತಾಯ ಈಗ ಇಲ್ಲ. ಸದ್ಯದ ಪರಿಸ್ಥಿತಿಯಲ್ಲಿ ಬದಲಾವಣೆ ಆಗಬಹುದು ಎಂದು ಯೋಚಿಸಲು ಕಾರಣಗಳಿಲ್ಲ.

ವಾರ್ತಾಪ್ರಸಾರಗಳಲ್ಲಿ ಭಾಷೆಗೆ, ಮಾಹಿತಿಯನ್ನು ರವಾನಿಸುವ ಹೊಣೆಯು ಇರುತ್ತದೆ. ಆದರೆ ದೃಶ್ಯಗಳ ಮೇಲೆ ಬಹುಪಾಲು ಅವಲಂಬಿತವಾಗುವ ಈ ಮಾಧ್ಯಮಗಳಲ್ಲಿ ನಿರೂಪಣೆ ಮತ್ತು ದೃಶ್ಯಾವಳಿಗಳ ಸಂಯೋಜನೆ ಯಾವಾಗಲೂ ಪೂರಕವಾಗಿಯೇ ಇರಬೇಕಾಗಿಲ್ಲ. ಭಾಷಿಕ ನಿರೂಪಣೆಯಲ್ಲಿ ನಿರ್ಮಮತೆ, ನಿಷ್ಪಕ್ಷಪಾತ ಮತ್ತು ನಿರಾಳತೆಗಳನ್ನು ಕಾಯ್ದುಕೊಳ್ಳಬಹುದು. ಆದರೆ ದೃಶ್ಯಾವಳಿಗಳು ಅದಕ್ಕೆ ಭಿನ್ನವಾದ ನೆಲೆಯನ್ನು ಪ್ರತಿಪಾದಿಸಲು ಸಾಧ್ಯ. ಅಂದರೆ ವಾರ್ತೆಗಳ ವಿಷಯ ಏನೇ ಆಗಿದ್ದರೂ ದೃಶ್ಯಾವಳಿಗಳು ಆ ವಾರ್ತೆಯ ವಿಷಯವನ್ನು ಕೇವಲ ಸಮರ್ಥಿಸಬೇಕಾಗಿಲ್ಲ. ಅದರ ಟೊಳ್ಳುತನವನ್ನು, ಸತ್ಯಪರತೆಯ ಕೊರತೆಯನ್ನು ಆ ದೃಶ್ಯಗಳು ಪ್ರತಿಪಾದಿಸಬಹುದು. ಭಾಷೆಗೆ ಈ ಬಗೆಯ ಪರೀಕ್ಷೆಗಳು ಈ ಹಿಂದೆ ಅಲ್ಪ ಪ್ರಮಾಣದಲ್ಲಿ ಬಂದಿದ್ದರೂ ಅದೆಲ್ಲವೂ ಈಗ ಅಗಾಧ ಸ್ವರೂಪದಲ್ಲಿ ಹೆಚ್ಚಳಗೊಂಡಿದೆ. ವಾರ್ತಾಪ್ರಸಾರಗಳಲ್ಲಿ ಈಗ ಅಂದರೆ ವಾರ್ತೆ ಪ್ರಸಾರವಾಗುವಾಗಲೇ ನಡೆದ ಘಟನೆಗಳ ಮಾಹಿತಿಯು ದೊರಕುವ ಪ್ರಸಂಗಗಳಿರುತ್ತವೆ. ಆಗಲೂ ಕೂಡಾ ಭಾಷೆಯ ಮುಖ್ಯ ಉದ್ದೇಶ ಈಡೇರದೆ ಹೋಗಬಹುದು. ಕನ್ನಡ ಈ ಮೊದಲೇ ಹೇಳಿದಂತೆ ಈ ಬಗೆಯ ಜವಾಬ್ದಾರಿಗೆ ಇನ್ನೂ ಕಿಂಚಿತ್ ಪ್ರಮಾಣದಲ್ಲಾದರೂ ಸಿದ್ಧಗೊಂಡಿಲ್ಲವೆಂದೇ ಹೇಳಬೇಕಾಗಿದೆ.

## ಮಾತು–ಬರೆಹ: ಕವಿಕಾವ್ಯ ಮುಖೇನ

ಶಿಷ್ಟವಾದದ್ದು ಲಿಖಿತವೂ ಜಾನಪದವು ತೋಂಡಿಯೂ ಆಗಿರುವುದೆಂಬ ಸಾಮಾನ್ಯ ತಿಳುವಳಿಕೆ ಪ್ರಚಲಿತವಾಗಿದೆ. ತೋಂಡಿ ಇಲ್ಲವೇ ಮೌಖಿಕವು ಲಿಖಿತ ಪರಂಪರೆಗೆ ದಾಟಿ ಬಂತೆಂಬುದು ಈ ತಿಳುವಳಿಕೆಯ ಇನ್ನೊಂದು ತೀರ್ಮಾನ. ಆದರೆ ಮಾತು ಬರೆಹಗಳ ನಡುವೆ ಖಚಿತ ಅನುಪೂರ್ವಿಯೊಂದು ಇದೆಯೆಂದು ವಾದಿಸುವುದು ಕಷ್ಟ. ಕನ್ನಡ ಕಾವ್ಯಪರಂಪರೆಯಂತೂ ಈ ಆನುಪೂರ್ವಿಯನ್ನು ಒಪ್ಪಿಲ್ಲ. ಪಂಪನ ಮಾತು ಹೀಗಿದೆ: ಸಮಸ್ತ ಭಾರತವನ್ನು **ಹೇಳಿದವರಿಲ್ಲ**. ಹಾಗೆ ಹೇಳುವುದಾದರೆ ಪಂಪನೇ **ಹೇಳಬೇಕು** ಎಂದು ಬುಧಜನರು **ಹೇಳಿದರಂತೆ**. ಪಂಪನ ಆದಿಪುರಾಣದಲ್ಲೂ ಇಂಥದೇ ಮಾತನ್ನು ನೋಡುತ್ತೇವೆ. ತನ್ನ ಕೃತಿಯನ್ನು ಓದುವವರಿರುವಂತೆ ಕೇಳುವವರೂ ಇದ್ದಾರೆಂಬ ಮಾತನ್ನೂ ಪಂಪ ಆಡಿದ್ದಾನೆ. ಇಲ್ಲಿ ಓದುವವರು ಕೇಳುಗರಿಗಾಗಿ ಓದುವಂಥವರು. ಹೇಳುವ ಕೇಳುವ ಸರಣಿಯಲ್ಲಿ ಲಿಖಿತವಾದ ಪದ್ಯ ಒಂದು ಸಾಧನವಾಗಿ ಇದೆ. ಆದರೂ ಶ್ರವಣ ಮಾಧ್ಯಮದಲ್ಲೇ ಕೃತಿಯ ಅಸ್ತಿತ್ವವಿರುವುದನ್ನು ಕವಿ ಸೂಚಿಸುವಂತಿದೆ. ಲಿಖಿತ ಪರಂಪರೆಯ ಕವಿಗಳಂತೂ ಲಿಖಿತ ಪಠ್ಯದ ಅಚೀಚೆ ಮೌಖಿಕ ನೆಲೆಗಳು ಇರುವುದೆಂದು ಖಚಿತವಾಗಿ ತಿಳಿದವರು. ಕುಮಾರವ್ಯಾಸನ ಬಗ್ಗೆ ಇರುವ ದಂತಕತೆಯಂತೂ ಒದ್ದೆ ಬಟ್ಟೆಯಲ್ಲಿ ಕುಳಿತು ಒದ್ದೆ ಆರುವವರೆಗೆ ಹಾಡುತ್ತಿದ್ದ ಕವಿಯನ್ನು ಕಲ್ಪಿಸಿದೆ. ಕವಿಯೇ ತಾನು ಲಿಪಿಕಾರನೆಂದು ಹೇಳುತ್ತಾ ಯಾರೋ ವೀರನಾರಾಯಣ ಹೇಳಿದ್ದನ್ನು ತಾನು ಬರೆದುಕೊಂಡೆನೆನ್ನುವನು. ಅವನ ಖ್ಯಾತ ಷಟ್ಪದಿಯೊಂದರಲ್ಲಿ ತನ್ನ ಅಗ್ಗಳಿಕೆಗಳನ್ನು ಹೇಳಿಕೊಂಡಿದ್ದಾನೆ. ಅಲ್ಲಿ ಹಲಗೆ ಬಳಪ ಪಿಡಿಯದ, ಪದವಿಟ್ಟು ಅಳುಪದ ತನ್ನ ಬಗೆಯನ್ನು ಕವಿ ಹೇಳಿದ್ದಾನೆ. ಇದು ಅಸ್ಖಲಿತ ಬರೆವಣಿಗೆಯನ್ನು ಕುರಿತ ಮಾತಲ್ಲ. ಕವಿತೆಯು ಮೌಖಿಕವಾಗಿ ಮೈದಳೆದದ್ದನ್ನು ಸೂಚಿಸುವ ಮಾತು. ಹೀಗೆ ರೂಪುಗೊಂಡದ್ದನ್ನು ಅನಂತರ ಬರೆಯುವಾಗ ಕಂಠ ಪತ್ರದ ಉಲುಹುಗೆಡದಂತೆ ಬರೆದನೆಂಬುದು ಕವಿಯ ಇನ್ನೊಂದು ಅಗ್ಗಳಿಕೆ. ಅವನ ಕಾವ್ಯದ ಉದ್ದಕ್ಕೂ ಕೇಳುವ ಜನಮೇಜಯನಿರುವಂತೆ, ಕೇಳುವ ಜನತಾ ಜನಾರ್ದನರೂ ಇದ್ದಾರೆ. ಇಲ್ಲಿಯೂ ಹೇಳುವ ಕೇಳುವ ಸರಣಿಗೇ ಮೊದಲ ಮಣೆ.

ಈಚೆಗೆ ನಾನು ಓದಿದ ಎರಡು ಜನಪದ ರಚನೆಗಳಲ್ಲಿ ದೊರಕಿದ ಉಲ್ಲೇಖಗಳನ್ನು ಗಮನಿಸಿ:

ಹತ್ತೇನೆ ಮಾರುದ್ದ ಹೊತ್ತಗೇನೆ ತಕ್ಕಂಡು। ಎತ್ತೀರಮ್ಮ ಇದರ ಮೊದಲಿಂದ
ಆರೇನೆ ಮಾರುದ್ದ ವಾಲಿಯ ತಕ್ಕಂಡು। ಓದಿರಮ್ಮ ಇದರ ಮೊದಲಿಂದ
ಹಾರುವರ ಮನಿಯಗೆ ಹಲಗೇನೆ ಮ್ಯಾಲಿರುವೋಲೆ। ವಾಲಿ ನನ್ನ ಕಿವಿಯ ಸರಸ್ವತಿ

ತಾಯಿ ನೀನು ಬರೆದೆನ್ನ ಪದವ ಬರಕೊಡಿರಿ
ಅಕ್ಕು ಸಾಲರ ಮನಿಯಾಗೆ ಹೊತ್ತಿಗೆನೆ ಮ್ಯಾಲೈದಾವೆ ಕಪ್ಪು ನನ್ನ ಕಿವಿಯ ಸರಸ್ವತಿ

ತಾಯಿ ನೀನು ತಪ್ಪೀದ ಪದವ ಬರಕೊಡೆ
ತಪ್ಪಿದೆನ್ನ ಪದವ ಹೊತ್ತಿಗೆನೆ ಮ್ಯಾಲೈದಾವೆ। ಹೊತ್ತಿಗೆನ್ನ ತತ್ತಾರೋ ಬೆನವಣ್ಣ
ಗ್ಯಾನವುಳ್ಳ ಅಕ್ಕಯ್ಯಗೇ ಪದವ ಬರ ಕೊಡಿರಿ.

ಅಭಿಮನ್ಯುವಿನ ಕಾವ್ಯ (ಸಂ)ಡಾ.ಕೆ. ಎಂ. ಮೈತ್ರಿ
ಕೃಷ್ಣಗೊಲ್ಲರ ಕಾವ್ಯಗಳು (2000) ಪು.221, .222

ವಾಲಿ ತೊಡಿಯ ಮ್ಯಾಲೆ ಗ್ಯಾನ ನಿಮ್ಮ ಮ್ಯಾಲೆ
ಮ್ಯಾಲೊಂದು ಸೊಲ್ಲೆ ಮೊದಲರಿಯೇ
ಪಾಲಯ್ಯ ಬಾರದಾ ಪದುನಾ ಬರಾಕೊಡು

ಬಾರದಾ ಪದುಗಾಳು ವ್ಯಾಲಿಮ್ಯಾಲೆ ಐದಾವೇ
ವಾಲಿ ತತ್ತರೋ ಬೆನವಣ್ಣಾ
ಗ್ಯಾನಾರುಳ್ಳ ನಾರಿಗೆ ಪದುನಾ ಬರಾಕೆಂಡೋ

ಒತ್ತಿಗೆ ತೊಡಿಯ ಮ್ಯಾಲೆ ಸಿತ್ತಾ ನಿಮ್ಮಾ ಮ್ಯಾಲೆ
ಮತ್ತೊಂದೆ ಸೊಲ್ಲ ಮೊದಲರಿಯೆ। ಪಾಲಯ್ಯ
ತಪ್ಪಿದಾ ಪದುನಾ ಬರಾಕೊಂಡೋ

ತಪ್ಪಿದಾ ಪದೂಗಾಳೂ ಒತ್ತಿಗೆ ಮ್ಯಾಲೈದಾವೇ
ವತ್ತಿಗಿ ತತ್ತಾರೋ ಬೆನಾವಣ್ಣಾ ಗ್ಯಾನುರುಳ್ಳ
ನಿಸ್ತ್ರರಿಗೆ ಪದುನಾ ಬರಾಕೊಡೊ

ಗಾದ್ರಿಪಾಲನಾಯಕನ ಕಾವ್ಯ (ಸಂ) ಎ.ಎಸ್. ಪ್ರಭಾಕರ,
ಮ್ಯಾಸಬೇಡರ ಕಥನಗಳು, (1999) ಪು. 59

ಉಲ್ಲೇಖಗಳು ಮೌಖಿಕವೆಂದು ತಿಳಿದ ಪರಂಪರೆಯ ಬಗೆಗೆ ಮತ್ತೇನನ್ನೋ ಹೇಳುತ್ತಿವೆ. ಅಗಾಧ ನೆನಪಿನ ಬಲದಿಂದಲೇ ದೀರ್ಘ ಕಥಾನಕಗಳು ರೂಪುಗೊಂಡಿವೆ ಎನ್ನುವುದನ್ನು ನಿರಾಕರಿಸಲಾಗದು. ಆದರೂ ತಮ್ಮ ನೆನಪಿನ ಕೊರತೆಗಳನ್ನು ತುಂಬಿಕೊಳ್ಳಲು ಮೂಲಕಥಾನಕವೊಂದು ಹೊತ್ತಿಗೆಯಲ್ಲಿದೆ ಎಂದು ತಿಳಿಯುತ್ತಿರುವುದು ಗಮನಿಸಬೇಕಾದ ವಿಷಯ. ಅಲ್ಲದೆ ಮಾರ್ಗಪರಂಪರೆಯ ಮಹಾನ್ ಲಿಪಿಕಾರನಾದ

ಗಣೇಶನನ್ನು ಕುರಿತು ಪ್ರಾರ್ಥಿಸುತ್ತಾ, ಬರೆದ ನುಡಿಗಳನ್ನು ಹಾಡುವವರ ಪಾಲಿಗೆ ಮರಳಿ ಒದಗಿಸುವಂತೆ ಅವನನ್ನು ಕೋರಲಾಗುತ್ತಿದೆ. ಈ ಹೊತ್ತಿಗೆಗಳು ಬಹುಮಟ್ಟಿಗೆ ಆ ಕಾಲದ ಅಕ್ಷರಸ್ಥರಾಗಿದ್ದ ಹಾರುವರು ಮತ್ತು ಅಕ್ಕಸಾಲಿಗರ ಬಳಿ ಇರುವುದೆಂದೂ ಕಲ್ಪಿಸಲಾಗಿದೆ.

ಮೌಖಿಕ ಪರಂಪರೆಯ ಈ ಉಲ್ಲೇಖಗಳು ಮಾತು ಮತ್ತು ಬರೆಹಗಳ ಆನುಪೂರ್ತಿಯನ್ನು ಕಲ್ಪಿಸಿರುವ ರೀತಿಯನ್ನು ಗಮನಿಸಬೇಕು. ತಮ್ಮ ನೆನಪಿನಿಂದ ಹೇಳುವ ಕಥನಗಳಿಗೆ ಮೂಲವಾದ, ಆಕರವಾದ ಹೊತ್ತಿಗೆಯೊಂದು ಇದೆಯೆಂದು ಏಕೆ ಭಾವಿಸುತ್ತಾರೆ? ಇದು ಕೇವಲ ಮಾತು ಬರೆಹದ ಸಂಬಂಧವೇ? ಅಥವಾ ಪಠ್ಯದ ಅಧಿಕೃತತೆ ಮತ್ತು ಪೂರ್ಣತೆಯ ಸಮಸ್ಯೆಯೇ? ನಾಲಿಗೆಗೆ ಬಂದು ನೆಲಸುವ ಸರಸ್ವತಿಯನ್ನು ಪದವನ್ನು ಬರೆದುಕೊಡಲು ಕೋರುವ ಬಗೆಯನ್ನು ಕಾಣುತ್ತೇವೆ. ನಾಲಿಗೆಯಲ್ಲಿ ನೆಲೆಸಲು, ಕುಣಿಯಲು ಸರಸ್ವತಿಯನ್ನು ಕರೆಯುತ್ತಾ ಪದವ ಬರಕೊಡಲು ಕೇಳಲಾಗಿದೆ.

ಲಿಖಿತ ಪಠ್ಯವನ್ನು ಶ್ರವಣ ಪರಂಪರೆಯ ನಡುವಣ ಕೊಂಡಿಯೆಂದು ಲಿಖಿತ ಕಾವ್ಯಪರಂಪರೆ ತಿಳಿದಂತಿದೆ. ಹಾಡುವ, ಕೇಳುವ ಕಥನಕ್ಕೆ ಲಿಖಿತ ಆಕರವೊಂದು ಇದೆಯೆಂದು ಮೌಖಿಕ ಕಾವ್ಯಪರಂಪರೆ ಕಲ್ಪಿಸಿದೆ. ಕನ್ನಡ ಸಂಸ್ಕೃತಿ ಅಕ್ಷರ ಮತ್ತು ನುಡಿಗಳ ಈ ಸಂಕೀರ್ಣ ಸಂಬಂಧವನ್ನು ಮೂಡಿಸುತ್ತಿರುವ ಕ್ರಮ ಮತ್ತಷ್ಟು ಎಚ್ಚರದ ವಿಶ್ಲೇಷಣೆಯನ್ನು ಬಯಸುವಂತಿದೆ.

# ಕನ್ನಡ ಮಾತು ಮತ್ತು ಬರೆಹ

ಕನ್ನಡ ಮಾತು ಮತ್ತು ಬರವಣಿಗೆಗಳ ನಡುವೆ ಇರುವ ಸಂಬಂಧದ ಸ್ವರೂಪವನ್ನು ನಾವಿನ್ನೂ ಸರಿಯಾಗಿ ಅರಿತಿಲ್ಲವೆಂದು ತೋರುತ್ತದೆ. ಆಡುವ ಮಾತಿನ ಎಲ್ಲ ಧ್ವನಿಗಳನ್ನೂ, ಧ್ವನಿಸಂಯೋಜನೆಗಳನ್ನೂ ಯಥಾನುಕ್ರಮವಾಗಿ ಬರವಣಿಗೆಯಲ್ಲಿ ನಾವು ಸೂಚಿಸುತ್ತೇವೆ ಎಂದು ಸಾಂಪ್ರದಾಯಿಕವಾಗಿ ನಂಬಲಾಗಿದೆ. ಹಾಗಿಲ್ಲದೆ ಬರೆಯುವುದೊಂದು ಉಚ್ಚರಿಸುವುದೊಂದು ಆಗಿರುವ ಹಲವಾರು ಅನ್ಯಭಾಷೆಯ ನಿದರ್ಶನಗಳನ್ನು ಕೊಟ್ಟು ಕನ್ನಡ ಹೆಚ್ಚು ತಾರ್ಕಿಕ ಬರವಣಿಗೆಯನ್ನು ಹೊಂದಿರುವ ಭಾಷೆಯೆಂದು ಸಾಧಿಸುವುದುಂಟು. ಆದರೆ ವಾಸ್ತವದಲ್ಲಿ ಹಾಗಿಲ್ಲ. ನಮ್ಮ ಸಮಕಾಲೀನ ಬರವಣಿಗೆಯಲ್ಲೇ ಇರುವ ಹಲವಾರು ಗೊಂದಲಗಳನ್ನು ಇದಕ್ಕೆ ನಿದರ್ಶನಗಳನ್ನಾಗಿ ನೀಡಬಹುದಾಗಿದೆ. 'ಇವರು ನಮ್ಮ ತಂದೆ' ಮತ್ತು 'ಇದನ್ನು ಅಂಗಡಿಯಿಂದ ತಂದೆ' ಎಂಬ ಎರಡೂ ವಾಕ್ಯಗಳನ್ನು ಗಮನಿಸಿ. ಎರಡೂ ವಾಕ್ಯಗಳಲ್ಲಿ 'ತಂದೆ' ಎಂಬ ರೂಪವಿದೆ. ಬರವಣಿಗೆಯಲ್ಲಿ ಒಂದೇ ರೀತಿಯಲ್ಲಿ ಇದನ್ನು ಬರೆಯಲಾಗಿದೆ. ಎರಡೂ ವಾಕ್ಯಗಳನ್ನು ನಾವು ಉಚ್ಚರಿಸುವ ಬಗೆಯನ್ನು ಎಚ್ಚರಿಕೆಯಿಂದ ಗಮನಿಸಿದರೆ ಮೊದಲ ವಾಕ್ಯದ 'ತಂದೆ'ಗೂ ಎರಡನೆಯ ವಾಕ್ಯದ 'ತಂದೆ'ಗೂ ಉಚ್ಚಾರಣೆಯಲ್ಲಿ ವ್ಯತ್ಯಾಸಗಳು ಗಮನಕ್ಕೆ ಬರುತ್ತವೆ. ಈ ವ್ಯತ್ಯಾಸ ತಕಾರದ ಅನಂತರ ಬರುವ ಸ್ವರಕ್ಕೆ ಸಂಬಂಧಿಸಿದೆ. ಬೇರೆಬೇರೆ ಸ್ವರಗಳನ್ನು ಉಚ್ಚರಿಸುತ್ತಿದ್ದರೂ ಬರೆವಣಿಗೆಯಲ್ಲಿ ಒಂದೇ ಸ್ವರದ ಚಿಹ್ನೆಯನ್ನು ಬಳಸಿದ್ದೇವೆ. ಧ್ವನಿಗಳನ್ನು ಉಚ್ಚರಿಸುವ ಅನುಕ್ರಮಕ್ಕೂ ಅವುಗಳನ್ನು ಬರೆವಣಿಗೆಯಲ್ಲಿ ಲಿಪೀಕರಿಸುವ ಅನುಕ್ರಮಕ್ಕೂ ಕನ್ನಡದಲ್ಲಿ ವ್ಯತ್ಯಾಸಗಳಿರುವ ಪ್ರಸಂಗಗಳಿವೆ. ಶರ್ಟು ಎಂಬ ಪದವನ್ನು ನೋಡಿ. ಶಕಾರದ ಅನಂತರ ರಕಾರವನ್ನು ಉಚ್ಚರಿಸುತ್ತೇವೆ. ಆದರೆ ಬರೆಯುವಾಗ ಮಾತ್ರ 'ಟು' ಎಂಬುದನ್ನು ಬರೆದ ಅನಂತರದಲ್ಲಿಯೇ ರಕಾರದ ಚಿಹ್ನೆಯನ್ನು ಬರೆಯುತ್ತೇವೆ. ಈ ಎಲ್ಲ ಉದಾಹರಣೆಗಳನ್ನು ಕೊಡುವಾಗ ಕನ್ನಡ ಬರವಣಿಗೆ ದೋಷಪೂರಿತ ಎಂದು ವಾದಿಸುವ ಉದ್ದೇಶವಿಲ್ಲ. ಎಲ್ಲ ಭಾಷೆಗಳ ಬರೆವಣಿಗೆಯಲ್ಲೂ ಇರುವಂತೆ ಉಚ್ಚಾರಣೆ ಮತ್ತು ಬರವಣಿಗೆಗಳ ನಡುವೆ ಎಲ್ಲ ಹಂತದ ಹೊಂದಾಣಿಕೆ ಇರುವುದಿಲ್ಲ ಎಂಬುದನ್ನು ಸೂಚಿಸುವುದಷ್ಟೇ ಮುಖ್ಯ ಉದ್ದೇಶ.

ಇದಕ್ಕೂ ಮೊದಲು ಗಮನಿಸಬೇಕಾದ ಸಂಗತಿಯನ್ನು ಮುಂದೆ ಚರ್ಚಿಸಲಾಗಿದೆ. ಕನ್ನಡ ಲಿಪಿಯ ಉಗಮ ಮತ್ತು ವಿಕಾಸಗಳನ್ನು ಕುರಿತು ಸಾಕಷ್ಟು ಅಧ್ಯಯನಗಳು ನಡೆದಿವೆ. ತಜ್ಞರು ಲಿಪಿಯ ಸ್ವರೂಪದಿಂದ ಆ ಬರೆಹ ಯಾವ ಕಾಲದ್ದು ಎಂದು

ಸಾಕಷ್ಟು ಕರಾರುವಕ್ಕಾಗಿ ಗುರುತಿಸಬಲ್ಲರು. ಆದರೆ ಲಿಪಿಯ ಸ್ವರೂಪ ತಿಳಿದ ಮಾತ್ರಕ್ಕೆ ಬರವಣಿಗೆಯ ಸಮಸ್ಯೆಗಳು ಪರಿಹಾರವಾದವು ಎನ್ನುವಂತಿಲ್ಲ. ಉಚ್ಚಾರಣೆಯಲ್ಲಿ ಹಲವಾರು ಧ್ವನಿಗಳು ಸಂಯೋಜನಗೊಳ್ಳುತ್ತಿರುತ್ತವೆ. ಈ ಸಂಯೋಜನೆಗಳನ್ನು ಪ್ರತಿನಿಧಿಸಲು ಕಾಗುಣಿತವನ್ನು, ಒತ್ತಕ್ಷರಗಳನ್ನು ರೂಪಿಸಲಾಗುತ್ತದೆ. ಅಲ್ಲದೆ ಅಪರಿಚಿತವಾದ ಅನ್ಯಭಾಷೆಯ ಪದಗಳನ್ನು ಎರವಲು ಪಡೆದಾಗ ಅವುಗಳನ್ನು ಲಿಪಿ ಸಂಯೋಜನೆಯಲ್ಲಿ ಪ್ರತಿನಿಧಿಸುವ ಸಮಸ್ಯೆ ಬೇರೆ ಇರುತ್ತದೆ. ಇದಲ್ಲದೆ ಭಾಷೆಯಲ್ಲಿ ಕಾಲದಿಂದ ಕಾಲಕ್ಕೆ, ಪ್ರದೇಶದಿಂದ ಪ್ರದೇಶಕ್ಕೆ ಧ್ವನಿವ್ಯತ್ಯಾಸಗಳು ನಿರಂತರವಾಗಿ ನಡೆಯುತ್ತಲೇ ಇರುತ್ತವೆ. ಹಾಗಾದಾಗ ಈ ಎಲ್ಲ ಧ್ವನಿವ್ಯತ್ಯಾಸಗಳನ್ನು ಬರವಣಿಗೆಯಲ್ಲಿ ಪ್ರತಿನಿಧಿಸುವುದು ಅವಶ್ಯವಾಗುತ್ತದೆ. ಆದರೆ ಬರವಣಿಗೆಯಲ್ಲಿ ಲಭ್ಯವಿರುವ ಚಿಹ್ನೆಗಳು ಮತ್ತು ಅವುಗಳ ಬಳಕೆಯ ಸಂಯೋಜನೆಗಳು ಈ ವ್ಯತ್ಯಾಸಗಳನ್ನು ಸೂಚಿಸಲು ಅನುವು ಮಾಡಿಕೊಡುವಂತಿರುವುದಿಲ್ಲ. ಅಲ್ಲದೆ ಧ್ವನಿವ್ಯತ್ಯಾಸಗಳ ಸ್ವರೂಪ ಕೂಡ ಅಸ್ಪಷ್ಟವಾಗಿದ್ದರೆ ಆಗ ಸಮಸ್ಯೆ ಮತ್ತೂ ಜಟಿಲವಾಗುತ್ತದೆ.

ಕನ್ನಡದಲ್ಲಿ ಲಭ್ಯವಿರುವ ಬರೆವಣಿಗೆಗಳ ದಾಖಲೆಗಳನ್ನು ಈ ದೃಷ್ಟಿಯಿಂದ ಮರುಚಿಂತನೆಗೆ ಗುರಿಪಡಿಸಬೇಕಾಗಿದೆ. ಅಂಥ ದಾಖಲೆಗಳು: 1. ಶಾಸನಗಳು 2. ಹಸ್ತಪ್ರತಿಗಳು (ತಾಳೆವೋಲೆ ಮತ್ತು ಕಾಗದ) 3. ಕಡತಗಳು ಮತ್ತು 4. ಮುದ್ರಿತ ಕೃತಿಗಳು. ಈ ಪಟ್ಟಿಯಲ್ಲಿ ಮುದ್ರಿತ ಕೃತಿಗಳನ್ನು ಆಕರವಾಗಿ ಸೇರಿಸಿರುವುದು ವಿಚಿತ್ರ ಎನಿಸಬಹುದು. ಮುದ್ರಿತವಾದದ್ದು ಹೇಗೆ ಬರವಣಿಗೆಯಾದೀತು ಎಂದು ಹುಬ್ಬೇರಿಸಲೂ ಬಹುದು. ಆದರೆ ನಮ್ಮ ಈ ವಿಶ್ಲೇಷಣೆಯಲ್ಲಿ ಉಚ್ಚಾರಣೆಯನ್ನು ಲಿಪಿರೂಪಕ್ಕೆ ತರುವ ಎಲ್ಲ ಪ್ರಯತ್ನಗಳನ್ನೂ ಬರವಣಿಗೆ ಎಂದೇ ತಿಳಿದು ವ್ಯವಹರಿಸಲಾಗಿದೆ. ಮುದ್ರಿತ ಕೃತಿಗಳೂ, ಅದರಲ್ಲೂ ಹತ್ತೊಂಬತ್ತನೆಯ ಶತಮಾನದ ಬಗೆಬಗೆಯ ಮುದ್ರಣ ತಂತ್ರಗಳಲ್ಲಿ ಸಿದ್ಧಗೊಂಡ ಕೃತಿಗಳು ನಮಗೆ ಒಳ್ಳೆಯ ಆಕರಗಳನ್ನು ಒದಗಿಸಬಲ್ಲವು.

ಈ ಆಕರಗಳಿಂದ ಕನ್ನಡ ಭಾಷೆಯ ರಚನೆಗಳನ್ನು ಆಧುನಿಕರ ಓದಿಗೆ ಸಿದ್ಧಪಡಿಸುವಾಗ ಅಲ್ಲಿನ ಕನ್ನಡ ಬರವಣಿಗೆಯಲ್ಲಿ ಇರುವ 'ದೋಷ'ಗಳನ್ನು ನಿವಾರಿಸುತ್ತಾರೆ. ಈ ದೋಷಗಳನ್ನು ಸ್ಖಾಲಿತ್ಯಗಳೆಂದು ಕರೆಯಲಾಗುತ್ತದೆ. ಈ ಸ್ಖಾಲಿತ್ಯಗಳಿಗೆ ಎಲ್ಲ ಪ್ರಸಂಗಗಳಲ್ಲೂ ಲಿಪಿಕಾರರು ವೈಯಕ್ತಿಕವಾಗಿ ಕಾರಣವೆಂದು ತಿಳಿಯುವುದು ಸರಿಯಲ್ಲ. ಅವುಗಳಲ್ಲಿ ಹಲವು ಆಯಾ ಕಾಲ ಮತ್ತು ಆಯಾ ಪ್ರದೇಶದ ಕನ್ನಡ ಉಚ್ಚಾರಣೆಯ ಕೆಲವು ಲಕ್ಷಣಗಳನ್ನು ಪ್ರತಿನಿಧಿಸುತ್ತಿರುವ ಸಾಧ್ಯತೆಗಳಿವೆ.

ಈ ಕೆಳಗಿನ ನಿದರ್ಶನಗಳನ್ನು ನೋಡೋಣ: ಕನ್ನಡದ ಶಾಸನಗಳಲ್ಲಿ ಈಗ ನಾವು ಬಳಸುವ 'ಕೆರೆ' ಪದವನ್ನು ಬರೆಯುವಾಗ 'ಕೆಱೆ', ಕೆರ್ಱೆ' ಮತ್ತು 'ಕೆರ್‍ರೆ' ಎಂದು ಬರೆದಿರುವುದು ಕಂಡು ಬರುತ್ತದೆ. ಮೊದಲನೆಯದು ಆ ಪದದ ನಿಜರೂಪ. ಸಾಮಾನ್ಯವಾಗಿ ಉಳಿದೆರಡು ರೂಪಗಳನ್ನು ದೋಷಯುಕ್ತ ರೂಪಗಳೆಂದು ಪರಿಗಣಿಸಲಾಗುವುದು. ಆದರೆ ಕನ್ನಡದಲ್ಲಿದ್ದ ಱ ಕಾರ ರ ಕಾರವಾಗಿ ಪರಿವರ್ತಿತವಾದಾಗ ರ ಕಾರದ ಉಚ್ಚಾರಣೆ ಮತ್ತು ಱ ಕಾರದ ಉಚ್ಚಾರಣೆಗಳು ಒಂದೇ ಆಗತೊಡಗಿದುವಷ್ಟೆ. ಆಗ ಱ ಕಾರವನ್ನುಳ್ಳ ಪದಗಳನ್ನು ಬರೆಯುವವರಿಗೆ ಆ ಪದದಲ್ಲಿರುವುದನ್ನು (ಅಥವಾ

ಮೊದಲು ಇದ್ದುದು) ಱ ಕಾರವೆಂದು ಸೂಚಿಸಬೇಕಿತ್ತು. ಆದರೆ ಱ ಕಾರದ ಲಿಪಿಯನ್ನು ಬಳಸುವಂತಿರಲಿಲ್ಲ. ಱ ಕಾರದ ಉಚ್ಚಾರಣೆಯನ್ನು ಸೂಚಿಸುವ ಪ್ರಯತ್ನವಾಗಿ ಮೇಲೆ ಹೇಳಿದ ನಿದರ್ಶನದಲ್ಲಿ ರ ಕಾರಕ್ಕೆ ರ ಕಾರದ ಒತ್ತನ್ನು ನೀಡಲಾಗಿದೆ. ಈಗಲೂ ಱ ಕಾರವನ್ನು ಉಳಿಸಿಕೊಂಡಿರುವ ಕನ್ನಡದ ಉಪಭಾಷೆಯಾದ ಸೋಲಿಗ ಕನ್ನಡವನ್ನು ಕೇಳಿಸಿಕೊಂಡಾಗ ಅಲ್ಲಿ ಱ ಕಾರದ ಉಚ್ಚಾರಣೆ ನಮಗೆ 'ರ್ರ' ಎಂದೋ ಅಥವಾ 'ರ್ರ' ಎಂದೋ ಕೇಳಿಸುತ್ತದೆ. ಅಂದರೆ ಶಾಸನವನ್ನು ಬರೆಯುತ್ತಿದ್ದವರು ತಮ್ಮ ಕಾಲದಲ್ಲಿ ನಡೆದಿದ್ದ ಧ್ವನಿ ಪರಿವರ್ತನೆಗೆ ಸಂವಾದಿಯಾಗಿ ಬರವಣಿಗೆಯಲ್ಲಿ ಇಂಥ ಸೂಚನೆಗಳನ್ನು ನೀಡಿದ್ದಾರೆ ಎನ್ನಬಹುದು. ಅಲ್ಲದೆ ಱ ಕಾರ ಉಚ್ಚಾರಣೆಯನ್ನು ಆ ಶಾಸನದ ಕಾಲದಲ್ಲಿ ಹೇಗೆ ಗ್ರಹಿಸಲಾಗುತ್ತಿತ್ತು ಎಂಬುದನ್ನೂ ಈ 'ಸ್ಖಾಲಿತ್ಯ' ಸೂಚಿಸುತ್ತದೆ.

ರೇಫಯುಕ್ತ ವ್ಯಂಜನ ದ್ವಿತ್ವಗಳಲ್ಲಿ ಸಮರೂಪಧಾರಣೆಯಾದದ್ದು ಕನ್ನಡದಲ್ಲಿ ಸಂಭವಿಸಿದ ಇನ್ನೊಂದು ಧ್ವನಿವ್ಯತ್ಯಾಸ. ಇರ್ದ>ಇದ್ದ, ಅದರ್ಕೆ>ಅದಕ್ಕೆ ಇವು ಇಂಥ ಬದಲಾವಣೆ ನಿದರ್ಶನಗಳು. ಇಂಥ ರೂಪಗಳನ್ನು ಶಾಸನಗಳಲ್ಲಿ ಬರೆಯುವಾಗಲೂ ಮೊದಲು ಇದ್ದ ರೇಫೆಯನ್ನು ಮತ್ತು ಅನಂತರ ಬಂದ ಜಾತೀಯ ದ್ವಿತ್ವವನ್ನು ಒಟ್ಟಾಗಿ ಬರೆಯುವುದು ಕಂಡು ಬರುತ್ತದೆ. ಅಂದರೆ 'ಅದಕ್ಕೆ' ಬದಲಾಗಿ 'ಅದರ್ಕ್ಕೆ' ಎಂದು ಬರೆಯಲಾಗುತ್ತದೆ. ಈ ಎರಡೂ ಚಿಹ್ನೆಗಳನ್ನೂ (ರೇಫೆ ಮತ್ತು ವ್ಯಂಜನದ ದ್ವಿತ್ವ) ಬರೆಯಲು ಕಾರಣಗಳಿವೆ. ಈಗ ದ್ವಿತ್ವವಾಗಿರುವ ರೂಪಗಳ ಮೂಲರೂಪದಲ್ಲಿ ರೇಫೆ ಇದ್ದಿತೆಂಬುದನ್ನು ಸೂಚಿಸುವುದು ಉದ್ದೇಶ. ನಾವು ಈಗ ಇಂಗ್ಲಿಶಿನಿಂದ ಎರವಲು ಪಡೆದ ಪದಗಳಲ್ಲಿ F ಧ್ವನಿಗೆ ಸ್ವತಂತ್ರ ಉಚ್ಚಾರಣೆ ಇದ್ದರೆ ಅದನ್ನು ಬರವಣಿಗೆಯಲ್ಲಿ ಸೂಚಿಸಲು ಫ ಕಾರದ ಕೆಳಗೆ ಅಕ್ಕ ಪಕ್ಕದಲ್ಲಿ ಎರಡು ಚುಕ್ಕಿಗಳನ್ನು ಇಡುತ್ತೇವೆ. ಆದರೆ ಉಚ್ಚರಿಸುವಾಗ ಇಂಗ್ಲಿಶಿನ ಉಚ್ಚಾರಣೆಯನ್ನು ಅನುಸರಿಸುತ್ತೇವೆ ಎಂಬುದು ಖಾತ್ರಿಯಿಲ್ಲ. ಅಂದರೆ ಬರವಣಿಗೆಯಲ್ಲಿ ಮೂಲರೂಪವನ್ನು ಸೂಚಿಸುವ ಉದ್ದೇಶ ಮಾತ್ರ ಇದ್ದೇ ಇರುತ್ತದೆ. ಹಾಗೆಯೇ ಶಾಸನಗಳಲ್ಲೂ ರೇಫೆಯುಕ್ತ ಪದಗಳನ್ನು ಬರೆಯುವಾಗ ಇಂಥ ಕಾಗುಣಿತದ ಸೂಚನೆಗಳನ್ನು ನೀಡುತ್ತಿರುವಂತಿದೆ.

ಶಾಸನವೊಂದರಲ್ಲಿ 'ಅಧಿಕಾರಿಗಳಿಗೆವೂ', 'ಗಉಡಗಳಿಗೆ ವೂ' 'ಮಾಧವದೇವರಿಗೆವೂ' ಎಂಬ ರೂಪಗಳು ಕಂಡುಬರುತ್ತವೆ. (ಎ.ಕ. 7. ಪುಟ.87) ಬರವಣಿಗೆಯಲ್ಲಿ ನಾವು ನಿರೀಕ್ಷಿಸುವ ರೂಪಗಳು ಕ್ರಮವಾಗಿ ಅಧಿಕಾರಿಗಳಿಗೂ, ಗೌಡಗಳಿಗೂ, ಮಾಧವದೇವರಿಗೂ ಎಂದಾಗಿರುತ್ತದೆ. ಸಮುಚ್ಚಯವಾಚಿಯಾದ ಊ ಕಾರವನ್ನು, ಗೆ ಕಾರವನ್ನು ಚತುರ್ಥೀ ವಿಭಕ್ತಿ ಪ್ರತ್ಯಯವಾಗಿ ಉಳ್ಳ ರೂಪಗಳಿಗೆ ಹೇಗೆ ಹತ್ತಿಸ ಬೇಕೆಂಬುದು ಸಮಸ್ಯೆಯೇ ಸರಿ. ತಲೆಗೆ+ಊ=ತಲೆಗೆಯೂ ಎಂದಾಗಬಹುದು. ಆದರೆ ನಾವು ಅದನ್ನು ತಲೆಗೂ ಎಂದು ಉಚ್ಚರಿಸುತ್ತೇವೆ, ಹಾಗೂ ಬರೆಯುತ್ತೇವೆ. ನಮ್ಮ ಪಾಲಿಗೆ ಅಲ್ಲಿ ಸಮಸ್ಯೆ ಇಲ್ಲ. ಆದರೆ ವಾಸ್ತವವಾಗಿ ಅಲ್ಲಿರುವ ಉಚ್ಚಾರಣೆಯ ಸಮಸ್ಯೆಯನ್ನೇ ಶಾಸನವು ಬರವಣಿಗೆಯಲ್ಲಿ ದಾಖಲು ಮಾಡುತ್ತಿದೆ. ಆದ್ದರಿಂದ ಈ ನಿದರ್ಶನದಲ್ಲಿರುವ ಬರವಣಿಗೆ ಸ್ಖಾಲಿತ್ಯವಾಗಿರದೆ ಕನ್ನಡ ಬರವಣಿಗೆಯ ಚರಿತ್ರೆಯಲ್ಲಿ ಒಂದು ಮುಖ್ಯ ಮಜಲನ್ನು ಸೂಚಿಸುತ್ತದೆ.

ಇ/ಉ ಸ್ವರಾದಿ ಪದಗಳನ್ನು ಬರೆಯುವಾಗ ಹಸ್ತಪ್ರತಿಗಳಲ್ಲಿ ಕ್ರಮಾವಾಗಿ 'ಯಿ' ಮತ್ತು 'ವು'ಗಳ ಸ್ವರಗಳನ್ನು ಬದಲಾಗಿ ಬರೆಯುವುದುಂಟು. ಹಾಗೆಯೇ ಈ ಎರಡೂ ಸ್ವರಗಳ ದೀರ್ಘರೂಪಗಳನ್ನು ಆದಿಯಲ್ಲುಳ್ಳ ಪದಗಳನ್ನು ಬರೆಯುವಾಗ ಆ ಸ್ವರಗಳಿಗೆ ಬದಲಾಗಿ 'ಯೀ' ಮತ್ತು 'ವೂ'ಗಳನ್ನು ಬರೆದಿರುವ ನಿದರ್ಶನಗಳಿವೆ. ಹಾಗೆಯೇ ಎ/ಒ ಕಾರಾದಿ ಪದಗಳನ್ನು ಬರೆಯುವಾಗ ಆಯಾ ಸ್ವರಗಳ ಬದಲು ಪದಾದಿಯಲ್ಲಿ 'ಯೆ' ಮತ್ತು 'ವೊ'ಗಳನ್ನು ಬರೆಯುತ್ತಾರೆ. ಎ/ಒ ಕಾರಾದಿ ಪದಗಳನ್ನು ಬರೆಯುವಾಗ ಎ/ಒ ಕಾರಗಳಿಗೆ ಕ್ರಮವಾಗಿ ಯೆ/ವೊ ಬರೆಯುವ ಬದಲು ಕೆಲವು ಸಂದರ್ಭಗಳಲ್ಲಿ ಯ/ವ ಕಾರವನ್ನು ಬರೆಯುವುದಿದೆ. ಉದಾಹರಣೆಗೆ 'ಒಂದು' ಪದವನ್ನು 'ವೊಂದು' ಅಥವಾ 'ವಂದು' ಎಂದು ಎರಡೂ ರೀತಿಗಳಲ್ಲಿ ಬರೆಯುವುದನ್ನು ಕಾಣುತ್ತೇವೆ. ಈ ಬರವಣಿಗೆಯ ಕ್ರಮವನ್ನು ನಾವು ಆಯಾ ಕಾಲದ ಮತ್ತು ಹಸ್ತಪ್ರತಿಕಾರ ಪ್ರದೇಶದ ಕನ್ನಡದ ಉಚ್ಚಾರಣೆಯ ಲಕ್ಷಣಗಳೆಂದು ತಿಳಿಯಬೇಕಾಗಿದೆ. ಈಗಲೂ ಈ ಸ್ವರಗಳನ್ನು ಆದಿಯಲ್ಲುಳ್ಳ ಪದಗಳನ್ನು ಉಚ್ಚರಿಸುವಾಗ ಸ್ವರಾದಿಯಾಗಿ ಉಚ್ಚರಿಸುವುದಕ್ಕಿಂತ ಸಂಬಂಧಿಸಿದ (ಅರೆ) ವ್ಯಂಜನಗಳನ್ನು ಆದಿಯಲ್ಲಿ ಉಚ್ಚರಿಸುವ ಪ್ರವೃತ್ತಿ ಇದೆ. ಇದಲ್ಲದೆ ಎ/ಒ ಕಾರಗಳಿಗೆ ಸಂಬಂಧಿಸಿದಂತೆ ಮೇಲೆ ಹೇಳಿದ ವಿಕಲ್ಪಗಳು ಅಧ್ಯಯನಕ್ಕೆ ಯೋಗ್ಯವಾಗಿವೆ. ಈ ವಿಕಲ್ಪಗಳ ಪ್ರಸಾರವನ್ನು ಗಮನಿಸುವ ಮೂಲಕ ಕನ್ನಡ ಭಾಷೆಯ ಆಡುನುಡಿಯ ವಿಕಲ್ಪಗಳ ಗಡಿರೇಖೆಗಳನ್ನು ಗುರುತಿಸುವುದು ಸಾಧ್ಯವಾಗುತ್ತದೆ.

ಶಾಸನಶಾಸ್ತ್ರದಲ್ಲಿ ಪರಿಣತರಾದವರ ಪ್ರಕಾರ ವಿಜಯನಗರದ ಅರಸರ ಕಾಲ ಮತ್ತು ಅನಂತರದ ಪಾಳೆಯಗಾರರ ಕಾಲದಲ್ಲಿ ಆಂಧ್ರಪ್ರದೇಶದ ಹಲವಾರು ಲಿಪಿಕಾರರು ಕನ್ನಡನಾಡಿನಲ್ಲಿ ನೆಲೆಸಿದ್ದಾರೆ. ಅವರೆಲ್ಲ ದ್ವಿಭಾಷಿಕರು. ಅವರು ಕನ್ನಡ ಶಾಸನಗಳನ್ನು ಬರೆಯುವಾಗ ಸಹಜವಾಗಿಯೇ ತೆಲುಗು ಭಾಷೆಯ ಕೆಲವು ಉಚ್ಚಾರಣೆಯ ಲಕ್ಷಣಗಳನ್ನು ಕನ್ನಡ ಲಿಪಿಗಳಲ್ಲಿ ಪ್ರತಿನಿಧಿಸಿರುವ ಸಾಧ್ಯತೆಗಳಿವೆ. ನ/ಣ ಮತ್ತು ಲ/ಳ ಗಳಿಗೆ ಸಂಬಂಧಿಸಿದ ವ್ಯತ್ಯಯಗಳು ಗಮನಾರ್ಹವಾಗಿವೆ. ಇವರು ಬರೆದಿರುವ ಅಥವಾ ಕೆತ್ತಿರುವ ಶಾಸನಗಳಲ್ಲಿರುವ ಇಂಥ ಬರವಣಿಗೆಯ ಸ್ಖಾಲಿತ್ಯಗಳು ವಾಸ್ತವವಾಗಿ ದ್ವಿಭಾಷಿಕರ ಉಚ್ಚಾರಣೆಯ ಸಮಸ್ಯೆಗಳನ್ನು ಸೂಚಿಸುತ್ತವೆ. ಮರಾಠಿ ಮತ್ತು ಕನ್ನಡ ದ್ವಿಭಾಷಿಕ ಪ್ರದೇಶದ ಶಾಸನಗಳಲ್ಲಿ ಮತ್ತು ಕನ್ನಡ ತಮಿಳು ದ್ವಿಭಾಷಿಕ ಪ್ರದೇಶದ ಶಾಸನಗಳಲ್ಲಿ ಆಯಾ ಪ್ರದೇಶದ ದ್ವಿಭಾಷಿಕರ ಉಚ್ಚಾರಣೆಯ ವೈವಿಧ್ಯಗಳು ಕನ್ನಡ ಭಾಷೆಯ ಲಿಪೀಕರಣ ಪ್ರಕ್ರಿಯೆಯಲ್ಲಿ ತಲೆಹಾಕಿರುವುದು ಸಹಜವೇ ಆಗಿದೆ.

ಬರವಣಿಗೆ ಮತ್ತು ಮಾತಿಗೆ ಸಂಬಂಧಿಸಿದ ಈ ಸಮಸ್ಯೆಯನ್ನು ನಾವು ಇನ್ನೂ ಒಂದು ದಿಕ್ಕಿನಿಂದಲೂ ಪರಿಗಣಿಸಲು ಸಾಧ್ಯವಿದೆ. ಕನ್ನಡವನ್ನು ಬರೆಯಲು ಕಲಿತವರ ಬರವಣಿಗೆಯ 'ದೋಷ'ಗಳನ್ನು ಶಾಲೆಯಲ್ಲಿ ಅಧ್ಯಾಪಕರು ತಿದ್ದಿ ಸರಿಯಾದ ರೂಪ ಯಾವುದು ಎನ್ನುವುದನ್ನು ಮಕ್ಕಳಿಗೆ ಕಲಿಸಲು ಪ್ರಯತ್ನಿಸುತ್ತಾರೆ. ಮಕ್ಕಳ ಬರವಣಿಗೆಯಲ್ಲಿ ವೈಯಕ್ತಿಕ ಕಲಿಕೆಯ ಕೊರತೆಗಳಿಂದ ಉಂಟಾಗುವ ತಪ್ಪುಗಳನ್ನು ಬದಿಗಿರಿಸೋಣ. ಉಳಿದಂತೆ ಸಂಭವಿಸುವ ಹಲವು ದೋಷಗಳು ಉಚ್ಚಾರಣೆಗೆ ಸಂಬಂಧಿಸಿದಂತೆ ಕೆಲವು ಒಳನೋಟಗಳನ್ನು ನಮಗೆ ನೀಡುತ್ತವೆ. ಅಲ್ಲದೆ ಕನ್ನಡ ಬರವಣಿಗೆಯ

ಕ್ರಮದಲ್ಲಿರುವ 'ಉಚ್ಚಾರಣೆಗೆ ಹೊಂದಿಕೊಳ್ಳದ' ಅಂಶಗಳನ್ನು ಗುರುತಿಸಲು ನೆರವಾಗುತ್ತವೆ. ಕನ್ನಡವನ್ನು ಎರಡನೆಯ ಭಾಷೆಯಾಗಿ ಕಲಿತ ಕೆಲವು ವಯಸ್ಕರು ಒತ್ತಕ್ಷರಗಳನ್ನು ಬರೆಯುವಾಗ ಮಾಡುವ ತಪ್ಪುಗಳಲ್ಲಿ ಕೆಲವು ಹೀಗಿರುತ್ತವೆ. 'ಕ್ಲಪನೆ' (ಕಲ್ಪನೆ), 'ಸ್ದಾಯ'(ಸಾಧ್ಯ). ಈ ತಪ್ಪುಗಳು ಕಲ್ಪಿತವಲ್ಲ. ಏಕೆ ಈ ತಪ್ಪುಗಳನ್ನು ಉಂಟಾಗಿವೆ? ಬರೆಯುವವರು ಉಚ್ಚಾರಣೆಯಲ್ಲಿ ಬರುವ ಧ್ವನಿಗಳ ಅನುಕ್ರಮವನ್ನು ಬರವಣಿಗೆಯಲ್ಲಿ ಬಿಂಬಿಸಲು ಪ್ರಯತ್ನಿಸಿದ್ದಾರೆ. ಕಲ್ಪನೆ ಪದದ ಧ್ವನಿಗಳ ಉಚ್ಚಾರಣೆಯ ಅನುಕ್ರಮ ಕ್ ಅ ಲ್ ಪ್ ಅ ನ್ ಎ. ಆದ್ದರಿಂದ ಕಕಾರವನ್ನು ಬರೆದಾದ ಮೇಲೆ ಲಕಾರದ ಒತ್ತಕ್ಷರವನ್ನು ಬರೆದು ಅನಂತರ ಪಕಾರ ಮತ್ತು ನೆ ಗಳನ್ನು ಬರೆದಿದ್ದಾರೆ. ಬರೆಯುತ್ತಿರುವವರು ಕನ್ನಡ ಉಚ್ಚಾರಣೆಯನ್ನು ತಮ್ಮ ಬರವಣಿಗೆಯಲ್ಲಿ ಯಥಾನುಕ್ರಮದಲ್ಲಿ ಹಿಡಿದಿಡುತ್ತಿರುವುದು ಕಲಿಸುವವರ ದೃಷ್ಟಿಯಿಂದ 'ದೋಷ'ವಾಗುತ್ತದೆ. ಅದನ್ನು ತಿದ್ದುತ್ತೇವೆ. ತಿದ್ದುವುದು ಸರಿಯೋ ತಪ್ಪೋ ಎಂಬುದು ನಮ್ಮ ಪ್ರಶ್ನೆಯಲ್ಲ. ಕನ್ನಡ ಬರವಣಿಗೆಯಲ್ಲಿ ಉಚ್ಚಾರಣೆಯನ್ನು ಯಥಾನುಕ್ರಮದಲ್ಲಿ ಬಿಂಬಿಸುವ ವಿಧಾನ ಬಳಕೆಯಾಗಿಲ್ಲ ಎನ್ನುವ ಅಂಶ ಈ ಬಗೆಯ ಬರವಣಿಗೆಯ ದೋಷಗಳಿಂದ ನಮ್ಮ ಗಮನಕ್ಕೆ ಬರುತ್ತದೆಂಬುದನ್ನು ಸೂಚಿಸಲು ಈ ಉದಾಹರಣೆಗಳನ್ನು ನೀಡಲಾಗಿದೆ.

ಈ ಮೇಲಿನ ಕೆಲವು ನಿದರ್ಶನಗಳಿಂದ, ನಮಗೆ ಲಭ್ಯವಿರುವ ಲಿಖಿತ ದಾಖಲೆಗಳ ಮೂಲಕ, ಕನ್ನಡ ಭಾಷೆಯ ಉಚ್ಚಾರಣೆಗಳ ವಿಕಲ್ಪಗಳನ್ನು ಪ್ರತಿನಿಧಿಸಲು ಕನ್ನಡ ಬರವಣಿಗೆಯು ಪ್ರಯತ್ನಿಸಿರುವ ಬಗೆಯನ್ನು ತಿಳಿಯುವುದು ಸಾಧ್ಯವೆಂಬುದು ಸ್ಪಷ್ಟವಾಗಿವೆ.

**ಕೊನೆ ಟಿಪ್ಪಣಿ**

ಶಾಸನಗಳಲ್ಲಿ ಱ ಕಾರವನ್ನು ಬರೆಯುವ ಕ್ರಮವನ್ನು ಕುರಿತಂತೆ ಈ ಮೇಲಿನ ಲೇಖನದಲ್ಲಿ ಹೇಳಲಾದ ಮಾತುಗಳಿಗೆ ಡಾ. ಬಿ.ಬಿ. ರಾಜಪುರೋಹಿತ ಅವರು ಪ್ರತಿಕ್ರಿಯೆಯೊಂದನ್ನು ಕಳುಹಿಸಿದ್ದಾರೆ. ಅವರ ಕೆಲವು ಸೂಚನೆ ಎಲ್ಲರ ಗಮನಕ್ಕೂ ಬರುವುದು ಅವಶ್ಯವೆಂದು ತಿಳಿದು ಆ ಭಾಗಗಳನ್ನು ಮುಂದೆ ಕೊಡಲಾಗಿದೆ.

1. 'ಕೆಱೆ' ಎಂಬುದನ್ನು 'ಕೆರ್ರೆ', 'ಕೆರ್ಱೆ' ಎಂದು ಬರೆದಿರುವುದು ತಪ್ಪಲ್ಲ. ಱ ಕಾರದ ಉಚ್ಚಾರ ದೀರ್ಘ ರೇಫವಾಗಿತ್ತೆಂದು ಸೂಚಿಸುತ್ತಾರೆ. (ಱಕಾರಂ ಬೆಟ್ಟಿತ್ತಾಗುಚ್ಚರಿಸೆ.... ಕೇಶಿರಾಜ) ಅಂದರೆ ಱ ಕಾರಕ್ಕೂ ರ ಕಾರಕ್ಕೂ ಇರುವ ಉಚ್ಚಾರ ಭೇದವೆಂದರೆ ಱ ದೀರ್ಘರೇಫ, ರೆ ಸಾದಾ ರೇಫ. ಎಲ್ಲಿ ರ್ಱೆ, ರ್ಱೇ ಎಂದು ಬರೆಯಲಾಗಿದೆಯೋ ಆ ಕಾಲದಲ್ಲಿ ಱ ಕಾರವು ರ ಎಂದು ಉಚ್ಚಾರಗೊಳ್ಳುತ್ತಿದ್ದಿಲ್ಲ ಎಂದರ್ಥ. ಅಂಥ ಶಾಸನಗಳ ಕಾಲ ಱ, ರ ಧ್ವನಿವ್ಯತ್ಯಾಸದ ಇರುವಿಕೆಯನ್ನು ಸೂಚಿಸುತ್ತದೆ. ಎಂದಿನಿಂದ ಱ ಕಾರವು ರ ಆಯಿತೆಂಬುದನ್ನು ಇಂಥ ಆಧಾರಗಳು ಸಿದ್ಧಪಡಿಸುತ್ತವೆ. ಇವು ಸ್ಖಾಲಿತ್ಯಗಳಲ್ಲ.

2. ರೇಫೆಯುಕ್ತ ವ್ಯಂಜನವನ್ನು ದ್ವಿತ್ವ ರೂಪದಲ್ಲಿ ಬರೆಯುವುದೇ ಧ್ವನಿಶಾಸ್ತ್ರದ ಪ್ರಕಾರ ಸಾಧು. ಏಕೆಂದರೆ ರೇಫದ ನಂತರ ಬರುವ ಏಕವ್ಯಂಜನವು ದ್ವಿತ್ವದಷ್ಟು ದೀರ್ಘವಾಗಿರುತ್ತದೆ ಎಂದು ಪ್ರಯೋಗದಿಂದ ಸಿದ್ಧಮಾಡಿದ್ದೇನೆ. (ನೋಡಿ: ನನ್ನ

Acoustic Characteristics of Kannada, CIIL, 1982). ತರ್ಕವ್ವನ್ನು ತರ್ಕ್ಕ ಎಂದು ಬರೆಯುವುದೇ ಸಾಧು. ಏಕೆಂದರೆ ಇಲ್ಲಿ 'ರ್ಕ'ದ ಉದ್ದ ದ್ವಿತ್ವ ಕ ಕಾರದ (ಅಕ್ಕದಲ್ಲಿರುವಂತೆ) ಉದ್ದದಷ್ಟು ಇರುತ್ತದೆ. ಇದನ್ನು ಅರಿತ ನಮ್ಮ ಪೂರ್ವಜರು 'ಅದರ್ಕ್ಕೆ' ಎಂದು ಬರೆದರು. ಇದು ಅಘೋಷವರ್ಣಗಳಿಗೆ ಮಾತ್ರ ನಿಜವಿದೆ. ಅವರಿಗೆ ಶ್ರವಣವೇ ಪ್ರಮಾಣವಾಗಿತ್ತು. ಏಕವ್ಯಂಜನವಾಗಿ ಬರೆಯುವುದನ್ನೇ ರೂಢಿಗೆ ತಂದ ನಮಗೆ ದ್ವಿತ್ವವಾಗಿ ಬರೆದದ್ದು ತಪ್ಪಾಗಿ ಕಾಣುತ್ತದೆ.

3. ನಮ್ಮ ರೂಢಿಗೆ ಭಿನ್ನವಾಗಿ ಬರುವವುಗಳನ್ನೆಲ್ಲ ಸ್ಖಾಲಿತ್ಯವೆಂದು ಹೇಳುವುದು ಸರಿಯೆನಿಸುವುದಿಲ್ಲ. ಏಕೆ ಹಾಗೆ ಬರೆದಿರಬಹುದು ಎಂದು ಹಲವಾರು ರೀತಿಯಲ್ಲಿ ಪರೀಕ್ಷಿಸಿ ಯಾವುದೂ ಕಾರಣ ದೊರೆಯದಿದ್ದರೆ ಮಾತ್ರ ಸ್ಖಾಲಿತ್ಯವೆನ್ನೋಣ.

**ವಿವರಣೆ**

ಡಾ. ರಾಜಪುರೋಹಿತರ ಈ ಪ್ರತಿಕ್ರಿಯೆ ಬೇರೆಯ ಚರ್ಚೆಯನ್ನು ಬಯಸುತ್ತದೆ. ಅವರ ಮೂರನೆಯ ಟಿಪ್ಪಣಿಯಲ್ಲಿ ಹೇಳಿರುವ ಮಾತೇ ಮೇಲಿನ ಲೇಖನದ ಹಿಂದಿರುವ ಉದ್ದೇಶವಾಗಿದೆ. ನಮ್ಮ ಇಂದಿನ ಬಳಕೆಯ ತಿಳುವಳಿಕೆ ಯಾವುದನ್ನು ಸ್ಖಾಲಿತ್ಯಗಳೆಂದು ಪರಿಗಣಿಸುತ್ತದೋ ಅವು ನಿಜದಲ್ಲಿ ಒಂದು ಕಾಲ, ಪ್ರದೇಶದ ಕನ್ನಡದ ಉಚ್ಚಾರಣೆಯನ್ನು ಅಥವಾ ಉಚ್ಚಾರಣೆಯ ಗ್ರಹಿಕೆಯನ್ನು ಸೂಚಿಸುತ್ತವೆಂದು ಹೇಳಲೆಂದೇ ಆ ಲೇಖನವನ್ನು ಬರೆಯಲಾಗಿದೆ.

ಆ ಲೇಖನದಲ್ಲಿ ಉಲ್ಲೇಖಿತವಾಗಿರುವ ಶಾಸನಗಳು ವಿಜಯನಗರದ ಕಾಲ ಅಥವಾ ಅನಂತರದ ಕಾಲಕ್ಕೆ ಸೇರುತ್ತವೆ. ಅಲ್ಲದೆ ರ ಕಾರಕ್ಕೆ ಸಂಬಂಧಿಸಿದಂತೆ ಗುರುತಿಸಲಾದ ಕಾಗುಣಿತದ ಹೊಂದಾಣಿಕೆ, ಅಂದರೆ ಱ ಕಾರದ ಬದಲು ದ್ವಿತ್ವ ರ ಕಾರವನ್ನು ಬರೆಯುವುದು ಬಹಳ ಶಾಸನಗಳಲ್ಲಿ ಕಂಡು ಬರುತ್ತದೆ. ಱ ಕಾರ ಬರವಣಿಗೆಯಿಂದ ಮರೆಯಾಗಿತ್ತಾದರೂ ಉಚ್ಚಾರಣೆಯಲ್ಲಿ ಇದ್ದಿತೆನ್ನುವುದು, ಅದರಿಂದಾಗಿಯೇ ಆ ಉಚ್ಚಾರಣೆಯನ್ನು ಬರವಣಿಗೆಯಲ್ಲಿ ಹಿಡಿದಿಡಲು ದ್ವಿತ್ವ ರ ಕಾರದ ಕಾಗುಣಿತವನ್ನು ರೂಪಿಸಿಕೊಂಡರೆಂಬುದು ಡಾ. ರಾಜಪುರೋಹಿತರ ವಾದವಾಗಿರಲಾರದು. ಆದ್ದರಿಂದ ಹೀಗೆ ಹೇಳಬಹುದು. (ಅ) ಆಯಾ ಪದಗಳ ಲಿಖಿತ (ಉಚ್ಚಾರಣೆಯಲ್ಲಿಯಲ್ಲ) ರೂಪದಲ್ಲಿ ಇದ್ದ ಱ ಕಾರವನ್ನು ಸೂಚಿಸಲು ದ್ವಿತ್ವ ರ ಕಾರವನ್ನು ರೂಪಿಸಿಕೊಂಡಿದ್ದರು ಮತ್ತು (ಆ) ಅದಕ್ಕೆ ಕೇಶಿರಾಜನ ಸೂಚನೆ ಅಥವಾ ಕನ್ನಡದ ಕೆಲವು ಪ್ರಭೇದಗಳಲ್ಲಿ ಇನ್ನೂ ಉಳಿದುಕೊಂಡಿದ್ದ ಱ ಕಾರದ ಉಚ್ಚಾರಣೆಯೇ ಆಧಾರವಾಗಿದ್ದವು. ಇದು ಹೆಚ್ಚು ಸಾಧುವಾದ ವಿವರಣೆ ಎಂದು ತಿಳಿಯುತ್ತೇನೆ.

ಪ್ರತಿಕ್ರಿಯೆಯ ಎರಡನೆಯ ಕಂಡಿಕೆಯಲ್ಲಿ ನೀಡಿರುವ ವಿವರಣೆಯನ್ನು ಒಪ್ಪುವುದಾದರೆ ಕನ್ನಡ ಅಕ್ಷರರಚನೆಯ ಲಕ್ಷಣಗಳನ್ನು ಮರುವಿವೇಚನೆಗೆ ಗುರಿಪಡಿಸಬೇಕಾಗುವುದು. ಏಕೆಂದರೆ ರೇಫೆಯು ಮೊದಲಲ್ಲಿ ಬರುವ ವ್ಯಂಜನ

ದ್ವಿತ್ವಗಳಲ್ಲಿ ಎರಡನೆಯ ವ್ಯಂಜನದ ಉಚ್ಚಾರಣೆಯು ದೀರ್ಘವಾಗಿರುವುದಾದರೆ ಆಗ ಕನ್ನಡದಲ್ಲಿ –CVCCC– ಮಾದರಿಯ ಅಕ್ಷರಗಳು, ಅಂದರೆ ಅತಿ ಭಾರಾಕ್ಷರಗಳು, ಪದ ಮಧ್ಯದಲ್ಲಿ ಬರುತ್ತವೆ ಎಂದಾಯಿತು. ಅಥವಾ ಪರ್ಯಾಯವಾಗಿ ಅಕ್ಷರಗಳ ಆದಿಯಲ್ಲಿ ಮೂರು ವ್ಯಂಜನಗಳನ್ನು ಕಲ್ಪಿಸಿಕೊಳ್ಳಬೇಕಾಗುತ್ತದೆ. ಇದು ಸದ್ಯ ಪರಿಹಾರವಾಗುವ ಸಮಸ್ಯೆಯಲ್ಲ. ಇನ್ನಷ್ಟು ದೀರ್ಘವಾದ ಅಧ್ಯಯನದ ಅನಂತರವೇ ಖಚಿತ ನಿರ್ಣಯ ಸಾಧ್ಯ.

# ಕನ್ನಡ ಬರವಣಿಗೆಯಲ್ಲಿ ಆಗಬೇಕಿರುವ ಬದಲಾವಣೆಗಳು

ಬರಹಕ್ಕೆ ಓದುಗರಿರುತ್ತಾರೆ. ಓದುಗರೆಲ್ಲರೂ ಬರೆಯುವವರೇ ಆಗಿರಬೇಕಿಲ್ಲ. ಅಂದರೆ ಬರೆಯುವವರು ಕಡಿಮೆಯಾದರೆ ಓದುವವರು ಹೆಚ್ಚು. ಬರೆಯಬಲ್ಲವರೆಲ್ಲ ಬರೆಯುವುದಿಲ್ಲ ಎಂಬುದನ್ನು ನೆನಪಿಡಬೇಕು. ಅಲ್ಲದೆ ಎಲ್ಲರೂ ಬರೆಯಬೇಕಾದ ಒತ್ತಡಗಳು ಇರುವುದಿಲ್ಲ. ಅಂದರೆ ನಾವು ಬರೆಯಬಲ್ಲವರಾಗಿದ್ದರೂ ಬರೆಯದಿರಬಹುದು. ಆದರೆ ಬೇರೆಯವರು ಬರೆದ್ದದ್ದನ್ನು ಓದುವವರಾಗಿರುತ್ತೇವೆ. ಆದ್ದರಿಂದ ಬರವಣಿಗೆ ಓದುಗರಿಗೆ ನೆರವಾಗುವಂತೆ ಇರಬೇಕು. ಇದಲ್ಲದೆ ಕೆಲವು ಬಗೆಯ ಬರವಣಿಗೆಗಳನ್ನು ನಾವು ಓದದಿದ್ದರೂ ನಮಗಾಗಿ ಇತರರು ಓದುವುದನ್ನು ನಾವು ಕೇಳಿಸಿಕೊಳ್ಳುತ್ತೇವೆ. ಟಿವಿಯಲ್ಲಿ ಸುದ್ದಿಗಳನ್ನು ಓದುವವರು ಬರೆದುದ್ದನ್ನು ನಮಗಾಗಿ ಓದಿ ಹೇಳುತ್ತಿರುತ್ತಾರೆ. ಆ ಬರವಣಿಗೆಯನ್ನು ನಾವು ನೋಡಲಾರೆವು. ಹಾಗಾಗಿ ಓದಬೇಕಾಗಿ ಬರುವುದಿಲ್ಲ. ನಾವೇ ಓದುವ( ಅಂದರೆ ಓದಿಕೊಳ್ಳುವ) ಬರಹ ಮತ್ತು ನಮಗಾಗಿ ಬೇರೆಯವರು ಓದಿಹೇಳುವ ಬರಹ ಇವೆರಡೂ ಒಂದೇ ಬಗೆಯಲ್ಲಿ ಇರುವುದಿಲ್ಲ.

ಈಗ ಕನ್ನಡ ಕಲಿತವರು ಕನ್ನಡವನ್ನು 'ಸರಿಯಾಗಿ' ಬರೆಯಲಾರರು ಎಂಬುದು ಎಲ್ಲ ಕಡೆ ಕೇಳಿ ಬರುವ ದೂರು. ಬರೆಯಲಾಗದೆ ಹೋಗುವುದು ಮತ್ತು ಸರಿಯಾಗಿ ಬರೆಯದಿರುವುದು ಬೇರೆ ಬೇರೆ. ಹತ್ತು ಹನ್ನೆರಡು ವರುಷ ಕನ್ನಡ ಓದಿ ಬರೆಯಲು ಕಲಿತರೂ, ಮಕ್ಕಳು ಕನ್ನಡವನ್ನು ತಪ್ಪಿಲ್ಲದೆ ಬರೆಯುತ್ತಿಲ್ಲವೇಕೇ?. ಬರೆಯುವ ಕನ್ನಡದಲ್ಲಿ ಎರಡು ಬಗೆಯ ತಪ್ಪುಗಳನ್ನು ಗುರುತಿಸುತ್ತಾರೆ. ಕಾಗುಣಿತದ ತಪ್ಪುಗಳು ಮತ್ತು ರಚನೆಯ ತಪ್ಪುಗಳು. ಇವೆರಡೂ ಬೇರೆ ಬೇರೆ ಕಾರಣಗಳಿಂದ ಉಂಟಾಗುತ್ತವೆ. ಬರೆಯುವವರು ತಾವು ಮಾತಾಡುವ ಕನ್ನಡದ ಪದರೂಪಗಳು ಬರೆದಾಗ ಹೇಗಿರುತ್ತವೆ ಎಂಬುದನ್ನು ಅರಿಯಲಾಗದಿರುವುದು ಅವರ ಬರವಣಿಗೆಯ ಕಾಗುಣಿತದ ತಪ್ಪುಗಳಿಗೆ ಕಾರಣ. ಅಂದರೆ ಬರೆಯುವವರು ಕನ್ನಡವನ್ನು ತಿಳಿಯದವರಲ್ಲ. ಆದರೆ ಅದರ ಬರಹದ ಬಗೆಯನ್ನು ಸರಿಯಾಗಿ ಅರಿಯದವರು. ಅರಿಯಲು ಅವರಿಗೆ ತೊಡಕುಗಳಿವೆ. ಇದಲ್ಲದೆ ನಾವು ಮಾತಾಡುವ ಕನ್ನಡದ ಹಾಗೆ ನಮ್ಮ ಬರವಣಿಗೆಯ ಕನ್ನಡ ಇರುವುದಿಲ್ಲ. ಕಿವಿಯಲ್ಲಿ ಕೇಳಿದ್ದನ್ನು ಬಾಯಲ್ಲಿ ನುಡಿಯುವುದನ್ನು ಬರೆಯ ಹೊರಟಾಗ ಹಲವು ಗೊಂದಲಗಳು ಉಂಟಾಗುತ್ತವೆ. ನಾವು 'ಸರಿಯಾದ' ಕನ್ನಡವೆಂದು ಯಾವುದನ್ನು ಗುರುತಿಸುತ್ತೇವೋ, ಅದು ಹೆಚ್ಚು ಜನ ಕನ್ನಡಿಗರ ಮಾತಿನಲ್ಲಿ ಕೇಳಸಿಗದ ಕನ್ನಡವಾಗಿದೆ. ಹಾಗಿದ್ದಲ್ಲಿ

ಬರವಣಿಗೆಯಲ್ಲಿ ತಪ್ಪುಗಳು ಕಡಿಮೆಯಾಗಬೇಕಾದರೆ ನಾವು ಬರೆಯುವ ಕನ್ನಡ, ಮಾತಾಡುವ ಕನ್ನಡಕ್ಕೆ ಸಾಕಷ್ಟು ಹತ್ತಿರವಾಗುವಂತೆ ಮಾಡಬೇಕಾಗುತ್ತದೆ.

ಇದು ಹೇಳುವಷ್ಟು ಸರಳವಲ್ಲ. ಏಕೆಂದರೆ ಇದು ನಿಡುಗಾಲದ ಮತ್ತು ಬಲು ಹರವಿನ ಯೋಜನೆಯನ್ನು ಬಯಸುತ್ತದೆ. ಸುಮಾರು ಎರಡು ಸಾವಿರ ವರುಷಗಳ ಹಿಂದೆ ಕನ್ನಡ ತನ್ನ ಬರವಣಿಗೆಯಲ್ಲಿ ಸಂಸ್ಕೃತದ ಪದಗಳನ್ನು ಅಳವಡಿಸಿಕೊಳ್ಳಲೆಂದು ತನ್ನ ಲಿಪಿ ಚೌಕಟ್ಟಿನಲ್ಲಿ ಹೆಚ್ಚಿನ ಲಿಪಿಗಳನ್ನು ಸೇರಿಸಿಕೊಂಡಿತು. ಇದರಿಂದ ಸಾವಿರಾರು ಸಂಸ್ಕೃತ ಪದಗಳನ್ನು ಕನ್ನಡ ಲಿಪಿಯಲ್ಲೇ ಬರೆದು ಓದಲು ಅನುವಾಯಿತು. ಅಂದರೆ ಸಂಸ್ಕೃತ ಪದಗಳನ್ನು ಕನ್ನಡಿಗರು ಹೇಗೆ ನುಡಿಯುತ್ತಿದ್ದರೋ ಹಾಗೆ ಬರೆಯುವ ಬದಲು, ಸಂಸ್ಕೃತ ನುಡಿಯಲ್ಲಿದ್ದ ಬಗೆಯಲ್ಲೇ ಬರೆಯುವುದು, ಓದುವುದು ಬಳಕೆಗೆ ಬಂದಿತು. 'ಧ್ವನಿ' ಎಂಬ ಪದವನ್ನು 'ದನಿ' ಎಂದು ನುಡಿಯುತ್ತಿದ್ದರೂ ಬರೆಯುವಾಗ 'ಧ್ವನಿ' ಎಂದೆ ಬರೆಯುವುದು. ಅಲ್ಲದೆ ಹಾಗೆ ಬರೆದರೆ ಮಾತ್ರ ಸರಿ ಎನ್ನುವ ಬಗೆ ಜಾರಿಗೆ ಬಂತು. ಈಗ ನಾವು ಎದುರು ದಿಕ್ಕಿನಲ್ಲಿ ಪಯಣವನ್ನು ಮಾಡಬೇಕಿದೆ. ನಾವು ಆ ಪದಗಳನ್ನು ಹೇಗೆ ನುಡಿಯುತ್ತೇವೋ ಹಾಗೆ ಬರೆಯಲು ತೊಡಗಬೇಕು.

ಡಿ.ಎನ್.ಶಂಕರ ಭಟ್ ಅವರು 'ಕನ್ನಡ ಬರಹವನ್ನು ಸರಿಪಡಿಸೋಣ' ಎಂಬ ತಮ್ಮ ಹೊತ್ತಿಗೆಯಲ್ಲಿ ಈ ಬದಲಾವಣೆಯನ್ನು ಜಾರಿಗೆ ಕೊಡಲು ನೆರವಾಗುವ ಕೆಲವು ಸೂಚನೆಗಳನ್ನು ನೀಡುತ್ತಾರೆ. ಅವರು ಹೇಳುವಂತೆ ಕನ್ನಡದ ಸ್ವರಲಿಪಿಗಳಿಂದ ಋ,ಐ,ಔ ಮತ್ತು ಅಃ ಲಿಪಿಗಳನ್ನು ಬಿಡಬೇಕು. ಅವಿಲ್ಲದೆಯೂ ನಾವು ಮಾತಾಡುವ ಕನ್ನಡವನ್ನು 'ಸರಿಯಾಗಿ' ಬರೆಯಬಹುದು. ವ್ಯಂಜನಗಳಿಂದ ಅ) ಮಹಾಪ್ರಾಣಗಳ ಲಿಪಿಗಳನ್ನು ಬಿಡಬೇಕು.ಆ) ಶ, ಷ ಮತ್ತು ಸ ಗಳಲ್ಲಿ ಷ ಲಿಪಿ ಬೇಕಿಲ್ಲ. ಏಕೆಂದರೆ ಹೆಚ್ಚು ಜನರ ಮಾತಿನಲ್ಲಿ ಶ ಮತ್ತು ಷ ಗಳು ಬೇರೆಬೇರೆ ದನಿಗಳಾಗಿ ಕೇಳಿಸುವುದಿಲ್ಲ. ಬರಹದಲ್ಲಿ ಅವೆರಡನ್ನೂ ಬೇರೆಯಾಗಿ ಇರಿಸುತ್ತಿದ್ದೇವೆ. ಬದಲಿಗೆ ಅವೆರಡಕ್ಕೂ ಒಂದೇ ಲಿಪಿ ಬಳಸಿದರೆ ತಪ್ಪಾಗುವುದಿಲ್ಲ.

ಭಟ್ ಅವರು ಈ ಬದಲಾವಣೆಯನ್ನು ಕನ್ನಡಿಗರ ಮುಂದಿಟ್ಟು ಸುಮ್ಮನೆ ಕುಳಿತಿಲ್ಲ. ಮೇಲೆ ಹೇಳಿದ ಹೊತ್ತಿಗೆಯ ಒಂದು 'ಅದ್ಯಾಯ'ವನ್ನು ಮತ್ತು ಅವರ ಈಚಿನ ಹೊಸ ಹೊತ್ತಿಗೆ 'ಕನ್ನಡ ನುಡಿ ನಡೆದು ಬಂದ ದಾರಿ' ಎಂಬ ಹೊತ್ತಿಗೆಯನ್ನು ಇಡಿಯಾಗಿ ತಾವು ಸೂಚಿಸಿದ ಬಗೆಯಲ್ಲೇ ಬರೆದಿದ್ದಾರೆ. ಮೊದಲಿಗೆ ಈ ಬದಲಾದ ಬರಹ 'ಕಣ್ಣಿಗೆ' ಕಿರಿಕಿರಿಯನ್ನು ಉಂಟು ಮಾಡುವುದಾದರೂ, ಅದು ಕಿವಿಯ ಕನ್ನಡಕ್ಕೆ ಹತ್ತಿರವಾದುದರಿಂದ ಅದಕ್ಕೆ ಹೊಂದಿಕೊಳ್ಳುವುದು ಆಗದ ಮಾತೇನೂ ಅಲ್ಲ.

ಮೊದಲಲ್ಲಿ ಹೇಳಿದ ಹಾಗೆ ಕನ್ನಡವನ್ನು ಬರೆಯುವವರು ಕಡಿಮೆ. ಬರೆಯುವುದನ್ನು ಕಲಿತವರೂ ಕನ್ನಡವನ್ನು ಬದುಕಿನುದ್ದಕ್ಕೂ ಓದುವವರಾಗಿ ಉಳಿಯುವುದೇ ಹೆಚ್ಚು. ತಿದ್ದಿದ ಲಿಪಿ ಚೌಕಟ್ಟಿನ ಕನ್ನಡ ಬರವಣಿಗೆ ನಮ್ಮ ಮಾತಿಗೆ ಹೆಚ್ಚು ಹತ್ತಿರವಾಗುವುದರಿಂದ

ಅದನ್ನು ಬರೆಯುವವರಿಗೆ ನೆರವಾಗುವ ಹಾಗೆಯೇ ಓದುವವರಿಗೂ ನೆರವಿಗೆ ಬರುತ್ತದೆ. ಓದುವವರು ತಾವು ನುಡಿಯುವ ಮತ್ತು ಕೇಳುವ ಕನ್ನಡಕ್ಕೆ ಹೆಚ್ಚು ಹತ್ತಿರವಾದ ಕನ್ನಡವನ್ನೇ ಕಣ್ಣಿನಿಂದ ನೋಡುತ್ತಿರುತ್ತಾರೆ (ಅಂದರೆ ಓದುತ್ತಿರುತ್ತಾರೆ). ಇದರಿಂದ ಕನ್ನಡ ಬರವಣಿಗೆಯಲ್ಲಿ ಈಗ ನಾವು 'ಕಾಣುತ್ತಿರುವ ' ತಪ್ಪುಗಳು ಕಡಿಮೆಯಾದಾವು.

ಕನ್ನಡ ಬರಹವನ್ನು ಓದುವವರು ಕಡಿಮೆಯಾಗುತ್ತಿದ್ದಾರೆ ಎಂಬ ಇನ್ನೊಂದು ದೂರು ಕೂಡ ಇದೆ. ಅದರಲ್ಲೂ ಪದಪದಗಳನ್ನು ಬಿಡದೇ ಓದಬೇಕಾದ ಬರಹಗಳನ್ನು ಓದುವವರು ಕಡಿಮೆಯಾಗುತ್ತಿರುವಂತಿದೆ. ಕೆಲವು ಬರಹಗಳನ್ನು ಹಾಗೆ ಪದಪದಗಳನ್ನು ಬಿಡದೆ ಓದಬೇಕಿಲ್ಲ. ಪತ್ರಿಕೆಗಳ ಬರಹ ಆ ಬಗೆಯದು. ಹಾಗೆ ಅಲ್ಲಿ ಬರೆದ ಎಲ್ಲ ಪದಗಳನ್ನು ಬಿಡದೇ ಓದಹೊರಡುವುದು ಹುಚ್ಚುತನವಾಗುತ್ತದೆ. ಹೆಚ್ಚು ಜನ ಪತ್ರಿಕೆಗಳ ಬರಹಗಳ ಮೇಲೆ 'ಕಣ್ಣಾಡಿಸುತ್ತಾರೆ'. ಅದರಿಂದ ಕೊರತೆಗಳೇನೂ ಉಂಟಾಗುವುದಿಲ್ಲ. ಅವರಿಗೆ ಅಲ್ಲಿನ ಮಾಹಿತಿಯ ಬಗೆಗೆ ಸಾಕಷ್ಟು ತಿಳುವಳಿಕೆ ಅಷ್ಟರಿಂದಲೇ ದೊರಕುತ್ತದೆ. ಆದರೆ ಎಲ್ಲ ಬರಹಗಳನ್ನೂ ಹೀಗೆ 'ಕಣ್ಣಾಡಿಸಿ' ಓದಲು ಬರುವುದಿಲ್ಲ. ಪದಪದಗಳನ್ನು ಬಿಡದೇ ಓದಬೇಕಾಗುತ್ತದೆ. ಇಂತಹ ಬರಹಗಳನ್ನು ಓದುವವರು ಕನ್ನಡ ಬರವಣಿಗೆಯನ್ನು ದೂರವಿಡುತ್ತಿದ್ದಾರೆಂಬುದೇ ದೂರಿನ ತಿರುಳು. ಏಕೆ ಹೀಗಾಗುತ್ತಿದೆ?

ಇಂತಹ ಬರಹಗಳೂ ಕೂಡ ನಾವು ನುಡಿಯುವ ಕನ್ನಡದಲ್ಲಿ ಬಳಕೆಯಾಗುವ ಪದಗಳಿಗೆ ಬದಲಾಗಿ ನಾವು ಕೇಳದ ಪದಗಳನ್ನು, ಅಂದರೆ, ಓದಿನಲ್ಲಷ್ಟೇ 'ನೋಡುವ' ಪದಗಳನ್ನು ಹೆಚ್ಚಾಗಿ ಬಳಸುತ್ತವೆ. ಈ ಮಾತು ದಿಟ. ನಮ್ಮ ಬರಹದ ಕನ್ನಡ ಚೆಲುವಾಗಿರಬೇಕೆಂದುಕೊಂಡು ನಾವು ಹೆಚ್ಚುಹೆಚ್ಚು ಜನಬಳಕೆಯಿಂದ ದೂರವಾಗಿರುವ ಇಲ್ಲವೇ ಜನ ಬಳಸದಿರುವ ನೂರಾರು ಸಂಸ್ಕೃತ ಪದಗಳನ್ನು ಬಳಸುತ್ತೇವೆ. ಬರೆದ ನೂರು ಪದಗಳಲ್ಲಿ ಸಂಸ್ಕೃತ ಪದಗಳು ಕೆಲವೊಮ್ಮೆ ಐವತ್ತನ್ನು ದಾಟುವುದುಂಟು. ಇದರಿಂದಾಗಿ ಓದುವವರಿಗೆ ನಮ್ಮ ಬರವಣಿಗೆ ಕಬ್ಬಿಣದ ಕಡಲೆಯಾಗುತ್ತದೆ. ಆ ಸಂಸ್ಕೃತ ಪದಗಳಿಗೆ ಬದಲಾಗಿ ಕನ್ನಡ ಪದಗಳನ್ನು ಬಳಸಲು ಬರುವಂತಿದ್ದರೂ ಹಾಗೆ ಮಾಡದೆ ಸಂಸ್ಕೃತ ಪದಗಳಿಗೇ ಜೋತುಬೀಳುವುದು ಹೆಚ್ಚಾಗಿದೆ. ಇದು ಕಡ್ಡಿಯನ್ನು ಗುಡ್ಡ ಮಾಡಿ ಹೇಳುವ ಮಾತಲ್ಲ. ಕನ್ನಡ ಬರಹಗಳನ್ನು ಹತ್ತಿರದಿಂದ ಬಲ್ಲವರಿಗೆ ಕಣ್ಣಿಗೆ ರಾಚುವ ಮಾತಾಗಿದೆ. ಆದ್ದರಿಂದ ಇಲ್ಲಿಯೂ ಒಂದು ಬದಲಾವಣೆ ಬೇಕಾಗಿದೆ. ಏನದು? ಆದಷ್ಟು ಕನ್ನಡ ಪದಗಳನ್ನೇ ಬಳಸಿ ಕನ್ನಡವನ್ನು ಬರೆಯವುದು ಸರಿಯಾದ ದಾರಿ. ಬರೆಯುವರೆಲ್ಲರೂ ತಮ್ಮ ಕನ್ನಡ ಬರವಣಿಗೆಯಲ್ಲಿ ಆದಷ್ಟು ಕನ್ನಡ ಪದಗಳನ್ನಷ್ಟೇ ಬಳಸಲು ತೊಡಗಬೇಕು. ಸಂಸ್ಕೃತ ಪದಗಳನ್ನು ಹೆಚ್ಚು ಬಳಸಿ ಬರೆದ ಬರವಣಿಗೆಗಳನ್ನು ತಿದ್ದಿ ಅಲ್ಲಿರುವ ಸಂಸ್ಕೃತ ಪದಗಳ ಬದಲಿಗೆ ಅವಿರುವ ಜಾಗದಲ್ಲಿ ಕನ್ನಡ ಪದಗಳನ್ನು ಹಾಕುವ ಬಗೆ ಬಳಕೆಗೆ ಬರಬೇಕು. ಇದು ಪದಕ್ಕೆ ಬದಲಾಗಿ ಪದ ಎಂಬ ಹಾದಿಯನ್ನು ಹಿಡಿಯುವುದರಿಂದ ಆಗುವ ಕೆಲಸವಲ್ಲ. ಅದಕ್ಕಾಗಿ ಕನ್ನಡ ವಾಕ್ಯಗಳ ಬಗೆಯಲ್ಲೂ ಬದಲಾವಣೆ ಮಾಡಿಕೊಳ್ಳಬೇಕಾಗಿ ಬರುತ್ತದೆ.

ಇನ್ನೊಂದು ಬಗೆಯ ಕನ್ನಡ ಬರವಣಿಗೆಯನ್ನು ಕುರಿತು ಮೊದಲಲ್ಲಿ ಹೇಳಿದೆ. ಅದು ಬರೆದದ್ದಾದರೂ ಯಾರೋ ಒಬ್ಬರು ಹಲವರಿಗಾಗಿ ಓದಿ ಹೇಳುವ (ಇಲ್ಲವೇ ಮಾತಾಡಿ ಹೇಳುವ) ಬರವಣಿಗೆ. ಟಿವಿಯ ಸುದ್ದಿಗಾರರು ಬರೆದ ಸುದ್ದಿಯನ್ನು ಓದುತ್ತಿರುತ್ತಾರೆ. ನಮಗೆ ಮಾತಾಡಿದಂತೆ ತೋರಿದರೂ ಅವರ ಎದುರಿಗೆ ಓದಲು ನೆರವಾಗುವ ಬರವಣಿಗೆ ಇರುತ್ತದೆ. ಹೀಗೆ ಇತರರಿಗೆ ಓದಿ ಹೇಳಬೇಕಾದ ಬರವಣಿಗೆಯಲ್ಲಿ ಬಳಸಬೇಕಾದ ಪದಗಳು ಮತ್ತು ವಾಕ್ಯಗಳು ನಾವು ಕಣ್ಣಲ್ಲಿ ಓದಿಕೊಳ್ಳುವ ಬರವಣಿಗೆಯಲ್ಲಿ ಇರುವುದಕ್ಕಿಂತ ಬೇರೆಯಾಗಿಯೇ ಇರಬೇಕಾಗುತ್ತದೆ. ಹಾಗಿಲ್ಲದಿದ್ದಲ್ಲಿ ಓದಿ ಹೇಳುತ್ತಿದ್ದರೂ ಅದು ನಾವು ಕಿವಿಯಲ್ಲಿ ಕೇಳುವ ಕನ್ನಡದಂತೆ ತೋರುವುದಿಲ್ಲ. ನಾವು ಕಣ್ಣಲ್ಲಿ ನೋಡಿ ಓದುವ ಎಷ್ಟೋ ಪದಗಳನ್ನು ನುಡಿಯಲ್ಲಿ ಬಳಸುವುದಿಲ್ಲ. ಅವುಗಳನ್ನು ಕೇಳಿಸಿಕೊಳ್ಳುವುದೂ ಇಲ್ಲ. ಈಗ ಈ ಬಗೆಯ 'ಓದಿ ಹೇಳಬೇಕಾದ' ಕನ್ನಡ ಬರವಣಿಗೆ ಹೆಚ್ಚಾಗುತ್ತಿದೆ. ಆದರೆ ಅದರ ಚಹರೆಗಳನ್ನು ಆ ಬರವಣಿಗೆಯಲ್ಲಿ ತೊಡಗಿರುವವರು ಇನ್ನೂ ಸರಿಯಾಗಿ ಅರಿತಿಲ್ಲ. ಇಲ್ಲಿಯೂ ಬದಲಾವಣೆಗಳು ಬೇಕಾಗಿವೆ. ನಾವು ನುಡಿಯುವ ಕನ್ನಡದ ಚಾಲುಗಳನ್ನು ಏರಿಳಿತಗಳನ್ನು ಹಿಡಿದಿಡುವ ಬಗೆಯಲ್ಲಿ ಆ ಬರವಣಿಗೆಗಳು ಮೈತಳೆಯಬೇಕು. ಅದಕ್ಕಾಗಿ ಅಂತಹ ಕನ್ನಡವನ್ನು ಬರೆಯುತ್ತಿರುವವರು ತಮ್ಮ ಕಿವಿಗಳನ್ನು ಚುರುಕಾಗಿರಿಸಿಕೊಳ್ಳಬೇಕು. 'ಸರಿಯಾಗಿ' (ಕೇವಲ ಸರಿಯಾದ ಅಲ್ಲ) ಕನ್ನಡವನ್ನು ಕೇಳಿಸಿಕೊಳ್ಳಬೇಕು. ಇದು ಅವರಿಗೆ ಒತ್ತಾಸೆಯಾಗುತ್ತದೆ. ಈ ಎಲ್ಲ ಬದಲಾವಣೆಗಳು ಕನ್ನಡ ಬರವಣಿಗಯಲ್ಲಿ ಆಗಬೇಕು. ಇದರಿಂದ ಈಗಿರುವ ಹಲವು ಗೊಂದಲಗಳು ಕಡಿಮೆಯಾಗುತ್ತವೆ.

ಮತ್ತೆ ಮೊದಲಿಗೆ ಬರೋಣ. ಕನ್ನಡ ಕಲಿತವರು ಕನ್ನಡವನ್ನು ಸರಿಯಾಗಿ ಬರೆಯುತ್ತಿಲ್ಲ ಎಂದು ಹಲುಬುವುದು ದಿನಕಳೆದಂತೆ ಕಡಿಮೆಯಾಗುತ್ತದೆ. ಏಕೆಂದರೆ ಈಗ 'ಬರೆಯುವುದನ್ನು' ನುಡಿ ಕಲಿಕೆಯಲ್ಲಿ ಪಡೆದರೂ, ಅದರ ಬಳಕೆ ಕಲಿತ ಬಗೆಯಲ್ಲೇ ಉಳಿಯಬೇಕಾಗಿಲ್ಲ. ಕಂಪ್ಯೂಟರ್‌ಗಳಿಂದಾಗಿ ಈಗ ಬರೆಯುವುದು ಎಂಬ ಮಾತಿಗೇ ಬೇರೆ ಹೊಳಹು ಮೂಡುತ್ತಿದೆ. ಬರುವ ದಿನಗಳಲ್ಲಿ ನುಡಿ ಕಲಿಯುವವರು ಬರೆಯುವುದನ್ನು ಕಲಿಯದಿದ್ದರೂ ಏನೂ ಕೊರತೆಯಾಗುವುದಿಲ್ಲವೇನೋ. ಓದುವುದನ್ನು ಕಲಿತರೆ ಅದೇ ಸಾಕಾದೀತು. ಇರಲಿ ಇದು ಏನಾಗುವುದೋ ಕಾಯ್ದು ನೋಡೋಣ. (ಇಲ್ಲಿಯವರೆಗೆ ಈ ಬರಹವನ್ನು ಓದಿದವರು ಈಗ ಮತ್ತೊಮ್ಮೆ ಕಣ್ಣಿಟ್ಟು ನೋಡಿದರೆ, ಈ ಬರಹದಲ್ಲಿ ಬೆರಳೆಣಿಕೆಯ ಸಂಸ್ಕೃತ ಪದಗಳನ್ನಷ್ಟೇ ಬಳಸಿರುವುದನ್ನು ಗುರುತಿಸಬಹುದು. ಇದರಿಂದ ಓದಿಗೆ ಏನಾದರೂ ನೆರವಾಯಿತೋ ಇಲ್ಲವೇ ಅಡ್ಡಿಯಾಯಿತೋ ನೀವೇ ಹೇಳಬೇಕು.)

# ಸಮೂಹ ಮಾಧ್ಯಮಗಳಲ್ಲಿ ಕನ್ನಡ

ಕಳೆದ ಐವತ್ತು ವರ್ಷಗಳಲ್ಲಿ ಮಾಧ್ಯಮ ವಲಯದಲ್ಲಿ ಸ್ಫೋಟವೊಂದು ಸಂಭವಿಸಿದೆ ಎಂಬ ಮಾತನ್ನು ಮೇಲಿಂದ ಮೇಲೆ ಕೇಳುತ್ತೇವೆ. ಈ ಮೊದಲು ಇದ್ದ ಪತ್ರಿಕೆಯ ಮಾಧ್ಯಮದ ಜೊತೆಗೆ ರೇಡಿಯೋ, ಟೆಲಿವಿಷನ್‌ಗಳು ಬಂದು ಸೇರಿವೆ. ರಂಜನೆಯ ಉದ್ದೇಶದ ರಂಗಭೂಮಿಯ ಜೊತೆಗೆ ಈ ಹಿಂದೆಯೂ ಇದ್ದ ಚಲನಚಿತ್ರ ಈಗ ವ್ಯಾಪಕವಾಗಿ ಬೆಳೆದಿದೆ. ಈ ಎಲ್ಲಾ ಮಾಧ್ಯಮಗಳು ಒಂದಲ್ಲ ಒಂದು ವಿಧದಲ್ಲಿ ಭಾಷೆಯನ್ನು ಬಳಸುತ್ತವೆ. ನಾವು ಈಗ ಗಮನಿಸಿರುವ ಭಾಷೆಯ ಬಳಕೆಯ ಎರಡು ರೂಪಗಳಾದ ಮಾತು ಮತ್ತು ಬರಹಗಳನ್ನು ಬೇರೆ ಬೇರೆ ರೀತಿಗಳಲ್ಲಿ ಇವು ಬಳಸಿಕೊಳ್ಳುತ್ತವೆ. ಕಳೆದ ಒಂದೆರಡು ದಶಕಗಳ ಮತ್ತೊಂದು ಬದಲಾವಣೆ ಎಂದರೆ ಮಾಧ್ಯಮಗಳನ್ನು ಕುರಿತ ಚರ್ಚೆಗಳು, ವರದಿಗಳು ಕೂಡಾ ಈಗ ಬೆಳೆಯುತ್ತಿವೆ. ಇದಂತೂ ಅಪ್ಪಟ ಭಾಷೆಯ ವಲಯವೇ, ಉದಾ.ಗೆ ಪತ್ರಿಕೆಗಳ ಚಲನಚಿತ್ರ ಪುರವಣಿಗಳನ್ನು ಗಮನಿಸಬಹುದು. ಅಲ್ಲಿ ಚಲನಚಿತ್ರವೆಂಬ ಮಾಧ್ಯಮದ ಚಟುವಟಿಕೆಗಳನ್ನು ಕುರಿತ ಭಾಷಿಕಮಾಹಿತಿಗಳು ವಿಶ್ಲೇಷಣೆಗಳು, ಮಂಡಿತವಾಗುತ್ತವೆ. ಕನ್ನಡ ಈ ವಿವಿಧ ನೆಲೆಗಳಲ್ಲಿ ಹೇಗೆ ಬಳಕೆಯಾಗುತ್ತಿದೆ, ಅದರ ಸ್ವರೂಪವೇನು ಎಂಬುದನ್ನು ಈ ಭಾಗದಲ್ಲಿ ಚರ್ಚಿಸಲಾಗುವುದು.

ಈ ಮೊದಲೇ ಸ್ಪಷ್ಟಪಡಿಸಿದಂತೆ ಪ್ರತಿಯೊಂದು ಮಾಧ್ಯಮವೂ ಭಾಷೆಯನ್ನು ಒಂದೇ ರೀತಿಯಲ್ಲಿ ಬಳಸಿಕೊಳ್ಳುವುದಿಲ್ಲ. ಹಲವು ನೆಲೆಗಳಲ್ಲಿ ಈ ಬಳಕೆ ಕಂಡುಬರುತ್ತದೆ. ಎಷ್ಟೋ ವೇಳೆಗಳಲ್ಲಿ ಭಾಷೆಯ ಪ್ರಾಥಮಿಕ ನಿಯೋಗಗಳನ್ನು ನಿರಾಕರಿಸಿ ಅವುಗಳಿಗೆ ಹೊಸ ಜವಾಬ್ದಾರಿಯನ್ನು ಒದಗಿಸುವ ಪ್ರಸಂಗಗಳೂ ಇವೆ. ಆದರೆ ಮೊದಲು ಈ ಮಾಧ್ಯಮದಲ್ಲಿ ಕನ್ನಡ ಹೇಗೆ ಮತ್ತು ಯಾವ ಯಾವ ರೀತಿಗಳಲ್ಲಿ ಬಳಕೆಯಾಗುತ್ತದೆ ಎಂಬುದನ್ನು ನೋಡೋಣ.

ಮಾಧ್ಯಮಗಳಲ್ಲಿ ಬಳಕೆಯಾಗುವ ಪದಕೋಶ ಅಗಾಧ ಪ್ರಮಾಣದ ಪಲ್ಲಟಗಳನ್ನು ಕಂಡಿದೆ. ಮುಖ್ಯವಾಗಿ ಕನ್ನಡದ ಪದಕೋಶದ ಜೊತೆಗೆ ಇಂಗ್ಲಿಶ್, ಸಂಸ್ಕೃತ, ಪರ್ಸೋ-ಅರಾಬಿಕ್ ಮತ್ತು ಕನ್ನಡದ ಇತರ ಉಪಭಾಷೆಗಳಿಂದ ಪದಗಳನ್ನು ಪಡೆದುಕೊಳ್ಳುವುದನ್ನು ನೋಡುತ್ತೇವೆ. ಸಾಮಾನ್ಯವಾಗಿ ಕನ್ನಡ ಮತ್ತು ಇಂಗ್ಲಿಶ್ ಪದಗಳ ಮಿಶ್ರಿತ ರೂಪಗಳನ್ನು ವಾಣಿಜ್ಯ, ಆಟೋಟ, ವೈದ್ಯಕೀಯ, ತಾಂತ್ರಿಕ ಭಾಷಾಬರಹಗಳಲ್ಲಿ ಕಾಣುತ್ತೇವೆ. ವರದಿ,

ವ್ಯಾಖ್ಯಾನ ಮತ್ತು ವೈಚಾರಿಕ ಬರವಣಿಗೆಗಳ ಸಂದರ್ಭದಲ್ಲಿ ಸಂಸ್ಕೃತ ಪದಗಳನ್ನು ಹೆಚ್ಚಾಗಿ ಬಳಸುತ್ತಾರೆ. ಇದಲ್ಲದೆ ಕನ್ನಡದ ಇತರ ಪ್ರಭೇದಗಳು ಹಾಸ್ಯ ಮತ್ತಿತರ ಲಘು ಬರಹಗಳಲ್ಲಿ ಹೆಚ್ಚಾಗಿ ಬಳಕೆಯಾಗುತ್ತವೆ. ಈ ವಿಭಜನೆಗೆ ತರ್ಕಬದ್ಧವಾದ ಕಾರಣಗಳಿಲ್ಲ. ಆದರೆ ಹೀಗೆ ಮಾಡುತ್ತಿರುವುದು ಬಹುಮಟ್ಟಿಗೆ ಎಲ್ಲರಿಗೂ ಗೊತ್ತಾಗುವ ಮತ್ತು ಎಲ್ಲರೂ ಒಪ್ಪಿಕೊಂಡಂತಿರುವ ಸಂಗತಿಯಾಗಿದೆ. ಮಾಧ್ಯಮಗಳ ಕನ್ನಡಬಳಕೆಯಲ್ಲಿ ಬರಹವನ್ನು ಆಧರಿಸಿದ ಮಾಧ್ಯಮಗಳು ಹೆಚ್ಚು ಶುದ್ಧತೆಯ ಕಡೆಗೆ ಒತ್ತನ್ನು ನೀಡುತ್ತವೆ. ಶುದ್ಧತೆ ಎಂದರೇನು? ಸಾಮಾನ್ಯವಾಗಿ ಶುದ್ಧ ಭಾಷೆಯ ಲಕ್ಷಣಗಳನ್ನು ಹೇಳುವಾಗ ಮೂರು ನೆಲೆಗಳನ್ನು ಬಳಸಿಕೊಳ್ಳಲಾಗುತ್ತದೆ. ಒಂದು: ಬರೆಹದಲ್ಲಿ ಕಾಗುಣಿತ ದೋಷವಿಲ್ಲದಿರುವುದು. ಎರಡು: ಅಪಶಬ್ದಗಳ ಪ್ರಯೋಗ ಇಲ್ಲದಿರುವುದು. ಮೂರು: ವ್ಯಾಕರಣಬದ್ಧವಾದ ಭಾಷೆಯನ್ನು ಬಳಸಬೇಕೆಂಬುದು. ಸಾಮಾನ್ಯವಾಗಿ ಮುದ್ರಿತ ಭಾಷೆಯನ್ನು ಅವಲಂಬಿಸುವ ಮಾಧ್ಯಮಗಳೆಲ್ಲವೂ ಈ ಕಟ್ಟುಪಾಡನ್ನು ಎಡೆಬಿಡದೇ ಒಪ್ಪಿಕೊಂಡು ಅನುಸರಿಸುತ್ತವೆ.

ಈ ಮೂರು ಸೂಚಕಗಳನ್ನು ನಿರ್ಧರಿಸುವ ಶುದ್ಧಮಾನದಂಡಗಳು ಕನ್ನಡದಲ್ಲಿ ಇಲ್ಲ. ಏಕೆಂದರೆ ಲಿಖಿತಮಾಧ್ಯಮವೇ ಕನ್ನಡಕ್ಕೆ ಬಹು ಹಿಂದಿನಿಂದಲೂ ಪರಿಚಿತವಾದ ವಾಹಿನಿಯಾಗಿದೆ. ಆದರೆ ಅದರ ಗ್ರಹಿಕೆಯ ವ್ಯಾಪ್ತಿ ಮಾತ್ರ ಈ ಹಿಂದಿಗಿಂತ ಬೇರೆಯ ರೀತಿಯಲ್ಲಿತ್ತು. ಅಂದರೆ ಬರವಣಿಗೆ ಇದ್ದರೂ ಅದನ್ನು ಓದುವವರು ಹೆಚ್ಚು ಇರಲಿಲ್ಲ. ಆದರೆ ಬರೆದುದನ್ನು ಓದಿ ಹೇಳಿದಾಗ ಕೇಳುವವರಿದ್ದರು. ಈ ಪರಂಪರೆ ಕನ್ನಡದಂತಹ ಭಾಷೆಗೆ ತುಂಬ ವಿಶಿಷ್ಟವಾದದ್ದು. ನಮ್ಮ ಪ್ರಾಚೀನ ವೈಯಾಕರಣಿಗಳು ಭಾಷೆಯಲ್ಲಿ ಇರುವ ದೋಷಗಳನ್ನು ಕುರಿತು ಹೇಳುತ್ತಾರೆ. ಈ ದೋಷಗಳಲ್ಲಿ ಶ್ರುತಿಕಷ್ಟ ಮತ್ತು ಶ್ರುತಿದುಷ್ಟ ಎಂಬ ಎರಡು ದೋಷಗಳು ಗಮನಾರ್ಹ. ಇವು ಭಾಷೆಯಲ್ಲಿ ಇರಬಾರದು; ಎಲ್ಲವೂ ಸಾಧ್ಯವಿದ್ದಷ್ಟೂ ಶ್ರುತಿಸಹ್ಯ ಪದಗಳಾಗಿರಬೇಕು ಎನ್ನುತ್ತಾರೆ. ಭಾಷಾದೋಷಗಳ ಚರ್ಚೆ ಮಾಡಿದ ಸಂಸ್ಕೃತ ಅಲಂಕಾರಿಕರಿಗೂ ಈ ಪರಿಕಲ್ಪನೆಗಳು ಅಪರಿಚಿತ. ಕನ್ನಡದ ಮೊದಲ ಗ್ರಂಥಕರ್ತೃ ಶ್ರೀವಿಜಯನೇ ಈ ಪರಿಕಲ್ಪನೆಗಳನ್ನು ಹೇಳಿದ್ದಾನೆ. ಶ್ರುತಿಕಷ್ಟ ಎಂದರೆ ಕೇಳಿಸಿಕೊಳ್ಳಲು ಮನಸ್ಸಿಗೆ ಸಾಧ್ಯವಾಗದೇ ಹೋಗುವ ಪದಗಳು ಎಂದರ್ಥ, ಶ್ರುತಿದುಷ್ಟ ಎಂದರೆ ಕೇಳಿಸಿಕೊಳ್ಳಲು ಕಷ್ಟವಲ್ಲದಿದ್ದರೂ ಇಷ್ಟವಾಗದ ಪದಗಳು ಎಂದರ್ಥ. ಓದುವ ಪರಂಪರೆಯೇ ಪ್ರಧಾನವಾಗಿದ್ದರೆ ಆಗ ಈ ದೋಷಗಳ ಕಲ್ಪನೆಯೇ ಇರುವುದಿಲ್ಲ. ಏಕೆಂದರೆ ಓದು ಕಣ್ಣಿಗೆ ಸಂಬಂಧಿಸಿದ್ದು, ಈ ದೋಷಗಳು ಕಿವಿಗೆ ಸಂಬಂಧಿಸಿದ ಅನುಭವಗಳು. ಆದ್ದರಿಂದ ಬರಹವನ್ನು ಓದಿ ಹೇಳಿದಾಗ ಕೇಳುವವರಿಗೆ ಯಾವ ಅನುಭವಗಳಾಗುತ್ತವೋ ಆ ಅನುಭವದ ನೆಲೆಯಲ್ಲಿ ಈ ದೋಷಗಳನ್ನು ಕಲ್ಪಿಸಲಾಗಿದೆ. ಈಗ ಪರಿಸ್ಥಿತಿ ಬದಲಾಗಿದೆ. ಓದಿಕೊಳ್ಳುವ ಜನರು ಮೊದಲಿಗಿಂತ ಹೆಚ್ಚಾಗಿದ್ದಾರೆ. ಇವರ ಓದಿಗೆ ಅನುಕೂಲವಾಗುವ ಹಾಗೆ ಭಾಷೆಯನ್ನು ಬಳಸಬೇಕು. ಅದಕ್ಕೆ ಅನುಗುಣವಾಗಿ ಅದು ತನ್ನ ಸಾಮಗ್ರಿಗಳನ್ನು ಅಳವಡಿಸಿಕೊಳ್ಳಬೇಕು.

ಒಂದು ಪತ್ರಿಕೆಯನ್ನು ಗಮನಿಸೋಣ. ಅದರಲ್ಲಿ ಸರಾಸರಿ ಹತ್ತು ಪುಟಗಳಿದ್ದರೆ ಅಂದಾಜು ಎಂಬತ್ತು ಕಾಲಂ ಬರೆಹ ಮುದ್ರಿತವಾಗಿರುತ್ತದೆ. ಒಂದು ಅಂದಾಜಿನಂತೆ ಒಂದು ಪತ್ರಿಕೆಯ ಸಂಚಿಕೆಯೊಂದರಲ್ಲಿ ಸರಿ ಸುಮಾರು ಒಂದು ಲಕ್ಷ ಪದಗಳಿರುತ್ತವೆ. ಈ ಮಾಹಿತಿ ಇಲ್ಲಿ ಅಗತ್ಯ. ಇದನ್ನು ಹೇಗೆ ಓದುತ್ತಾರೆ? ಯಾರೂ ಅಲ್ಲಿ ಮುದ್ರಣಗೊಂಡ ಎಲ್ಲ ಒಂದು ಲಕ್ಷ ಪದಗಳನ್ನೂ ಬಿಡದೇ ಓದುವುದಿಲ್ಲ. ಅಷ್ಟೇಕೆ ಆ ಒಂದು ಲಕ್ಷ ಪದಗಳನ್ನು ಬಿಡಿಬಿಡಿಯಾಗಿ ನೋಡುವುದೂ ಇಲ್ಲ. ಕೆಲವು ಸಾವಿರ ಪದಗಳನ್ನು ಮೀರಿ ಯಾವ ಸರಾಸರಿ ಓದುಗರೂ ಹೆಚ್ಚಿನ ಪದಗಳ ಕಡೆಗೆ ಗಮನವಿಡುವುದಿಲ್ಲ. ಹಾಗಿದ್ದಲ್ಲಿ ಇಷ್ಟು ಪ್ರಮಾಣದ ವಾಕ್ಯಗಳನ್ನು ಪತ್ರಿಕೆಯೊಂದು ಸಿದ್ಧಪಡಿಸಿ ನೀಡಿದ್ದೇಕೆ? ಇದೆಲ್ಲವನ್ನೂ ಒಬ್ಬರೇ ಬರೆದಿರುವುದಿಲ್ಲ. ಹಲವರ ಬರೆಹಗಳು ಅಲ್ಲಿ ಬೆರೆತಿರುತ್ತವೆ ಎಂಬುದೂ ನಿಜ. ಹಾಗೆಯೇ ಎಲ್ಲಾ ಓದುಗರೂ ತಮ್ಮತಮ್ಮ ಪಾಲಿಗೆ ಗ್ರಹಿಸಿಕೊಳ್ಳುವ ಕೆಲವು ಸಾವಿರ ಪದಗಳು ಕೂಡಾ ಎಲ್ಲರಿಗೂ ಒಂದೇ ಆಗಿರುವುದಿಲ್ಲ. ಅಂದರೆ ಪತ್ರಿಕೆ ತನ್ನ ಮಾಧ್ಯಮವಾಗಿರುವ ಭಾಷೆಯ ಸಾಮಗ್ರಿಗಳನ್ನು ಸುಮ್ಮನೆ ಹರಡಿರುತ್ತದೆ. ಅದೊಂದು ಅಂಗಡಿ ಇದ್ದಂತೆ. ಬೇರೆ ಬೇರೆ ಗ್ರಾಹಕರಿಗೆ ಬೇಕುಬೇಕಾದ ವಸ್ತುಗಳು, ಬೇಕುಬೇಕಾದೆಡೆ ದೊರಕುತ್ತವೆ. ಈ ಹೋಲಿಕೆ ಉದ್ದೇಶಪೂರ್ವಕವಾದದ್ದು. ಅಂಗಡಿಯ ಅಳವಡಿಕೆಯಲ್ಲಿ ಜನ ಹೆಚ್ಚು ಬಳಸುವ ವಸ್ತುಗಳು ಸುಲಭವಾಗಿ ಕಣ್ಣಿಗೆ ಬೀಳುವಂತೆ ಕೈಗೆ ಸಿಗುವಂತೆ ಇರಿಸಲಾಗುತ್ತದೆ. ಯಾರೋ ಕೆಲವರು ಯಾವಾಗಲೋ ಕೇಳುವ ವಸ್ತುಗಳು ಸುಲಭವಾಗಿ ಸಿಗುವಂತಿರುವುದಿಲ್ಲ. ಪತ್ರಿಕೆಯಲ್ಲಿ ಭಾಷಾಸಾಮಗ್ರಿಯನ್ನು ಇದೇ ತತ್ವಕ್ಕೆ ಅನುಗುಣವಾಗಿ ಅಳವಡಿಸಲಾಗುತ್ತದೆ. ಉದಾ.ಗೆ ಒಂದು ವರದಿಯ ಮುಖ್ಯ ಶೀರ್ಷಿಕೆಯನ್ನು ಗಮನಿಸಿ, ಆ ಶೀರ್ಷಿಕೆಯ ಅಕ್ಷರಗಳ ಗಾತ್ರ ಕೂಡ ಸಾಮಾನ್ಯ ಅಕ್ಷರಗಳಿಗಿಂತ ದೊಡ್ಡದಾಗಿದ್ದು ಕಣ್ಣಿಗೆ ಬೀಳುವಂತಿರುತ್ತದೆ. ಭಾಷಿಕವಾಗಿ ಅದರ ವಿನ್ಯಾಸ ಕೂಡಾ ಬೇರೆ ರೀತಿಯದ್ದು. ವಿಷಯ ಗ್ರಹಿಕೆಗೆ ಹೆಚ್ಚು ಅನುಕೂಲವಾಗುವ ಹಾಗೆ ಅದನ್ನು ರೂಪಿಸಲಾಗುತ್ತದೆ. ಅಂದರೆ ಪತ್ರಿಕೆಯ ಭಾಷೆ ನಾವು ಸಾಮಾನ್ಯವಾಗಿ ಗ್ರಹಿಸುವಂತೆ ಕೇವಲ ಮಾಹಿತಿ ಪ್ರಧಾನವಾಗಿ ಇರುವುದಿಲ್ಲ. ಓದುವವರ ಆಸಕ್ತಿ, ಬಿಡುವು, ಗ್ರಹಿಕೆಯ ಸಾಮರ್ಥ್ಯ ಇವುಗಳನ್ನವಲಂಬಿಸಿ, ತನ್ನ ಭಾಷೆಯ ಸ್ವರೂಪದಲ್ಲಿ ತನ್ನದೇ ಆದ ಹೊಸ ವಿನ್ಯಾಸವನ್ನು ನಿರ್ಮಿಸಿಕೊಳ್ಳುತ್ತದೆ. ಕನ್ನಡ ಪತ್ರಿಕೆಗಳು ಕಳೆದ ಐವತ್ತು ವರ್ಷಗಳಲ್ಲಿ ಈ ನಿಟ್ಟಿನಲ್ಲಿ ಅಗಾಧ ಪ್ರಮಾಣದ ಪ್ರಯೋಗಗಳನ್ನು ಮಾಡಿವೆ.

ಸಾಮಾನ್ಯವಾಗಿ ಪತ್ರಿಕೆಯ ಭಾಷಾಸ್ವರೂಪವನ್ನು ವಿವರಣಾತ್ಮಕ, ನಾಟಕೀಯ ಮತ್ತು ಚಿಂತನಾತ್ಮಕ ಎಂದು ವಿಭಜಿಸಲಾಗುತ್ತದೆ. ಪಾರಂಪರಿಕ ಚಿಂತನೆಯಂತೆ ಈ ಮೂರು ಬಗೆಗಳು ಚರಿತ್ರೆ, ಸಾಹಿತ್ಯ ಮತ್ತು ತತ್ವಶಾಸ್ತ್ರಗಳಿಗೆ ಸಂಬಂಧಿಸಿದ ಭಾಷಾ ಪ್ರಯೋಗಗಳು. ಪತ್ರಿಕೆಗಳು ತಮ್ಮ ಒಡಲಿನಲ್ಲಿ ಇಂತಹ ಮೂರು ಶೈಲಿಗಳನ್ನು ಅಳವಡಿಸಿಕೊಳ್ಳಬೇಕಾಗುತ್ತದೆ. ಅಲ್ಲದೆ ಓದುವವರನ್ನು ಕೂಡಾ ತಮ್ಮ ಭಾಷಾನಿರ್ಮಿತಿಯಲ್ಲಿ ಪಾತ್ರಧಾರಿಗಳನ್ನಾಗಿ ಮಾಡಬೇಕಾಗುತ್ತದೆ. ಪ್ರತಿಯೊಂದು ಪತ್ರಿಕೆಯೂ ಓದುಗರ ಬರವಣಿಗೆಗಾಗಿ ಒಂದಷ್ಟು ಜಾಗವನ್ನು ಮೀಸಲಿಡುತ್ತದೆ. ಈ ಪ್ರವೃತ್ತಿ ಕನ್ನಡ ಪತ್ರಿಕೋದ್ಯಮದಲ್ಲಿ ಈಗ ಗುಣ ಮತ್ತು ಪ್ರಮಾಣದಲ್ಲಿ ತುಂಬಾ ಹೆಚ್ಚಿದೆ ಎನ್ನುವುದನ್ನು ಗಮನಿಸಬೇಕು. ಈ ಮೊದಲು ಹೇಳಿದಂತೆ ವಿವರ, ನಾಟಕೀಯತೆ

ಮತ್ತು ಚಿಂತನಾಶೀಲತೆಗಳನ್ನು ಪತ್ರಿಕೆಯು ಮಂಡಿಸುವಾಗ ಅದರಲ್ಲಿ ಸೂಕ್ತ ರೀತಿಯ ಭಾಷಾಬಳಕೆಯನ್ನು, ಶೈಲಿಯನ್ನು ರೂಪಿಸಿಕೊಳ್ಳಬೇಕಾಗುತ್ತದೆ. ಏಕಮುಖಿಯಾದ ಆದಿ, ಅಂತ್ಯ ಮಾದರಿಯ ಬೆಳವಣಿಗೆಗಳಿರುವ ನಿರೂಪಣೆಗಳಿಗೆ ಹೋಲಿಸಿದರೆ ಪತ್ರಿಕೆಯ ಭಾಷಾ ರಚನೆಗೆ ಇಂಥಾ ಆದಿ, ಅಂತ್ಯ ಮಾದರಿಯ ಬೆಳವಣಿಗೆಗಳು ಇರುವುದಿಲ್ಲ.

ಕಳೆದ ಒಂದು ದಶಕದಲ್ಲಿ ಕನ್ನಡ ಪತ್ರಿಕೆಗಳ ಭಾಷೆ ಮತ್ತೊಂದು ಹೊಸ ಸವಾಲನ್ನು ಎದುರಿಸುತ್ತಿದೆ. ಈ ಮೊದಲು ಓದುಗರು ಪತ್ರಿಕೆಗಳನ್ನು ಸುದ್ದಿಗಳಿಗಾಗಿ ಆಶ್ರಯಿಸಿದ್ದರು. ಆದರೆ ಈಗ ಟಿವಿಮಾಧ್ಯಮದ ಬೆಳವಣಿಗೆಯಿಂದಾಗಿ ಓದುಗರಿಗೆ ಪತ್ರಿಕೆಯ ಸುದ್ದಿ ಹೊಸದೆಂದು ಅನ್ನಿಸುವುದಿಲ್ಲ. ಅಥವಾ ಆ ಸುದ್ದಿಗಾಗಿ ಪತ್ರಿಕೆಗಳನ್ನು ಅವಲಂಬಿಸಬೇಕಾಗಿಲ್ಲ. ಹೀಗಿರುವಾಗ ಪತ್ರಿಕೆಗಳು ತಮ್ಮ ಅಸ್ತಿತ್ವವನ್ನು ಕಾಯ್ದುಕೊಳ್ಳುವುದು ಹೇಗೆ? ಹಾಗೆಂದು ಪತ್ರಿಕೆಗಳ ಓದುವವರ ಸಂಖ್ಯೆ ಕೂಡಾ ಇಳಿಕೆಯಾಗಿಲ್ಲ. ಅಂದರೆ ಜನರು ಟಿ.ವಿಯನ್ನೂ ನೋಡುತ್ತಿದ್ದಾರೆ; ಪತ್ರಿಕೆಗಳನ್ನೂ ಓದುತ್ತಿದ್ದಾರೆ. ಇವೆರಡೂ ಕೆಲಸಗಳಿಗೆ ಬೇಕಾದಷ್ಟು ಸಮಯ ಅವರಲ್ಲಿದೆ ಎಂದು ಹೇಳಬೇಕೆ? ಅಥವಾ ಪತ್ರಿಕೆಗಳನ್ನು ಓದುವವರೇ ಬೇರೆ; ಟಿವಿಗಳನ್ನು ನೋಡುವವರೇ ಬೇರೆ ಎಂದು ತೀರ್ಮಾನಿಸಬೇಕೇ? ಎರಡನೆಯದು ಕೊಂಚ ನಿಜವೂ ಇರಬಹುದು. ಆದರೆ ಪತ್ರಿಕೆಗಳು ಓದುಗರ ಬದಲಾದ ಸನ್ನಿವೇಶದಿಂದ ಭಾಷೆಯ ಮಟ್ಟಿಗೆ ಅಗಾಧ ವ್ಯತ್ಯಾಸಗಳನ್ನು ಮಾಡಿಕೊಳ್ಳಬೇಕಾಗಿ ಬಂದಿರುವುದು ಕೂಡಾ ಅಷ್ಟೇ ನಿಜ. ಸುದ್ದಿಯ ವಿವರಣೆಗಿಂತ ಅದನ್ನು ಮಂಡಿಸುವ ರೀತಿಯಲ್ಲಿ ಹೆಚ್ಚಿನ ಬದಲಾವಣೆ ಮಾಡಿಕೊಳ್ಳಬೇಕಾಗಿದೆ. ಕೆಲವರು ಈ ಸಮಸ್ಯೆಯನ್ನು ಬೇರೊಂದು ರೀತಿಯಲ್ಲಿ ವಿವರಿಸುವುದುಂಟು. ಟಿ.ವಿ ಕ್ಲುಪ್ತ ಕಾಲದಲ್ಲಿ ವರದಿಗಳನ್ನು ನೀಡುತ್ತದೆ. ಆದರೆ ಅದನ್ನು ವಿಶ್ಲೇಷಿಸುವ ಅವಕಾಶ ಪತ್ರಿಕೆಗಳಿಗೆ ಹೆಚ್ಚಿದೆ. ಅಂದರೆ ಅದು ತನ್ನ ಭಾಷೆಯ ವರ್ಣನಾತ್ಮಕ, ನಾಟಕೀಯ ನೆಲೆಗಳಿಗಿಂತ ಚಿಂತನಶೀಲ ನೆಲೆಗೆ ಹೆಚ್ಚು ಒತ್ತನ್ನು ನೀಡಬೇಕಾಗುತ್ತದೆ. ಈ ವ್ಯಾಖ್ಯಾನವನ್ನು ಸಂಪೂರ್ಣವಾಗಿ ತಳ್ಳಿ ಹಾಕಲು ಬರುವುದಿಲ್ಲ. ಕನ್ನಡ ಪತ್ರಿಕೆಗಳು ಈ ಹೊಸ ಸವಾಲನ್ನು ಎದುರಿಸಲು ಸಿದ್ಧತೆ ಮಾಡಿಕೊಂಡಂತೆ ತೋರುವುದಿಲ್ಲ. ನಾಟಕೀಯತೆಯನ್ನು ಬಿಟ್ಟುಕೊಡಲು ಸಿದ್ಧವಿಲ್ಲದೆ ಅದನ್ನು ಸುದ್ದಿಯ ಮಂಡನೆಯ ವಿಧಾನಕ್ಕಿಂತ ಭಿನ್ನವಾಗಿ ಮಂಡಿಸಲು,ಅದರ ಭಾಷಿಕ ಅಕಾರಗಳಲ್ಲಿ ಹೊಸ ತಂತ್ರಗಾರಿಕೆಯನ್ನು ಅಳವಡಿಸುವ ಜಾಣ್ಮೆಯನ್ನು ಪತ್ರಿಕೆಗಳು ತೋರಿಸುತ್ತಿವೆ. ತಮ್ಮೆದುರು ಇದ್ದ ಸವಾಲನ್ನು ನಿವಾರಿಸಿಕೊಳ್ಳಲು ಇಂಥದೊಂದು ಪ್ರಯತ್ನಕ್ಕೆ ಕೈ ಹಾಕಿವೆ.

ಪತ್ರಿಕೆಗಳು ಭಾಷೆಯ ನೆಲೆಯಲ್ಲಿ ಪ್ರಯೋಗ ಮಾಡಲು ಆರಂಭಿಸಿದ್ದು ಬಹು ಹಿಂದಿನಿಂದಲೇ. ಅಗತ್ಯವಾದ ಪದಕೋಶವೊಂದನ್ನು ರೂಪಿಸಿಕೊಳ್ಳಲು ಈ ಪ್ರಯತ್ನಗಳು ಉದ್ದೇಶಿತವಾಗಿದ್ದವು. ಅದಕ್ಕಾಗಿ ಆ ಪತ್ರಿಕೆಗಳು ಹೊಸ ಪದಗಳನ್ನು ರಚಿಸಿಕೊಂಡು ಬಳಕೆಗೆ ತಂದವು. ಹೀಗೆ ಮಾಡುವಾಗ ಲಭ್ಯವಿದ್ದ ಸಂಸ್ಕೃತ ಪದಗಳನ್ನು ಅಗತ್ಯ ನಿಯಮಗಳಿಗೆ ಅನುಸಾರವಾಗಿ ಸಿದ್ಧಮಾಡಿಕೊಂಡಂತೆ ಕಾಣುತ್ತದೆ. ಹೀಗೆ ಚಲಾವಣೆಗೆ

ಬಂದ ಪದಗಳು ಮೇಲ್ನೋಟಕ್ಕೆ ಸಂಸ್ಕೃತ ಪದಗಳಿಂದ ನಿರ್ಮಾಣಗೊಂಡಂತೆ ಕಂಡರೂ ಅವುಗಳ ಅರ್ಥದ ದೃಷ್ಟಿಯಿಂದ ಕನ್ನಡದ ಸಾಧ್ಯತೆಗಳನ್ನು ವಿಶೇಷವಾಗಿ ಅಳವಡಿಸಿಕೊಂಡಿದ್ದವು. ಆದರೆ ಕಳೆದ ಎರಡು ದಶಕಗಳಿಂದ ಈ ಬಗೆಯ ಪದನಿರ್ಮಾಣ ಬಹುಮಟ್ಟಿಗೆ ನಿಂತುಹೋಗಿದೆ. ಅದರ ಬದಲು ಸಾರೂಪ್ಯ ಮಾದರಿಯಲ್ಲಿ ಹೊಸ ಪದಗಳನ್ನು ನಿರ್ಮಿಸುತ್ತಿದ್ದಾರೆ. ಇಂತಹ ಪದಗಳಲ್ಲಿ ಪದಗಳ ಒಳರಚನೆಯ ಬಗೆಗೆ ಯಾವ ಆಸಕ್ತಿಯೂ ಇರುವುದಿಲ್ಲ.

ದಶಕಗಳು ಕಳೆದರೂ ಕನ್ನಡದ ದೃಶ್ಯಮಾಧ್ಯಮಗಳ ವಾರ್ತೆಗಳ ಭಾಷೆಯಲ್ಲಿ ನಾವು ಮೇಲೆ ಹೇಳಿದ ಲಕ್ಷಣ ಇನ್ನೂ ಮೈಗೂಡಿಲ್ಲ. ಕಣ್ಣೋದಿಗೆ ಅನುಕೂಲವಾಗುವಂತೆ ಬರೆದಿರುವುದನ್ನೇ ವಾಚಕರು ಕಿವಿಯೋದಿಗೆ ಪರಿವರ್ತಿಸುತ್ತಾರೆ. ಅಲ್ಲಿ ನಾವು ಕೇಳುವ ವಾರ್ತೆ ಯಾಕೋ **ಓದಿದಂತೆ** ಭಾಸವಾಗುತ್ತದೆಯೇ ಹೊರತು ನಮಗೆ **ಹೇಳಿದಂತೆ** ಭಾಸವಾಗುವುದಿಲ್ಲ. ಇಂತಹದೊಂದು ಭಾಷಿಕ ಕೊರತೆ ಇದೆ ಎಂಬುದು ಆ ಮಾಧ್ಯಮಕ್ಕೆ ತಿಳಿದಂತೆ ತೋರುತ್ತಿಲ್ಲ. ವಾರ್ತಾವಾಚಕರು ಒಂದು ಬಗೆಯ ನಿರ್ಮಮತೆಯನ್ನು ಮತ್ತು ವಸ್ತುದೂರವನ್ನು ಕಾಯ್ದುಕೊಳ್ಳಲು ಈ ಮಾರ್ಗವನ್ನು ಅನುಸರಿಸುತ್ತಿರಲೂಬಹುದು. ಇದರಿಂದ ವಾರ್ತೆಗಳಿಗೆ ಒಂದು ದೃಷ್ಟಿಕೋನ ಒದಗದಂತೆ ಮಾಡುತ್ತಿರಬಹುದು. ಆದರೆ ಬದಲಾಗುತ್ತಿರುವ ಕಾಲಮಾನಗಳಲ್ಲಿ ಇಂತಹ ವ್ಯಾಖ್ಯಾನಗಳೇ ನಿರುಪಯುಕ್ತವಾಗುತ್ತಿವೆ. ಅದರಲ್ಲೂ ಹೆಚ್ಚು ತೀವ್ರತೆಯ ಮಾಧ್ಯಮವಾದ ಟೆಲಿವಿಜನ್ ಎದುರು ಇಂಥಾ ತರ್ಕಗಳನ್ನು ನಿರೂಪಿಸುವುದು ವ್ಯರ್ಥ.

ದೃಶ್ಯಮಾಧ್ಯಮವಾಗಿ ಮಾತನ್ನು ಬಳಸುತ್ತಿರುವ ಟೆಲಿವಿಜನ್ ಮಟ್ಟಿಗೆ ಕನ್ನಡ ಇನ್ನೂ ವೃತ್ತಿಪರತೆಯ ಕೊರತೆಯನ್ನು ಎದುರಿಸುತ್ತಿದೆ. ಮುಖ್ಯವಾಗಿ ದೃಶ್ಯದ ಲಯ ಮತ್ತು ಮಾತಿನ ಲಯಗಳ ನಡುವೆ ಒಂದು ಅವಿರತ ಸಂಬಂಧವನ್ನು ನಿರ್ಮಿಸಲು ಸಾಧ್ಯವಾಗುತ್ತಿಲ್ಲ. ಇದಕ್ಕೆ ಆ ಸಮಸ್ಯೆಯ ಅರಿವಿಲ್ಲದಿರುವುದೇ ಮುಖ್ಯ ಕಾರಣ. ದೃಶ್ಯಗಳ ತಾಂತ್ರಿಕ ಪರಿಣತಿ, ಅವುಗಳ ಜೋಡಣೆಯ ಲಯ ಇವುಗಳೊಡನೆ ಅಲ್ಲಿ ಬಳಕೆಯಾಗುವ ಭಾಷೆ ಕೂಡ ಹೊಂದಿಕೆಯಾಗಬೇಕು. ಮಾತು ಅಲ್ಲಿ ಕೇವಲ ಸೇತುವೆಯಲ್ಲ. ಅಲ್ಲದೇ ಮಾತಿನ ಅಪವ್ಯಯ ಕೂಡಾ ಆಗಬಾರದು. ಈ ಅಂಶ ಕನ್ನಡದ ಟೆಲಿವಿಜನ್ ವಾಹಿನಿಗಳಲ್ಲಿ ಭಾಷೆಯ ತಜ್ಞರಾಗಿ ಕೆಲಸಮಾಡುತ್ತಿರುವವರ ಗಮನಕ್ಕೆ ಬಂದಂತೆ ತೋರುತ್ತಿಲ್ಲ.

ಮತ್ತೊಂದು ಸಮೂಹ ಮಾಧ್ಯಮದ ಚರ್ಚೆ ಇಲ್ಲಿ ಅಗತ್ಯ. ಇದು ಚಲನಚಿತ್ರ. ಏಕೀಕರಣದ ಮೊದಲಿಗೂ ಕನ್ನಡ ಚಲನಚಿತ್ರಗಳು ಸಿದ್ಧಗೊಳ್ಳುತ್ತಿದ್ದವು. ಆ ಹೊತ್ತಿಗೆ ಸಿದ್ಧಗೊಂಡ ಚಲನಚಿತ್ರಗಳ ಸಂಖ್ಯೆ, ಲಭ್ಯ ಮಾಹಿತಿಯ ಪ್ರಕಾರ ಐವತ್ತನ್ನು ದಾಟುವುದಿಲ್ಲ. ಈ ಐವತ್ತು ವರ್ಷಗಳಲ್ಲಿ ಅವುಗಳ ಸಂಖ್ಯೆ ಎರಡು ಸಾವಿರವನ್ನು ದಾಟಿವೆ. ಅಂದರೆ ವರ್ಷಕ್ಕೆ ಸರಾಸರಿ ನಲವತ್ತು ಚಲನಚಿತ್ರಗಳು. ಅದರಿಂದ ಭಾಷೆಯ ಬಳಕೆಯ ನಿಟ್ಟಿನಲ್ಲಿ ಕನ್ನಡ ಚಲನಚಿತ್ರಗಳಿಗೆ ಒಂದು ಮಹತ್ವದ ಸ್ಥಾನವಿದೆ.

ಚಲನಚಿತ್ರಗಳಲ್ಲಿ ಭಾಷೆ ಮುಖ್ಯವಾಗಿ ಸಂಭಾಷಣೆ ಮತ್ತು ಹಾಡುಗಳ ರೂಪಗಳಲ್ಲಿ ಬಳಕೆಯಾಗುತ್ತದೆ. ಕೆಲವು ಪ್ರಸಂಗಗಳಲ್ಲಿ ಹಿನ್ನೆಲೆಯ ನಿರೂಪಣೆಯ ಭಾಷೆಯೂ ಇರಬಹುದು. ಆದರೆ ಅದು ನಿಯಮವಲ್ಲ. ಉಳಿದೆರಡು ಬಹುಮಟ್ಟಿಗೆ ಖಚಿತ. ಹಾಡುಗಳಿಲ್ಲದಿರುವುದು ಕೂಡಾ ಕೇವಲ ಆಕಸ್ಮಿಕ. ಈ ಎರಡು ನೆಲೆಗಳಲ್ಲಿ ಕನ್ನಡ ಭಾಷೆ ಹೇಗೆ ಬಳಕೆಯಾಗುತ್ತಿದೆ ಎಂಬುದನ್ನು ಪರಿಶೀಲಿಸಬೇಕು.

ಮೊದಲ ಕೆಲವು ದಶಕಗಳಲ್ಲಿ ಚಲನಚಿತ್ರಗಳ ಸಂಭಾಷಣೆಯ ಭಾಷೆ ಒಂದು ಪ್ರಮಾಣಿತ ರೂಪವನ್ನು ಮಾತ್ರ ಬಳಸುತ್ತಿತ್ತು. ಈ ರೂಪ ನಾವು ಹಿಂದೊಮ್ಮೆ ಚರ್ಚಿಸಿದಂತೆ ವೃತ್ತಿರಂಗಭೂಮಿಯ ಭಾಷೆಯ ಮುಂದುವರಿಕೆಯಾಗಿತ್ತು. ಅದು ಕನ್ನಡದ ಆಡುನುಡಿಗೆ ಹತ್ತಿರವಾಗಿ ಇರಲಿಲ್ಲ. ಆದರೆ ಹಾಗಿಲ್ಲದಿರುವುದು ಕೊರತೆಯೆಂದು ಭಾಸವಾಗುತ್ತಿರಲಿಲ್ಲ. ಮೊದಮೊದಲು ಈ ಚಿತ್ರಗಳು ಪೌರಾಣಿಕ, ಐತಿಹಾಸಿಕ ಮತ್ತು ಜಾನಪದದ ವಸ್ತುಗಳನ್ನು ತೆಗೆದುಕೊಳ್ಳುತ್ತಿದ್ದವು. ಆದ್ದರಿಂದ ಅವುಗಳ ಭಾಷೆಗೆ ಒಂದು ಬಗೆಯ ಕಾಲಾತೀತ ಸ್ಥಿತಿ ಸರಿ ಎನ್ನಿಸುವಂತಿತ್ತು. ಸಾಮಾಜಿಕ ವಸ್ತುಗಳು ಚಿತ್ರಗಳಿಗೆ ಆಯ್ಕೆಯಾದಾಗಲೂ ಭಾಷೆ ಮತ್ತು ಶೈಲಿ ಕೃತಕವಾಗಿಯೇ ಉಳಿದಿದ್ದವು. ಚಿತ್ರಗಳ ಭ್ರಾಮಕತೆಯನ್ನು ಕಾಯ್ದುಕೊಳ್ಳಲು ಈ ಭಾಷೆ ಅನುಕೂಲಕರವಾಗಿತ್ತು. ಮೊದಲ ಹಂತದ ಚಿತ್ರಗಳು ಕಪ್ಪು ಬಿಳುಪು. ಅಂದರೆ ಅವುಗಳ ದೃಶ್ಯರೂಪಗಳೇ ವಾಸ್ತವತೆಯನ್ನು ಶೈಲೀಕೃತಗೊಳಿಸಿದವು. ಆದ್ದರಿಂದ ಭಾಷೆ ಕೂಡ ಅದಕ್ಕೆ ಪೂರಕವಾದುದು. ಆದರೆ ಎಲ್ಲಿ ಅನೌಚಿತ್ಯ ಉಂಟಾಗಿ ನಗೆ ಉಕ್ಕಬೇಕೋ ಅಂತಹ ಕಡೆ ಮಾತ್ರ ಭಾಷೆ ಬೇರೆಯಾಗುತ್ತಿತ್ತು. ಹಳೆಯ ಚಿತ್ರಗಳ ಹಾಸ್ಯದೃಶ್ಯಗಳನ್ನು ನೋಡಿದರೆ ಈ ಅಂಶ ಸ್ಪಷ್ಟವಾಗುತ್ತದೆ.

ಚಿತ್ರದ ವಸ್ತು ಏನೇ ಇದ್ದರೂ ಅದು ರೂಪಿಸುತ್ತಿದ್ದ ಮೌಲ್ಯಜಗತ್ತಿನಲ್ಲಿ ಪಾತ್ರಗಳು ಒಂದು ಪರೀಕ್ಷೆಗೆ ಒಳಗಾಗಿ ಪರಿಷ್ಕಾರಗೊಳ್ಳುತ್ತಿದ್ದವು. ಈ ಕಾರಣದಿಂದ ಕಥಾವಸ್ತುವಿನ ಮೌಲ್ಯಪ್ರತಿಪಾದಕ ನಾಯಕ ವಾಸ್ತವವಾಗಿ ಜನರಿಗೆ ಬೆನ್ನು ಮಾಡಿದವನು. ಹಾಗಾಗಿ ಆ ಪಾತ್ರಗಳ ಭಾಷೆ ಕೂಡಾ ಜನರ ಭಾಷೆಗಿಂತ ಬೇರೆಯಾಗುವುದು ಅಗತ್ಯವಾಗುತ್ತದೆ. ಆದರೆ ಎಂಟನೇ ದಶಕದ ಅನಂತರದಲ್ಲಿ ಕನ್ನಡ ಚಲನಚಿತ್ರಗಳ ಲೋಕ ಸಂಪೂರ್ಣಬದಲಾಗುತ್ತಿದೆ. ತಾಂತ್ರಿಕ ಪರಿಣತಿ ಒಂದೆಡೆ ಆದರೆ, ಚಿತ್ರಗಳ ಒಳಗಿನ ಕಥಾಲೋಕ ಕೂಡಾ ಸಂಪೂರ್ಣವಾಗಿ ಭಿನ್ನವಾಗುತ್ತಿದೆ. ತಾಂತ್ರಿಕ ಪರಿಣತಿಯು ಎಲ್ಲ ಬಗೆಯ ವೈಭವಗಳನ್ನು ಅತಿಭ್ರಾಮಕ ಎನ್ನಿಸುವ ರೀತಿಯಲ್ಲಿ ನಿರೂಪಿಸುತ್ತಿತ್ತು. ಆದರೆ ಈ ಸೆಳೆವನ್ನು ಹತ್ತಿಕ್ಕಲು ಪಾತ್ರಗಳ ಜಗತ್ತಿನ ಸ್ವರೂಪವನ್ನು ಪರಿವರ್ತಿಸಲಾಯಿತು. ಈ ಅಂಶ ಅವರ ಸಾಮಾಜಿಕ ಹಿನ್ನೆಲೆ, ವಸ್ತ್ರವಿನ್ಯಾಸ ಇವುಗಳಲ್ಲಿ ಬಿಂಬಿತವಾದಂತೆ ಅವರ ಭಾಷೆಯಲ್ಲೂ ಕಾಣಿಸಿಕೊಳ್ಳತೊಡಗಿತು. ಶೈಲೀಕೃತ ಭಾಷಾಬಳಕೆ ಹಿಂದೆ ಸರಿದು ದಿನದ ಮಾತಿನ ರೂಪಗಳು ಬಳಕೆಯಾಗತೊಡಗಿತು. ಇದು ತಂದ ಬದಲಾವಣೆ ಏನೆಂಬುದನ್ನು ಕೊಂಚ ವಿವರವಾಗಿ ಪರಿಶೀಲಿಸಬೇಕು. ಈ ಕಥಾ ನಾಯಕರುಗಳು ಆದರ್ಶದ ಜಗತ್ತಿನಿಂದ ಬಂದವರಲ್ಲ. ಆ ಜಗತ್ತಿನೊಡನೆ ಅವರು ಆಗಾಗ

ಮುಖಾಮುಖಿಯಾಗುತ್ತಾರೆ. ಆದರೆ ಅವರು ಅದರ ಹೊರಗಿನವರೇ. ಸಾಮಾಜಿಕ ನೆಲೆಯ ವಿವಿಧ ಸ್ತರಗಳನ್ನು ಮರುಗಳಿಸುವ ಈ ಪ್ರಯತ್ನ ಚಿತ್ರಗಳಲ್ಲಿ ಒಂದು ವಿಚಿತ್ರ ಬಗೆಯ ಭಾಷಾಬಳಕೆಗೆ ಅನುವು ಮಾಡಿಕೊಟ್ಟಿದೆ. ಮಾತಿನ ವರಸೆಗಳು ಸಂದರ್ಭದ ಅಗತ್ಯಗಳನ್ನು ಅನುಲಕ್ಷಿಸಿ ಹುಟ್ಟುತ್ತಿದ್ದವು. ಆದರೆ ಅದರಾಚೆಗೆ ಭಾಷೆಗಿರುವ ಅವಕಾಶಗಳನ್ನು ಚಲನಚಿತ್ರಗಳು ಈಗ ಸಂಪೂರ್ಣವಾಗಿ ಕೈಬಿಟ್ಟಿವೆ. ಮೇಲುನೋಟಕ್ಕೆ ಕನ್ನಡದ ಆಡುನುಡಿಯು, ಪ್ರಾದೇಶಿಕ ಪ್ರಭೇದಗಳ, ಮತ್ತು ಸಾಮಾಜಿಕ ಪ್ರಭೇದಗಳ ಮರುಸ್ಥಾಪನೆಯಾಗಿದೆ ಎಂದು ತೋರುತ್ತದೆ. ಆದರೆ ಇದು ಈ ಮಾಧ್ಯಮದ ಒಟ್ಟು ತಾತ್ವಿಕತೆಯೊಡನೆ ಹೇಗೆ ಹೊಂದಿಕೊಳ್ಳುತ್ತದೆ ಎಂಬುದು ಸ್ಪಷ್ಟವಾಗಿಲ್ಲ. ಈ ಮಾತನ್ನು ಚಲನಚಿತ್ರಗಳ ಜಾಗತಿಕ ಇಲ್ಲವೇ ಭಾರತೀಯ ನೆಲೆಯಲ್ಲಿ ಇರಿಸಿ ನೋಡಿ ಹೇಳುತ್ತಿಲ್ಲ. ಏಕೆಂದರೆ ಕನ್ನಡ ಸಂಸ್ಕೃತಿಯ ವಿಶಿಷ್ಟ ಅಗತ್ಯಗಳಿಗನುಗುಣವಾಗಿ ಕನ್ನಡ ಚಲನಚಿತ್ರಗಳು ನೆಲೆಗೊಂಡಿವೆ. ಆದ್ದರಿಂದ ಅದರ ಭಾಷಿಕನೆಲೆಯೂ ಕೂಡಾ ಆ ನಿಟ್ಟಿನಲ್ಲೇ ಪರಿಶೀಲನೆಗೆ ಒಳಗಾಗಬೇಕು.

ಚಿತ್ರಗಳಲ್ಲಿ ಭಾಷೆ ಬಳಕೆಯಾಗುವ ಇನ್ನೊಂದು ನೆಲೆಯೆಂದರೆ ಹಾಡುಗಳು. ನಮಗೆ ತಿಳಿದಿರುವಂತೆ ಇದು ಭಾರತೀಯ ಚಲನಚಿತ್ರಗಳ ವೈಶಿಷ್ಟ್ಯ ಮತ್ತು ನಮ್ಮ ರಂಗಭೂಮಿಯ ಮುಂದುವರಿಕೆ. ಅವಾಸ್ತವತೆಯ ಕಾರಣವನ್ನು ಮುಂದೂಡಿ ಹಾಡುಗಳನ್ನು ನಿರಾಕರಿಸುವವರು ಇದ್ದಾರೆ. ಆದರೆ ನಮ್ಮ ಚಿತ್ರಗಳ ಸಾಂಸ್ಕೃತಿಕ ವ್ಯಾಕರಣವನ್ನು ಅರಿತರೆ ಆ ಹಾಡುಗಳಿಗೆ ಇರುವ ಮಹತ್ವ ಗೊತ್ತಾಗುತ್ತದೆ. ನಾವು ಈ ಹಿಂದೆ ಹೇಳಿದ ಅಂಕಿ ಸಂಖ್ಯೆಗಳನ್ನು ಗಮನಿಸಿದರೆ ಕನ್ನಡ ಚಲನಚಿತ್ರಗಳಲ್ಲಿ ಸರಿಸುಮಾರು ಹದಿನೈದು ಸಾವಿರ ಹಾಡುಗಳು ರಚನೆಯಾಗಿರಬೇಕು. ಕನ್ನಡದಲ್ಲಿ ಚಿತ್ರಗಳ ಆಚೆಗೆ ರಚನೆಯಾಗಿರುವ ಗೀತೆಗಳ ಮತ್ತು ಕವಿತೆಗಳ ಸಂಖ್ಯೆಗೆ ಹೋಲಿಸಿದರೆ ಇದು ಸಾಕಷ್ಟು ದೊಡ್ಡದೇ. ಆದರೆ ಈ ನಿಟ್ಟಿನಲ್ಲಿ ಭಾಷೆಯ ನೆಲೆಯಿಂದ ವಿಶ್ಲೇಷಣೆಗಳು ನಡೆದಿಲ್ಲ. ಹಾಡುಗಳು ಚಿತ್ರಗಳಲ್ಲಿ ಹಲವು ಕೆಲಸಗಳನ್ನು ಮಾಡುತ್ತವೆ. ಮುಖ್ಯವಾಗಿ ನಿರೂಪಣೆಯ ಲಯಗಳನ್ನು ವಿಸ್ತರಿಸಿ ವೈವಿಧ್ಯ ತರುತ್ತವೆ. ಕತೆಯನ್ನು ಸಂಗ್ರಹಿಸಲು, ಸಂಪರ್ಕ ನೀಡಲು, ಪಾತ್ರಗಳ ಮನಸ್ಥಿತಿಯ ಬಗೆಗೆ ವ್ಯಾಖ್ಯಾನಿಸಲು, ಸಂದರ್ಭದ ಬಗೆಗೆ ಚಿಂತನೆ ನಡೆಸಲು, ನಾಟಕೀಯಗೊಳಿಸಲು ಹೀಗೆ ಹಲವು ಹತ್ತು ಉದ್ದೇಶಗಳು ಈ ಹಾಡುಗಳಿಗಿವೆ. ಮನುಷ್ಯರ ಪ್ರಾಚೀನ ಕಲೆಗಳು ತ್ರಿವಳಿಗಳಾಗಿದ್ದವು. ಅಲ್ಲಿ ಹಾಡು, ನಿರೂಪಣೆ ಮತ್ತು ಕುಣಿತಗಳು ಒಟ್ಟಾಗಿ ಇರುತ್ತಿದ್ದವು. ಈಗಲೂ ಉಳಿದಿರುವ ಎಷ್ಟೋ ಜನಪದ ಕಲೆಗಳಲ್ಲಿ ಈ ಅಂಶಗಳು ಬೆರೆತಿವೆ. ಈ ಮೂರೂ ಪರಸ್ಪರ ಪೂರಕ ಕೆಲಸವನ್ನು ಮಾಡುತ್ತವೆ. ಅವುಗಳ ಲಯಗಳಲ್ಲಿ ಈ ಪೂರಕತೆ ಎದ್ದು ಕಾಣುತ್ತದೆ. ಚಿತ್ರಗಳ ಹಾಡುಗಳಲ್ಲೂ ಈ ಮೂರು ಅಂಶಗಳು ಬೇರೆ ಬೇರೆ ಪ್ರಮಾಣದಲ್ಲಿ ಬೆರೆತಿರುತ್ತವೆ. ಮೊದಮೊದಲ ದಶಕಗಳ ಚಿತ್ರಗಳಲ್ಲೂ, ಹಾಡುಗಳ ಉದ್ದೇಶ ಏನೇ ಇರಲಿ, ಅವುಗಳ ಭಾಷೆ ಸಂಭಾಷಣೆಯ ಭಾಷೆಯಂತೆ ಶೈಲೀಕೃತಗೊಂಡಿರುತ್ತಿತ್ತು. ಎಷ್ಟೋ ವೇಳೆ ಹಳೆಗನ್ನಡದ ನಡುಗನ್ನಡದ ರೂಪಗಳನ್ನು ಬಳಸಲು ಹಿಂಜರಿಯುತ್ತಿರಲಿಲ್ಲ. ಬಳಸುವ ಪದಗಳು ಅಮೂರ್ತ ನೆಲೆಯ ರಚನೆಗಳಾಗಿದ್ದರೂ ಹಿಂಜರಿಯುತ್ತಿರಲಿಲ್ಲ. ಲಯ

ಮತ್ತು ನಾದಗಳನ್ನು ಪ್ರಧಾನವಾಗಿಸಿಕೊಳ್ಳುತ್ತಿದ್ದರು. ಕಥಾವಸ್ತುವಿನಲ್ಲಿ ಆದ ಪಲ್ಲಟವೇ ಅನಂತರದ ಹಾಡುಗಳಲ್ಲೂ ಕಂಡುಬರುತ್ತದೆ. ಈ ಹಾಡುಗಳು ಈಗ ಸ್ವತಂತ್ರ ಘಟಕಗಳಾಗುತ್ತವೆ. ಚಿತ್ರದ ಲಯಕ್ಕೂ ಅವುಗಳಿಗೂ ನೇರ ಸಂಬಂಧ ಇರುವುದಿಲ್ಲ, ಅವುಗಳನ್ನು ಬೇಕೆಂದಾಗ ತೆಗೆಯಬಹುದು; ಇಲ್ಲವೇ ಸೇರಿಸಬಹುದು. ಮೊದಲಿನ ಹಾಡುಗಳ ಉದ್ದೇಶಕ್ಕೂ ಈಗಿನ ಹಾಡುಗಳ ಉದ್ದೇಶಕ್ಕೂ ಅಗಾಧ ವ್ಯತ್ಯಾಸವಿದೆ. ಮೊದಲ ಹಾಡುಗಳು ಹೇಗೆ ಕತೆಯ ಅಂತಸ್ಥ ಸಾಧ್ಯತೆಗಳನ್ನು ಹೊರಗಿಡಲು ನೆರವಾಗುತ್ತಿದ್ದವೋ ಆ ಹೊಣೆ ಈಗಿನ ಹಾಡುಗಳಿಗೆ ಇರಲೇ ಬೇಕೆಂದಿಲ್ಲ. ಇವು ಹೆಚ್ಚಿನ ಅಲಂಕಾರಗಳು. ಈ ಬದಲಾದ ಉದ್ದೇಶಗಳಿಂದಾಗಿ ಅವುಗಳ ಭಾಷಾಸ್ವರೂಪದಲ್ಲೂ ಅಗಾಧ ವ್ಯತ್ಯಾಸಗಳಾಗಿವೆ. ಮೊದಮೊದಲ ಹಾಡುಗಳು ರಾಚನಿಕವಾಗಿ ಬಹುಮಟ್ಟಿಗೆ ಕೀರ್ತನೆಗಳಿಗೆ ಸಮೀಪವಾಗಿವೆ, ಪಲ್ಲವಿ, ಚರಣಗಳ ವರ್ತುಲಗಳು ಅಲ್ಲಿ ಕಾಣಸಿಗುತ್ತವೆ. ಭಾಷಿಕವಾಗಿಯೂ ಒಂದು ತರ್ಕ ಬದ್ಧತೆಯನ್ನು ಈ ವರ್ತುಲಗಳಲ್ಲಿ ಕಾಯ್ದುಕೊಳ್ಳಬೇಕಾಗಿದೆ. ಆದರೆ ಈಗ ರಾಚನಿಕವಾಗಿ ಈ ಲಕ್ಷಣಗಳು ಇರುವುದಿಲ್ಲ. ಹಾಗೆ ನೋಡಿದರೆ ಭಾಷಿಕವಾಗಿ ಅವು ಸ್ವತಂತ್ರ ರಚನೆಗಳಾಗಿ ಕಾಣಿಸಿಕೊಳ್ಳಲಾರವು. ಈ ಹೊತ್ತಿನ ಚಿತ್ರಗಳ ತಾಂತ್ರಿಕ ಚೌಕಟ್ಟನ್ನು ಬಲಪಡಿಸಲು ಹಾಡಿನ ಮಾತುಗಳು ದುಡಿಯುತ್ತವೆಯೇ ಹೊರತು ಸ್ವತಂತ್ರ ಅಸ್ತಿತ್ವನ್ನು ಕಾಯ್ದುಕೊಳ್ಳುವುದಿಲ್ಲ. ಭಾಷೆಯ ದೃಷ್ಟಿಯಿಂದ ಇದು ಒಂದು ಆಘಾತಕಾರಿಯಾದ ಸಂಗತಿಯಾಗಿದೆ.

ಈ ಪರಿಸ್ಥಿತಿಯನ್ನು ಇನ್ನೂ ಒಂದು ರೀತಿಯಿಂದ ನೋಡಲು ಸಾಧ್ಯವಿದೆ. ಅದೆಂದರೆ ಈ ಚಲನಚಿತ್ರ ಮಾಧ್ಯಮಕ್ಕೂ ಭಾಷೆಗೂ ಯಾವುದೇ ಸಂಬಂಧ ಇಲ್ಲ ಎನ್ನುವ ಹಂತವನ್ನು ನಾವೀಗ ತಲುಪಿರಬಹುದು. ಈ ಮಾಧ್ಯಮದ ಉಗಮವೇ ಭಾಷೆಯನ್ನು ಬಯಸದ ಸ್ಥಿತಿಯಲ್ಲಿ ಆಗಿದೆ. ಮೂಕಿಚಿತ್ರಗಳು ಬಹುಕಾಲ ಜಾರಿಯಲ್ಲಿದ್ದವು. ಭಾಷೆಯ ಸೇರ್ಪಡೆ ಅನಂತರ ಆದದ್ದು. ಈ ಸೇರ್ಪಡೆಯ ಮಾತನ್ನು ಎಚ್ಚರದಿಂದ ಗಮನಿಸಬೇಕು. ಏಕೆಂದರೆ ಅದನ್ನು ಯಾವಾಗಬೇಕಾದರೂ ಸೇರಿಸಬಹುದು; ತೆಗೆಯಬಹುದು; ಇಲ್ಲವೇ ಬೇರೆ ಮಾಡಬಹುದು. ಇದರಿಂದ ಮಾಧ್ಯಮಕ್ಕೆ ಯಾವ ಗಣನೀಯ ಆಘಾತವೂ ಆಗುವುದಿಲ್ಲ. ಕನ್ನಡ ಚಲನಚಿತ್ರ ಗಳು ಕನ್ನಡ ಭಾಷೆಯೊಡನೆ ಹೊಂದಿರುವ ಸಂಬಂಧವು ಇದೇ ಹಂತವನ್ನು ತಲುಪಿರಬಹುದು. ಬೇರೆ ಭಾಷೆಗಳ ಸಂದರ್ಭಗಳಲ್ಲಿ ಈ ಮಾತು ಹೆಚ್ಚು ಸ್ಪಷ್ಟಗೊಂಡಿದೆ. ಚಲನಚಿತ್ರಕ್ಕೂ, ಭಾಷೆಗೂ ಇರುವ ಸಂಬಂಧ ಕೇವಲ ಆಕಸ್ಮಿಕ. ಭಾಷೆಯ ಅರ್ಥವಲಯ ಮತ್ತು ಅಂಶಿಕವಲಯಗಳು ಚಲನಚಿತ್ರದಲ್ಲಿ ಬಳಕೆಯಾಗುತ್ತವೆ. ವಾಸ್ತವವಾಗಿ ಇಡೀ ಚಿತ್ರದ ಅಂದರೆ ದೃಶ್ಯಸಂಯೋಜನೆಯ ವ್ಯವಸ್ಥೆಯೊಡನೆ ಭಾಷೆಯ ಅರ್ಥವಲಯಕ್ಕೆ ಏರ್ಪಡುವ ಸಂಬಂಧ ಈಚಿನ ದಿನಮಾನಗಳಲ್ಲಿ ಅತ್ಯಂತ ಕನಿಷ್ಠವಾಗಿದೆ. ಹೆಚ್ಚೆಂದರೆ ಹಾಸ್ಯ ಸನ್ನಿವೇಶಗಳಲ್ಲಿ ಮಾತ್ರ ಈ ಸಾಧ್ಯತೆಗಳನ್ನು ಬಳಸಿಕೊಳ್ಳಲಾಗುತ್ತದೆ. ಆಂಗಿಕದ ನೆಲೆ ತುಂಬಾ ಸೂಕ್ಷ್ಮವಾದುದು. ಕನ್ನಡ ಭಾಷೆಗೆ ಮತ್ತು ಸಂಸ್ಕೃತಿಗೆ ವಿಶಿಷ್ಟವಾದ ಆಂಗಿಕವೊಂದು ಇದೆಯೇ; ಇದ್ದರೆ ಅದನ್ನು ಚಲನಚಿತ್ರಗಳು ಹೇಗೆ ಬಳಸುತ್ತವೆ ಎನ್ನುವುದು ಆಳವಾದ ಅಧ್ಯಯನವನ್ನು ನಿರೀಕ್ಷಿಸುವ ವಸ್ತುವಾಗಿದೆ. ಕೆಲವು ಭಾಷಾ ಸಂಸ್ಕೃತಿಗಳಿಗೆ ನಿರ್ದಿಷ್ಟ

ಅಂಗಿಕಗಳಿರುತ್ತವೆ. ಉದಾ.ಗೆ ಕೆಲವು ಭಾವಗಳಿಗೂ ಆ ಸಂದರ್ಭದ ಮುಖ ಮತ್ತು ದೇಹದ ಚರ್ಯೆಗಳಿಗೂ ನಿಕಟವಾದ ಸಂಬಂಧವಿರುತ್ತದೆ. ಈ ಸಂಬಂಧದಲ್ಲಿ ಭಾಷೆಯನ್ನು ಬದಲಿಸಿದರೆ ಚರ್ಯೆಗಳು ಬದಲಾಗಬೇಕು. ಹಾಗಿಲ್ಲದಿದ್ದರೆ ಅನೌಚಿತ್ಯ ತಲೆದೋರುತ್ತದೆ. ಕನ್ನಡ ಚಲನಚಿತ್ರಗಳು ತಮ್ಮ ದೇಹಚರ್ಯೆ ಮತ್ತು ಮುಖಚರ್ಯೆಗಳಲ್ಲಿ ಹೀಗೆ ಭಾಷಾವಿಶಿಷ್ಟವಾದ ನೆಲೆಗಳನ್ನು ಒಂದು ಕಾಲದವರೆಗೆ ಬಳಸಿದಂತೆ ತೋರುತ್ತದೆ. ಆದರೆ ಈಚಿನ ದಶಕಗಳಲ್ಲಿ ಆ ನೆಲೆ ಸಂಪೂರ್ಣ ಹಿಂದೆ ಸರಿದಿದೆ. ಅದರಲ್ಲೂ ತಂತ್ರಜ್ಞಾನದ ನೆರವಿನಿಂದಾಗಿ ದೈಹಿಕಚರ್ಯೆಗಳು ದಾಖಲಾಗುವ ಬಗೆ ಈಗ ಬೇರೆ ಬೇರೆ ಕಾಲದೇಶಗಳಲ್ಲಿ ಸಂಭವಿಸುತ್ತವೆ. ಹಾಗಾಗಿ ಚಲನಚಿತ್ರಕ್ಕೂ ಭಾಷೆಗೂ ಇರುವ ಸಂಬಂಧ ಅತ್ಯಂತ ಮೇಲುಪದರದ್ದು. ಇದನ್ನು ಭಾಷಾಸೂಚಕವನ್ನಾಗಿ ಅಧ್ಯಯನ ಮಾಡಬಹುದೇ ಹೊರತು ಬೇರೇನೂ ಸಾಧ್ಯವಿಲ್ಲ.

# ಕನ್ನಡ ಪತ್ರಿಕೆಗಳ ಬರವಣಿಗೆಯ ಸಾಮಾಜಿಕ ನೆಲೆಗಳು

ಪತ್ರಿಕೆಯ ಬರವಣಿಗೆಯ ಭಾಷೆ ಹೇಗಿರಬೇಕು ಎಂದು ಕೇಳಿದರೆ, ಆ ಬರವಣಿಗೆಯನ್ನು ಓದಿದರೆ, ಓದಿದ ಕೂಡಲೇ ಎಲ್ಲರಿಗೂ ತಿಳಿಯುವಂತಿರಬೇಕು ಎಂಬ ಉತ್ತರ ಸಿಗುತ್ತದೆ. ಆದರೆ ಇದಿಷ್ಟೇ ಪತ್ರಿಕೆಯ ಬರವಣಿಗೆಯ ಚಹರೆಗಳನ್ನು ಗೊತ್ತುಮಾಡಲಾರದೆಂದು ತೋರುತ್ತದೆ. ಏಕೆಂದರೆ ಪತ್ರಿಕೆಯ ಬರವಣಿಗೆಯನ್ನು ಓದಿದರೆ, ಅದು ಎಲ್ಲರಿಗೂ ತಿಳಿಯುವಂತೆ ಇದೆಯೇ ಇಲ್ಲವೇ ಎನ್ನುವುದನ್ನು ತಿಳಿದುಕೊಳ್ಳಲು ನಮಗೆ ದಾರಿಗಳಿಲ್ಲ. ಅಲ್ಲದೆ ಯಾವುದೇ ಪತ್ರಿಕೆಯಲ್ಲಿ ಹಲವು ಬಗೆಯ ಬರವಣಿಗೆಗಳಿರುತ್ತವೆ. ಓದುಗರೂ ಕೂಡ ಎಲ್ಲ ಬಗೆಯ ಬರವಣಿಗೆಯನ್ನು ಎಲ್ಲರೂ ಓದುವುದಿಲ್ಲ. ಬೇರೆ ಬೇರೆ ಬಗೆಯ ಬರವಣಿಗೆಗಳು ಬೇರೆಬೇರೆ ಬಗೆಯ ಭಾಷೆಯ ಬಳಕೆಯನ್ನು ಬಯಸುತ್ತವೆ. ಅಲ್ಲೆಲ್ಲಾ ಓದುವವರನ್ನು ಮಾತ್ರ ಗಮನದಲ್ಲಿರಿಸಿಕೊಳ್ಳುವುದು ಆಗದ ಮಾತು. ಏಕೆಂದರೆ ಪತ್ರಿಕೆಯ ಒಟ್ಟು ರಚನೆಯ ಚೌಕಟ್ಟು ಯಾವ ಕಟ್ಟುಪಾಡುಗಳನ್ನು ಬಯಸುತ್ತದೋ, ಅವುಗಳನ್ನು ಮೀರುವುದು ಸರಿಯಾಗದು. ಈ ಕಟ್ಟುಪಾಡುಗಳು ಕಾಲದೇಶ ಬದ್ಧವಾದವು. ಎಂದರೆ ಎಲ್ಲ ಕಾಲಕ್ಕೂ ಎಲ್ಲ ಪತ್ರಿಕೆಗಳಿಗೂ ಸರಿಹೊಂದುವ ಕಟ್ಟುಪಾಡುಗಳು ಇರುವುದಿಲ್ಲ. ಹಾಗಾಗಿ ನಾವು ಕನ್ನಡ ಭಾಷೆಯ ಇಂದಿನ ಸಂದರ್ಭಕ್ಕೆ ತಕ್ಕಂತೆ ಪತ್ರಿಕೆಯ ಬರವಣಿಗೆಯ ಭಾಷೆಯನ್ನು ಕುರಿತು ಮಾತನಾಡಬೇಕಾಗುತ್ತದೆ.

ಇಂದಿನ ದಿನಗಳ ಕನ್ನಡ ಪತ್ರಿಕೆಗಳ ಬರವಣಿಗೆಯ ಭಾಷೆಯನ್ನು ಎರಡು ನೆಲೆಗಳಲ್ಲಿ ತಿಳಿದುಕೊಳ್ಳಬೇಕಾಗಿದೆ. 1. ಬೇರೆ ಬೇರೆ ಮಾಧ್ಯಮಗಳ ಬೆಳವಣಿಗೆಯಿಂದಾಗಿ ಪತ್ರಿಕೆಗಳ ಬರವಣಿಗೆಯ ಭಾಷೆಯ ಮೇಲೆ ಆಗಿರುವ ಪರಿಣಾಮಗಳು 2. ಇಂಗ್ಲಿಶ್ ಪತ್ರಿಕೆಗಳ ಭಾಷೆಯ ಜೊತೆಯಲ್ಲಿ ಕನ್ನಡ ಪತ್ರಿಕೆಗಳ ಭಾಷೆಯು ಹೊಂದಿರುವ ಸಂಬಂಧವನ್ನು ಅರಿಯುವುದು. ಎರಡನೆಯ ನೆಲೆಯ ಬಗೆಗೆ ಒಂದೆರಡು ಮಾತುಗಳನ್ನು ಮೊದಲಲ್ಲೇ ಹೇಳಬೇಕಾಗಿದೆ. ಇಂದು ಕರ್ನಾಟಕದಲ್ಲಿ ಪತ್ರಿಕೆಗಳನ್ನು ಅದರಲ್ಲೂ ದಿನಪತ್ರಿಕೆಗಳನ್ನು ಓದುವವರಲ್ಲಿ ಎರಡು ಬಗೆಯ ಜನರಿದ್ದಾರೆ. ಕೇವಲ ಕನ್ನಡ ಪತ್ರಿಕೆಗಳನ್ನು ಮಾತ್ರ ಓದುವವರು ಮತ್ತು ಕನ್ನಡ ಪತ್ರಿಕೆಗಳ ಜೊತೆಯಲ್ಲಿ ಇಂಗ್ಲಿಶ್ ಭಾಷೆಯ ಪತ್ರಿಕೆಗಳನ್ನು ಓದುವವರು. ಈ ಎರಡೂ ಗುಂಪುಗಳ ಚಹರೆಗಳು ಮತ್ತು ಅವು ನಾಡಿನಲ್ಲಿ ಹರಡಿಕೊಂಡಿರುವ ಬಗೆಯನ್ನು ಕುರಿತು ಹೀಗೇ ಎಂದು ಹೇಳಲು

ಬೇಕಾದ ಮಾಹಿತಿ ಇಲ್ಲ. ಆದರೆ ಕನ್ನಡ ಪತ್ರಿಕೆಗಳು ಕನ್ನಡ ನಾಡಿನ ವಾರ್ತೆಗಳನ್ನು ಹೊರತು ಪಡಿಸಿದರೆ ಉಳಿದಂತೆ ಬೇರೆ ಸುದ್ದಿಗಳಿಗೆ ಇಂಗ್ಲಿಶ್ ಭಾಷೆಯ ಆಕರಗಳನ್ನೇ ಅವಲಂಬಿಸುತ್ತವೆ ಎನ್ನುವುದನ್ನು ಗಮನಿಸಬೇಕು. ಇದರ ಪರಿಣಾಮಗಳನ್ನು ಮುಂದೆ ಚರ್ಚಿಸಲಾಗುತ್ತದೆ.

ಕಳೆದ ಎರಡು ದಶಕಗಳಲ್ಲಿ ಕಣ್ಣು ಕಿವಿಗಳನ್ನು ತಮ್ಮ ಹಿಡಿತಕ್ಕೆ ತೆಗೆದುಕೊಂಡಿರುವ ಮಾಧ್ಯಮಗಳ ಬೆಳವಣಿಗೆ ನಾವು ಅಂದುಕೊಂಡದ್ದಕ್ಕಿಂತ ಹೆಚ್ಚಾಗಿದೆ. ಅವುಗಳು ನೋಡುಗರಿಗೆ, ಕೇಳುಗರಿಗೆ ಯಾವ ಸಾಮಗ್ರಿಯನ್ನು ನೀಡುತ್ತಿವೆ ಎನ್ನುವುದನ್ನು ಈಗ ಬದಿಗಿಡೋಣ. ಆದರೆ ಇದರಿಂದಾಗಿ ಪತ್ರಿಕೆಗಳು ಈಗ ಸುದ್ದಿಪತ್ರಿಕೆಗಳಾಗಿ ಉಳಿಯಲಾಗದ ನೆಲೆಯನ್ನು ತಲುಪಿವೆ. ಏಕೆಂದರೆ ಸುದ್ದಿ ನಡೆಯುವಾಗಲೇ, ನಡೆಯುವಲ್ಲೇ ಹಾಜರಾಗುವ ಟೆಲಿವಿಶನ್ ಮಾಧ್ಯಮ ಈಗ ಸುದ್ದಿಯ ತಾಜಾತನವನ್ನು ತನ್ನ ಕೈಗೆ ತೆಗೆದುಕೊಂಡಿದೆ. ಪತ್ರಿಕೆಗಳು ಸುದ್ದಿಗಳನ್ನು ಮುದ್ರಿಸಿ ಕೊಡುವ ಹೊತ್ತಿಗೆ ಅವೆಲ್ಲವೂ ಕಣ್ಣು ಕಿವಿಗಳ ಮೂಲಕ ಪತ್ರಿಕೆಗಳ ಓದುಗರನ್ನು ತಲುಪಿಬಿಟ್ಟಿರುತ್ತವೆ. ಹಾಗೆಂದು ಪತ್ರಿಕೆಗಳು ಸುದ್ದಿಯನ್ನು ನೆಮ್ಮಿಕೊಳ್ಳದೆ ಇರುವಂತಿಲ್ಲ. ಈ ಹೊಸ ಸವಾಲನ್ನು ಎದುರಿಸಲು ಪತ್ರಿಕೆಗಳು ಎರಡು ದಿಕ್ಕಿನಲ್ಲಿ ಬದಲಾವಣೆಗೆ ತೊಡಗಿದಂತಿದೆ. ಒಂದು: ಈ ಹೊಸ ಮಾಧ್ಯಮಗಳು ತಲುಪಲಾರದ ಕಡೆಗಳಿಂದ ಸುದ್ದಿಗಳನ್ನು ಹುಡುಕಿ ತೆಗೆಯುವುದು. ಎರಡು: ಸುದ್ದಿಗಳನ್ನು ಮಂಡಿಸುವ ಭಾಷೆಯಲ್ಲಿ ಬದಲಾವಣೆಯನ್ನು ಮಾಡಿಕೊಳ್ಳುವುದು. ಇವುಗಳಲ್ಲಿ ಮೊದಲನೆಯದು ಈಗ ನಮ್ಮ ಚರ್ಚೆಯ ವಿಷಯವಲ್ಲ. ಎರಡನೆಯ ಬಗೆಯ ಬದಲಾವಣೆ ಭಾಷೆಯ ನೆಲೆಯಲ್ಲಿ ನಡೆದಿರುವಂತಹುದು. ಸುದ್ದಿಗಳನ್ನು 'ಕಣ್ಣಿಗೆ ಕಟ್ಟುವಂತೆ' ಬಣ್ಣಿಸುತ್ತಿದ್ದ ನೆಲೆಯಿಂದ ಪತ್ರಿಕೆಗಳು ದಾಟಿ ಬರಬೇಕಾದ ಒತ್ತಾಯಕ್ಕೆ ಸಿಲುಕಿವೆ. ಎಷ್ಟು ಕಣ್ಣಿಗೆ ಕಟ್ಟುವಂತೆ ಬಣ್ಣಿಸಿದರೂ, ಅದು ಟೆಲಿವಿಶನ್ ಮಾಧ್ಯಮದ 'ಬಿಸಿ'ಗೆ ಸಾಟಿ ಆಗಲಾರದಷ್ಟೆ. ಹಾಗಿದ್ದಲ್ಲಿ ಸುದ್ದಿಗಳನ್ನು ಕಣ್ಣಿಗೆ ಕಟ್ಟುವಂತೆ ಮಾಡುವುದಕ್ಕಿಂತ ಬಣ್ಣಿಸುವ ಭಾಷೆಯನ್ನು ಬದಲಿಸಿಕೊಳ್ಳುವ ಹಾದಿಯನ್ನು ಹಿಡಿಯುವುದೇ ಸರಿಯಾದುದು. ಪತ್ರಿಕೆಗಳು ಈ ಹಾದಿಯನ್ನೇ ಈಗ ಹಿಡಿದಿವೆ. ಕನ್ನಡ ಪತ್ರಿಕೆಗಳ ಭಾಷೆಯೀಗ ಓದಿನ ಮೂಲಕ ಸಿಗುವ 'ಕಣ್ಣಿನ' ಭಾಷೆಯಾಗಿ ಉಳಿದಿಲ್ಲ. ಅದೀಗ ಓದಿನ ಮೂಲಕ ಸಿಗುವ 'ಕಿವಿಯ' ಭಾಷೆಯಾಗಿ ಬದಲಾಗತೊಡಗಿದೆ. ಹೆಚ್ಚು ಆಲಂಕಾರಿಕವಾದ ಶೈಲಿಯನ್ನು ಬಳಸತೊಡಗಿದೆ. ಇದು ಕೇವಲ ವರದಿಗಳ ತಲೆಬರಹಗಳಲ್ಲಿ ಮಾತ್ರವಲ್ಲದೆ ಬಣ್ಣಿಸುವ ಬಗೆಯಲ್ಲೂ ಎದ್ದುಕಾಣುತ್ತಿದೆ. ಅದರಲ್ಲೂ ಭಾವನಾತ್ಮಕ ನೆಲೆಯಲ್ಲಿ ಓದುಗರನ್ನು ಸೆಳೆಯುವ ವರದಿಗಳಲ್ಲಂತೂ ಈ ಬಗೆಯ ಭಾಷಾ ಬಳಕೆ ಹೆಚ್ಚಾಗತೊಡಗಿದೆ. ಆದರೆ ಇಂತಹ ಹೊಸ ಭಾಷಾ ರೂಪಗಳನ್ನು ಬಳಸಲು ಬೇಕಾದ ಸಿದ್ದತೆಯನ್ನು ಬರವಣಿಗೆ ಮಾಡುತ್ತಿರುವ ಎಲ್ಲ ಪತ್ರಿಕಾಕರ್ತರು ಪಡೆದಿದ್ದಾರೆಯೇ ಎಂಬುದು ಬೇರೆಯೇ ಪ್ರಶ್ನೆ. ಅಂತಹ ಸಿದ್ಧತೆಯಿಲ್ಲದವರು ಆಲಂಕಾರಿಕವಾಗಿ ಬರೆಯಲು ಹೊರಟು, ತಮ್ಮ ಭಾಷೆಯ ಟೊಳ್ಳುತನವನ್ನು ಬಯಲಿಗಿಡುತ್ತಿದ್ದಾರೆ. ಅಂದರೆ

ಪತ್ರಿಕೆಯ ಬರವಣಿಗೆಯಲ್ಲಿ ತೊಡಗುವವರು ಎಚ್ಚರದಿಂದ ಈ ಬದಲಾವಣೆಗೆ ಬೇಕಾದ ಸಿದ್ಧತೆ ಮತ್ತು ತರಬೇತನ್ನು ಪಡೆದುಕೊಳ್ಳಬೇಕಾಗಿದೆ. ಇಲ್ಲದಿದ್ದರೆ ಕ್ರಿಕೆಟ್ ಆಟದಲ್ಲಿ ಭಾರತ ತಂಡ ಪಡೆದ ಗೆಲುವನ್ನು 'ಗೆಲವಿನ ಗೆಳತಿಯ ಆಲಿಂಗನ' ಎಂದು ಬಣ್ಣಿಸುವ ನೆಲೆಯಲ್ಲಿ ಉಳಿಯಬೇಕಾಗುತ್ತದೆ. ಹೊಸದಾಗಲು ಮುಂದೆ ನುಗ್ಗುವುದಷ್ಟೇ ಸಾಲದು. ಹೊಸದಾಗಲು ಬೇಕಾದ ಸಿದ್ಧತೆಯನ್ನು ಮಾಡಿಕೊಳ್ಳುವುದೂ ಅಷ್ಟೇ ಮುಖ್ಯವಾಗಿದೆ.

ಮೊದಲಲ್ಲೆ ಹೇಳಿದಂತೆ ಪತ್ರಿಕೆಯ ಬರವಣಿಗೆಯ ಭಾಷೆಗೆ 'ತಿಳಿಸಿ ಹೇಳುವುದಷ್ಟೇ' ಗುರಿಯಲ್ಲ. ಅದಕ್ಕಿಂತ ಹೆಚ್ಚಾದ ಕೆಲಸವನ್ನು ಆ ಬರವಣಿಗೆಯ ಭಾಷೆ ಮಾಡುತ್ತಿರುತ್ತದೆ. ಆ ಭಾಷೆಗೆ ಒಂದು ನಿಲುವನ್ನು ಮುಂದಿಡುವ ಬಲವಿರುತ್ತದೆ. ಓದುವವರು ಒಂದು ಪತ್ರಿಕೆಯನ್ನು ಒಂದು ದಿನ ಮಾತ್ರ ಓದುವುದಿಲ್ಲ. ಹಲವಾರು ವರ್ಷಗಳ ಕಾಲ ಒಂದೇ ಪತ್ರಿಕೆಯ ಸಂಚಿಕೆಗಳನ್ನು ದಿನವೂ ಓದುವರೇಕೆ? ಇದನ್ನು ಕೇವಲ ರೂಢಿ ಎಂದು ಹೇಳಲಾಗದು. ಪತ್ರಿಕೆಯ ಭಾಷೆಗೆ ಗೊತ್ತಾದ ನಿಲುವನ್ನು ಮುಂದಿಡುವ ಮತ್ತು ಆ ನಿಲುವನ್ನು ಓದುವವರು ಒಪ್ಪಿಕೊಳ್ಳುವ ಹಾಗೆ ಮಾಡುವ ಶಕ್ತಿ ಇರುತ್ತದೆ. ಇದನ್ನು ವಾದವಿವಾದಗಳಲ್ಲಿ ಯಾವುದೋ ಒಂದು ನಿಲುವನ್ನು ಪತ್ರಿಕೆಯ ಬರಹ ಸಮರ್ಥಿಸುವುದರಿಂದ ಉಂಟಾಗುತ್ತದೆಂದು ತಿಳಿಯಬಾರದು. ಭಾಷೆಯ ಬಳಕೆಯಲ್ಲೇ ಹೀಗೆ ಗೊತ್ತಾದ ನಿಲುವನ್ನು ಮುಂದಿಡುವುದು ಸಾಧ್ಯ. ಇದು ಪದಗಳ ಆಯ್ಕೆಯಿಂದ, ಪದಗಳನ್ನು ಜೋಡಿಸುವ ಬಗೆಯಿಂದ ಮತ್ತು ವಾಕ್ಯ ರಚನೆಯ ಕೆಲವು ಹುನ್ನಾರಗಳನ್ನು ಬಳಸುವುದರಿಂದ ಆಗುವ ಕೆಲಸ. ಪತ್ರಿಕೆಯ ಭಾಷೆಯ ಈ ನೆಲೆಯನ್ನು ಇನ್ನಷ್ಟು ವಿವರವಾಗಿ ನೋಡೋಣ.

ನಗರದ ತಗ್ಗು ಪ್ರದೇಶವೊಂದು ಮಳೆಯಿಂದ ಹರಿದ ನೀರಿನಲ್ಲಿ ಮುಳುಗಿ ಹೋಗುವಂತಾಗಿದೆ ಎಂದುಕೊಳ್ಳೋಣ. ಇದನ್ನು ವರದಿ ಮಾಡುವಾಗ ಅಲ್ಲಿ ನಡೆದ ಘಟನೆಯೊಂದನ್ನು ಹೀಗೆ ಬಣ್ಣಿಸಲಾಗುವುದೆಂದುಕೊಳ್ಳಿ. 1. ನೀರಿನಲ್ಲಿ ಚೆಲ್ಲಾಪಿಲ್ಲಿಯಾಗಿ ಹರಡಿ ಹೋಗಿದ್ದ ಬೆಲೆಬಾಳುವ ವಸ್ತುಗಳನ್ನು ಪಕ್ಕದ ಕೊಳೆಗೇರಿಯ ಜನರು **ಲೂಟಿ ಮಾಡುತ್ತಿದ್ದುದು** ಕಂಡುಬಂತು. 2. ನೀರಿನಲ್ಲಿ ಚೆಲ್ಲಾಪಿಲ್ಲಿಯಾಗಿ ಹರಡಿ ಹೋಗಿದ್ದ ಬೆಲೆಬಾಳುವ ವಸ್ತುಗಳನ್ನು ಪಕ್ಕದ ಕೊಳೆಗೇರಿಯ ಜನರು **ಹೊತ್ತೊಯ್ಯುತ್ತಿದ್ದುದು** ಕಂಡುಬಂತು. 3. ನೀರಿನಲ್ಲಿ ಚೆಲ್ಲಾಪಿಲ್ಲಿಯಾಗಿ ಹರಡಿ ಹೋಗಿದ್ದ ಬೆಲೆಬಾಳುವ ವಸ್ತುಗಳನ್ನು ಪಕ್ಕದ ಕೊಳೆಗೇರಿಯ ಜನರು **ಒಂದೆಡೆಗೆ ಕೊಂಡೊಯ್ಯುತ್ತಿದ್ದುದು** ಕಂಡುಬಂತು. ಒಂದೇ ಘಟನೆಯನ್ನು ಬಣ್ಣಿಸುವಾಗ ಬಳಸುವ ಪದಗಳು ಗೊತ್ತಾದ ನಿಲುವನ್ನು ಮುಂದಿಡುತ್ತಿರುತ್ತವೆ ಎನ್ನುವುದಕ್ಕೆ ಮೇಲೆ ಹೇಳಿದ ಮೂರು ವಾಕ್ಯಗಳು ಉದಾಹರಣೆಯಾಗಬಲ್ಲವು. ಅದರಲ್ಲೂ ಮೂರೂ ವಾಕ್ಯಗಳಲ್ಲಿ ಬಣ್ಣಿಸಿದ ಕೆಲಸದಲ್ಲಿ ತೊಡಗಿದವರು 'ಪಕ್ಕದ ಕೊಳೆಗೇರಿಯ ಜನರು'. ಆದುದರಿಂದ ಈ ಪದಗಳು ಇನ್ನಷ್ಟು ಗಟ್ಟಿಯಾಗಿ ತಮ್ಮ ನಿಲುವನ್ನು ಮುಂದಿಡುತ್ತಿವೆ.

ಇಂತಹುದೇ ಒಂದು ಉದಾಹರಣೆಯನ್ನು ಗಮನಿಸಿರಿ. ಇದು ಕೆಲವು ವರ್ಷಗಳ ಹಿಂದೆ ಅಮೆರಿಕಾ ಸಂಯುಕ್ತ ಸಂಸ್ಥಾನದ ದಕ್ಷಿಣ ರಾಜ್ಯ ಒಂದರಲ್ಲಿ ಬಿರುಗಾಳಿ ಬೀಸಿ ಜನಜೀವನವೆಲ್ಲ ಹಾಳಾಗಿದ್ದಾಗ ನಡೆದ ಘಟನೆಯೊಂದನ್ನು ಅಲ್ಲಿನ ಪತ್ರಿಕೆಗಳು ವರದಿ ಮಾಡಿದ ಬಗೆಯನ್ನು ಬಣ್ಣಿಸುತ್ತವೆ. ಇಲ್ಲಿ ಆ ವಾಕ್ಯಗಳನ್ನು ಕನ್ನಡದಲ್ಲಿ ಕೊಡಲಾಗಿದೆ. 1. ಎಲ್ಲೆಡೆ ಹರಡಿಹೋಗಿದ್ದ ಬೆಲೆಬಾಳುವ ಸಾಮಾನುಗಳನ್ನು ಕರಿಯ ಜನರು **ಲಪಟಾಯಿಸಿಕೊಂಡು ಹೋಗುತ್ತಿದ್ದುದು(ಲೂಟಿಂಗ್)** ಕಂಡು ಬಂತು. 2. ಎಲ್ಲೆಡೆ ಹರಡಿಹೋಗಿದ್ದ ಸಾಮಾನುಗಳನ್ನು ಬಿಳಿಯ ಯುವಕರು **ಸಂಗ್ರಹಿಸುತ್ತಿದ್ದುದು (ಕಲೆಕ್ಟಿಂಗ್)** ಕಂಡು ಬಂತು. ಒಂದೇ ಕೆಲಸ ಕರಿಯರು ಮಾಡಿದಾಗ ಲೂಟಿಯಾಗಿಯೂ, ಬಿಳಿಯರು ಮಾಡಿದಾಗ ಸಂಗ್ರಹಣೆಯೂ ಆಗುವುದನ್ನು ವರದಿಯಲ್ಲಿ ಬಳಸಿದ ಪದಗಳು ನಮ್ಮ ಮುಂದಿಡುತ್ತಿವೆ.

ಈ ನೆಲೆಯನ್ನು ಇನ್ನಷ್ಟು ತಿಳಿದುಕೊಳ್ಳಲು ಮತ್ತೂ ಕೆಲವು ಉದಾಹರಣೆಗಳನ್ನು ನೋಡೋಣ. ಹತ್ಯೆ, ಕೊಲೆ ಮತ್ತು ಸಾವು ಎಂಬ ಪದಗಳು ಬಣ್ಣಿಸುವ ಸಂದರ್ಭ ಒಂದೇ ಆದರೂ, ಮೂರೂ ಪದಗಳನ್ನು ಒಂದೇ ಎಂಬಂತೆ ಬಳಸಲಾಗುವುದಿಲ್ಲ; ಹಾಗೆ ಯಾರೂ ಬಳಸುವುದಿಲ್ಲ. **ಬಸ್ ಹರಿದು ಇಬ್ಬರ ಸಾವು** ಎನ್ನುವುದನ್ನು **ಬಸ್ ಹರಿದು ಇಬ್ಬರ ಕೊಲೆ** ಎನ್ನಲಾದಿತೇ? ಹತ್ಯೆ ಮತ್ತು ಕೊಲೆ ಪದಗಳನ್ನು ಬಳಸಬೇಕಾದರೆ ಕ್ರಿಯೆಗೆ ಕಾರಣರಾದವರು ಮತ್ತು ಕ್ರಿಯೆಯ ಪರಿಣಾಮಕ್ಕೆ ಒಳಗಾದವರು ಹೀಗೆ ಇಬ್ಬರೂ ನಮಗೆ ತಿಳಿದಿರಬೇಕು. ಹಾಗಿಲ್ಲದಿದ್ದರೆ ಆ ಪದಗಳನ್ನು ಬಳಸಲು ಆಗುವುದಿಲ್ಲ. ನಿನ್ನೆ ರಾತ್ರಿ ನಡೆದ ಗುಂಪು ಗಲಭೆಯಲ್ಲಿ ಇಬ್ಬರು **ಸತ್ತಿದ್ದಾರೆಂದು** ಪೋಲಿಸರು ವರದಿ ಮಾಡಿದ್ದಾರೆ/ ನಿನ್ನೆ ರಾತ್ರಿ ನಡೆದ ಗುಂಪು ಗಲಭೆಯಲ್ಲಿ ಇಬ್ಬರು **ಹತ್ಯೆಗೀಡಾಗಿದ್ದಾರೆಂದು** ಪೋಲಿಸರು ವರದಿ ಮಾಡಿದ್ದಾರೆ. ಈ ಎರಡೂ ವಾಕ್ಯಗಳು ಒಂದೇ ಸಂಗತಿಯನ್ನು ಬಣ್ಣಿಸುತ್ತಿವೆಯಾದರೂ, ಪೋಲಿಸರು ನಡೆದ ಘಟನೆಯ ಬಗೆಗೆ ತಳೆದಿರುವ ನಿಲುವನ್ನು ಆ ವಾಕ್ಯದಲ್ಲಿ ಬಳಸಿರುವ ಪದಗಳು ನಮ್ಮ ಗಮನಕ್ಕೆ ತರುತ್ತಿವೆ. **ಪೋಲಿಸರ ಗುಂಡಿಗೆ** ಒಬ್ಬ **ಬಲಿಯಾಗಿದ್ದಾನೆ / ಪೋಲಿಸರು ಗುಂಡಿಟ್ಟು ಒಬ್ಬನನ್ನು ಕೊಂದಿದ್ದಾರೆ**. ಈ ಎರಡು ವಾಕ್ಯಗಳಲ್ಲಿ ಎರಡನೆಯ ಬಗೆಯ ವಾಕ್ಯವನ್ನು ಸಾಮಾನ್ಯ ದಿನಪತ್ರಿಕೆಗಳಲ್ಲಿ ನಾವು ಓದಲು ಸಾಧ್ಯವಿಲ್ಲ. ಅದು ಕರಪತ್ರದ ಬರವಣಿಗೆಯ ಭಾಷೆಯಲ್ಲಿ ಬಳಕೆಯಾಗುವ ವಾಕ್ಯ.

ಒಂದು ಘಟನೆಯನ್ನು ಬಣ್ಣಿಸುವಾಗ ಗಮನಿಸಬೇಕಾದ ಸಂಗತಿಯೊಂದಿದೆ. ಕ್ರಿಯೆಯಲ್ಲಿ ತೊಡಗಿರುವ ವ್ಯಕ್ತಿ ಇಲ್ಲವೇ ಮೂಲ (ಕರ್ತೃ) ಇರುವಂತೆ, ಕ್ರಿಯೆಯ ಪರಿಣಾಮವನ್ನು ಅನುಭವಿಸುವ ವ್ಯಕ್ತಿ ಇಲ್ಲವೇ ಮೂಲ( ಅನುಭೋಗಿ) ಕೂಡ ಇರುತ್ತದೆ. ಪತ್ರಿಕೆಯು ಆ ಘಟನೆಯನ್ನು ಬಣ್ಣಿಸುವಾಗ ಯಾವ ನೆಲೆಯಿಂದ ಕ್ರಿಯೆಯನ್ನು ಮಂಡಿಸುತ್ತದೆ ಎನ್ನುವುದನ್ನು ತಿಳಿಯಲು ಆ ಬಣ್ಣನೆಯಲ್ಲಿ ಬಳಸಿದ ಭಾಷೆಯ ಮೂಲಕ ಸೂಚನೆಗಳು ಸಿಗುತ್ತವೆ. ತೀರಾ ಈಚೆಗೆ ಪಶ್ಚಿಮ ಬಂಗಾಲದಲ್ಲಿ ಎಸ್ ಇ ಜೆಡ್ ಸ್ಥಾಪನೆಯ ಸಂದರ್ಭದಲ್ಲಿ ನಡೆದ ಘಟನೆಯನ್ನು ಮಂಡಿಸಲು ಪತ್ರಿಕೆಗಳ

ವರದಿಗಳು ಬಳಸಿದ ಭಾಷೆಯ ನೆಲೆಗಳನ್ನು ಅಭ್ಯಾಸ ಮಾಡಿದರೆ ಹಲವು ಒಳನೋಟಗಳು ಸಿಗುತ್ತವೆ. ಈ ಸಿಂಗೂರ್ ಘಟನೆಯಲ್ಲಿ ಮೂವರು ಪಾತ್ರಧಾರಿಗಳಿದ್ದರು. ತೃಣಮೂಲ ಕಾಂಗ್ರೆಸ್, ಪಶ್ಚಿಮ ಬಂಗಾಳ ಸರಕಾರ ಮತ್ತು ಟಾಟಾ ಕಂಪನಿ. ಈ 'ಪ್ರತಿಭಟನೆಯ' ಕ್ರಿಯೆಯಲ್ಲಿ ತೃಣಮೂಲ ಕಾಂಗ್ರೆಸ್ ಮತ್ತು ಪಶ್ಚಿಮ ಬಂಗಾಳ ಸರಕಾರಗಳನ್ನು ಎದುರುಬದುರು ಪಾತ್ರಗಳನ್ನಾಗಿ ಮಾಡಿ ಅದಕ್ಕೆ ತಕ್ಕಂತೆ ವರದಿಯ ಭಾಷೆಯನ್ನು ರೂಪಿಸಲಾಯಿತು. ಟಾಟಾ ಕಂಪನಿ 'ಬಲಿಪಶು'(ಸ್ಕೇಪ್ ಗೋಟ್) ಪಾತ್ರದಲ್ಲಿ ನಿಂತುಕೊಂಡಿತು. ಕೆಣಕುವ ಕೆಲಸ ತೃಣಮೂಲ ಕಾಂಗ್ರೆಸ್ ಮಾಡಿದರೆ ತಣಿಸುವ ಕೆಲಸವನ್ನು ಸರಕಾರ ಮಾಡುತ್ತಿರುವಂತೆ ಭಾಸವಾಗುವ ವರದಿಗಳನ್ನು ನಾವು ಓದುತ್ತಿದ್ದೆವು. ಅಂದರೆ ಪರಿಸ್ಥಿತಿ ಏನೇ ಇರಲಿ ಅದನ್ನು ಬಣ್ಣಿಸಲು ಆಯ್ದುಕೊಳ್ಳುವ ಪದಗಳು ಮತ್ತು ಅವುಗಳ ಜೋಡಣೆಯ ಮೂಲಕ ಪತ್ರಿಕೆಗಳು ಆ ಪರಿಸ್ಥಿತಿಗೆ ಒಂದು ನಿಲುವನ್ನು ರೂಪಿಸಬಲ್ಲವು. ಹೀಗೆ ರೂಪಿಸಿದ ನಿಲುವು 'ಸತ್ಯ'ವೆಂದೇನೂ ಅಲ್ಲ. ಅದು ಪತ್ರಿಕೆಗಳ ಆಯ್ಕೆ. ಪತ್ರಿಕೆಗಳ ಭಾಷೆ ಹೀಗೆ ಒಂದು ನಿಲುವನ್ನು ನಮಗಾಗಿ ಕಟ್ಟಿಕೊಟ್ಟು ಆ ನಿಲುವನ್ನು ನಾವು ಒಪ್ಪುವಂತೆ ಮಾಡುತ್ತಿದೆ ಎನ್ನುವ ಅರಿವು ಓದುಗರಿಗೆ ಆಗದಂತೆ ಎಚ್ಚರಿಕೆಯಿಂದ ಈ ಕೆಲಸ ನಡೆಯುತ್ತದೆ. ಇದೆಲ್ಲವೂ ಭಾಷೆಯ ಮೂಲಕವೇ ನಡೆಯುವುದು ಎನ್ನುವುದನ್ನು ಗಮನಿಸಬೇಕು. ಕನ್ನಡ ಪತ್ರಿಕೆಗಳು ಈ ಘಟನೆಯ ವರದಿಯನ್ನು ಮಾಡುವಾಗ ಹೆಚ್ಚಾಗಿ ಇಂಗ್ಲಿಶ್ ಮೂಲದ ವರದಿಗಳನ್ನು ಅವಲಂಬಿಸಿದ್ದವು. ಹಾಗಾಗಿ 'ರಾಷ್ಟ್ರೀಯ' ನೆಲೆಯಲ್ಲಿ ರೂಪಿಸಿದ ನಿಲುವು ಕನ್ನಡ ಪತ್ರಿಕೆಗಳ ಮೂಲಕ ಕನ್ನಡ ಓದುಗರಿಗೆ ದೊರಕಿತು.

ಪತ್ರಿಕೆಗಳು ಒಂದು ಕ್ರಿಯೆಯನ್ನು ಬಣ್ಣಿಸುವಾಗ ಆ ಕ್ರಿಯೆಗೆ ಯಾರು ಅನುಭೋಗಿಗಳಿರುತ್ತಾರೋ ಅವರನ್ನು ಕೇಂದ್ರದಲ್ಲಿರಿಸಿಕೊಳ್ಳುವ ಬಗೆಯನ್ನು ಅನುಸರಿಸುತ್ತವೆ. ಯುದ್ಧ ಸಂದರ್ಭದ ವರದಿಗಳಲ್ಲಿ ಮಾತ್ರ ಈ ನೆಲೆ ಬದಲಾಗುತ್ತದೆ. ಆಗ ಕ್ರಿಯೆ ಕರ್ತೃಗಳ ನೆಲೆಯಿಂದ ಸಂಗತಿಗಳನ್ನು ವಿವರಿಸುವ ನೆಲೆಗೆ ಪತ್ರಿಕೆಗಳ ಭಾಷೆ ದಾಟುವುದುಂಟು. ಈಚೆಗೆ ಮುಂಬೈಯಲ್ಲಿ ನಡೆದ ಉಗ್ರರ ದಾಳಿಯ ಸಂದರ್ಭದಲ್ಲಿ ದೊರೆತ ವರದಿಗಳನ್ನು ಈ ನಿಟ್ಟಿನಲ್ಲಿ ನೋಡಬೇಕಾಗಿದೆ. ಉಳಿದಂತೆ ಸಾಮಾನ್ಯವಾಗಿ ಅನುಭೋಗಿಗಳೇ ವರದಿಯ ಕೇಂದ್ರದಲ್ಲಿರುತ್ತಾರೆ. ಅದರಲ್ಲೂ ಆ ಘಟನೆಗೆ ಸಾಮಾಜಿಕ ಆಯಾಮಗಳಿವೆ ಎಂದಾಗ ಈ ಬಗೆಯ ಬಣ್ಣಿಸುವಿಕೆ ಮತ್ತಷ್ಟು ಗಟ್ಟಿಗೊಳ್ಳುತ್ತದೆ.

ಈ ಗುರಿಯನ್ನು ಸಾಧಿಸಲು ಪತ್ರಿಕೆಯ ಭಾಷೆ ಎರಡು ವಿಧಾನಗಳನ್ನು ಅನುಸರಿಸುತ್ತದೆ. ಒಂದು: ಕರ್ತೃವನ್ನು ಮರೆಮಾಡುವುದು. ಎರಡು: ಕ್ರಿಯೆಗೆ ಕರ್ತೃ ಇಲ್ಲವೆಂಬಂತೆ ಅಥವಾ ಇದ್ದರೂ ಅದು ಖಚಿತವಿಲ್ಲವೆಂಬಂತೆ ಬಣ್ಣಿಸುವುದು. ಮೊದಲನೆಯ ಬಗೆಯನ್ನು ಗಮನಿಸೋಣ. 'ಚುನಾವಣೆಯಲ್ಲಿ ಶ್ರೀಯುತರು ಹತ್ತುಸಾವಿರ ಮತಗಳ ಅಂತರದಿಂದ ವಿಜಯಿಯಾಗಿದ್ದಾರೆ.' ಇದು ಸರಳ ಮತ್ತು ನೇರವಾದ ಬಣ್ಣನೆ. ವಿಜಯವನ್ನು ಪಡೆದವರನ್ನು ಕೇಂದ್ರದಲ್ಲಿರಿಸಿಕೊಂಡು ನೀಡಿದ

ವಿವರಣೆ. ಆದರೆ ಮತ ನೀಡಿದವರ (ಕರ್ತೃಗಳ) ನೆಲೆಯಿಂದ ನೀಡಿದ ವಿವರಣೆಯಲ್ಲ. ಮತ್ತಷ್ಟು ವಿವರಗಳಿಗೆ ಹೋಗೋಣ. ಒಂದು ಮತಕ್ಷೇತ್ರದಲ್ಲಿ ಒಂದು ಲಕ್ಷ ಮತದಾರರಿದ್ದಾರೆ ಎಂದುಕೊಳ್ಳಿ. ಚುನಾವಣೆಯಲ್ಲಿ ನೂರಕ್ಕೆ ಅರವತ್ತು ಮತದಾರರು ಮತ ನೀಡಿದ್ದಾರೆ ಎಂದುಕೊಳ್ಳೋಣ. ಅಂದರೆ ಅರವತ್ತು ಸಾವಿರ ಮತ ಚಲಾವಣೆಗೊಂಡಿವೆ. ಈ ಮತಗಳಲ್ಲಿ ಗೆದ್ದ ಅಭ್ಯರ್ಥಿಗೆ ಇಪ್ಪತ್ತೈದು ಸಾವಿರ ಮತಗಳು ಬಂದಿವೆ ಎಂದಾದರೆ, ಅವರ ಹತ್ತಿರದ ಆದರೆ ಸೋತ ಅಭ್ಯರ್ಥಿಗೆ ಹದಿನೈದು ಸಾವಿರ ಮತಗಳು ಬಂದಿವೆ. ಈ ಫಲಿತಾಂಶವನ್ನು ಕ್ಷೇತ್ರದ ಮತದಾರರಲ್ಲಿ ಎಪ್ಪತ್ತೈದು ಸಾವಿರ ಜನ 'ಗೆದ್ದ'ವರ ಪರವಾಗಿ ಇಲ್ಲ ಎಂದು ಬಣ್ಣಿಸಿದರೆ ಏನಾಗುತ್ತದೆ? ಇದು ವಿಚಿತ್ರವಾಗಿ ಕಾಣಿಸುವ ವಾದವಾಗಿ ತೋರಬಹುದು. ಆದರೆ ಹಾಗಲ್ಲ. ನಮ್ಮ ವರದಿಗಳು ಭಾಷೆಯ ಬಳಕೆಯಲ್ಲಿ ಯಾವಾಗಲೂ ಒಂದು ನಿಲುವನ್ನು ಮುಂದಿಟ್ಟು ಉಳಿದವನ್ನು ಮರೆಮಾಡಬಲ್ಲವು ಎಂಬುದನ್ನು ವಿವರಿಸಲು ಈ ಅತಿರೇಕದ ಉದಾಹರಣೆಯನ್ನು ನೀಡಬೇಕಾಯಿತು. (ಯಾರಿಗೂ ಮತ ನೀಡುವುದಿಲ್ಲ ಎಂದು ಹೇಳುವುದು ಮತದಾರರಿಗೆ ಇರುವ ಒಂದು ಹಕ್ಕು. ಪ್ರಜಾಪತ್ರಿನಿಧಿತ್ವ ಕಾಯಿದೆ 1969ರ ಕಲಂ 49ರಲ್ಲಿ ಇದಕ್ಕೆ ಅವಕಾಶವಿದೆ. ಆದರೆ ಮತದಾರರು ಅದಕ್ಕಾಗಿ ಮತಗಟ್ಟೆಗೆ ಬರುವುದು ಕಡ್ಡಾಯ).

**ಕಬ್ಬಿನ ಬೆಲೆ ನಿಗದಿ ಮಾಡದಿರುವುದನ್ನು ಪ್ರತಿಭಟಿಸಲು ರೈತರು ನಡೆಸಿದ ರಸ್ತೆ ತಡೆಯಿಂದಾಗಿ ಮೂರು ಗಂಟೆಗಳ ಕಾಲ ಸಂಚಾರಕ್ಕೆ ಭಾರಿ ಅಡಚಣೆಯುಂಟಾಯಿತು.** ಈ ವರದಿಯಲ್ಲಿ ಕ್ರಿಯೆ ಕರ್ತೃಗಳ (ರೈತರ) ಉಲ್ಲೇಖವಿದೆ. ಆದರೆ ಕ್ರಿಯೆಯ ಪರಿಣಾಮವನ್ನು ವಾಕ್ಯದಲ್ಲಿ ಬಳಸಿದ ಭಾಷೆ ಮುಂಚೂಣಿಗೆ ತರುತ್ತದೆ. ಸಂಚಾರಕ್ಕೆ ಅಡಚಣೆಯಾದದು ಅನುಭೋಗಿಗಳ ಅನುಭವ. ಅದನ್ನು ವಾಕ್ಯದಲ್ಲಿ ಮಂಡಿಸಲಾಗಿದೆ. ಈ ವಾಕ್ಯ 'ಸುಳ್ಳನ್ನು' ಹೇಳುತ್ತಿಲ್ಲ. ಆದರೆ ಈ ಘಟನೆಯನ್ನು ಮಂಡಿಸುವ ಬಗೆಯಲ್ಲಿ ರೈತರ ಕ್ರಿಯೆಗೆ ಕಾರಣವಾದ ಸಂಗತಿಗಳಿಗಿಂತ ಹೆಚ್ಚಾಗಿ ಆ ಕ್ರಿಯೆಯ ಪರಿಣಾಮವನ್ನು ಹೇಳುವ ಉಮೇದು ಎದ್ದು ಕಾಣುತ್ತದೆ.

ಕರ್ತೃವನ್ನು ಮರೆಮಾಡುವ ಇನ್ನೊಂದು ಬಗೆಯೆಂದರೆ ಕರ್ತೃರಹಿತ ವಾಕ್ಯಗಳನ್ನು ಬಳಸುವುದು. ಇಂತಹ ವಾಕ್ಯಗಳು ನೂರಾರು ದಿನವೂ ನಮ್ಮ ಪತ್ರಿಕೆಗಳಲ್ಲಿ ಓದಲು ಸಿಗುತ್ತವೆ. **ಈ ಸೇತುವೆಯನ್ನು 20 ಕೋಟಿ ರೂ. ವೆಚ್ಚದಲ್ಲಿ ನಿರ್ಮಿಸಲಾಗಿದೆ.** ಈ ವಾಕ್ಯ ಸೇತುವೆ ನಿರ್ಮಾಣ ಮತ್ತು ವೆಚ್ಚಗಳನ್ನು ಕುರಿತು ಹೇಳಿದರೂ, ಯಾರು ಈ ಕ್ರಿಯೆಗೆ ಕಾರಣರು ಮತ್ತು ಇದರ ಅನುಭೋಗಿಗಳು ಯಾರು ಎಂಬುದನ್ನು ಹೆಳುವುದಿಲ್ಲ. ಸಾಮಾನ್ಯವಾಗಿ ವ್ಯಾಕರಣದಲ್ಲಿ ಹೇಳುವ ಕರ್ಮಣೀ ಪ್ರಯೋಗಗಳ ಮೂಲಕ ವಾಕ್ಯಗಳನ್ನು ರಚಿಸಿ ಈ ಗುರಿಯನ್ನು ಸಾಧಿಸುವುದುಂಟು. 'ವರದಿಯಾಗಿದೆ, ಮಂಡಿತವಾಯಿತು, ವಿಚಾರಣೆಗೊಳಪಟ್ಟಿದೆ, ತನಿಖೆ ನಡೆದಿದೆ, ಇವೇ ಮುಂತಾದ ಕ್ರಿಯಾ ಪದಗಳ ರಚನೆಯನ್ನು ನಾವು ಗಮನಿಸುತ್ತಲೇ ಇರುತ್ತೇವೆ. ಇವೆಲ್ಲವೂ ವಾಕ್ಯದಲ್ಲಿ ಕರ್ತೃ ಇಲ್ಲದಿರುವುದನ್ನು ಸೂಚಿಸುವಂತಹವು.

ಕನ್ನಡ ಪತ್ರಿಕೆಗಳ ಬರವಣಿಗೆಯ ಭಾಷೆಯ ಇನ್ನೊಂದು ಗುರುತನ್ನು ಈಗ ನೋಡೋಣ. ಈ ಕುರಿತು ಮೊದಲಲ್ಲಿ ಕೆಲವು ಮಾತುಗಳನ್ನು ಹೇಳಿದೆ. ಇಂಗ್ಲಿಶ್ ಪತ್ರಿಕೆಗಳ ಬರವಣಿಗೆಯ ಭಾಷೆಯ ಸಂದರ್ಭದಲ್ಲಿ ಕನ್ನಡ ಪತ್ರಿಕೆಗಳು ತಮ್ಮ ಭಾಷೆಯನ್ನು ರೂಪಿಸಿಕೊಳ್ಳಬೇಕಾದ ಇಕ್ಕಟ್ಟನ್ನು ಕುರಿತು ಮುಂದೆ ಕೆಲವು ಸಂಗತಿಗಳನ್ನು ನೋಡೋಣ. ಈ ಬಗೆಯ ಸಮಸ್ಯೆಯೊಂದು ಇದೆಯೆನ್ನುವುದನ್ನು ನಮ್ಮ ಪತ್ರಿಕೆಗಳ ಬರವಣಿಗೆಯಲ್ಲಿ ತೊಡಗಿರುವವರು ಒಪ್ಪುತ್ತಾರೋ ಇಲ್ಲವೋ ನನಗೆ ತಿಳಿಯದು. ಆದರೆ ಇಂತಹುದೊಂದು ಇಕ್ಕಟ್ಟು ಇದೆ ಎನ್ನುವುದಂತೂ ದಿಟ.

**ಅಪಘಾತದಲ್ಲಿ ಗಾಯಗೊಂಡವರಲ್ಲಿ ಇಬ್ಬರ ಸ್ಥಿತಿ ಗಂಭೀರವಾಗಿದೆ./ ನಮ್ಮೆದುರಿಗೆ ಇರುವ ಗಂಭೀರ ಸವಾಲುಗಳನ್ನು ಎದುರಿಸಲು ಸಿದ್ಧರಾಗಿದ್ದೇವೆಂದು ಸಚಿವರು ನುಡಿದರು.** ಈ ಎರಡೂ ವಾಕ್ಯಗಳಲ್ಲಿ ಬಳಸಲಾದ 'ಗಂಭೀರ' ಪದದ ದಿಟವಾದ ಉದ್ದೇಶವೇನು? ಆ ಪದ ವಾಕ್ಯಗಳನ್ನು ಬರೆದವರ ಆಯ್ಕೆಯೇ ಅಥವಾ ಸೀರಿಯಸ್ ಎಂಬ ಇಂಗ್ಲಿಶ್ ಪದಕ್ಕೆ ಹೊಂದುವಂತೆ ಈಗಾಗಲೇ ಬಳಸಲಾದ ಪದವೊಂದನ್ನು ಸುಮ್ಮನೆ ಇಲ್ಲಿಯೂ ಬಳಸಲಾಗಿದೆಯೇ? ಎರಡನೆಯ ಸಾಧ್ಯತೆಯೇ ಹೆಚ್ಚು ನಿಜವೆಂದು ತೋರುತ್ತದೆ. **ತೀವ್ರ ಸಂಕಷ್ಟ, ಅಸಹಜ ಸಾವು, ಪರಿಸರ ಸ್ನೇಹಿ, ಅಸಾಂಪ್ರದಾಯಿಕ ಇಂಧನ ಮೂಲ, ಉತ್ತರದಾಯಿತ್ವ, ಚುನಾವಣೋತ್ತರ, ತೆರಿಗೆದಾರರ ಪರ ಬಜೆಟ್, ಜನಪರ ಕಾರ್ಯಕ್ರಮ, ನಕ್ಸಲ್ ಪೀಡಿತ ಪ್ರದೇಶ, ಗೌರವರಕ್ಷಣೆ ನೀಡು, ಗಲಭೆಗ್ರಸ್ತ, ಸಸ್ಯಜನ್ಯ, ಕಲ್ಮಶರಹಿತ, ಆದರಪೂರ್ವಕ, ನಿಸ್ಸೇನೀಕೃತ** ಇವೇ ಮುಂತಾದ ನೂರಾರು ಪದರಚನೆಗಳನ್ನು ಪಟ್ಟಿ ಮಾಡಬಹುದು. ಇವೆಲ್ಲವೂ ಪತ್ರಿಕೆಗಳಲ್ಲಿ ದಿನವೂ ಬಳಕೆಯಾಗುತ್ತಿರುವ ಪದಗಳೇ ಆಗಿವೆ. ಈ ಪದರಚನೆಗಳ ಬಳಕೆ ಸಹಜವೆಂದೇ ತೋರಬಹುದು. ಆದರೆ ಇಲ್ಲಿ ನಡೆಯುತ್ತಿರುವ ಇನ್ನೊಂದು ಬದಲಾವಣೆಯ ಕಡೆಗೆ ಗಮನ ಸೆಳೆಯಬೇಕಾಗಿದೆ. ಈ ಪದರಚನೆಗಳೆಲ್ಲ ಮೂಲ ಇಂಗ್ಲಿಶ್ ರಚನೆಗಳಿಗೆ ಕನ್ನಡದಲ್ಲಿ ಬಳಕೆಯಾಗುತ್ತಿರುವ ಪದಗಳೇ ಆಗಿವೆ. ಆದರೆ ಈ ರಚನೆಗಳಲ್ಲಿ ಬಳಕೆಯಾಗಿರುವ ಪದಗಳು ಸಂಸ್ಕೃತದಿಂದ ಬಂದಿರುವಂತಹವು. ಅಲ್ಲದೆ ಪದರಚನೆಗೆ ಬಳಸಿರುವ ನಿಯಮಗಳು ಸಂಸ್ಕೃತ ಭಾಷೆಗೆ ಸೇರಿವೆ.(ಉದಾ.ಚುನಾವಣೋತ್ತರ, ಕನ್ನಡೇತರ) ಹೀಗಾಗಿ ಈ ರಚನೆಗಳು ಎಷ್ಟು ಕನ್ನಡ? ಇವುಗಳಿಗೆ ಬದಲಾಗಿ ಕನ್ನಡದ ಪದರಚನೆಗಳನ್ನು ಬಳಸುವುದು ಆಗುವುದಿಲ್ಲವೇ? ಈಗ ಈ ಪದರಚನೆಗಳನ್ನು ಬಳಸುವವರಿಗೆ ಇವು ಸಂಸ್ಕೃತದಿಂದ ಹುಟ್ಟಿಬಂದಿವೆ ಎನ್ನುವುದೂ ಕೂಡ ಗೊತ್ತಾಗದಷ್ಟು ರೂಢಿಯಾಗಿಬಿಟ್ಟಿದೆ. ಇದು ಕೇವಲ ಇಂಗ್ಲಿಶ್-ಸಂಸ್ಕೃತ-ಕನ್ನಡ ಭಾಷೆಗಳ ನಡುವಣ ಮೇಲಾಟದ ಮಾತಲ್ಲ. ಒಂದೊಂದು ಭಾಷೆಗೂ ಅದರದ್ದೇ ಅದ ಲೋಕದ ತಿಳುವಳಿಕೆ ಇರುತ್ತದೆ. ಕನ್ನಡದ ತಿಳುವಳಿಕೆ ಕನ್ನಡ ಪದಗಳ ಮೂಲಕ ನೆಲೆಗೊಳ್ಳುವಂತೆ ಬೇರೆ ಭಾಷೆಯ ಪದಗಳ ಮೂಲಕ ಹೇಗೆ ನೆಲೆಯಾಗಬಲ್ಲುದು? ಈ ನಿಟ್ಟಿನಲ್ಲಿ ನೋಡಿದರೆ ಕನ್ನಡ ಪತ್ರಿಕೆಗಳ ಬರವಣಿಗೆಯಲ್ಲಿ ಇಡಿಕಿರಿಯುತ್ತಿರುವ ಇಂಗ್ಲಿಶ್ ನೆರಳಿನ ಸಂಸ್ಕೃತ ಪದರಚನೆಗಳ ಜಾಗದಲ್ಲಿ, ಕನ್ನಡ ಪದರಚನೆಗಳನ್ನು ನೆಲೆಗೊಳಿಸುವುದು ಮೊದಲು ನಡೆಯಬೇಕಾಗಿರುವ ಕೆಲಸವಾಗಿದೆ. ಇದು ಕನ್ನಡದ ಮೂಲಕ ಕನ್ನಡ ಲೋಕವನ್ನು ಮಂಡಿಸಲು ಮಾಡಬೇಕಾದ ಕೆಲಸ. .ಇದು ಯಾವುದೇ ಭಾಷೆಯನ್ನು ಮೇಲೆತ್ತುವ ಇಲ್ಲವೇ ಕೀಳು ಮಾಡುವ ಕೆಲಸವಲ್ಲ.

# ಕನ್ನಡ ಪದನಿಧಿ

(ಸಮಾನಾರ್ಥಕ–ಸಮೀಪಾತ್ಮಕ–ಸಂಬಂಧಿತ–ವಿರುದ್ಧಾರ್ಥಕ ಕನ್ನಡ ಪದಕೋಶ)

ಪದನಿಧಿ ಕನ್ನಡಿಗರು ಹಲವು ಕಾರಣಗಳಿಂದ ಹೆಮ್ಮೆ ಪಡಬೇಕಾದ ಗ್ರಂಥ. ಈ ಬಗೆಯ ಪದಸಂಗ್ರಹವೊಂದನ್ನು ಸಿದ್ಧಪಡಿಸಿದ್ದಕ್ಕಾಗಿ ಮೊದಲಿಗೆ ಇದರ ಸಂಪಾದಕರಾದ ಡಾ.ಪ್ರಶಾಂತ್ ವಲೇರಿಯನ್ ಮಾಡ್ತಾ ಅವರನ್ನು ಅಭಿನಂದಿಸಲೇ ಬೇಕು. ಇದರ ಹಿಂದೆ ಚಿಂತನೆಯ ಜೊತೆಗೆ ಸಮಯ ಮತ್ತು ಶ್ರಮಗಳು ಅಪಾರ ಪ್ರಮಾಣದಲ್ಲಿ ಬಳಕೆಯಾಗಿವೆ. ಈ ಬಗೆಯ ಕೋಶಗಳು ಹಲವು ಭಾರತೀಯ ಭಾಷೆಗಳಲ್ಲಿ ಸಿದ್ಧಗೊಂಡಿವೆಯೋ ಇಲ್ಲವೋ ತಿಳಿಯದು. ಕನ್ನಡದಲ್ಲಿ ಈ ಹಿಂದಿನ ಎಲ್ಲ ಪ್ರಯತ್ನಗಳನ್ನು ಗಮನಿಸುತ್ತಲೇ ಅವುಗಳನ್ನು ಮೀರಿದ ಒಂದು ಕೋಶವನ್ನು ಸಿದ್ಧಪಡಿಸಲಾಗಿದೆ. ಇದು ಇಂಗ್ಲಿಶಿನಲ್ಲಿ ಬಹುಪರಿಚಿತವಿರುವ ಥಿಸಾರಸ್ ಮಾದರಿಯ ಕೋಶ. ಇಂಗ್ಲಿಶ್ ಭಾಷೆಯಲ್ಲೂ ಥಿಸಾರಸ್ ಅನ್ನು ಸಿದ್ಧಪಡಿಸಿದ ರೊಜೆಟ್ ಎಂಬುವವರ ಹೆಸರಿನಲ್ಲಿಯೇ ಅದನ್ನು ರೊಜೆಟ್ ಥಿಸಾರಸ್ ಎಂದು ಕರೆಯುವುದು ವಾಡಿಕೆ. ಎಲ್ಲ ಕೋಶಗಳಲ್ಲೂ ಒಂದು ಪದಕ್ಕೆ ಇರುವ ಅರ್ಥಗಳನ್ನು ಒದಗಿಸುವುದು ಮೊದಲ ಕೆಲಸವಾಗಿರುತ್ತದೆ. ಆ ಬಳಿಕ ಕೆಲವು ಕೋಶಗಳು ಆ ಪದಗಳ ವ್ಯಾಕರಣಾಂಶ, ಪದದ ಚರಿತ್ರೆ, ಬಳಕೆಯ ಬಗೆಗಳು, ಉಚ್ಚಾರಣೆಯ ಬಗೆಗಳು ಹೀಗೆ ಹಲವಾರು ಮಾಹಿತಿಗಳನ್ನು ನೀಡುತ್ತವೆ. ಆದರೆ ಥಿಸಾರಸ್‌ನ ಹಾದಿಯೇ ಬೇರೆ.

ಭಾಷೆಯನ್ನು ಬಲ್ಲವರು ಆ ಭಾಷೆಯ ಪದಕೋಶವನ್ನು ನಿರಂತರವಾಗಿ ಕಲಿಯುತ್ತಲೇ ಇರುತ್ತಾರೆ. ತಾವು ತಮ್ಮ ನುಡಿಯನ್ನು ಬಳಕೆ ಮಾಡುವವರೆಗೂ ಹೊಸ ಪದಗಳನ್ನು ಸೇರಿಸಿಕೊಳ್ಳುತ್ತಲೇ ಇರಬಹುದು. ಆದರೆ ತಮ್ಮ ಭಾಷೆಯ ರಾಚನಿಕ ನಿಯಮಗಳನ್ನು ಒಮ್ಮೆ 'ಕಲಿತ'ರೆಂದರೆ, ಪಡೆದುಕೊಂಡರೆಂದರೆ ಅದನ್ನು ಹೆಚ್ಚಿಸಿಕೊಳ್ಳುವ ಪ್ರಸಂಗ ಒದಗುವುದೇ ಇಲ್ಲ. ಭಾಷಿಕರು ತಮ್ಮ ಭಾಷೆಯ ಪದಕೋಶವನ್ನು ಪಡೆದಿರುತ್ತಾರಾದರೂ, ಆ ಭಾಷೆಯಲ್ಲಿ ಬಳಕೆಯಾಗುವ ಎಲ್ಲ ಪದರೂಪಗಳನ್ನು ಅವುಗಳ ಅರ್ಥ ಸಾಧ್ಯತೆಗಳನ್ನು ಅರಿತಿರುತ್ತಾರೆಂದು ಹೇಳಬರುವುದಿಲ್ಲ. ಹಾಗಾಗಿ ಒಂದು ಭಾಷೆಯ ಪದಕೋಶ ಇಡಿಯಾಗಿ ಆ ಭಾಷೆಯನ್ನಾಡುವ ಯಾರಲ್ಲೂ ಇರುವುದು ಸಾಧ್ಯವಿಲ್ಲ; ಅದನ್ನು ಇಡಿಯಾಗಿ ತಾನು ಬಲ್ಲೆ ಎಂದು ಯಾರೂ ಹೇಳುವಂತಿಲ್ಲ. ಹಾಗಾದರೆ ಭಾಷೆಯ ಪದಕೋಶವೆಂಬುದು ಎಲ್ಲಿರುತ್ತದೆ? ಈ ಪ್ರಶ್ನೆಗೆ

ಉತ್ತರ ಕೊಡುವುದು ಕಷ್ಟ ಅದನ್ನು ಪ್ರಯತ್ನದಿಂದ ಕಟ್ಟಬೇಕಾಗುತ್ತದೆ. ಹಾಗೆ ಕಟ್ಟಿದ್ದೇ ಅಂತಿಮವೆಂದು ಯಾರೂ ಹೇಳಲಾರರು. ಏಕೆಂದರೆ ಪದಕೋಶ ಬೆಳೆಯುತ್ತಲೇ ಇರುತ್ತದೆ.

ಭಾಷಿಕರರು ಪದಕೋಶವನ್ನು ನೆನಪಿಟ್ಟುಕೊಂಡಿರುತ್ತಾರಷ್ಟೆ ತಾವು ಮಾತಾಡಿದಾಗ/ಓದಿದಾಗ ಮತ್ತು ಕೇಳುವಾಗ/ಬರೆಯುವಾಗ ಈ ಪದಕೋಶವನ್ನು ನೆನಪಿನಿಂದ ಹೊರಗೆಳೆದು ಬಳಸುತ್ತಿರುತ್ತಾರೆ. ಪದಕೋಶ ನೆನಪಿನಲ್ಲಿ ಹೇಗೆ ಸಂಗ್ರಹವಾಗಿರುತ್ತದೆ ಮತ್ತು ಬೇಕಾದ ಪದವನ್ನು ಹೇಗೆ ನೆನಪಿಗೆ ತಂದುಕೊಳ್ಳಲಾಗುತ್ತದೆ ಎನ್ನುವುದು ಕುತೂಹಲದ ವಿಷಯ. ಆದರೆ ಈ ಬಗೆಗೆ ನಮ್ಮ ಈವರೆಗಿನ ತಿಳುವಳಿಕೆ ಏನೂ ಸಾಲದಾಗಿದೆ. ನಿಘಂಟಿನಲ್ಲಿ ಮುದ್ರಣಗೊಂಡಿರುವಂತೆ ಅಕಾರಾದಿಯಾಗಿಯಂತೂ ನಾವು ಪದಕೋಶವನ್ನು ನೆನಪಿಟ್ಟುಕೊಂಡಿರುವುದಿಲ್ಲ. ಒಂದು ಊಹೆಯನ್ನು ಮಾಡೋಣ. ಪದಗಳ ಅರ್ಥದ ನಡುವೆ ಇರುವ ಸಂಬಂಧವನ್ನು ಅನುಸರಿಸಿ ಪದಗಳನ್ನು ಗುಂಪುಗುಂಪಾಗಿ ನಾವು ನಮ್ಮ ಮೆದುಳಿನಲ್ಲಿ ಯಾವುದೋ ಒಂದು ಜಾಗದಲ್ಲಿ ನೆನಪಿಟ್ಟು ಕೊಂಡಿರುವುದು ಸಾಧ್ಯ. ಗ್ರಂಥಾಲಯದಲ್ಲಿ ಪುಸ್ತಕಗಳನ್ನು ಜೋಡಿಸಿಡುವ ಬಗೆಯನ್ನು ನೆನಪಿಸಿಕೊಳ್ಳಿ. ಪುಸ್ತಕಗಳನ್ನು ಕೊಂಡುಕೊಂಡ ಕ್ರಮದಲ್ಲಿ ಅವುಗಳಿಗೆ ಕ್ರಮ ಸಂಖ್ಯೆಯನ್ನು ನೀಡಿದ್ದರೂ, ಅವುಗಳನ್ನು ವಿಂಗಡಿಸಿ ಜೋಡಿಸುವಾಗ ಒಂದು ವಿಷಯಕ್ಕೆ ಸಂಬಂಧಿಸಿದ ಪುಸ್ತಕಗಳು ಒಂದೆಡೆ ದೊರಕುವಂತೆ ಮಾಡಿರುತ್ತಾರೆ. ಒಂದು ವಿಷಯ ಎನ್ನುವುದನ್ನು ವಿವರಿಸುವುದು ಸುಲಭವಲ್ಲ. ಮೇಲು ನೋಟಕ್ಕೆ ಕನ್ನಡ ಕವಿತೆ, ಕತೆ, ನಾಟಕ, ಕಾದಂಬರಿ, ಪ್ರಬಂಧ, ವಿಮರ್ಶೆ ಹೀಗೆ ತೋರಗುಂಪುಗಳನ್ನು ಮಾಡಿಕೊಂಡು ಮನೆಯಲ್ಲಿ ಪುಸ್ತಕಗಳನ್ನು ಜೋಡಿಸಿಕೊಳ್ಳುತ್ತೇವೆ, ಅವುಗಳ ಒಳ ಜೋಡಣೆಯನ್ನು ಮಾಡುವುದಕ್ಕೆ ಬೇರೆಬೇರೆ ಬಗೆಗಳಿವೆ. ಒಬ್ಬರೇ ಬರೆದ ನಾಟಕಗಳು ಒಂದೆಡೆ ಇರಬಹುದು; ಅಥವಾ ಒಂದೇ ಬಗೆಯ ವಸ್ತು (ಸಾಮಾಜಿಕ, ಚಾರಿತ್ರಿಕ, ಪೌರಾಣಿಕ ಹೀಗೆ) ವನ್ನು ಹೊಂದಿರುವ ನಾಟಕಗಳು ಒಂದೆಡೆ ಸಿಗುವಂತೆ ಮಾಡಬಹುದು. ಏನೇ ಆದರೂ ಸಾವಿರಾರು ಪುಸ್ತಕಗಳಲ್ಲಿ ನಮಗೆ ಬೇಕಾದ ಪುಸ್ತಕ ಬೇಕೆಂದಾಗ ಕೈಗೆ ಸಿಗುವಂತಾಗಲು ಈ ಜೋಡಣೆಯನ್ನು ಅಳವಡಿಸಿರುತ್ತಾರೆ. ಭಾಷೆಯ ಪದಗಳನ್ನು ಕೂಡ ಹೀಗೆ ಒಳಜೋಡಣೆಗೆ ಒಳಪಡಿಸಬಹುದೆಂಬುದೇ ಥಿಸಾರಸ್ ನ ಹಿಂದಿರುವ ತರ್ಕ. ಆದರೆ ಮೆದುಳಿನಲ್ಲೇ ಈ ಬಗೆಯ ಒಳಜೋಡಣೆಯಾಗಿರುತ್ತದೆಂದು ಹೇಳಲಾಗದಿದ್ದರೂ, ಈಗ ನಮಗೆ ಬೇಕಾದ ಪದವನ್ನು ಹುಡುಕಿ ತೆಗೆಯಲು ಇಂತಹ ಕೋಶಗಳು ನೆರವಿಗೆ ಬರುತ್ತವೆ. ಸಾಮಾನ್ಯ ನಿಘಂಟುಗಳು ಪದರೂಪವನ್ನು ಅನುಸರಿಸಿ ಪದಾರ್ಥವನ್ನು ತಿಳಿಯಲು ನೆರವಾದರೆ, ಥಿಸಾರಸ್‌ಗಳು ಪದಾರ್ಥದ ನೆರವಿನಿಂದ ಪದರೂಪಗಳನ್ನು ಹುಡುಕಲು ನೆರವಾಗುತ್ತವೆ.

ಈ ಕೋಶವನ್ನು 'ಪದನಿಧಿ' ಎನ್ನಲಾಗಿದೆ. ನಿಧಿ ಎನ್ನುವ ಪದ ಹಣಕ್ಕೆ ಸಂಬಂಧಿಸಿದ್ದು. ಭಾಷೆಯ ಪದಗಳನ್ನು ಹಣಕ್ಕೆ ಸಂಬಂಧಿಸಿದ ಮಾತುಗಳಿಂದ ವಿವರಿಸುವುದು ಒಂದು ಬಗೆ. ನಿಧಿ ಎಂದರೆ ಅದು ಕೂಡಿಟ್ಟ ಹಣ; ಕಾಯ್ದಿರಿಸಿದ ಹಣ. ಅದರಲ್ಲಿ 'ಬೆಲೆಬಾಳುವ' ನಾಣ್ಯಗಳಿರುತ್ತವೆ. ಆದರೆ ಅವುಗಳನ್ನೆಲ್ಲ ಬಳಸಲು ಬರುವುದಿಲ್ಲ. ಆದರೂ ಅವು ನಾಣ್ಯಗಳೇ. ವಿಜಯನಗರ ಕಾಲದ ವರಹವೊಂದಕ್ಕೆ ಈಗ ಚಲಾವಣೆ ಇಲ್ಲ. ಅದರ ಮುಖಬೆಲೆಗೆ

ಅದನ್ನು ಬಳಸುವುದು ಆಗುವುದಿಲ್ಲ. ಆದರೂ ಆ ನಾಣ್ಯಕ್ಕೆ ಭಾವನಾತ್ಮಕವಾಗಿ 'ನಮ್ಮದು' ಎಂಬ ಬೆಲೆಯನ್ನು ನಾವು ಕೊಟ್ಟುಕೊಳ್ಳುತ್ತೇವೆ. ಈ ಪದನಿಧಿಯಲ್ಲಿ ಇರುವ ಪದಗಳು ಅದೇ ಬಗೆಯವು. ಇವುಗಳಲ್ಲಿ ಇಂದು, ಈಗ ಬಳಕೆಯಾಗುವ ಸಾವಿರಾರು ಪದಗಳಿರುವಂತೆ; ಎಂದೋ ಎಲ್ಲೋ ಬಳಕೆಯಾದ ಸಾವಿರಾರು ಪದಗಳು ಇವೆ. ಅವುಗಳನ್ನು ಯಾರು ಎಲ್ಲಿ ಬಳಸಿದರೆಂಬುದು ಕೂಡ ನಮಗೀಗ ಗೊತ್ತಾಗುವಂತಿಲ್ಲ. ಎಂದೆಂದಿಗೂ ಬಳಕೆಯಾಗಲು ಆಗದಿರುವ ಪದಗಳು ಇವೆ. ಮನೆಯ ಅಟ್ಟದ ಮೇಲೆ ಕೂಡಿಟ್ಟ ಹಳೆಯ ವಸ್ತುಗಳಲ್ಲಿ ಕೆಲವನ್ನು ಬೇಡವೆಂದು ಎಸೆದರೂ ಬಹು ಪಾಲನ್ನು ಮನೆ ಬದಲಿಸುವಾಗಲೆಲ್ಲ ಹೊತ್ತು ತಿರುಗುತ್ತೇವಷ್ಟೆ. ಎಸೆದ ಎಷ್ಟೋ ಪದಗಳು ಈಗ ನಮ್ಮ ಪಾಲಿಗೆ ಇಲ್ಲವಾಗಿವೆ. ಉಳಿದ ಈ ಎಲ್ಲ ಪದಗಳು ಕನ್ನಡದ ಪದಗಳೆಂದು ನಾವು ನಮ್ಮ ಹಕ್ಕನ್ನು ಸ್ಥಾಪಿಸುತ್ತೇವೆ. ಇದು ಕನ್ನಡದ ಸ್ವತ್ತು; ಕನ್ನಡಿಗರ ಸ್ವತ್ತಲ್ಲ. ಏಕೆಂದರೆ ಕನ್ನಡಿಗರು ಈ ಪದಗಳೆಲ್ಲವನ್ನೂ ಎಂದೂ ಬಳಸಲಾರರು; ಅಷ್ಟೇಕೆ ಕಿವಿಯಾರ ಕೇಳಲು ಕೂಡ ಸಾಧ್ಯವಿಲ್ಲ.

ಪದನಿಧಿಯ ಸಂಪಾದಕರಾದ ಪ್ರಶಾಂತ್ ಮಾಡ್ತಾ ಅವರು ಇಲ್ಲಿ ಪದಗಳನ್ನು ಎಂಟು ಪ್ರಧಾನ ಗುಂಪುಗಳಲ್ಲಿ ( ಅಮೂರ್ತ ಸಂಬಂಧಗಳು, ಸ್ಥಳ-ಅವಕಾಶ, ಭೌತಿಕತೆ, ವಸ್ತುಲೋಕ, ಸಂವೇದನೆ, ಬೌದ್ಧಿಕತೆ, ಇಚ್ಛೆ ಮತ್ತು ಭಾವಗಳು) ಜೋಡಿಸಿದ್ದಾರೆ. ಈ ಪ್ರಧಾನ ಗುಂಪುಗಳಲ್ಲಿ ಒಟ್ಟು ಹತ್ತೊಂಬತ್ತು ಒಳಗುಂಪುಗಳಿವೆ. ಈ ಒಳಗುಂಪುಗಳಲ್ಲಿ ಮತ್ತೆ ವಿಂಗಡಣೆ ಮಾಡಿ ಎಂಟನೂರ ಎಂಬತ್ನಾಲ್ಕು ಚಿಕ್ಕ ಗುಂಪುಗಳನ್ನು ಮಾಡಿದ್ದಾರೆ. ಈ ಎಲ್ಲ ಗುಂಪುಗಳಲ್ಲೂ ಒಟ್ಟು ಮೂವತ್ತೈದು ಸಾವಿರ ಪದಗಳಿರಬಹುದು. ಈ ಪದಗಳ ರೂಪದ ಮೇಲೆ ಹುಡುಕಲು ಅನುಕೂಲವಾಗುವಂತೆ ಪದಗಳ ಅಕಾರಾದಿ ಪಟ್ಟಿಯೊಂದನ್ನು ಕೋಶದ ಕೊನೆಯಲ್ಲಿ ಕೊಟ್ಟಿದ್ದಾರೆ. ತಮ್ಮ ಕನ್ನಡ ಬರವಣಿಗೆಯಲ್ಲಿ ವೈವಿಧ್ಯವನ್ನು ತರಬೇಕೆಂದು ಬಯಸುವವರು ಈ ಕೋಶವನ್ನು ಬಳಸಿ ತಮಗೆ ಗೊತ್ತಿರುವ ಪದಗಳಗೆ ಬದಲು ಪದಗಳನ್ನು ಹುಡುಕಿಕೊಳ್ಳಬಹುದಾಗಿದೆ. ಕನ್ನಡದಲ್ಲಿ ಈ ಬಗೆಯ ಹುಡುಕಾಟ ಮಾಡುವವರು ಕಡಿಮೆ. ಅದರಲ್ಲೂ ಈ ಪದಕೋಶದಲ್ಲಿ ಬರವಣಿಗೆಯಲ್ಲಿ ಬಳಕೆಯಾದ ಪದಗಳಿರುವಂತೆ, ಕೇವಲ ಮಾತಿನಲ್ಲಿ ಮಾತ್ರ ಬಳಕೆಯಾಗುತ್ತಿದ್ದ ಪದಗಳೂ ಇವೆ. ಈ ಮಾತಿಗೆ ಮಿತವಾದ ಪದಗಳು ತಮ್ಮ ಉಚ್ಚಾರಣೆಯ ರೂಪದಲ್ಲೇ ದಾಖಲಾಗಿವೆ. ಹಾಗಾಗಿ ಆ ಪದಗಳನ್ನು ಬರವಣಿಗೆಗೆ ಅಳವಡಿಸಿಕೊಳ್ಳುವುದು ಕಷ್ಟ. ಇನ್ನು ಬರವಣಿಗೆಯಲ್ಲಿ ಕಂಡು ಬಂದ ಪದಗಳಲ್ಲಿ ಬಹುಪಾಲು ಸಂಸ್ಕೃತ ಪದಗಳು ಮತ್ತು ಬಳಕೆ ತಪ್ಪಿದ ಕನ್ನಡ ಪದಗಳು. ಇವುಗಳನ್ನು ಇಂದಿನ ಕನ್ನಡ ಬರವಣಿಗೆಗೆ ಹೇಗೆ ಬಳಸಿಕೊಳ್ಳಬೇಕೆಂಬುದು ಆಯಾ ಬಳಕೆದಾರರು ಎದುರಿಸಬೇಕಾದ ಸಮಸ್ಯೆಯಾಗಿದೆ.

ಈ ಕೋಶವನ್ನು ಸಮಾನಾರ್ಥಕ-ಸಮೀಪಾತ್ಮಕ- ಸಂಬಂಧಿತ-ವಿರುದ್ಧಾರ್ಥಕ ಪದಗಳ ಕೋಶವೆಂದು ಕರೆಯಲಾಗಿದೆ. ಈ ಪದಕೋಶದಲ್ಲಿ ಚಿಕ್ಕ ಗುಂಪುಗಳಲ್ಲಿ ಅಳವಡಿಸಲಾದ ಪದಗಳು ಸಮಾನಾರ್ಥಕವಾಗಿರುತ್ತವೆ. ಅವುಗಳಿಗಿಂತ

ದೊಡ್ಡಗುಂಪುಗಳಲ್ಲಿರುವ ಪದಗಳ ನಡುವೆ ಸಮೀಪಾತ್ಮಕ ಮತ್ತು ಸಂಬಂಧಿತ ಅರ್ಥವಿರುವುದೆಂದು ಸಂಪಾದಕರು ತಿಳಿಸಿದ್ದಾರೆ. ಪ್ರಧಾನ ಗುಂಪಿನ ಮೊದಲ ಒಳಗುಂಪಿನಿಂದ ಕೊನೆಯ ಗುಂಪಿಗೆ ಬರುವ ಹೊತ್ತಿಗೆ ವಿರುದ್ಧಾರ್ಥಕ ಪದಗಳ ನೆಲೆಗೆ ತಲುಪುವ ಸಾಧ್ಯತೆಗಳಿವೆ. ಅರ್ಥವೆನ್ನುವುದು ಹೀಗೆ ಒಂದು ಸರಣಿಯ ರೂಪದಲ್ಲಿ ಇರುತ್ತದೆ; ಹತ್ತಿರ ಹತ್ತಿರ ಇರುವ ಪದಗಳ ನಡುವೆ ಸಮಾನಾರ್ಥದ ಸಂಬಂಧವಿದ್ದರೆ ಅವುಗಳಿಂದ ದೂರ ಸರಿಯುತ್ತ ಹೋದಂತೆ ಕೊನೆಗೆ ಮೊದಲ ಪದಕ್ಕೆ ವಿರುದ್ಧವಾದ ಪದಕ್ಕೆ ದಾಟುತ್ತೇವೆ ಎನ್ನುವ ತರ್ಕವನ್ನು ಸಂಪಾದಕರು ಒಪ್ಪಿ ಅದಕ್ಕನುಗುಣವಾಗಿ ಪದಕೋಶವನ್ನು ಸಿದ್ಧಪಡಿಸಿದ್ದಾರೆ. ಈ ಅರ್ಥಸರಣಿಯ ತರ್ಕ ಭಾಷೆಯ ಪದಗಳ ಲಕ್ಷಣ ಎನ್ನುವುದಕ್ಕಿಂತ ಅವುಗಳನ್ನು ಅಳವಡಿಸಲು ನಾವು ಆಯ್ದುಕೊಳ್ಳುವ ಬಗೆ ಎಂದು ತಿಳಿಯುವುದೇ ಹೆಚ್ಚು ಸರಿಯಾದ ವ್ಯಾಖ್ಯೆ.

ಇನ್ನು ಪದಗಳನ್ನು ವಿಂಗಡಿಸಿ ಅಳವಡಿಸಲು ಸಂಪಾದಕರು ಆಯ್ದುಕೊಂಡಿರುವ ವಿಧಾನವನ್ನು ಗಮನಿಸೋಣ. ಈ ವಿಂಗಡಣೆಯ ಹಿಂದೆ ಅದರದ್ದೇ ಆದ ತರ್ಕವಿದೆ. ಲೋಕಾನುಭವವನ್ನು ವಿವರಿಸುವ ಬಗೆಯಿದೆ. ಈ ವಿಂಗಡನೆಯ ಹಿಂದಿನ ತರ್ಕವನ್ನು ನಿರಾಕರಿಸಲು ಬರುವುದಿಲ್ಲ. ಆದರೆ ಇದಕ್ಕಿಂತ ಬೇರೆಯದೇ ಆದ ಬಗೆಯಲ್ಲಿ ವಿಂಗಡಿಸಲು ಸಾಧ್ಯವಿದೆ ಎನ್ನುವುದನ್ನು ಗಮನಿಸಲೇ ಬೇಕಾಗುತ್ತದೆ. ಈ ಬೇರೆ ಬೇರೆ ವಿಂಗಡಣೆಗಳಲ್ಲಿ ಯಾವುದು ಸರಿ ಯಾವುದು ತಪ್ಪು ಎಂಬ ಪ್ರಶ್ನೆಗೆ ಅರ್ಥವಿಲ್ಲ. ಯಾವ ವಿಂಗಡಣೆಯೂ ಕನ್ನಡ ಭಾಷೆಯ ಪದಕೋಶದಲ್ಲಿ ಅಂತರ್ಗತವಾಗಿರುವ ವಿಭಜನೆಯನ್ನು ಹುಡುಕುವುದಿಲ್ಲ. ತನ್ನದೇ ಆದ ತರ್ಕ ಮತ್ತು ತಾತ್ವಿಕತೆಯಲ್ಲಿ ರಚನೆಗೊಂಡ ಚೌಕಟ್ಟುಗಳಲ್ಲಿ ಕನ್ನಡದ ಪದಗಳನ್ನು (ಅಂಚೆಯವರು ಪತ್ರಗಳನ್ನು ಹಂಚಿಕೆಗೆ ಅನುಕೂಲವಾಗುವಂತೆ ವಿಂಗಡಿಸುವಂತೆ) ಅಳವಡಿಸಿಕೊಳ್ಳುತ್ತದೆ.

ಈ ಕೋಶದ ಉಪಯೋಗವೇನು? ನಮಗೆ ಯಾವುದೋ ಒಂದು ಪದದ ಅರ್ಥ ತಿಳಿಯಬೇಕೆಂದಾಗ ಈ ಕೋಶವನ್ನು ನೆಮ್ಮುವುದು ಆಗದ ಮಾತು. ಏಕೆಂದರೆ ಇಲ್ಲಿ ಪದಗಳಿಗೆ ಪ್ರತಿಯಾಗಿ ಇನ್ನೊಂದು ಪದ ದೊರಕುವುದೇ ಹೊರತು ಅದರ ಅರ್ಥವಲ್ಲ. ಈ ಕೋಶವನ್ನು ಆಗಾಗ ಯಾವುದಾದರೂ ಪುಟವನ್ನು ತೆರೆದು ಸುಮ್ಮನೆ ಗಮನಿಸುತ್ತಾ ಹೋಗುವುದನ್ನು ಒಂದು ಪವ್ಯಾಸವನ್ನಾಗಿ ಮಾಡಿಕೊಳ್ಳಬೇಕು. ಇದರಿಂದ ಬೇರೆ ಬೇರೆ ಪದಗಳ ಪರಿಚಯವಾಗುತ್ತದೆ. ಅವುಗಳ ಒಳಸಂಬಂಧದ ರೀತಿ ನೀತಿಗಳು ನಮಗೆ ತಿಳಿಯುತ್ತವೆ. ಹೀಗೆ ಹಲವರು ಈ ಕೋಶವನ್ನು ಬಳಸತೊಡಗಬೇಕು. ಕನ್ನಡವನ್ನು ಒಂದು ವಿಷಯವನ್ನಾಗಿ ಪದವಿ ತರಗತಿಯಲ್ಲಿ ಓದುವವರು, ಕನ್ನಡದಲ್ಲಿ ಎಂ.ಎ. ಪದವಿಗಾಗಿ ಓದುತ್ತಿರುವವರು, ಪತ್ರಕರ್ತರು ಮತ್ತು ಬೇರೆಬೇರೆ ಸಂವಹನ ಮಾಧ್ಯಮಗಳಲ್ಲಿ ಬರವಣಿಗೆಯಲ್ಲಿ ತೊಡಗಿರುವವರು ಈ ಕೋಶವನ್ನು ಆಗಾಗ 'ನೋಡುವುದನ್ನು' ಮತ್ತು ತೆಗೆದು ಓದುವುದನ್ನು ಅಭ್ಯಾಸ ಮಾಡಿಕೊಳ್ಳಬೇಕು. ಸಂಪಾದಕರು ಈ ಕೋಶ ಸಿದ್ಧತೆಗೆ ಪಟ್ಟಿರುವ ಶ್ರಮ ಆಗ ಮಾತ್ರ ಸಾರ್ಥಕವಾಗುತ್ತದೆ.

# ಕನ್ನಡ ಪದಪ್ರಯೋಗ

ಮಯೂರ ಪತ್ರಿಕೆಯ ಒಂದು ಸಂಚಿಕೆಯಲ್ಲಿ ಪ್ರಕಟವಾದ ಕವಿತೆಗಳಲ್ಲಿ ಕಂಡುಬಂದ ಕೆಲವು ಪದಗಳನ್ನು ಮುಂದೆ ಪಟ್ಟಿ ಮಾಡಿದೆ. ಈ ಪದ ಪ್ರಯೋಗಗಳು ಸಾಮಾನ್ಯವಾಗಿ ನಮ್ಮ ಮಾತುಗಳಲ್ಲಿಯಾಗಲೀ ಅಥವಾ ಬರಹಗಳಲ್ಲಿಯಾಗಲೀ ಕಾಣಸಿಗುವಂತಹುಗಳಲ್ಲ. ಇವುಗಳಿಗೆ ಬದಲಾಗಿ ನಾವು ಬಳಸುವ ಪ್ರಯೋಗಗಳನ್ನು ಆಯಾ ಪದ ಪ್ರಯೋಗಗಳ ಮುಂದಿನ ಕಂಸಗಳಲ್ಲಿ ಕೊಟ್ಟಿದೆ. ಪ್ರೀತಿಯಲಿ(ಪ್ರೀತಿಯಲ್ಲಿ), ಎನಗಿಲ್ಲ (ನನಗಿಲ್ಲ), ಉರಿವ (ಉರಿಯುವ), ಕುಲುಮೆಯಲಿ(ಕುಲುಮೆಯಲ್ಲಿ), ಮಾತುಗಳನು (ಮಾತುಗಳನ್ನು), ಹುಡುಕುವುದೆಂತು (ಹುಡುಕುವುದು ಹೇಗೆ), ಮೂಟೆಗಳನು (ಮೂಟೆಗಳನ್ನು), ಕುದಿವ (ಕುದಿಯುವ), ಪದರಿನಲಿ (ಪದರಿನಲ್ಲಿ), ಸಾಗಿರಲು (ಸಾಗಿರುವಾಗ, ಸಾಗುತ್ತಿರುವಾಗ)), ಭಾವದಲಿ (ಭಾವದಲ್ಲಿ), ಮರಳದಂಡೆಯಲಿ (ಮರಳದಂಡೆಯಲ್ಲಿ), ಕನಸ ಹೊತ್ತು (ಕನಸನ್ನು ಹೊತ್ತುಕೊಂಡು), ಈಸೊಂದು (ಇಷ್ಟೊಂದು), ಬದುಕ ಪಯಣ (ಬದುಕಿನ ಪಯಣ), ಮರಳುಗಾಡ ಹೆಜ್ಜೆಗುರುತು (ಮರಳುಗಾಡಿನ ಹೆಜ್ಜೆ ಗುರುತು), ಪಯಣಕೆ (ಪಯಣಕ್ಕೆ), ಕುಳಿಯಲಿ (ಕುಳಿಯಲ್ಲಿ), ಯಾತ್ರಿಕನ ಕೆಣಕುತಿದೆ (ಯಾತ್ರಿಕನನ್ನು ಕೆಣಕುತ್ತಿದೆ), ಸಾರುತಿದೆ (ಸಾರುತ್ತಿದೆ), ಮೊಲೆಗಳನೆ (ಮೊಲೆಗಳನ್ನೆ), ಬಟ್ಟಲನು (ಬಟ್ಟಲನ್ನು), ಕೇಳು ಸಂಗೀತವ (ಕೇಳು ಸಂಗೀತವನ್ನು). ಹೀಗೆ ಕವಿತೆಗಳಲ್ಲಿ ಬಳಸದ ಪದ ಪ್ರಯೋಗಗಳು ಏಕೆ ಕಾಣಿಸಿಕೊಳ್ಳುತ್ತವೆ? ಇದಕ್ಕೆ ಉತ್ತರ ಅಷ್ಟು ಸುಲಭವಲ್ಲ. ಆದರೆ ಇಷ್ಟಂತೂ ಹೇಳಲು ಸಾಧ್ಯ. ಈ ಪ್ರಯೋಗಗಳು ಈಗ ಸಾಮಾನ್ಯವಾಗಿ ಕಾಣದಿದ್ದರೂ ಕನ್ನಡದಲ್ಲಿ ಯಾವುದೋ ಒಂದು ಕಾಲದಲ್ಲಿ ಬಳಕೆಯಾಗುತ್ತಿದ್ದವು.

ಪಟ್ಟಿ ಮಾಡಿದ ಪ್ರಯೋಗಗಳನ್ನು ಕೊಂಚ ಎಚ್ಚರದಿಂದ ಗಮನಿಸಿದರೆ ಅವೆಲ್ಲವೂ ಕನ್ನಡದ ಹಿಂದಿನ ಪ್ರಭೇದವಾದ ನಡುಗನ್ನಡದಲ್ಲಿ ಬಳಕೆಯಾಗುತ್ತಿದ್ದವು ಎನ್ನುವುದು ಸುಲಭವಾಗಿ ಗೊತ್ತಾಗುವಂತಿದೆ. ನಡುಗನ್ನಡ ಪ್ರಭೇದದಲ್ಲಿ ಇವು ಬರಹದಲ್ಲಿ ಬಳಕೆಯಾಗುತ್ತಿದ್ದಂತಹವೋ ಅಥವಾ ಬರಹ ಮತ್ತು ಮಾತಿನಲ್ಲಿ ಕೂಡಿ ಬಳಕೆಯಾಗುತ್ತಿದ್ದಂತಹವೋ ಎಂಬ ಪ್ರಶ್ನೆಗೆ ಉತ್ತರ ಸಿಗದು. ಬರಹದಲ್ಲೂ ಎಲ್ಲ ಕಡೆಯೂ (ಉದಾ.ಗೆ ಕಾವ್ಯಗಳಲ್ಲಿ ಮತ್ತು ಶಾಸನಗಳಲ್ಲಿ) ಇವೇ ರೂಪಗಳು ಸಿಗುತ್ತವೆಂದು ಖಾತ್ರಿಯಾಗಿ ಹೇಳಲು ಬರುವುದಿಲ್ಲ. ಅಲ್ಲದೆ ಕನ್ನಡ ಬಳಕೆಯಲ್ಲಿದ್ದ ಎಲ್ಲ ಪ್ರದೇಶಗಳಲ್ಲೂ ಇಂತಹ ರೂಪಗಳು ಸಮಾನವಾಗಿ ಬಳಕೆಯಲ್ಲಿದ್ದುದಕ್ಕೂ ಪುರಾವೆಗಳಿಲ್ಲ. ಅಂದರೆ

ನಡುಗನ್ನಡದಲ್ಲಿ ಸೀಮಿತವಾಗಿ ಬಳಕೆಯಲ್ಲಿದ್ದ ಇಂತಹ ರೂಪಗಳು ಈಗಲೂ ಕನ್ನಡ ಕವಿತೆಗಳಲ್ಲಿ ಆಗಾಗ ನುಸುಳಿಬರುತ್ತಿವೆ. ಕಳೆದ ಶತಮಾನದ ಮೊದಲ ಅರ್ಧದವರೆಗೆ ರಚನೆಯಾದ ಕವಿತೆಗಳಲ್ಲಿ ಈ ಬಗೆಯ ಪ್ರಯೋಗಗಳು ಬಳಕೆಯಾಗುತ್ತಿದ್ದ ಪ್ರಮಾಣ ತುಂಬಾ ಇತ್ತು. ಅನಂತರ ಕಡಿಮೆಯಾಗುತ್ತಾ ಬಂದರೂ ಸಂಪೂರ್ಣವಾಗಿ ನಿಂತು ಹೋಗಿಲ್ಲ.

ಈ ಉದಾಹರಣೆಗಳಲ್ಲಿ ಕೆಲವು ಸಮಾನ ಅಂಶಗಳಿವೆ. ಇಂದಿನ ಕನ್ನಡಕ್ಕೂ ಅವುಗಳಿಗೂ ಇರುವ ವ್ಯತ್ಯಾಸ ಮುಖ್ಯವಾಗಿ ಅಂಥಾ ಪದಗಳಲ್ಲಿರುವ ಪ್ರತ್ಯಯಗಳಲ್ಲಿರುವುದು ಸ್ಪಷ್ಟವಾಗಿದೆ. –ಅಲ್ಲಿ (ಇದು ಸಪ್ತಮೀ ವಿಭಕ್ತಿ ಪ್ರತ್ಯಯ) –ಅಲಿ (ಕುಳಿಯಲಿ) ಎಂದು ಬಳಕೆಯಾಗಿದೆ; –ಅನ್ನು ಎಂಬುದು (ಇದು ದ್ವಿತೀಯಾ ವಿಭಕ್ತಿ ಪ್ರತ್ಯಯ) ಕೆಲವು ಕಡೆ – ಅನು (ಬಟ್ಟಲನು) ಎಂದೂ, ಮತ್ತೆ ಕೆಲವು ಕಡೆ – ಅ (ಸಂಗೀತವ) ಎಂದೂ ಬಳಕೆಯಾಗಿದೆ; ಹಾಗೆಯೇ ಷಷ್ಠೀ ವಿಭಕ್ತಿ ಪ್ರತ್ಯಯದ ಬಳಕೆಯಲ್ಲೂ ಬದಲಾವಣೆ ಇದೆ. ಮರಳುಗಾಡ < ಮರುಳುಗಾಡಿನ (ಹೊಸಗನ್ನಡ). ಹಾಗೆಯೇ ಚತುರ್ಥೀ ವಿಭಕ್ತಿಯ –ಕ್ಕೆ ಪ್ರತ್ಯಯ –ಕೆ (ಪಯಣಕೆ) ಎಂದಾಗಿದೆ, ಮೂಲ ಪದಗಳಲ್ಲೇ ವ್ಯತ್ಯಾಸ ಇರುವುದೂ ಉಂಟು. ಏಸು( ಎಷ್ಟು), ಎನಗೆ (ನನಗೆ) ಇವು ಉದಾಹರಣೆಗಳು.

ಈ ವಿವರಣೆಯಿಂದ ಕನ್ನಡದಲ್ಲಿ ನಡೆದ ಒಂದು ಧ್ವನಿಬದಲಾವಣೆಯ ಹಿಂದಿನ ನಿಯಮವನ್ನು ಅರಿಯುವುದು ಸಾಧ್ಯವಿದೆ. ಶಾಲಾ ವ್ಯಾಕರಣಗಳು ಹಳಗನ್ನಡದ ವ್ಯಂಜನಾಂತ ಪದಗಳೆಲ್ಲವೂ ನಡುಗನ್ನಡದಲ್ಲಿ ಸ್ವರಾಂತವಾದವು ಎಂದು ತಿಳಿಸುತ್ತವೆ. ಆದರೆ ಈ ನಿಯಮ ಅಷ್ಟು ಸರಳವಾಗಿಲ್ಲ. ಹಳಗನ್ನಡದ ಕಾಲ್, ಪಾಲ್, ಸೋಲ್, ಸೋರ್, ತೀರ್, ಬೀಳ್ ಮುಂತಾದ ಪದಗಳು ಕ್ರಮವಾಗಿ ಕಾಲು, ಪಾಲು, ಸೋಲು, ಸೋರು, ತೀರು, ಬೀಳು ಎಂದಾದವು. ಆದರೆ ಕಣ್, ಪಲ್, ಮಣ್, ಕೊಳ್, ಅನ್, ನಿಲ್, ಸಲ್ ಮುಂತಾದವು ಎರಡೆರಡು ರೀತಿ ಸ್ವರಾಂತವಾಗುತ್ತವೆ. ಕಣ್ಣು,ಕಣು; ಹಲ್ಲು,ಹಲು; ಮಣ್ಣು,ಮಣು; ಕೊಳ್ಳು,ಕೊಳು; ಅನ್ನು,ಅನು; ನಿಲ್ಲು,ನಿಲು; ಸಲ್ಲು,ಸಲು ಎಂಬ ರೂಪಗಳು ಪರ್ಯಾಯ ರೂಪಗಳಾಗಿ ನಡುಗನ್ನಡದಲ್ಲಿ ಬಳಕೆಯಾಗುವುದನ್ನು ನೋಡುತ್ತೇವೆ. ಹೀಗಾಗಲು ಕಾರಣಗಳಿವೆ. ಮೊದಲು ಪಟ್ಟಿ ಮಾಡಿದ ಪದಗಳಲ್ಲಿ ಮೊದಲ ಸ್ವರ ದೀರ್ಘವಾಗಿದೆ. ಎರಡನೆಯ ಪಟ್ಟಿಯ ಪದಗಳಲ್ಲಿ ಮೊದಲ ಸ್ವರ ಹ್ರಸ್ವವಾಗಿದೆ. ಈ ವ್ಯತ್ಯಾಸ ಕನ್ನಡಕ್ಕೆ ಬಹಳ ಮುಖ್ಯವೆಂದು ತೋರುತ್ತದೆ. ( ಈಗಲೂ ಅನ್ಯ ಭಾಷೆಯಿಂದ ಕನ್ನಡಕ್ಕೆ ಪದಗಳನ್ನು ಪಡೆದುಕೊಂಡು ಅವುಗಳ ಉಚ್ಚಾರಣೆಯನ್ನು ನಮಗೆ ತಕ್ಕಂತೆ ಹೊಂದಿಸಿಕೊಳ್ಳುತ್ತೇವೆ. ಆಗ ಕೂಡ ಈ ನಿಯಮ ಬಳಕೆಯಾಗುತ್ತದೆಂಬುದು ಗಮನಿಸ ಬೇಕಾದ ಸಂಗತಿ. ಇಂಗ್ಲಿಶಿನಿಂದ ಪಡೆದುಕೊಂಡ ಬಸ್, ಪೆನ್, ಪಿನ್, ಗನ್ ಪದಗಳು ಬಸ್ಸು, ಪೆನ್ನು, ಪಿನ್ನು ಮತ್ತು ಗನ್ನು ಎಂದಾಗುತ್ತವೆ. ಆದರೆ ಕಾರ್, ಕೇಸ್, ಬಾರ್, ಡೋರ್ ಮುಂತಾದ ಪದಗಳು ಕಾರು, ಕೇಸು, ಬಾರು ಮತ್ತು ಡೋರು ಎಂದಾಗುತ್ತವೆ. ನಾವು ಗಮನಿಸಿದ ವ್ಯತ್ಯಾಸ ಈ ಪದಗಳಲ್ಲೂ

ಇರುವುದನ್ನು ಗುರುತಿಸಬಹುದಾಗಿದೆ.) ನಡುಗನ್ನಡದಲ್ಲಿ ಈ ಸ್ವರಾಂತಗೊಳ್ಳುವ ಕ್ರಿಯೆ ಎರಡು ರೀತಿಯಲ್ಲಿ ನಡೆದಿರುವಂತೆ ತೋರುತ್ತದೆ. ಮೊದಲ ಸ್ವರ ಹ್ರಸ್ವವೋ ಅಥವಾ ದೀರ್ಘವೋ ಎಂಬುದನ್ನು ಗಮನಿಸಿದ ಬದಲಾವಣೆ ಒಂದು ರೀತಿಯದು. ಈ ವ್ಯತ್ಯಾಸವನ್ನು ಗಮನಿಸದೆ ಎಲ್ಲ ವ್ಯಂಜನಾಂತ ಪದಗಳಿಗೂ ಕೊನೆಯಲ್ಲಿ ಉಕಾರವನ್ನು ಸೇರಿಸುವುದು ಇನ್ನೊಂದು ರೀತಿ. ಈ ಎರಡೂ ಬಗೆಯ ಬದಲಾವಣೆಗಳು ಒಟ್ಟಿಗೆ ನಡೆದಿರಲಾರವು. ಹಾಗೆಯೇ ಒಂದೇ ಪ್ರದೇಶದಲ್ಲಿ ಎರಡೂ ರೂಪಗಳ ಬಳಕೆಯಾಗಿರುವುದು ಕೂಡ ಅಸಾಧ್ಯ. ಹಾಗಿದ್ದಲ್ಲಿ ಈ ಎರಡು ಬಗೆಯ ವ್ಯತ್ಯಾಸಗಳನ್ನು ಹೇಗೆ ಅರ್ಥಮಾಡಿಕೊಳ್ಳಬೇಕು? ಈ ಬಗೆಗೆ ಇನ್ನೂ ಸಂಶೋಧನೆಗಳು ನಡೆಯಬೇಕಾಗಿದೆ.

ಇದಲ್ಲದೆ ಇನ್ನೂ ಒಂದು ಬಗೆಯ ಸ್ವರಾಂತಗೊಳ್ಳುವ ಬಗೆ ಕನ್ನಡದಲ್ಲಿ ನಡೆದಂತೆ ತೋರುತ್ತದೆ. ಒಂದುವೇಳೆ ಮೂಲ ಹಳಗನ್ನಡ ಪದದ ಮೊದಲ ಸ್ವರ ಹ್ರಸ್ವವಾಗಿದ್ದು ಆ ಪದದ ಕೊನೆಯ ವ್ಯಂಜನ **ನ್** ಇಲ್ಲವೇ **ಳ್** ಅಗಿದ್ದಲ್ಲಿ, ಈ ವ್ಯಂಜನಗಳಿಗೆ ಉಕಾರವನ್ನು ಸೇರಿಸುವ ಬದಲು ಆ ವ್ಯಂಜನಗಳನ್ನೇ ಬಿಟ್ಟು ಬಿಡುವ ಕ್ರಿಯೆ ನಡೆದಿರುವಂತೆ ತೋರುತ್ತದೆ. **ಅನ್** ಎನ್ನುವ ಪ್ರತ್ಯಯ **ಅನ್ನು/ಅನು** ಆಗಿರುವಂತೆ, -**ಅ** ಎಂದಷ್ಟೇ ಉಳಿದುಕೊಂಡಿರುವುದಕ್ಕೆ ಇದೇ ಕಾರಣ. (ಗುಮ್ಮನ ಕರೆಯದಿರೇ ಅಮ್ಮಾ ಎಂಬ ಪುರಂದರ ದಾಸರ ಉಕ್ತಿ ಗಮನಿಸಿ) ಕನ್ನಡದ ಕೆಲವು ಪ್ರದೇಶಗಳಲ್ಲಿ ಈ ಬದಲಾವಣೆ ಆಡುಮಾತಿನಲ್ಲೂ ಕಂಡುಬರುತ್ತದೆ. ಕೊಳ್ಳೇಗಾಲದ ಕಡೆ ಮಗ (<ಮಗನ್), ಮಗ (<ಮಗಳ್), ಮಕ್ಕ (<ಮಕ್ಕಳ್) ಎಂಬ ರೂಪಗಳಿರುವುದು ಈ ಬದಲಾವಣೆಯಿಂದಾಗಿಯೇ ಆಗಿದೆ. ಇಲ್ಲಿ ಮೊದಲ ಪದವನ್ನು ಉಚ್ಚರಿಸುವಾಗ ಕೊನೆಯಲ್ಲಿ ಅನುನಾಸಿಕ ಉಚ್ಚಾರಣೆ ಸ್ಪಷ್ಟವಾಗಿ ಕೇಳುತ್ತದೆ. ಇದು ಮೂಲದ ಮಗನ್ ಪದದ ಕೊನೆಯ **ನ್** ಧ್ವನಿಯನ್ನು ಬಿಟ್ಟುಕೊಟ್ಟಾಗ ಅದು ತನ್ನ ಹಿಂದಿನ ಸ್ವರಕ್ಕೆ ಅನುನಾಸಿಕದ ಲಕ್ಷಣವನ್ನು ರವಾನಿಸಿರುತ್ತದೆ. ಮತ್ತೆ ಕೆಲವು ಕಡೆ ಅವ (<ಅವನ್), ಅವ (<ಅವಳ್) ಎಂಬ ಪದಗಳೂ ಇವೆಯಷ್ಟೆ? ಇಲ್ಲಿಯೂ ಮೇಲೆ ಹೇಳಿದ ಬದಲಾವಣೆಯೇ ನಡೆದಿದೆ.

ಈಗಾಗಲೇ ಗಮನಿಸದಂತೆ ಹೊಸಗನ್ನಡ ವ್ಯಂಜನಾಂತ ಪದಗಳನ್ನು ಸ್ವರಾಂತ ಮಾಡಿಕೊಳ್ಳುವಾಗ ಅನುಸರಿಸುವ ನಿಯಮ ಖಚಿತವಾಗಿದೆ. ಮೂಲ ಪದದ ಮೊದಲನೆಯ ಸ್ವರ ಹ್ರಸ್ವವೋ ಅಥವಾ ದೀರ್ಘವೋ ಎಂಬುದು ಮುಖ್ಯ (ಮೂಲಪದದಲ್ಲಿ ಆ ಸ್ವರಗಳು ಹ್ರಸ್ವ ಇಲ್ಲವೇ ದೀರ್ಘ ಎಂಬ ವ್ಯತ್ಯಾಸ ಇಲ್ಲದಿದ್ದರೂ ನಾವು ಆ ಪದಗಳನ್ನು ಕೇಳಿಸಿಕೊಳ್ಳುವಾಗ ಹೇಗೆ ಕೇಳಿಸಿಕೊಳ್ಳುತ್ತೇವೆ ಎನ್ನುವುದು ಈ ಬದಲಾವಣೆಯನ್ನು ನಿರ್ದೇಶಿಸುವಂತಿದೆ.) ಆದ್ದರಿಂದ ಎಲ್ಲ ವ್ಯಂಜನಾಂತ ಪದಗಳಿಗೂ ಉಕಾರವನ್ನು ಕೊನೆಯಲ್ಲಿ ಸೇರಿಸುವುದಾಗಲೀ ಕೊನೆಯ **ನ್** ಅಥವಾ **ಳ್** ಗಳನ್ನು ತೊರೆಯುವುದಾಗಲೀ ಈಗ ಸಾಧ್ಯವಿಲ್ಲ. ಆದರೆ ಹಿಂದೆ ಆಗಿರುವ ಬದಲಾವಣೆಯಿಂದ ಬಳಕೆಯಲ್ಲಿದ್ದ ರೂಪಗಳು ಭಾಷಿಕರ ನೆನಪಿನ ಭಾಗವಾಗಿರುತ್ತವೆ. ಹಾಗಾಗಿ ನಡುಗನ್ನಡದ ಬರವಣಿಗೆಯಲ್ಲಿ ಇಂತಹ ರೂಪಗಳು ಬಂದಾಗ ಅವುಗಳನ್ನು ಓದಿ ಅರಿಯುವುದು

ನಮಗೆ ಕಷ್ಟವಾಗದು. ಆದರೆ ಅಂತಹದೇ ರೂಪಗಳನ್ನು ಮಾತ್ರ ನಾವೇ ರೂಪಿಸುವುದು ಸಾಧ್ಯವಿಲ್ಲ.

ಹಾಗಿದ್ದಲ್ಲಿ ಕವಿತೆಗಳಲ್ಲಿ ಈ ಪದಪ್ರಯೋಗಗಳು ಬಂದುದೇಕೇ? ಇದಕ್ಕೆ ಕಾರಣಗಳು ಹಲವು ಇವೆ. ಒಂದನ್ನು ಮಾತ್ರ ಇಲ್ಲಿ ಹೇಳುತ್ತೇನೆ. ಕವಿತೆಯ ಭಾಷೆ ನಾವು ಆಡುವ, ಬರೆಯುವ ಭಾಷೆಗಿಂತ ಬೇರೆಯೇ ಆಗಿರಬೇಕೆಂಬ ಹಂಬಲ ಕವಿಗಳಲ್ಲಿ ಇರುತ್ತದೆ. ತಾವು ಹೇಳುತ್ತಿರುವ ಭಾವದ ಅನನ್ಯತೆಯನ್ನು ಹೇಳಲು ಅನನ್ಯವಾದ ಭಾಷಾರೂಪಗಳು ಬೇಕೆಂದು ಅವರು ತವಕಿಸುತ್ತಾರೆ. ಹೀಗೆ ಬೇರೆ ರೂಪಗಳನ್ನು ಕಂಡುಕೊಳ್ಳಲು ಹಲವು ಮಾರ್ಗಗಳಿದ್ದರೂ, ತನ್ನ ಕಾಲದಲ್ಲಿ ಬಳಕೆಯಲ್ಲಿಲ್ಲದ ಆದರೆ ಎಂದೋ ಒಮ್ಮೆ ಭಾಷೆಯಲ್ಲಿ ನೆಲೆಗೊಂಡಿದ್ದ ರೂಪಗಳನ್ನು ಬಳಸುವುದೂ ಒಂದು ವಿಧಾನ. ಹಾಗಾಗಿ ಇಂತಹ ಪ್ರಯೋಗಗಳು ನಮಗೆ ಕಾಣಸಿಗುತ್ತವೆ.

# ವಿರುದ್ಧ ಪದ, ನಿಷೇಧ ಪದ: ಹೀಗೆಂದರೇನು?

ನಮ್ಮ ಶಾಲೆಗಳಲ್ಲಿ ಮಕ್ಕಳಿಗೆ ಕನ್ನಡವನ್ನು ಕಲಿಸುವಾಗ ಕೆಲವು ಪದಗಳನ್ನು ನೀಡಿ ಅವುಗಳಿಗೆ 'ವಿರುದ್ಧಾರ್ಥ'ವನ್ನು ಬರೆಯಲು ಹೇಳುತ್ತಾರೆ. ಎಲ್ಲ ಪಾಠಗಳ ಕೊನೆಯಲ್ಲಿ ಬರುವ ಭಾಷಾಭ್ಯಾಸವೆಂಬ ಭಾಗದಲ್ಲಿ ಈ ವಿರುದ್ಧಾರ್ಥದ ಅಭ್ಯಾಸ ಸಾಮಾನ್ಯವಾಗಿ ಇದ್ದೇ ಇರುತ್ತದೆ. ತಂದೆ ತಾಯಂದಿರು ಕೆಲವೊಮ್ಮೆ ಮಕ್ಕಳ ಮನೆಗೆಲಸವನ್ನು ಮುಗಿಸುವ ಹೊಣೆ ಹೊತ್ತಾಗ ಹೀಗೆ ವಿರುದ್ಧಾರ್ಥಗಳನ್ನು ಮಕ್ಕಳಿಗೆ ಹೇಳಿಕೊಡ ಬೇಕಾದ ಪ್ರಸಂಗವನ್ನು ಎದುರಿಸುತ್ತಾರೆ. ಆಗ ಕನ್ನಡ'ಬಲ್ಲವರನ್ನು" ಹುಡುಕಿಕೊಂಡು ತಂದೆ ತಾಯಂದಿರು ಹೋಗುವುದುಂಟು. ಫೋನಿನಲ್ಲಿ ಕೇಳುವುದೂ ಉಂಟು. ಅಂತೂ ಎಲ್ಲರೂ ಈ ವಿದುದ್ಧ ಪದಗಳಿಗಾಗಿ ಹುಡುಕಾಟವನ್ನು ಮುಂದುವರೆಸುತ್ತಾರೆ. ಇದರಿಂದ ದೊರಕುವುದೇನು? ರಾತ್ರಿಗೆ ಹಗಲು, ಗಂಡನಿಗೆ ಹೆಂಡತಿ, ಬಿಳಿಗೆ ಕಪ್ಪು, ಎಡಕ್ಕೆ ಬಲ, ಆಕಾಶಕ್ಕೆ ಭೂಮಿ,ಬೆಂಕಿಗೆ ನೀರು, ಹಿಂದೂಗೆ ಮುಸ್ಲಿಂ,ಬಡವನಿಗೆ ಬಲ್ಲಿದ ಹೀಗೆ ಇನ್ನೂ ಹಲವು ಸೋಜಿಗದ ಪದ ಜೋಡಿಗಳು ನಿಮಗೆ ಸಿಗುತ್ತವೆ. ಕೆಲವೊಮ್ಮೆ ಒಂದೇ ಪದಕ್ಕೆ ಒಂದಕ್ಕಿಂತ ಹೆಚ್ಚು ವಿರುದ್ಧ ಪದಗಳು ತಾಮುಂದು ತಾಮುಂದು ಎಂದು ಪೈಪೋಟಿ ನಡೆಸುತ್ತವೆ.ಯಾವುದು ಸರಿಯಾದ ವಿರುದ್ಧ ಪದ ಎಂದು ತೀರ್ಮಾನಿಸುವುದು ಅಷ್ಟು ಸುಲಭವೇನಲ್ಲ. ಉದಾಹರಣೆಗೆ ಸಿಹಿಗೆ ಕಹಿ ವಿರುದ್ಧ ಪದವೆಂದು ತಿಳಿದರೆ ಏನಾಗುತ್ತದೆ? ಸಿಹಿಯಲ್ಲದುದು ಕಹಿಯಾಗಿ ಇರುತ್ತದೆ ಎಂದು ಹೇಳಬೇಕಾಗುತ್ತದೆ. ಆದರೆ ಸಿಹಿಯಲ್ಲದುದು ಕಹಿಯಾಗಿಯೇ ಇರಬೇಕಿಲ್ಲವಲ್ಲ. ಸಿಹಿಯಲ್ಲದ ಆದರೆ ಕಹಿಯೂ ಅಲ್ಲದ ಹಲವು ರುಚಿಗಳು ಇವೆಯಲ್ಲವೇ? ಅಂದರೆ ವಿರುದ್ಧ ಅರ್ಥವುಳ್ಳ ಪದಗಳು ಎಂಬ ಚಿಂತನೆಯೇ ಸರಿಯಾದುದಲ್ಲ.

ಈ ಗೊಂದಲ ಇಲ್ಲಿಗೇ ಮುಗಿಯುವುದಿಲ್ಲ. ಶಾಲಾ ಪುಸ್ತಕಗಳು ನಿಷೇಧ ಪದಗಳು ಎಂಬ ಇನ್ನೊಂದು ಗುಂಪನ್ನು ಮಾಡಿಕೊಳ್ಳುತ್ತವೆ. ನೀತಿ–ಅನೀತಿ, ಅರ್ಥ–ಅನರ್ಥ, ಆಚಾರ–ಅನಾಚರ,ಆಹಾರ–ನಿರಾಹಾರ,ನಿಶ್ಚಿತ–ಅನಿಶ್ಚಿತ, ಕಲ್ಮಶ–ನಿಷ್ಕಲ್ಮಶ, ತಂತು–ನಿಸ್ತಂತು ಹೀಗೆ ಪದಪಟ್ಟಿಯನ್ನು ಬೆಳೆಸಬಹುದು. ಇವೆಲ್ಲ ಪದ ಮತ್ತು ನಿಷೇಧ ಪದಗಳ ಜೋಡಿಗಳು. ಈ ಪಟ್ಟಿಯನ್ನು ಗಮನಿಸಿದರೆ ಇವೆಲ್ಲವೂ ಸಂಸ್ಕೃತದಿಂದ ಕನ್ನಡಕ್ಕೆ ಬಂದ ಪದಗಳು ಎಂಬುದು ತಿಳಿಯುತ್ತದೆ. ಅಲ್ಲದೆ ಜೋಡಿ ಪದಗಳಲ್ಲಿ ಮೊದಲ ಪದಕ್ಕೆ ಮೊದಲಲ್ಲಿ ಏನನ್ನೋ ಕೂಡಿಸುವುದರಿಂದ ನಿಷೇಧ ಪದವನ್ನು ಪಡೆದಿರುವುದೂ ತಿಳಿಯುತ್ತದೆ. ಅಂದರೆ ನಿಷೇಧ ಪದಗಳು ಪದರಚನೆಯ ನೆಲೆಯಲ್ಲಿ

ರೂಪುಗೊಳ್ಳುತ್ತವೆ. ಅವುಗಳಲ್ಲಿ ಒಂದು ಮೂಲಪದವಾಗಿದ್ದು ಇನ್ನೊಂದನ್ನು ಗೊತ್ತುಪಡಿಸಿದ ನಿಯಮದ ಮೂಲಕ ನಾವು ರಚಿಸಿಕೊಳ್ಳುತ್ತೇವೆ. ಮೇಲೆ ನೀಡಿದ ಪದಜೋಡಿಗಳನ್ನು ಕೊಂಚ ಎಚ್ಚರಿಕೆಯಿಂದ ಗಮನಿಸಿದರೆ ಹೀಗೆ ನಿಷೇಧ ಪದಗಳನ್ನು ರಚಿಸುವಾಗ ಎರಡು ವಿಧಾನಗಳನ್ನು ನಾವು ಅನುಸರಿಸುವುದು ಗೊತ್ತಗುತ್ತದೆ. ಒಂದು ವಿಧಾನದಲ್ಲಿ ಮೂಲ ವಸ್ತು ಅಥವಾ ಗುಣ 'ಇಲ್ಲದಿರುವ' ಸ್ಥಿತಿಯನ್ನು ಸೂಚಿಸಲು ನಿಷೇಧ ರೂಪವನ್ನು ರಚಿಸುತ್ತೇವೆ. ಉದಾಹರಣೆಗೆ ಈ ಮುಂದಿನ ಪದಗಳ ಜೋಡಿಯನ್ನು ಗಮನಿಸಿ. ಚಿಂತೆ–ನಿಶ್ಚಿಂತೆ,ಫಲ–ನಿಷ್ಫಲ,ಜಲ–ನಿರ್ಜಲ,ಜನ–ನಿರ್ಜನ,ಚಲ–ನಿಶ್ಚಲ,ಶೇಷ–ನಿಶ್ಶೇಷ ಇತ್ಯಾದಿ. ಇವುಗಳಲ್ಲಿ ಮೊದಲ ಪದ ಸೂಚಿಸುವ ಗುಣ ಇಲ್ಲವೇ ಸ್ಥಿತಿಯು 'ಇಲ್ಲದಿರುವುದನ್ನು' ಎರಡನೆಯ ಪದ ಸೂಚಿಸುತ್ತದೆ. ಇನ್ನೊಂದು ನಿಷೇಧ ರಚನೆಯ ಬಗೆಯಲ್ಲಿ ಒಂದು ಪದ ಸೂಚಿಸುವ ಗುಣ ಇಲ್ಲವೇ ಸ್ಥಿತಿಯು 'ಅಲ್ಲದಿರುವುದನ್ನು' ನಿಷೇಧ ಪದದ ಮೂಲಕ ಸೂಚಿಸುತ್ತೇವೆ. ಈ ಮುಂದಿನ ಪದಜೋಡಿಗಳನ್ನು ಗಮನಿಸಿ. ಹಿಂಸೆ–ಅಹಿಂಸೆ, ಹಿತ–ಅಹಿತ, ಕಾಲ–ಅಕಾಲ, ವೇಳೆ–ಅವೇಳೆ, ಉದಾರ–ಅನುದಾರ, ಧೈರ್ಯ–ಅಧೈರ್ಯ, ನೀತಿ–ಅನೀತಿ ಇತ್ಯಾದಿ. ಇಲ್ಲೆಲ್ಲಾ ಮೊದಲ ಪದದಲ್ಲಿ ಸೂಚಿತವಾಗುವುದನ್ನು ಎರಡನೆಯ ಪದ ಅಲ್ಲಗಳೆಯುತ್ತದೆ. ಕನ್ನಡದ 'ಇಲ್ಲ' ಮತ್ತು 'ಅಲ್ಲ' ಎಂಬ ಪದಗಳ ಕೆಲಸವನ್ನು ಮೇಲೆ ಹೇಳಿದ ನಿಷೇಧ ರೂಪಗಳು ಮಾಡುತ್ತಿವೆ.ಹಾಗೆ ನೋಡಿದರೆ ಹೀಗೆ ಪದರಚನೆಯ ಮೂಲಕ ನಿಷೇಧ ರೂಪಗಳನ್ನು ರಚಿಸುವ ವಿಧಾನ ಕನ್ನಡದಲ್ಲಿ ಇಲ್ಲ. ನಾವು ಈ ಪದ ಜೋಡಿಗಳನ್ನು ನೇರವಾಗಿ ಸಂಸ್ಕೃತದಿಂದ ಪಡೆದುಕೊಂಡಿದ್ದೇವೆ. ಕನ್ನಡದ್ದೇ ಆದ ನಿಷೇಧ ರೂಪರಚನೆಯ ನಿಯಮಗಳು ಇಲ್ಲ. ಸಂಸ್ಕೃತದ ಈ ಪದರಚನೆಯ ನಿಯಮವನ್ನು ಕನ್ನಡದ ಮಕ್ಕಳು ತಮ್ಮಶಾಲಾ ಶಿಕ್ಷಣದ ಹಂತದಲ್ಲಿ ಕಲಿಯಬೇಕೆ ಬೇಡವೇ ಎಂಬುದು ಬೇರೆಯೇ ಪ್ರಶ್ನೆ. ಅಂದರೆ ಈ ಪದಜೋಡಿಗಳಲ್ಲಿ ಒಂದೊಂದು ಪದವನ್ನು ಮಕ್ಕಳು ಸ್ವತಂತ್ರ ಪದಗಳಾಗಿಯೇ ಕಲಿಯುತ್ತಾರೆಯೇ ಹೊರತು. ಒಂದು ಮೂಲಪದವನ್ನು ಕಲಿತು ಅದಕ್ಕೆ ನಿಷೇಧ ಪ್ರತ್ಯಯವನ್ನು ಹತ್ತಿಸುವ ನಿಯಮವನ್ನು ಬಳಸುವುದಿಲ್ಲ. ಸದ್ಯ ನಾವಿಲ್ಲಿ ಈ ವಿವರಗಳನ್ನು ಕುರಿತು ಚರ್ಚಿಸುವುದು ಬೇಕಾಗಿಲ್ಲ.

ಆದರೆ ವಿರುದ್ಧ ಪದಗಳು ಹೀಗಲ್ಲ. ಒಂದು ಪದ ಸೂಚಿಸುವ ವಸ್ತು ಇಲ್ಲವೇ ಸ್ಥಿತಿ ವಿರುದ್ಧವಾದ ವಸ್ತು ಇಲ್ಲವೇ ಸ್ಥಿತಿ ನಮ್ಮ ಸುತ್ತಣ ಜಗತ್ತಿನಲ್ಲಿ ಇರುತ್ತದೆ ಎನ್ನುವ ಊಹೆಯ ಮೇಲೆ ಈ ವಿರುದ್ಧ ಪದಗಳ ನೆಲೆಗಟ್ಟು ನಿಂತಿದೆ. ಇದು ಪದರಚನೆಯ ನೆಲೆಗೆ ಸಂಬಂಧಿಸಿದ್ದಲ್ಲ. ಲೋಕ ಗ್ರಹಿಕೆಯ ನೆಲೆಗೆ ಸಂಬಂಧಿಸಿದೆ. ಅಂದರೆ ಲೋಕವನ್ನು ಅದರ ಬಿಡಿಬಿಡಿ ನೆಲೆಗಳನ್ನು ನಾವು ಗ್ರಹಿಸುವಾಗಲೇ ಪ್ರತಿಯೊಂದಕ್ಕೂ ಅದಕ್ಕೆ ವಿರುದ್ಧವಾದುದು ಇರುತ್ತದೆ ಎನ್ನುವ ನೆಲೆಯಲ್ಲೇ ಗ್ರಹಿಸುವಂತೆ ಮಾಡುವುದು ಎಷ್ಟು ಸರಿಯಾದುದುದು? ನಾವು ವಿರುದ್ಧ ಪದಗಳು ಎಂದು ಸಾಮಾನ್ಯವಾಗಿ ಶಾಲೆಯಲ್ಲಿ ಹೇಳಿಕೊಡುತ್ತಿರುವ ಪದಗಳಲ್ಲಿ ಕೆಲವನ್ನು ಆಯ್ದು ಈಗ ಈ ಬಗೆಯ ಗ್ರಹಿಕೆಯಲ್ಲಿ ಇರುವ ಎಡರುತೊಡರುಗಳೇನು ಎಂಬುದನ್ನು ತಿಳಿಯೋಣ. ಮಿತ್ರ ಎಂಬುದಕ್ಕೆ ಶತ್ರು ವಿರುದ್ಧ ಪದ ಎಂದು ಹೇಳಿದರೆ ಏನಾಗುತ್ತದೆ? ಇವೆರಡೂ ಸಾಪೇಕ್ಷ ಮತ್ತು ಸ್ವತಂತ್ರ

ಸ್ಥಿತಿಗಳು. ನನಗೆ ಮಿತ್ರನಲ್ಲದ ವ್ಯಕ್ತಿ ನನಗೆ ಶತ್ರು ಆಗಿರಲೇ ಬೇಕಾಗಿಲ್ಲ. ಅಲ್ಲದೆ ಮಿತ್ರ ಮತ್ತು ಶತ್ರು ಎಂಬುದು ಯಾರು ಆ ಪದಗಳನ್ನು ಬಳಸುತ್ತಿದ್ದಾರೆ ಎಂಬುದನ್ನು ಅವಲಂಬಿಸಿ ಬದಲಾಗುತ್ತಲೇ ಹೋಗುತ್ತವೆ. ಮಿತ್ರ ಮತ್ತು ಶತ್ರು ಎಂಬ ಪದಗಳಿಂದ ಮಿತ್ರಪಕ್ಷ,ಶತ್ರುಪಕ್ಷ (ಅಥವಾ ಮಿತ್ರದೇಶ ಮತ್ತು ಶತ್ರುದೇಶ) ಎಂಬ ಪದಗಳನ್ನು ಪಡೆದುಕೊಂಡೆವು ಎಂದುಕೊಳ್ಳೋಣ. ಈ ಪದಗಳಿಗೆ ನಿರ್ದಿಷ್ಟವಾದ ಮತ್ತು ಕಾಲದೇಶ ಬದ್ಧವಲ್ಲದ ವ್ಯಾಖ್ಯಾನ ಇರುವುದು ಸಾಧ್ಯವೇ ಇಲ್ಲ. ಅಂದರೆ ಆ ಪದಗಳು ಹೇಗೆ ವಿರುದ್ಧ ಪದಗಳಾಗಬಲ್ಲವು? ಇದೇ ಬಗೆಯಲ್ಲಿ ವಿರುದ್ಧ ಪದಗಳ ಜೋಡಿಗಳನ್ನು ನಾವು ಬೇರೆಬೇರೆಯಾಗಿ ತೆಗೆದುಕೊಂಡು ನೋಡಬಹುದು. ಎಲ್ಲ ಕಡೆಗಳಲ್ಲೂ ಆ ಪದಗಳ ನಡುವೆ ವಿರುದ್ಧವಾದುದು ಏನೂ ಇರುವುದಿಲ್ಲ. ನಾವು ಆ ವಿರುದ್ಧ ಸ್ಥಿತಿಯನ್ನು ಆರೋಪಿಸುತ್ತೇವೆ. ಆ ಆರೋಪಿತ ಸ್ಥಿತಿಯನ್ನು ಮಕ್ಕಳಿಗೆ ಕಲಿಯ ಮೂಲಕ ರವಾನಿಸುತ್ತೇವೆ. ತನ್ನದು ತನ್ನದಲ್ಲದು ಅತ್ನವಾ ಸ್ವ ಮತ್ತು ಅನ್ಯ ಎಂಬ ಒಡೆದ ಸ್ಥಿತಿಯನ್ನು ಮೀರುವುದು ಎಲ್ಲ ಕಲಿಕೆಗಳ ಗುರಿಯಾಗ ಬೇಕಾಗಿರುವಾಗ ನಮಗೆ ಗೊತ್ತಿಲ್ಲದಂತೆ ಈ ನಿರಾಕರಣಗೊಳ್ಳಬೇಕಾದ ಮನೋಭಾವವೇ ನಮ್ಮ ಮಕ್ಕಳಲ್ಲಿ ಮೊಳಕೆಯೊಡುವಂತೆ ನಾವು ಮಾಡುತ್ತಿದ್ದೇವೆಯೇ?

ಇದೆಲ್ಲ ನಮ್ಮ ಕಲಿಕೆಯಲ್ಲಿ ಬೇರೂರಿದ್ದು ಹೇಗೆ? ವಸಾಹತು ಆಡಳಿತಕ್ಕೆ ಮಾದರಿಯಾಗಿದ್ದ ಪಬ್ಲಿಕ್ ಶಾಲೆಗಳ ಶಿಕ್ಷಣವು ಸಮಾನತಾ ಭಾವವನ್ನು ಬೆಳೆಸುವ ಗುರಿಯನ್ನು ಹೊಂದಿರಲಿಲ್ಲ.ತರತಮ ಭಾವವನ್ನೇ ಬೆಳೆಸಲು ಮುಂದಾಗಿದ್ದ ವಸಾಹತು ಮಾದರಿಯ ಕಲಿಕೆಯಲ್ಲಿ ಭಾಷಾ ಪಠ್ಯಕ್ರಮವು,ಮುಖ್ಯವಾಗಿ ಇಂಗ್ಲಿಶ್ ಭಾಷಾ ಕಲಿಕೆಯ ಪಠ್ಯ ಕ್ರಮವು ಸಿನಾನಿಮ್ ಮತ್ತು ಆಂಟಾನಿಮ್ ಗಳೆಂಬ ಪರಿಕಲ್ಪನೆಗಳನ್ನು ರೂಢಿಗೊಳಿಸಿತ್ತು. ನಾವು ಕಣ್ಣುಮುಚ್ಚಿ ಅದನ್ನೇ ನಮ್ಮ ಕಲಿಕೆಗೂ ನಕಲು ಮಾಡಿಕೊಂಡಿದ್ದರ ಪರಿಣಾಮವೇ ಇದು.ಕೊನೆಯ ಪಕ್ಷ ಉದ್ದೇಶದಲ್ಲಾದರೂ ಸಮಾನತಾ ಭವನ್ನು ಬೆಳೆಸುವ ಗುರಿ ನಮ್ಮ ಶಿಕ್ಷಣಕ್ಕೆ ಇದೆ.ಹಾಗಿದ್ದ ಮೇಲೆ ಇನ್ನಾದರೂ ಎಚ್ಚತ್ತು ಬದಲಾಗಬೇಕಲ್ಲವೇ?

# ಪದಪ್ರತ್ಯಯ, ಪದರೂಪ ಪ್ರತ್ಯಯ: ಮರುಚಿಂತನೆ

ಡಿ.ಎನ್. ಶಂಕರಭಟ್ ಅವರು ಈಚಿನ ತಮ್ಮ ಶೋಧ ಬರೆಹಗಳಲ್ಲಿ ಪ್ರತಿಪಾದಿಸುತ್ತಿರುವ ಹೊಸ ಪಾರಿಭಾಷಿಕ ಪದಗಳಲ್ಲಿ ಪದಪ್ರತ್ಯಯ ಮತ್ತು ಪದರೂಪ ಪ್ರತ್ಯಯ ಎಂಬುವು ಸೇರಿವೆ. ಇವೆರಡೂ ಪ್ರತ್ಯಯಗಳ ಎರಡು ಬಗೆಗಳನ್ನು ಹೇಳುತ್ತಿವೆ ಎಂಬುದು ಸ್ವರೂಪದಿಂದಲೇ ಖಚಿತವಾಗಿದೆ. ಒಂದು ಭಾಷೆಯಲ್ಲಿ ಬಳಕೆಯಾಗುವ ಪ್ರತ್ಯಯಗಳನ್ನು ವರ್ಗೀಕರಿಸುವ ಕೆಲವು ಮಾದರಿಗಳನ್ನು ಭಾಷಾಶಾಸ್ತ್ರಜ್ಞರು ಈಗಾಗಲೇ ಬಳಕೆಗೆ ತಂದಿದ್ದಾರೆ.

1. ಪ್ರತ್ಯಯಗಳು ಪ್ರಕೃತಿ/ಕಾಂಡಗಳಿಗೆ ಸೇರುವ ಅನುಪೂರ್ವಿಯನ್ನು ಅವಲಂಬಿಸಿ: ಆದಿಪ್ರತ್ಯಯ, ಪೂರ್ವ ಪ್ರತ್ಯಯ, ಮಧ್ಯ ಪ್ರತ್ಯಯ ಮತ್ತು ಅಂತ್ಯಪ್ರತ್ಯಯ.

2. ಪ್ರತ್ಯಯಗಳ ನಿಯೋಗವನ್ನು ಅವಲಂಬಿಸಿ: ಸಾಧಕ ಪ್ರತ್ಯಯ ಮತ್ತು ಅಂತರ್ಗಮಕ ಪ್ರತ್ಯಯ.

ಭಟ್ ಅವರ ಹೊಸ ಪರಿಭಾಷೆಯಲ್ಲಿ ಪ್ರತ್ಯಯಗಳು ಪದರಚನೆಯಲ್ಲಿ ಯಾವ ವ್ಯಾಕರಣಾತ್ಮಕ ಕೆಲಸವನ್ನು ನಿರ್ವಹಿಸುತ್ತವೆಯೋ ಅವುಗಳನ್ನು ಅನುಸರಿಸುವ ಬಗೆ ಕಾಣುತ್ತದೆ. ಅವರ ವಿವರಣೆಯನ್ನು ಸಂಗ್ರಹಿಸಿ ಹೀಗೆ ವಿವರಿಸಬಹುದು.

ಅ. ಪದಪ್ರತ್ಯಯಗಳು ಪದವನ್ನು ರಚಿಸಲು ಅತ್ಯವಶ್ಯವಾದವು. ಅವುಗಳ ಇರುವಿಕೆ ಸಾಮಾನ್ಯವಾಗಿ ಭಾಷೆಯನ್ನು ಬಳಸುವವರಿಗೆ ಗೊತ್ತಾಗುವುದಿಲ್ಲ. ಹಾಗಾಗಿ ಆ ಪ್ರತ್ಯಯಗಳನ್ನು ಬಳಸಿ ಹೊಸ ಪದ ರಚನೆ ಮಾಡುವುದು ಕಷ್ಟಸಾಧ್ಯ.

ಆ. ಪದರೂಪ ಪ್ರತ್ಯಯಗಳು ಪದಗಳು ರಚನೆಯಾದ ಮೇಲೆ ಬಳಕೆಯಾಗುತ್ತವೆ. ಈ ಪ್ರತ್ಯಯಗಳನ್ನು ಭಾಷಿಕರು ಬಲ್ಲರು. ಅವುಗಳನ್ನು ವ್ಯವಸ್ಥಿತವಾಗಿ ಮತ್ತು ನಿಯಮಬದ್ಧವಾಗಿ ಅವರು ಬಳಸುವ ಸಾಧ್ಯತೆಗಳು ಹೆಚ್ಚಿವೆ. ಈ ಎರಡೂ ಬಗೆಯ ಪ್ರತ್ಯಯಗಳ ಲಕ್ಷಣಗಳ ವಿಶ್ಲೇಷಣೆಯನ್ನು ಸದ್ಯ ಬದಿಗಿಟ್ಟು ಬೇರೊಂದು ಪ್ರಶ್ನೆಯನ್ನು ಮೊದಲು ಎದುರಿಸುವುದು ಅವಶ್ಯ. ಈವರೆಗೆ ಬಳಸುತ್ತಿದ್ದ ಪ್ರತ್ಯಯಗಳ ವರ್ಗೀಕರಣಗಳಿಗಿಂತ ಡಿ.ಎನ್. ಶಂಕರಭಟ್ ಅವರ ಈ ವರ್ಗೀಕರಣ ಎಷ್ಟು ಭಿನ್ನ ಮತ್ತು ಎಷ್ಟು ಉಪಯುಕ್ತ ಎಂಬುದೇ ಈ ಪ್ರಶ್ನೆ.

ಪ್ರತ್ಯಯಗಳು ಯಾವ ಕೆಲಸವನ್ನು ನಿರ್ವಹಿಸುತ್ತವೆ ಎಂಬುದನ್ನು ಅನುಸರಿಸಿ ರೂಪಾತ್ಮಕ ವೈಯಾಕರಣರು ಅವುಗಳಲ್ಲಿ ಎರಡು ವರ್ಗಗಳನ್ನು ಗುರುತಿಸಿದ್ದಾರೆ: 1 ಸಾಧಕ ಪ್ರತ್ಯಯಗಳು 2. ಅಂತರ್ಗಮಕ ಪ್ರತ್ಯಯಗಳು. ಸಾಧಕ ಪ್ರತ್ಯಯಗಳಿಂದ ಪದರಚನೆ ಸಾಧ್ಯ. ಒಂದು ಪದವರ್ಗಕ್ಕೆ ಸೇರಿದ ಪದ/ಪ್ರಕೃತಿಗಳಿಗೆ ಸಾಧಕ ಪ್ರತ್ಯಯಗಳು ಸೇರಿದಾಗ ಹೊಸ ಪದವೊಂದು ನಿರ್ಮಾಣವಾಗುತ್ತದೆ. ಈ ಹೊಸ ಪದವು ಸಾಮಾನ್ಯವಾಗಿ ಇನ್ನೊಂದು ಪದವರ್ಗಕ್ಕೆ ಸೇರುತ್ತದೆ. 'ಹೊಡೆ' ಎಂಬ ಕ್ರಿಯಾಪದಕ್ಕೆ 'ತ' ಎಂಬ ಸಾಧಕ ಪ್ರತ್ಯಯ ಸೇರಿದಾಗ 'ಹೊಡೆತ' ಎಂಬ ನಾಮಪದ ಸಿದ್ಧವಾಗುತ್ತದೆ. ಈ ಸಾಧಕ ಪ್ರತ್ಯಯಗಳಲ್ಲಿ ಕೆಲವು ಈಗ ಉತ್ಪಾದಕಗಳಲ್ಲ; ಅಂದರೆ ಅವುಗಳನ್ನು ಪ್ರಯೋಗಿಸಿ ಹೊಸ ಪದಗಳನ್ನು ರಚಿಸುವುದು ಈಗ ಅಸಾಧ್ಯವಾಗಿದೆ. ಮತ್ತೆ ಕೆಲವು ಪ್ರತ್ಯಯಗಳು ಈಗಲೂ ಉತ್ಪಾದಕಗಳಾಗಿವೆ. ಅವುಗಳನ್ನು ಬಳಸಿ ಹೊಸ ಪದಗಳ ರಚನೆ ಸಾಧ್ಯವಿದೆ. ಉದಾಹರಣೆಗೆ 'ಕಾರ/ಗಾರ' ಎಂಬ ಪ್ರತ್ಯಯ ಬಳಸಿ 'ಬ್ಯಾಟುಗಾರ' ಎಂಬ ಪದವನ್ನು ರಚಿಸಬಹುದು.

ಅಂತರ್ಗಮಕ ಪ್ರತ್ಯಯಗಳು ಸೇರಿದಾಗ ಹೀಗೆ ಮೂಲಪದ ಪ್ರಕೃತಿಯ ಪದವರ್ಗದಲ್ಲಿ ಪಲ್ಲಟವಾಗುವುದಿಲ್ಲ. 'ಗಳು' ಎಂಬ ಪ್ರತ್ಯಯ 'ಪುಸ್ತಕ' ಎಂಬ ನಾಮಪದಕ್ಕೆ ಸೇರಿದರೆ ಸಿಗುವ 'ಪುಸ್ತಕಗಳು' ಎಂಬ ರಚನೆ ನಾಮಪದವೇ ಆಗಿ ಉಳಿಯುತ್ತದೆ. ಸಾಧಕ ಪ್ರತ್ಯಯಗಳು ಪದಾತ್ಮಕ ಸಂಬಂಧವನ್ನು ಅವಲಂಬಿಸಿದರೆ, ಅಂತರ್ಗಮಕ ಪ್ರತ್ಯಯಗಳು ಹೆಚ್ಚಾಗಿ ವಾಕ್ಯಾತ್ಮಕ ಸಂಬಂಧವನ್ನು ತೋರಿಸುತ್ತವೆ. ಇವೆರಡೂ ಬಗೆಗಳ ನಡುವೆ ಇನ್ನೂ ಕೆಲವು ಗುಣಲಕ್ಷಣ ವ್ಯತ್ಯಾಸಗಳು ಇವೆ.

ರೂಪಾತ್ಮಕ ವ್ಯಾಕರಣದ ಇತಿಮಿತಿಗಳೇನೇ ಇರಲಿ ಈ ವ್ಯಾಕರಣದಲ್ಲಿ ಬಳಕೆಯಾದ ಪ್ರತ್ಯಯಗಳ ಈ ಮೇಲಿನ ವರ್ಗೀಕರಣವು ಹೆಚ್ಚು ಉಪಯುಕ್ತ ಮತ್ತು ದೃಢವಾಗಿರುವಂತೆ ತೋರುತ್ತದೆ. ಭಟ್ ಅವರ ಈ ಹೊಸ ವರ್ಗೀಕರಣಕ್ಕೆ ಕೆಲವು ಮಿತಿಗಳಿರುವುದು ಸ್ಪಷ್ಟ. ಪದಪ್ರತ್ಯಯಗಳ ಕಲ್ಪನೆ ಪದಕೋಶ ನಿರ್ಮಾಣಕಾರರಿಗೆ ಮತ್ತು ಭಾಷಾತಜ್ಞರಿಗೆ ಅವಶ್ಯವಾದ ಪರಿಕಲ್ಪನೆ ಮಾತ್ರ. ಭಾಷಿಕರಿಗೆ ಅವರ ಪ್ರಯೋಜನ ಕಡಿಮೆ. ಹಾಗಾಗಿ ನಾವು ಪ್ರತ್ಯಯಗಳೆಂದು ತಿಳಿದು ಬಳಸುವ ಎಲ್ಲ ಪ್ರತ್ಯಯಗಳೂ ಪದಪ್ರತ್ಯಯಗಳಾಗಿಯೇ ಇರುತ್ತವೆ. ಅಂದರೆ ಎಲ್ಲ ಪ್ರತ್ಯಯಗಳೂ ಒಂದೇ ವರ್ಗದಲ್ಲಿ ಉಳಿದು ವರ್ಗೀಕರಣವೇ ಅನುಪಯುಕ್ತವಾಗುವುದು. ಒಂದು ಕಾಲಕ್ಕೆ ಉತ್ಪಾದಕಗಳಾಗಿದ್ದ ಪ್ರತ್ಯಯಗಳು ಹಲವಾರು ಕಾರಣಗಳಿಂದಾಗಿ ಅನುತ್ಪಾದಕಗಳಾಗಿ ಪರಿಣಮಿಸಿದಾಗ ಅವು ಪದಪ್ರತ್ಯಯಗಳಾಗಿ ಪರಿವರ್ತಿತವಾಗುತ್ತವೆ. ಆದ್ದರಿಂದ ಭಾಷೆಯಲ್ಲಿ ಆಗಿರುವ ಪರಿವರ್ತನೆಯ ಅಭ್ಯಾಸದ ದೃಷ್ಟಿಯಿಂದ ಪದಪ್ರತ್ಯಯವೆಂಬ ವರ್ಗವನ್ನು ಕಲ್ಪಿಸಿಕೊಳ್ಳುವ ಅಗತ್ಯವಿರಬಹುದು.

ಭಟ್ ಅವರು ಈ ಪ್ರತ್ಯಯ ವರ್ಗಗಳ ನಡುವೆ ಇನ್ನಿತರ ಕೆಲವು ವ್ಯತ್ಯಾಸಗಳನ್ನು ಚರ್ಚಿಸಿದ್ದಾರೆ. ಪದರೂಪ ಪ್ರತ್ಯಯಗಳಲ್ಲಿ ಕೆಲವೊಮ್ಮೆ ಒಂದು ರೂಪಾವಳಿ ಇದ್ದು,

ಈ ರೂಪಾವಳಿಯಲ್ಲಿ ಸೇರುವ ಸಮಾನ ನಿಯೋಗಿ ಪ್ರತ್ಯಯಗಳ ಬಳಕೆ ಬಗ್ಗೆ ನಿಯಮಗಳನ್ನು ರೂಪಿಸಲು ಸಾಧ್ಯವಿದೆ. ಉದಾಹರಣೆಗೆ ಚತುರ್ಥಿ ವಿಭಕ್ತಿ ಪ್ರತ್ಯಯವಾಗಿ ಗೆ, ಇಗೆ, ಕ್ಕೆ ಎಂಬ ಮೂರು ಪ್ರತ್ಯಯಗಳಲ್ಲಿ ಎಲ್ಲಿ ಯಾವುದು ಬಳಕೆಯಾಗಬೇಕೆಂಬ ಬಗ್ಗೆ ಖಚಿತವಾದ ನಿಯಮಗಳಿವೆ. ಈ ವಿವರಣೆಯೇನೋ ಸರಿ. ಆದರೆ ಇದರಿಂದ ಪದರೂಪ ಪ್ರತ್ಯಯಗಳ ಸ್ವರೂಪದ ಪರಿಚಯವಾಯಿತೇ ಹೊರತು ಅದನ್ನು ಪದಪ್ರತ್ಯಯಗಳಿಂದ ಬೇರೆ ಇರಿಸುವ ವರ್ಗೀಕರಣಕ್ಕೆ ಸಮರ್ಥನೆ ದೊರೆಯುವುದಿಲ್ಲ.

ಕನ್ನಡ ಭಾಷೆಯ ವ್ಯಾಕರಣ ರಚಿಸುವವರು ಕನ್ನಡದ ಪ್ರತ್ಯಯಗಳನ್ನು ವರ್ಗೀಕರಿಸುವ ಹೊಸ ವಿಧಾನವನ್ನು ಅನುಸರಿಸಲು ಬಲವಾದ ಕಾರಣಗಳಿರಬೇಕು. ಹಾಗಿಲ್ಲದಿದ್ದಲ್ಲಿ ಹೊಸ ವಿಧಾನ ತನ್ನಿಂದ ತಾನೇ ಸಮರ್ಥನೆ ಪಡೆಯಲಾರದು. ಪದರಚನೆಯ ನಿಯಮಗಳನ್ನು ಅರಿಯುವಲ್ಲಿ ನಮಗಿರುವ ಸಮಸ್ಯೆಯೆಂದರೆ ಪದದ ವ್ಯಾಖ್ಯೆಯೇ ಆಗಿದೆ. ಪದವನ್ನು ಈಗ ಸಾಮಾನ್ಯವಾಗಿ ಸ್ವತಂತ್ರ ಅರ್ಥವುಳ್ಳ ಮತ್ತು ವ್ಯಾಕರಣಾತ್ಮಕ ನಿಯೋಗವುಳ್ಳ ಭಾಷಾಂಶವೆಂದು ತಿಳಿಯಲಾಗುತ್ತದೆ. ಅದಕ್ಕೆ ಒಂದು ಧ್ವನಿರಚನೆ ಇರುತ್ತದೆ. ಆದರೆ ಆಂತರಿಕ ಘಟಕಗಳಿಂದ ಅದು ಕೂಡಿರಬೇಕೆಂಬುದು ಕಡ್ಡಾಯವಲ್ಲ. ತಲೆ ಎಂಬುದು ಪದ. ಇದಕ್ಕೆ ಧ್ವನಿರಚನೆ ಇದೆ. ಆದರೆ ಇದರಲ್ಲಿ ಘಟಕೀಯ ವಿಶ್ಲೇಷಣೆ ಸಾಧ್ಯವಿಲ್ಲ. ಜಗಿತ ಎಂಬುದೂ ಪದ. ಇದಕ್ಕೆ ಧ್ವನಿ ರಚನೆ ಇರುವಂತೆ ಘಟಕಗಳಾಗಿ ಒಡೆದು ತೋರಿಸುವುದು (ಜಗಿ ಮತ್ತು ತ) ಸಾಧ್ಯ. ಭಾಷಿಕರು ಪದಗಳ ಆಂತರಿಕ ಧ್ವನಿರಚನೆಗೆ ಸಂಬಂಧಿಸಿದಂತೆ ಕೆಲವು ನಿಯಮಗಳನ್ನು ಬಳಸುತ್ತಿರುತ್ತಾರೆ. ಆ ನಿಯಮಗಳು ಅವರ ಗ್ರಹಿಕೆಗೆ ಬರುವುದಿಲ್ಲ. ಆದರೆ ಬಳಸುವಲ್ಲಿ ಯಾವ ಏರುಪೇರು ಆಗುವುದಿಲ್ಲ. ಪದಗಳಲ್ಲಿ ಇರುವ ಘಟಕೀಯ ರಚನೆಯ ಬಗ್ಗೆ ಈ ಮಾತನ್ನು ಹೇಳುವಂತಿಲ್ಲ. ಏಕೆಂದರೆ ಅದರಲ್ಲಿರುವ ಘಟಕಗಳ ಸ್ವರೂಪ ಅವರ ಗ್ರಹಿಕೆಯಷ್ಟೇ ಅಲ್ಲಿ ಬಳಕೆಯ ವಲಯದಲ್ಲೂ ಪ್ರವೇಶ ಪಡೆಯದು. 'ಹರಕೆ' ಪದದಲ್ಲಿ 'ಹರಸು' ಮತ್ತು 'ಕೆ' ಎಂಬ ಘಟಕಗಳಿವೆಯಾದರೂ, ಭಾಷಿಕರಿಗೆ ಅವು ಮುಖ್ಯವಲ್ಲ. ಆದ್ದರಿಂದ ಆ ಘಟಕಗಳಿಗೆ ಸಂಬಂಧಿಸಿದ ಯಾವ ನಿಯಮಗಳೂ ಅವರಿಗೆ ಗೊತ್ತಿರುವುದಿಲ್ಲ.

ಭಟ್ ಅವರು ಪದಪ್ರತ್ಯಯಗಳನ್ನು ಅನ್ಯ ಭಾಷೆಯಿಂದ ಎರವಲು ಪಡೆಯಲು ಸಾಧ್ಯವಿದೆ ಎನ್ನುವ ವಾದವನ್ನು ಮಂಡಿಸುತ್ತಾರೆ. ಉದಾ. ನಟ, ನಟಿ, ಲೇಖಕ, ಲೇಖಕಿ ಮುಂತಾದ ಜೋಡಿ ಪದಗಳಲ್ಲಿರುವ ಅ–ಇ ಪ್ರತ್ಯಯಗಳು ಕ್ರಮವಾಗಿ ಪುರುಷ ಮತ್ತು ಸ್ತ್ರೀವಾದಿಗಳಾಗಿವೆ. ಕನ್ನಡದಲ್ಲಿ ಹುಡುಗ ಹುಡುಗಿ, ಕುರುಡ ಕುರುಡಿ ಎಂಬ ಜೋಡಿ ಪದಗಳಲ್ಲಿಯೂ ಇದೇ ಕೆಲಸವನ್ನು ಮಾಡುವ ಅ–ಇ ಪ್ರತ್ಯಯಗಳಿವೆ. ಆ ಪ್ರತ್ಯಯಗಳೂ ಸಂಸ್ಕೃತದಿಂದ ಕನ್ನಡಕ್ಕೆ ಎರವಲಾಗಿ ಬಂದಿವೆ ಎನ್ನುವುದು ಭಟ್ ಅವರ ವಾದ. ಈ ವಾದದಿಂದ ಕೆಲವು ಚರ್ಚಾರ್ಹ ವಿಷಯಗಳು ಮುಂಚೂಣಿಗೆ ಬರುತ್ತವೆ.

1. ಅ-ಇಗಳು ಪದಪ್ರತ್ಯಯಗಳು ಅಥವಾ ಸಾಧಕ ಪ್ರತ್ಯಯಗಳು.
2. ಇವು ಹೊಸ ಪದರಚನೆಗಳಲ್ಲಿ ಬಳಕೆಯಾಗಬಲ್ಲವು. ಆದ್ದರಿಂದ ಇವು ಉತ್ಪಾದಕ ಪ್ರತ್ಯಯಗಳು.

ಪದಪ್ರತ್ಯಯಗಳೆಂದು ಹೇಳುತ್ತಲೇ ಅವು ಉತ್ಪಾದಕ ಪ್ರತ್ಯಯಗಳೂ ಆಗಿರುವುದನ್ನು ಗುರುತಿಸುವುದು ಒಂದು ವಿರೋಧವನ್ನು ನಿರೂಪಿಸುತ್ತದೆ. ಏಕೆಂದರೆ ಪದಪ್ರತ್ಯಯಗಳು ಅನುತ್ಪಾದಕಗಳು. ಅವುಗಳನ್ನು ಭಾಷಿಕರು ಹೊಸ ಪದರಚನೆಯಲ್ಲಿ ಬಳಸಲಾರರು. ಈ ತಕರಾರಿಗೆ ಭಟ್ ಅವರು ಬೇರೊಂದು ರೀತಿಯಲ್ಲಿ ಉತ್ತರಿಸುತ್ತಾರೆ. ಅವರು ಪ್ರಕಾರ 'ಅ-ಇ' ಎಂಬುವು ಎರವಲು ಪಡೆದ ಪ್ರತ್ಯಯಗಳೇ ಆದರೂ ಅವುಗಳನ್ನು ಹೊಸ ಪದರಚನೆಯಲ್ಲಿ ಬಳಸುವಾಗ ಭಾಷಿಕರು ಕೇವಲ ರೂಪಸಾಮ್ಯವನ್ನು ಅವಲಂಬಿಸುತ್ತಾರೆ. ಬದಲಾಗಿ ಪದರಚನೆಯ ಸಾಮಾನ್ಯ ಕ್ರಮವನ್ನಲ್ಲ. ಈ ವಿವರಣೆ ಸಾಧುವಾಗಿ ತೋರಿದರೂ ಕನ್ನಡ ಪದರಚನೆಯ ನಿಯಮಗಳ ಬಗ್ಗೆ ಮೂಲಭೂತ ಪ್ರಶ್ನೆಯೊಂದನ್ನು ಹಾಗೆಯೇ ಉಳಿಸುತ್ತದೆ. ಆ ಪ್ರಶ್ನೆ ಹೀಗಿದೆ: ಕನ್ನಡ ಪದರಚನೆಯ ನಿಯಮಗಳು ರೂಪ ಸಾದೃಶ್ಯನೆಲೆಯಲ್ಲಿ ಪ್ರವೃತ್ತವಾಗುತ್ತವೆಯೋ ಅಥವಾ ಅಂತಸ್ಥ ರಚನೆಯ ನೆಲೆಯಲ್ಲಿ (ಧ್ವನಿ ಮತ್ತು ಅರ್ಥ ಎರಡೂ ನೆಲೆ) ಬಳಕೆಯಾಗುತ್ತವೆಯೋ? ಒಂದು ನಿದರ್ಶನದ ಮೂಲಕ ಈ ಸಮಸ್ಯೆಯನ್ನು ಅರಿಯಲು ಯತ್ನಿಸಬಹುದು. ಈ ಮುಂದಿನ ರೂಪಗಳನ್ನು ಗಮನಿಸಿ: ಪುನರುಜ್ಜೀವನ, ಪುನರಾಗಮನ, ಪುನರ್ಗಮನ, ಪುನಶ್ಚೇತನ. ಈ ಎಲ್ಲವೂ ಸಂಸ್ಕೃತದಿಂದ ಎರವಲು ಪಡೆದ ಪದಗಳು. ಸಂಸ್ಕೃತದ ಮಟ್ಟಿಗೆ ಇವುಗಳಲ್ಲಿ ಆಂತರಿಕ ರಚನೆ ಇದೆ. ಪೂರ್ವಪ್ರತ್ಯಯವೊಂದು ಈ ಎಲ್ಲ ರೂಪಗಳಲ್ಲೂ ಇದೆ. ಅದನ್ನೀಗ ಸದ್ಯ 'ಪುನಃ' ಎಂದು ತಿಳಿಯೋಣ. ಈ ಪ್ರತ್ಯಯವು ಮುಂದಿನ ಧ್ವನಿಯನ್ನು (ಉತ್ತರ ಪದದ ಮೊದಲ ಧ್ವನಿ) ಅವಲಂಬಿಸಿ ಪರಿವರ್ತನೆಯನ್ನು ಹೊಂದುತ್ತದೆ. ಈ ಪದಗಳಲ್ಲಿರುವ 'ಪುನಃ' ಎಂಬ ಪ್ರತ್ಯಯವನ್ನು ಕನ್ನಡಿಗರು ಎರವಲು ಪಡೆದು ಹೊಸ ಪದಗಳನ್ನು ರಚಿಸಲು ಶಕ್ತರಾಗುತ್ತಾರೆ ಎನ್ನುವುದಾದರೆ ಈ ಪ್ರತ್ಯಯದ ಬಳಕೆಗೆ ಲಗತ್ತಾದ ಧ್ವನಿ ನಿಯಮಗಳನ್ನು ಅವರು ಎರವಲು ಪಡೆಯಬೇಕು. ಆ ಧ್ವನಿ ನಿಯಮಗಳನ್ನು ಯಥಾಕ್ರಮ ಬಳಸಬೇಕು. 'ಪುನಃ' ಎಂಬ ಪ್ರತ್ಯಯಕ್ಕೆ ಸಂಬಂಧಿಸಿದ ಈ ನಿಯಮಗಳು ಸಂಸ್ಕೃತದಲ್ಲಿ ಬಹು ಸಂಕೀರ್ಣವಾಗಿವೆ. ಈ ಪ್ರತ್ಯಯ ಸೇರುವ ಪದದ ಮೊದಲ ಧ್ವನಿ ಯಾವುದು ಎಂಬುದನ್ನು ಅವಲಂಬಿಸಿ ಪುನಃ ಎಂಬುದು ಪುನಃ ಪುನರ್, ಪುನಷ್, ಪುನಶ್, ಪುನಸ್, ಪುನಾ ಎಂಬ ಹಲವು ರೂಪಗಳನ್ನು ಪಡೆಯಬಹುದು. ಆದರೆ ಕನ್ನಡಿಗರು ಈ ನಿಯಮಗಳನ್ನು ಅರಿತಿರುವುದು ಸಾಧ್ಯವಿಲ್ಲ. ಈಗಾಗಲೇ ಸಂಸ್ಕೃತದಲ್ಲಿ ಬಳಕೆಯಲ್ಲಿದ್ದು ಕನ್ನಡಕ್ಕೆ ಎರವಲು ತಂದ ಈ ಪ್ರತ್ಯಯ ಮತ್ತು ಪದಗಳನ್ನು ಹಾಗೆಯೇ ಒಂದು ಘಟಕವನ್ನಾಗಿ ತಿಳಿದು ಬಳಸುವುದು ಒಂದು ನೆಲೆ. ಆದರೆ ಪುನರ್ಬಳಕೆಯಂತಹ ಪದಗಳನ್ನು ನೋಡೋಣ. ಇಲ್ಲಿ 'ಬಳಕೆ' ಕನ್ನಡ ಪದ. ಧ್ವನಿ ನಿಯಮಗಳ ದೃಷ್ಟಿಯಿಂದ ಇದು ಸರಿಯಾದ ಪರರಚನೆಯುಳ್ಳದ್ದು. ಇಂಥ ಪದರಚನೆಯಲ್ಲಿ ಕನ್ನಡಿಗರು ರೂಪಸಾದೃಶ್ಯ ನೆಲೆಯಲ್ಲಿ

ಪದರಚನೆ ಮಾಡುತ್ತಾರೆಯೇ ಹೊರತು ಅಂತಸ್ಥ ಧ್ವನಿ ನಿಯಮಗಳ ಬಳಕೆಯಿಂದಲ್ಲ ಎಂದು ತಿಳಿಯುವುದು ಹೆಚ್ಚು ಸರಿಯಾದ ನಿಲುವು. ಪುನರ್ಬಳಕೆ ಎಂಬ ಪದ ರಚಿಸಿ ಬಳಸಿದವರು. ಚಾಲನೆಗೆ ತಂದವರು ಸಂಸ್ಕೃತದ ರಚನೆಯ ರೂಪಸಾದೃಶ್ಯವನ್ನು ಅನುಸರಿಸಿದ್ದಾರೆ, ಧ್ವನಿನಿಯಮವನ್ನಲ್ಲ.

ಈ ಎಲ್ಲ ವಿವರಣೆಯಿಂದ ತಿಳಿಯುವುದಿಷ್ಟು, ಪದ ಪ್ರತ್ಯಯಗಳೆಂದು ನಾವು ತಿಳಿಯುವ ಎಷ್ಟೋ ಪ್ರತ್ಯಯಗಳು ಅನ್ಯಭಾಷೆಯಿಂದ ಎರವಲು ತಂದವಾಗಿದ್ದರೂ ಕನ್ನಡದಲ್ಲಿ ಅವು ಉತ್ಪಾದಕತೆಯನ್ನು ಉಳಿಸಿಕೊಳ್ಳುತ್ತದೆ ಎಂದು ತಿಳಿಯುವುದು ಸರಿಯಾಗುವುದಿಲ್ಲ. ಏಕೆಂದರೆ ಪದಪ್ರತ್ಯಯದ ಬಳಕೆಯ ಜೊತೆಗೆ ಸೇರುವ ಧ್ವನಿನಿಯಮಗಳ ಅರಿವು ಭಾಷಿಕರಿಗೆ ಅಗತ್ಯವಾಗುವುದಿಲ್ಲ. ಆದ್ದರಿಂದ ಪದಪ್ರತ್ಯಯಗಳ ಎರವಲಿನ ಬಗ್ಗೆ ಮರುಚಿಂತನೆಗೆ ಅವಕಾಶವಿದೆ.

## ಋಕಾರ ಲಿಪಿಚಿಹ್ನೆ ಮತ್ತು ಕನ್ನಡ ವರ್ಣಮಾಲೆ

ಋ ಮತ್ತು ೠಕಾರಗಳು ಕನ್ನಡ ವರ್ಣಮಾಲೆಯಲ್ಲಿ ಇರಬೇಕೇ ಅಥವಾ ಬೇಡವೇ ಎಂಬ ಪ್ರಶ್ನೆಯೊಂದು ಈಚೆಗೆ ವಾದವಿವಾದಗಳಿಗೆ ಕಾರಣವಾಗಿದೆ. ಆಧುನಿಕರು ಮಕ್ಕಳು ಕಲಿಯುವ ಕನ್ನಡ ವರ್ಣಮಾಲೆಯಲ್ಲಿ ಈ ಸ್ವರಲಿಪಿಗಳನ್ನು ಉಳಿಸಿಕೊಳ್ಳುವುದು ಅವಶ್ಯವಲ್ಲವೆಂದು ಹೇಳುತ್ತಿದ್ದಾರೆ. ಸಾಂಪ್ರದಾಯಿಕ ಮನಸ್ಸಿನವರು ಮತ್ತು ಭಾಷೆಯ ಶುದ್ಧರೂಪದ ಪರವಾಗಿರುವವರು ಈ ಎರಡೂ ಲಿಪಿಚಿಹ್ನೆಗಳನ್ನು ಮಕ್ಕಳಿಗೆ ಕಲಿಸಬೇಕೆಂದು ವಾದಿಸುತ್ತಿದ್ದಾರೆ. ಮೊದಲ ವಾದವನ್ನು ಮಂಡಿಸುವವರು ಕನ್ನಡದ ಉಚ್ಚಾರಣೆಯನ್ನು ಗಮನದಲ್ಲಿ ಇರಿಸಿಕೊಂಡಿದ್ದಾರೆ. ಕನ್ನಡ ಮಾತಾಡುವವರು ಬಹುಮಟ್ಟಿಗೆ ಈ ಎರಡು ಲಿಪಿಚಿಹ್ನೆಗಳು ಪ್ರತಿನಿಧಿಸುವ ಉಚ್ಚಾರಣೆಯನ್ನು ಈಗ ಅನುಸರಿಸುವುದಿಲ್ಲ. ಅಲ್ಲದೆ ಸಂಸ್ಕೃತದಿಂದ ಬಂದು ಸೇರಿಕೊಂಡ ಪದಗಳಲ್ಲಿ ಮಾತ್ರ ಈ ಲಿಪಿಚಿಹ್ನೆಗಳ ಬಳಕೆಯಾಗುತ್ತಿದೆ. ಹಾಗಾಗಿ ಈ ಎರಡೂ ಲಿಪಿಚಿಹ್ನೆಗಳನ್ನು ಕೈಬಿಟ್ಟರೆ ಏನೂ ತೊಂದರೆ ಇಲ್ಲ. ಇದು ಅವರ ವಾದದ ತಿರುಳು. ಎರಡನೆಯ ವಾದವನ್ನು ಮಂಡಿಸುವವರು ಕನ್ನಡದ ಬರೆಹ ರೂಪವನ್ನು ಅವಲಂಬಿಸಿ ತಮ್ಮ ವಾದವನ್ನು ಮಂಡಿಸುತ್ತಿದ್ದಾರೆ. ಕನ್ನಡ ಬರೆಹ ರೂಪದಲ್ಲಿ ಬಳಕೆಯಲ್ಲಿರುವ ಎಷ್ಟೋ ಪದಗಳನ್ನು ಬರೆಯುವಾಗ ಈ ಲಿಪಿಚಿಹ್ನೆಗಳ ಅವಶ್ಯವಿದೆ. ಹಾಗಿಲ್ಲದೆ ಹೋದರೆ ಕನ್ನಡ ಬರವಣಿಗೆ ಹಲವು 'ಅಶುದ್ಧ' ರೂಪಗಳನ್ನು ಪೋಷಿಸಿದಂತಾಗುತ್ತದೆ; ಇದು ಅವರ ವಾದದ ತಿರುಳು. ಈ ಎರಡೂ ವಾದಗಳು ಭಿನ್ನ ನೆಲೆಗಳಲ್ಲಿ ಇರುವುದಕ್ಕೆ ಕಾರಣಗಳನ್ನು ಹೇಳಿದರೆ ಸಮಸ್ಯೆ ಪರಿಹಾರವಾದಂತೆ ಅಲ್ಲ. ಈ ಬಗೆಗೆ ಇನ್ನಷ್ಟು ವಿವರಗಳನ್ನು ತಿಳಿಯುವ ಅವಶ್ಯಕತೆ ಇದೆ.

ಋ ಎಂಬುದು ವಾಸ್ತವವಾಗಿ ರಕಾರದ ಸ್ವರರೂಪ. ಸಾಮಾನ್ಯವಾಗಿ ಭಾಷೆಯಲ್ಲಿ ಅಕ್ಷರ ಕೇಂದ್ರವಾಗಿ ಸ್ವರಗಳೇ ಇರುತ್ತವೆ. ಉದಾಹರಣೆಗೆ 'ಕವನ' ಎಂಬ ಪದವನ್ನೇ ತೆಗೆದುಕೊಳ್ಳಿ. ಈ ಪದದಲ್ಲಿ ಮೂರು ಅಕ್ಷರಗಳಿವೆ. ಕ, ವ ಮತ್ತು ನ. ಮೊದಲ ಅಕ್ಷರದಲ್ಲಿ ಕ್ ಎಂಬ ವ್ಯಂಜನ ಮೊದಲಲ್ಲಿ ಬಂದಿದೆ. ಅನಂತರದ ಸ್ವರ ಅ. ಈ ಸ್ವರವೇ ಕ ಎಂಬ ಅಕ್ಷರದ ಕೇಂದ್ರ. ವ ಮತ್ತು ನ ಎಂಬ ಅಕ್ಷರಗಳಿಗೂ ಇದೇ ವಿವರಣೆಯನ್ನು ನೀಡಬಹುದು. ಇನ್ನೊಂದು ಪದ 'ಪೆಟ್ಲು' ಎಂಬುದನ್ನು ಗಮನಿಸಿದರೆ ಅದರಲ್ಲಿ ಎರಡು ಅಕ್ಷರಗಳಿರುವುದು ತಿಳಿಯುತ್ತದೆ. ಪೆಟ್ ಮತ್ತು ಲು ಎಂಬ ಈ ಎರಡು ಅಕ್ಷರಗಳಿವು. ಪೆಟ್ ಅಕ್ಷರದಲ್ಲಿ ಪ್ ಎಂಬ ವ್ಯಂಜನ ಅಕ್ಷರದ ಮೊದಲಲ್ಲೂ

ಟ್ ಎಂಬ ವ್ಯಂಜನ ಆ ಅಕ್ಷರದ ಕೊನೆಯಲ್ಲಿ ಬಂದಿವೆ. ನಡುವೆ ಇರುವ ಎ ಎಂಬ ಸ್ವರ ಆ ಅಕ್ಷರದ ಕೇಂದ್ರ, ಲು ನಲ್ಲಿ ಉಕಾರ ಅದರ ಕೇಂದ್ರವಾಗಿದೆ. ಹೀಗೆ ಹತ್ತಾರು ಉದಾಹರಣೆಗಳನ್ನು ನೋಡಬಹುದು. ಎಲ್ಲ ಕಡೆಯಲ್ಲೂ ಸ್ವರವೇ ಅಕ್ಷರದ ಕೇಂದ್ರವಾಗಿರುವುದು ಸ್ಪಷ್ಟ. ಕೇಂದ್ರ ಎನ್ನುವ ಮಾತನ್ನು ಎಚ್ಚರದಿಂದ ಗ್ರಹಿಸಬೇಕು. ಏಕೆಂದರೆ ಎಲ್ಲ ಅಕ್ಷರದಲ್ಲೂ ಕೇಂದ್ರವಾಗಿರುವ ಸ್ವರದ ಮೊದಲಲ್ಲಿ ಯಾವುದಾದರೊಂದು ವ್ಯಂಜನ ಬರಲೇಬೇಕೆಂಬ ನಿಯಮವಲ್ಲ. ಉದಾಹರಣೆಗೆ 'ಇಲಿ' ಎನ್ನುವ ಪದದಲ್ಲಿ ಇ ಮತ್ತು ಲಿ ಎಂಬ ಅಕ್ಷರಗಳಿವೆ. ಮೊದಲ ಅಕ್ಷರದಲ್ಲಿ ಸ್ವರ ಮಾತ್ರ ಇದೆ.

ಇಷ್ಟು ವಿವರಗಳನ್ನು ನೀಡಿದ್ದಕ್ಕೆ ಕಾರಣಗಳಿವೆ. ಋಕಾರವೆಂದು ನಾವು ಕರೆಯುತ್ತಿರುವ ಧ್ವನಿರೂಪ ನಿಜವಾಗಿ ರಕಾರದ ಸ್ವರ ರೂಪ. ಅಂದರೆ ರಕಾರವು ಕೆಲವು ಸಂದರ್ಭಗಳಲ್ಲಿ ಸ್ವರದಂತೆ ವರ್ತಿಸುತ್ತದೆ. ಅಂತಹ ಪದಗಳಲ್ಲಿ ಅದನ್ನು ಋ ಎನ್ನುತ್ತೇವೆ. ಸ್ವರದಂತೆ ವರ್ತಿಸುವುದೆಂದರೆ ರಕಾರವು ಅಕ್ಷರದ ಕೇಂದ್ರವಾಗುವುದು ಎಂದು ತಿಳಿಯಬೇಕು. 'ಕೃತಿ' ಎನ್ನುವ ಪದದಲ್ಲಿ ಕೃ ಮತ್ತು ತಿ ಎಂಬ ಅಕ್ಷರಗಳಿವೆ. ಕೃ ಅಕ್ಷರದ ಕೇಂದ್ರ ಯಾವುದು? ಮೇಲೆ ಹೇಳಿದ ನಿಯಮದಂತೆ ಅಕ್ಷರದ ಕೇಂದ್ರ ಯಾವಾಗಲೂ ಸ್ವರವೇ ಆಗಬೇಕು. ಅಂದರೆ ಕೃ ಅಕ್ಷರದ ಕೇಂದ್ರ ಋಕಾರ. ಅಲ್ಲಿ ರಕಾರವೇ ಸ್ವರದಂತೆ ವರ್ತಿಸುತ್ತಿದೆ ಎನ್ನುವುದಕ್ಕೆ ಪುರಾವೆಗಳಿವೆ. ಋಕಾರಯುಕ್ತ ಪದಗಳು ಪದನಿರ್ಮಿತಿಯ ಪ್ರಕ್ರಿಯೆಗಳಿಗೆ ಅಂದರೆ ಪ್ರತ್ಯಯಗಳೊಡನೆ ಸೇರಿದಾಗ ಈ ಋಕಾರವೇ ರಕಾವಾಗಿ ಕಾಣಿಸಿಕೊಳ್ಳುತ್ತದೆ. ಉದಾ. ದೃಢ>ದಾರ್ಢ್ಯ, ಗೃಹ>ಗ್ರಾಹಸ್ಥ್ಯ, ಪೃಥಾ>ಪಾರ್ಥ.

ಹೀಗೆ ವ್ಯಂಜನಗಳು ಸ್ವರಗಳಂತೆ ಅಕ್ಷರ ಕೇಂದ್ರದಲ್ಲಿ ವರ್ತಿಸುವುದು ಹಲವಾರು ಭಾಷೆಗಳಲ್ಲಿ ಕಂಡುಬರುತ್ತದೆ. ಇಂಗ್ಲಿಶ್ ಭಾಷೆಯಿಂದ ಒಂದು ಉದಾಹರಣೆಯನ್ನು ಗಮನಿಸೋಣ. ನಾವು 'ಬಟನ್' ಎಂದು ಉಚ್ಚರಿಸುವ ಪದವನ್ನು ಸ್ವಭಾಷಿಕರು 'ಬಟ್ನ್' ಎಂದು ಉಚ್ಚರಿಸುತ್ತಾರೆ. ಬಟ್ನ್ ಎಂಬ ಪದದಲ್ಲಿ ಬ ಮತ್ತು ಟ್ನ್ ಎಂಬ ಅಕ್ಷರಗಳಿವೆ. ಮೊದಲ ಅಕ್ಷರದ ಸ್ವರಕೇಂದ್ರ ಅಕಾರವಾಗಿದೆ. ಎರಡನೆಯದರ ಕೇಂದ್ರ ಯಾವುದು? ಅಲ್ಲಿರುವುದು ಟ್ ಮತ್ತು ನ್ ಎಂಬ ವ್ಯಂಜನಗಳು. ಈ ಎರಡರಲ್ಲಿ ನಕಾರವು ಅಕ್ಷರಕೇಂದ್ರವಾಗಿ ವರ್ತಿಸುತ್ತದೆ. ಈ ವಿಷಯವನ್ನು ಹೆಚ್ಚು ಸಂಕೀರ್ಣಗೊಳಿಸದೆ ಹೇಳುವುದಾದರೆ ವ್ಯಂಜನಗಳು ಕೆಲವೊಮ್ಮೆ ಸ್ವರಕೇಂದ್ರಗಳಾಗಿ ವರ್ತಿಸುವುದು ಹಲವು ಭಾಷೆಗಳಲ್ಲಿ ಕಂಡುಬರುವ ಧ್ವನಿ ಪ್ರಕ್ರಿಯೆ. ಆದರೆ ಕನ್ನಡದಲ್ಲಿ ಈ ಬಗೆಯ ಧ್ವನಿ ಪ್ರಕ್ರಿಯೆ ಇಲ್ಲ. ಹಾಗಾಗಿ ಸಂಸ್ಕೃತದಿಂದ ಸ್ವೀಕರಿಸುವ ಋಕಾರಯುಕ್ತ ಪದಗಳ ಉಚ್ಚಾರಣೆಯಲ್ಲಿ ಕನ್ನಡಿಗರು ರಕಾರವನ್ನೇ ಬಳಸುತ್ತಾರೆ. ರಕಾರವು ಸ್ವರಕೇಂದ್ರವಾಗಲಾರದು. ಆದ್ದರಿಂದ ಅದರ ಮುಂದೆ ಒಂದು ಸ್ವರವನ್ನು ಸೇರಿಸಿಕೊಳ್ಳುತ್ತಾರೆ. ಉದಾ. 'ಮೃಗ' ಪದವನ್ನು ಉಚ್ಚರಿಸುವಾಗ ಋಕಾರದ ಬದಲು ರಕಾರವನ್ನು ಉಚ್ಚರಿಸಿದರೆ ಮ್ರ್‌ಗ್ ಅ ಎಂಬ ಧ್ವನಿ ಸರಣಿ ಉಂಟಾಗುತ್ತದೆ. ಕೊನೆಯ ಎರಡು ಧ್ವನಿಗಳು ಒಂದು ಅಕ್ಷರವನ್ನು ರಚಿಸಿಕೊಳ್ಳುತ್ತವೆ. ಮೊದಲ ಎರಡು ಧ್ವನಿಗಳಲ್ಲಿ ಸ್ವರವಿಲ್ಲ. ಆದ್ದರಿಂದ

ಅಲ್ಲಿ ಒಂದು ಅಕ್ಷರವನ್ನು ರೂಪಿಸಬೇಕಾದರೆ ಸ್ವರದ ಅವಶ್ಯಕತೆ ಇದೆ. ಸಾಮಾನ್ಯವಾಗಿ ಕನ್ನಡಿಗರು ಅಲ್ಲಿ ಉಕಾರವನ್ನು ಸೇರಿಸಿಕೊಳ್ಳುತ್ತಾರೆ. ಆಗ ಮೃಗ ಎಂಬ ಉಚ್ಚಾರಣಾ ರೂಪ ಸಿಗುತ್ತದೆ. ಅಲ್ಲಲ್ಲಿ ಉಕಾರದ ಬದಲು ಇಕಾರವನ್ನು ಬಳಸುವುದೂ ಉಂಟು. ಕೃಷ್ಣ ಎಂಬುದು ಕ್ರಿಷ್ಣ ಎಂದಾಗುವುದುಂಟು.

ಇದು ಋಕಾರದ ಕತೆಯಾದರೆ ೠಕಾರಕ್ಕೆ ಇನ್ನೂ ಒಂದು ಕತೆ ಇದೆ. ಸದ್ಯ ಕನ್ನಡಕ್ಕೆ ಸಂಸ್ಕೃತದಿಂದ ೠಕಾರವುಳ್ಳ ಪದಗಳು ಹೆಚ್ಚಾಗಿ ಬಂದು ಸೇರಿಲ್ಲ. ಅಕ್ಷರಕೇಂದ್ರವಾಗುವ ಸ್ವರ ಹ್ರಸ್ವವಾಗಿರುವಂತೆ ದೀರ್ಘವೂ ಆಗಿರಬಹುದು. 'ಕೂಟ' ಪದದಲ್ಲಿ ಮೊದಲ ಅಕ್ಷರದ ಕೇಂದ್ರ ದೀರ್ಘ ಸ್ವರವೇ ಆಗಿದೆ. ರಕಾರವು ಸಂಸ್ಕೃತದಲ್ಲಿ ಅಕ್ಷರ ಕೇಂದ್ರವಾಗುವಾಗ ದೀರ್ಘತೆಯನ್ನು ತೋರುವಲ್ಲಿ ೠಕಾರವಾಗಿ ಉಚ್ಚಾರವಾಗುತ್ತದೆ.

ಸಂಸ್ಕೃತದಲ್ಲಿ ಹೀಗೆ ಸ್ವರದ ಲಕ್ಷಣವನ್ನು ಹೊಂದುವ ಇನ್ನೊಂದು ವ್ಯಂಜನವೆಂದರೆ ಲಕಾರ. ಕಳೆದ ಶತಮಾನದ ಮೊದಲ ಭಾಗದ ಕನ್ನಡ ವ್ಯಾಕರಣಗಳು ಕನ್ನಡ ವರ್ಣಮಾಲೆಯ ಭಾಗವಾಗಿ ತೋರಿಸುತ್ತಿದ್ದ ಉಪಧ್ಮಾನೀಯ ಮತ್ತು ಜಿಹ್ವಾಮೂಲೀಯವೆಂಬ ಧ್ವನಿಗಳು ಲಕಾರದ ಸ್ವರ ರೂಪಗಳೇ ಆಗಿವೆ.

ಇಷ್ಟು ವಿವರಣೆಯನ್ನು ನೀಡಿಯಾದ ಮೇಲೆ ಪ್ರಶ್ನೆಯೊಂದು ಹಾಗೇ ಉಳಿಯುತ್ತದೆ. ಕನ್ನಡಕ್ಕೆ ಋಕಾರ ಬೇಕೇ ಅಥವಾ ಬೇಡವೇ ಶುದ್ಧ ಕನ್ನಡ ಬರವಣಿಗೆಯ ಪರವಾದವರು ಆಗಲೇ ಹೇಳಿದಂತೆ ಋಕಾರ ಬೇಕೇ ಬೇಕು ಎಂದು ವಾದಿಸುತ್ತಾರೆ. ರುಣ, ರುತು, ದ್ರುಡ, ಮ್ರುಗ, ನ್ರುಪ, ಅಮ್ರುತ ಎಂದು ಬರೆಯುವುದನ್ನು ಅವರು ಕಲ್ಪಿಸಿಕೊಳ್ಳಲಾರರು. ಹೀಗೆ ವಾದಿಸುವ ಹಲವರು ಕನ್ನಡದ ಶಾಸನಗಳಲ್ಲಿ ಇದೇ ಬಗೆಯ ಬರವಣಿಗೆ ಇರುವುದನ್ನು ಬಲ್ಲರು. ಆದರೆ ಈಗ ನಾವು ಬರೆಯುವ ಬರವಣಿಗೆಯಲ್ಲಿ ಮಾತ್ರ ಈ ಬಗೆಯ ರೂಪಗಳನ್ನು ಒಪ್ಪಲು ಸಿದ್ಧರಿಲ್ಲ. ಏಳೆಂಟು ಶತಮಾನಗಳ ಹಿಂದೆ ಇದೇ ಸಮಸ್ಯೆ ಕನ್ನಡ ಬರವಣಿಗೆಯಲ್ಲಿ ಉಂಟಾಗಿದೆ. ಕನ್ನಡದಲ್ಲಿ ಇದ್ದ ಱಕಾರ ಮತ್ತು ೞಕಾರಗಳು ತಮ್ಮ ಉಚ್ಚಾರಣಾ ಲಕ್ಷಣಗಳನ್ನು ಕಳೆದುಕೊಂಡು ಕ್ರಮವಾಗಿ ರಕಾರ ಮತ್ತು ಳಕಾರಗಳಾಗಿ ಉಚ್ಚಾರಣೆಯಾಗತೊಡಗಿದವು. ಕನ್ನಡ ಬರೆಯುತ್ತಿದ್ದವರಲ್ಲಿ ಕೆಲವರು ಬರವಣಿಗೆಯಲ್ಲೂ ಱಕಾರದ ಬದಲು ರಕಾರವನ್ನು, ೞಕಾರದ ಬದಲು ಳಕಾರವನ್ನು ಬರೆಯಲು ಮೊದಲು ಮಾಡಿದರು. ಅವರು ಆಗ ಪ್ರತಿಭಟನೆಯನ್ನು ಎದುರಿಸಿರಲೇಬೇಕು. ಆದರೆ ಕಾಲಕ್ರಮೇಣ ಉಚ್ಚಾರಣೆಯಿಂದ ನಿರ್ದೇಶಿತವಾದ ಬದಲಾದ ಬರೆಹ ರೂಪವೇ ನೆಲೆನಿಂತಿತು. ಈಗ ನಾವು ಱಕಾರ ಮತ್ತು ೞಕಾರಗಳನ್ನು ಬರೆಯುವುದಿಲ್ಲ. ಆದರೆ ಆ ಧ್ವನಿಗಳು ಕನ್ನಡದಲ್ಲಿ ಇದ್ದವೆಂಬುದು ಹಳೆಯ ಕನ್ನಡವನ್ನು ಓದುವವರಿಗೆ ಗೊತ್ತು. ಕಣ್ಣಿನ ಅಂದಾಜಿನಲ್ಲಿ ಆ ಧ್ವನಿಗಳು ಅವರಿಗೆ ನಿಜ; ಕಿವಿಯ ವಲಯದಲ್ಲಿ ಅವುಗಳಿಗೆ ಪ್ರವೇಶವಿಲ್ಲ.

ಋಕಾರವನ್ನು ರಕಾರವಾಗಿ ಕನ್ನಡಿಗರು ಗ್ರಹಿಸುತ್ತಿರುವುದನ್ನು ನಾವು ಭಾಷೆಯ ಒಂದು ಸಹಜ ಪ್ರಕ್ರಿಯೆ ಎಂದು ಒಪ್ಪಬೇಕು. ಈ ಉಚ್ಚಾರಣೆಯ ಬದಲಾವಣೆಯನ್ನು

ಬರವಣಿಗೆಯಲ್ಲೂ ನೆಲೆಗೊಳಿಸಲು ಸಿದ್ಧರಾಗಬೇಕು. ಇದು ಸೌಲಭ್ಯಾಕಾಂಕ್ಷೆ ಅಥವಾ ಸರಳೀಕರಣದ ಮಾತಲ್ಲ. ಕನ್ನಡದ ಉಚ್ಚಾರಣೆಯನ್ನು ಕನ್ನಡದ ಬರವಣಿಗೆಗೆ ಸಮೀಪಗೊಳಿಸುವ ಯತ್ನ. ಇದು ಕನ್ನಡವನ್ನು ಕಲಿಸುವ ಕಲಿಯುವ ಹಂತದಲ್ಲಿ ತುಂಬಾ ನೆರವಿಗೆ ಬರಲಿದೆ. ಅಲ್ಲದೆ ಈಚಿನ ದಿನಗಳಲ್ಲಿ ತಂತ್ರಜ್ಞಾನದ ಪ್ರಗತಿಯ ನಿರ್ದೇಶನಗಳು ಕೂಡ ನಮ್ಮ ಬರವಣಿಗೆಯ ಕ್ರಮದ ಮೇಲೆ ಹಿಡಿತವನ್ನು ಸಾಧಿಸುತ್ತಿವೆ. ಕನ್ನಡವನ್ನು ಕೇಳಿ ಅದನ್ನು ಬರೆಹಕ್ಕೆ ಪರಿವರ್ತಿಸುವ ಕಂಪ್ಯೂಟರ್ ಕಾರ್ಯವಾಹಿಯನ್ನು ಸಿದ್ಧಪಡಿಸಬೇಕೆಂದುಕೊಳ್ಳಿ. ಅಂಥ ಕಾರ್ಯವಾಹಿಗಳು ಈಗ ಅತ್ಯವಶ್ಯವಾಗುತ್ತಿವೆ. ಆಗ ಆ ಕಾರ್ಯವಾಹಿ ಕೇಳಿದ್ದನ್ನು ಮಾತ್ರ ಬರೆಯುತ್ತದೆ. ಅಂದರೆ ನಮ್ಮ ಬರವಣಿಗೆಯ ರೀತಿ ನಾವು ಉಚ್ಚರಿಸುವ ಕ್ರಮಕ್ಕೆ ಸಮೀಪವಾಗಿರಬೇಕಾದುದು ಅನಿವಾರ್ಯ. ಇದೊಂದು ಆನುಷಂಗಿಕ ಕಾರಣವಾದರೂ ಪರಿಗಣಿಸಬೇಕಾದ ಕಾರಣವಾಗಿದೆ.

ಱಕಾರ ಮತ್ತು ೞಕಾರಗಳು ಉಚ್ಚಾರಣೆಯ ಲಕ್ಷಣವನ್ನು ಬದಲಾಯಿಸಿಕೊಂಡಾಗ ಕನ್ನಡವನ್ನು ಬರೆಯುವ ಮತ್ತು ಓದುವವರ ಸಂಖ್ಯೆ ಕಡಿಮೆ ಇತ್ತು. ಕನ್ನಡ ಬರವಣಿಗೆಯನ್ನು ಬಳಸುವ ವಲಯಗಳೂ ಕಡಿಮೆ ಇದ್ದವು. ಆದರೆ ಈಗ ಪರಿಸ್ಥಿತಿ ಬದಲಾಗಿದೆ. ಕನ್ನಡದ ಬರೆಹದ ಪ್ರಮಾಣ ಹೆಚ್ಚಾಗಿದೆ. ಬರೆಹ ಎಂದರೆ ಕೈಯಲ್ಲಿ ಲೆಕ್ಕಣಿಕೆಯನ್ನು ಹಿಡಿದು ಬರೆಯುವುದು ಎಂದು ಈಗ ತಿಳಿಯಲಾಗದು. ಬರೆಹವೀಗ ಬೆರಳಚ್ಚು ಯಂತ್ರಗಳಿಂದ, ಕಂಪ್ಯೂಟರ್‌ಗಳಿಂದ "ಬರೆಯದೆಯೇ" ರೂಪಗೊಳ್ಳುತ್ತದೆ. ಹೀಗೆ "ಬರೆಯುವವರು" ಅಗಾಧ ಪ್ರಮಾಣದಲ್ಲಿ ಇದ್ದಾರೆ. ನಾವೀಗ ದಿನವೂ ಓದುವ ದಿನಪತ್ರಿಕೆಗಳ ಬಹುಪಾಲು ಕೈ ಬರೆಹದ ಹಂತವನ್ನು ಕಂಡಿರುವುದಿಲ್ಲ. ನೇರವಾಗಿ ಯಾಂತ್ರೀಕೃತ ರೂಪದಲ್ಲೇ ಸಿದ್ಧವಾಗುತ್ತವೆ. ಈ ಅಂಶವನ್ನು ನಾವು ಪರಿಗಣಿಸುವುದು ಅವಶ್ಯ. ಕಾರ್ಯವಾಹಿಗಳು ಜಾಗತಿಕ ಮಟ್ಟದಲ್ಲಿ ಪ್ರಮಾಣೀಕರಣಗೊಳ್ಳಬೇಕಾಗುತ್ತದೆ. ಅಂತರ್ಜಾಲಗಳಲ್ಲಿ, ದೇಶಾಂತರದ ಸಂವಾದಗಳಲ್ಲಿ, ಕನ್ನಡದ ಈ ಕಾರ್ಯವಾಹಿ ಬಳಕೆಯಾಗಬೇಕಾಗುವುದರಿಂದ ನಾವು ಕೇವಲ ಪಾರಂಪರಿಕ ನೆಲೆಯಲ್ಲಿ ಯೋಚಿಸುವುದು ಸಾಧ್ಯವಿಲ್ಲ. ಬದಲಾಗುತ್ತಿರುವ ಸನ್ನಿವೇಶಗಳಿಗೆ ನಮ್ಮನ್ನು ನಾವು ಹೊಂದಿಸಿಕೊಂಡು ಮುನ್ನಡೆಯಬೇಕಾಗುತ್ತದೆ. ಈ ಕಾರಣದಿಂದಲೂ ಋಕಾರ ಮತ್ತು ೠಕಾರಗಳನ್ನು ಮತ್ತು ಅವುಗಳ ಗುಣಿತ ಲಿಪಿಗಳನ್ನು ಕನ್ನಡ ವರ್ಣಮಾಲೆಯಿಂದ ಹೊರಗಿಡಬೇಕು. ಹಳೆಯ ದಾಖಲೆಗಳನ್ನು ಓದುವವರು ಈ ಲಿಪಿ ಸಂಕೇತಗಳನ್ನು ತಮ್ಮ ಕಣ್ಣಿನ ಗ್ರಹಿಕೆಯ ಭಾಗವಾಗಿ ಬಳಸಲು ಯಾವ ತೊಂದರೆಯೂ ಇಲ್ಲ.

ನಮ್ಮ ಉಚ್ಚಾರಣೆಗೆ ಅನುಗುಣವಾಗಿ ನಮ್ಮ ಲಿಪಿ ವ್ಯವಸ್ಥೆಯಲ್ಲಿ ಬದಲಾವಣೆ ಮಾಡಿಕೊಳ್ಳುವುದು ಮತ್ತು ನಮ್ಮ ಲಿಪಿ ವ್ಯವಸ್ಥೆಗೆ ಅನುಗುಣವಾಗಿ ನಮ್ಮ ಉಚ್ಚಾರಣೆಯನ್ನು ಹೊಂದಿಸಿಕೊಳ್ಳುವುದು ಕನ್ನಡದಲ್ಲಿ ಹಲವಾರು ಶತಮಾನಗಳಿಂದ ನಡೆದುಕೊಂಡು ಬಂದಿರುವ ಪ್ರಕ್ರಿಯೆಯೇ ಆಗಿದೆ. ಸಂಸ್ಕೃತದ ಮಹಾಪ್ರಾಣಗಳನ್ನು ಪ್ರತಿನಿಧಿಸಲು ನಮ್ಮ ಲಿಪಿ ವ್ಯವಸ್ಥೆಯಲ್ಲಿ ಹೊಸ ಸಂಕೇತಗಳನ್ನು ರೂಪಿಸಿಕೊಂಡಿದ್ದೇವೆ. ಇಂಗ್ಲಿಶಿನ ಫರ್ಷ

ಧ್ವನಿಗಳಾದ ಎಸ್ ಮತ್ತು ಜೆಡ್‌ಗಳನ್ನು ಲಿಪಿಯಲ್ಲಿ ಸೂಚಿಸಲು ಹೊಸ ಉಪ ಚಿಹ್ನೆಗಳನ್ನು ಜಾರಿಗೆ ತಂದಿದ್ದೇವೆ. ಇದು ಒಂದು ವಿಧಾನ. ಇನ್ನೊಂದು ಕಡೆ ಇನ್ನೊಂದು ಭಾಷೆಯ ಧ್ವನಿಯು ನಮ್ಮಲ್ಲಿ ಇಲ್ಲದಿದ್ದಲ್ಲಿ ಆ ಧ್ವನಿಗೆ ಸಮೀಪವಾದ ನಮ್ಮ ಭಾಷೆಯ ಧ್ವನಿಯಂತೆ ಅದನ್ನು ಉಚ್ಚರಿಸಿ ಅದಕ್ಕನುಗುಣವಾದ ನಮ್ಮ ಲಿಪಿಯ ಮೂಲಕ ಪ್ರತಿನಿಧಿಸುತ್ತಿದ್ದೇವೆ. ಇಂಗ್ಲಿಶಿನ ವರ್ತ್ಸ್ಯ ಘರ್ಷ ಧ್ವನಿಗಳೂ ನಮ್ಮಲ್ಲಿ ಇಲ್ಲ. ಅವುಗಳನ್ನು ಮಹಾಪ್ರಾಣಗಳ ಹಾಗೆ ಉಚ್ಚರಿಸಿ ಹಾಗೇ ಬರೆಯುತ್ತಿದ್ದೇವೆ. 'ಥಿಂಕ್' ಎಂದು ನಾವು ಬರೆಯುವ ಮತ್ತು ಹಾಗೇ ಉಚ್ಚರಿಸುವ ಪದದ ಇಂಗ್ಲಿಶಿನ ಮೂಲಪದದ ಮೊದಲ ವ್ಯಂಜನ ಒಂದು ವರ್ತ್ಸ್ಯ ಘರ್ಷ ಮತ್ತು ಅಘೋಷ ಧ್ವನಿ. ನಾವು ಅದನ್ನು ಸ್ಪರ್ಶ ಧ್ವನಿಯಂತೆ ಪರಿವರ್ತಿಸಿ ಅದರ ಲಿಪಿ ಚಿಹ್ನೆಯ ಮೂಲಕ ಬರೆಯುತ್ತಿದ್ದೇವೆ. ಅಂದರೆ ನಮ್ಮ ಲಿಪಿ ವ್ಯವಸ್ಥೆಯಲ್ಲಿ ಬದಲಾವಣೆ ಮಾಡಿಕೊಳ್ಳುತ್ತಿರುವುದು ನಿರಂತರವಾಗಿ ನಡೆದು ಬಂದಿರುವ ಪ್ರಕ್ರಿಯೆಯಾಗಿದೆ. ಋಕಾರಕ್ಕೆ ಸಂಬಂಧಿಸಿದ ಪ್ರಶ್ನೆ ಹೊಸದಾದರೂ ಇದಕ್ಕೆ ನಾವು ಮುಂದಿಡುತ್ತಿರುವ ಉತ್ತರ ಮಾತ್ರ ನಮಗೆ ಪರಿಚಿತವಾಗಿರುವುದೇ ಆಗಿದೆ. ಸಾಂಪ್ರದಾಯಿಕವಾಗಿ ಯೋಚಿಸಿ ಕನ್ನಡ ಬರವಣಿಗೆಯ ಶುದ್ಧತೆಯನ್ನು ಕುರಿತು ಆಲೋಚಿಸುವವರು ದ್ವಂದ್ವ ಮಾನದಂಡಗಳನ್ನು ಅವಲಂಬಿಸುತ್ತಿದ್ದಾರೆ. ಸಂಸ್ಕೃತದಿಂದ ಬಂದು ನೆಲೆನಿಂತ ಪದಗಳ ಬಗೆಗೆ ಮಾತ್ರ ಶುದ್ಧತೆಯ ಮಾತನ್ನು ಎತ್ತಿಹೇಳಲಾಗುತ್ತಿದೆ. ಇಂಗ್ಲಿಶ್ ಅಥವಾ ಪರ್ಸೋ ಅರಾಬಿಕ್ ಮೂಲದಿಂದ ಬಂದ ಪದಗಳನ್ನು ಕನ್ನಡ ಉಚ್ಚಾರಣೆಗೆ ಹೊಂದಿಸಿಕೊಂಡು ಅದಕ್ಕೆ ತಕ್ಕಂತೆ ಕನ್ನಡದ ಲಿಪಿಯ ಮೂಲಕ ಪ್ರತಿನಿಧಿಸುವುದನ್ನು ಮಾತ್ರ ಒಪ್ಪಿಕೊಳ್ಳಲಾಗುತ್ತಿದೆ. ಸಂಸ್ಕೃತ ಪದಗಳು ಮಾತ್ರ ಶುದ್ಧವಾಗಿ ಉಳಿಯಬೇಕು, ಇತರ ಭಾಷೆಯ ಪದಗಳು ಅಶುದ್ಧವಾದರು ಪರವಾಗಿಲ್ಲ ಎನ್ನುವುದು ದ್ವಂದ್ವ ಮಾನದಂಡ ತಾನೆ?

ಇವೆಲ್ಲ ವಿವರಣೆಗಳನ್ನು ಮಂಡಿಸುತ್ತಿರುವ ಉದ್ದೇಶ ಮಾತ್ರ ಈಗ ಸ್ಪಷ್ಟವಾಗಿದೆ. ಕನ್ನಡ ಲಿಪಿ ವ್ಯವಸ್ಥೆಯನ್ನು ಕಲಿಸುವಾಗ, ಉಚ್ಚಾರಣೆಯ ವ್ಯಾಪ್ತಿಯನ್ನು ಪರಿಚಯ ಮಾಡಿಕೊಡುವಾಗ, ಋಕಾರ ಮತ್ತು ಋೂಕಾರ ಲಿಪಿಗಳನ್ನು ಮತ್ತು ಅವುಗಳ ಗುಣಿತ ಚಿಹ್ನೆಗಳನ್ನು ಕಲಿಸಿಕೊಡುವುದು ಅವಶ್ಯವಿಲ್ಲ.

# ಋಕಾರದ ಮುಂದುವರೆದ ಕಥೆ

ಮತ್ತೆ ಮತ್ತೆ ಋಕಾರದ ಬಗೆಗೆ ಚರ್ಚೆ ಬೆಳೆಯುತ್ತಲೇ ಇದೆ. ತುಮಕೂರಿನಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಕೊನೆಯಲ್ಲಿ ಕೈಗೊಂಡ ನಿರ್ಣಯಗಳನ್ನು ಗಮನಿಸಿದರೆ ಅದರಲ್ಲಿ ಋಕಾರವನ್ನು ಕನ್ನಡ ವರ್ಣಮಾಲೆಯ ಭಾಗವನ್ನಾಗಿ ಉಳಿಸಿಕೊಳ್ಳಬೇಕೆಂದು ನಿರ್ಣಯಿಸಿರುವುದು ಕಂಡುಬರುತ್ತದೆ. ಕನ್ನಡದ ಮಕ್ಕಳು ಬರೆಯಲು ಕಲಿಯುವ ಕನ್ನಡ ಲಿಪಿಮಾಲೆಯಲ್ಲಿ ಋಕಾರ ಮತ್ತು ಅದರ ಚಿಹ್ನೆಗಳು ಏಕೆ ಇರಬೇಕಿಲ್ಲ ಎಂಬುದಕ್ಕೆ ಮತ್ತೊಂದು ದಿಕ್ಕಿನಿಂದ ಕೆಲವು ವಿವರಗಳನ್ನು ಮಂಡಿಸಲು ಈ ಟಿಪ್ಪಣಿಯನ್ನು ಬರೆಯಲಾಗುತ್ತಿದೆ.

ಯಾವುದೇ ಲಿಪಿ ಚಿಹ್ನೆಗೆ ಮೂರು ಹಂತಗಳ ಅಥವಾ ಮೂರು ಬಗೆಯ ಬಳಕೆಗಳು ಇರುತ್ತವೆ. ಈ ಮೂರನ್ನು ಕ್ರಮವಾಗಿ ಕಣ್ಣು, ಕಿವಿ ಮತ್ತು ಕೈ ಬಳಕೆಗಳು ಎನ್ನೋಣ. ಕಣ್ಣಿನ ಬಳಕೆ ಎಂದರೇನು? ಒಂದು ಬರೆಹದ ಭಾಗವನ್ನು ಲಿಪಿಗಳ ಮೂಲಕ ನಾವು ಓದುತ್ತೇವೆ ಎಂದುಕೊಳ್ಳಿ. ಆಗ ಆ ಲಿಪಿಗಳು ನಮ್ಮ ಪಾಲಿಗೆ ಕಣ್ಣಿನ ಹಂತದ ಬಳಕೆಗೆ ಒಳಗಾಗುತ್ತವೆ. ದಿನವೂ ನಾವು ಇಂಗ್ಲಿಶ್ ಪತ್ರಿಕೆಯನ್ನು ಓದುತ್ತಿದ್ದರೆ ಇಂಗ್ಲಿಶ್ ಲಿಪಿಗಳನ್ನು ಕಣ್ಣಿನ ಮೂಲಕ ನಾವು ನೋಡುತ್ತೇವೆ. ಅದೇ ನಮ್ಮ ಓದು. ಅಷ್ಟರ ಮಟ್ಟಿಗೆ ಆ ಲಿಪಿಗಳ ಬಳಕೆ ಸೀಮಿತ. ಆ ಲಿಪಿಗಳ ಉಚ್ಚಾರಣೆಯನ್ನು ನಾವು ಕೇಳಿಸಿಕೊಳ್ಳುವುದಿಲ್ಲ ಮತ್ತು ನಾವು ಬರೆಯಬೇಕಾದ ಪ್ರಸಂಗಗಳು ಒದಗುವುದಿಲ್ಲ.

ಕಿವಿಯ ಬಳಕೆಯಲ್ಲಿ ಇದಕ್ಕಿಂತ ಭಿನ್ನವಾದ ಕ್ರಿಯೆ ನಡೆಯುತ್ತಿರುತ್ತದೆ. ಲಿಪಿಯನ್ನು ನಾವು ನೋಡುತ್ತಲೇ ಗಟ್ಟಿಯಾಗಿ ಓದಿಕೊಳ್ಳುವುದರಿಂದಾಗಿ ಅಲ್ಲಿ ಲಿಪಿಗೆ ಧ್ವನಿಯ ಅಂಶವೂ ಸೇರಿಕೊಳ್ಳುತ್ತದೆ. ಆಗ ಲಿಪಿಯು ಕಿವಿಯ ಮೂಲಕವೂ ನಿಜವಾಗುತ್ತದೆ. ಹಾಗೆ ನೋಡಿದರೆ ಇಂಥ ಪ್ರಸಂಗಗಳು ತುಂಬಾ ಕಡಿಮೆ. ಬೇರೆಯವರು ನಮಗಾಗಿ ಓದುವ ಮತ್ತು ನಾವು ಬೇರೆಯವರಿಗಾಗಿ ಓದುವ ಪ್ರಸಂಗಗಳಲ್ಲಿ ಮಾತ್ರ ಈ ಬಗೆಯ ಕಿವಿಯ ನೆಲೆಯ ಬಳಕೆಯು ಕಾಣಿಸಿಕೊಳ್ಳುತ್ತದೆ.

ಇನ್ನು ಕೈ ನೆಲೆಯು ಬಳಕೆಯನ್ನು ನೋಡೋಣ. ಲಿಪಿಯನ್ನು ನಾವು ಬರೆಯಬೇಕಾಗಿ ಬಂದಾಗ ಅದರ ಆಕಾರವನ್ನು ನಮ್ಮ ಕೈ ಬೆರಳುಗಳ ಮೂಲಕ ಮೂಡಿಸುವ ಕೆಲಸವನ್ನು ಮಾಡುತ್ತೇವೆ. ಇದು ದಿನಗಳೆದಂತೆ ಬದಲಾಗುತ್ತಾ ಹೋಗುತ್ತಿದೆ.

ಬಹುಮಟ್ಟಿಗೆ ಶಾಲಾ ಶಿಕ್ಷಣದ ಭಾಗವಾಗಿ ಲಿಪಿಯನ್ನು ಬರೆಯಲು ಕಲಿತವರು ಕೈ ಬೆರಳುಗಳ ಮೂಲಕ ಲಿಪಿಗಳನ್ನು ಮೂಡಿಸುತ್ತಾರೆ. ಆದರೆ ತಾಂತ್ರಿಕವಾಗಿ ಇನ್ನೂ ಹಲವು ಸಾಧ್ಯತೆಗಳು ಈಗ ಲಭ್ಯವಿವೆ. ಬೆರಳಚ್ಚು ಯಂತ್ರದ ಮೂಲಕ "ಬರೆಯು"ವಾಗ ನಾವು ಬೆರಳುಗಳನ್ನು ಬೇರೆಯ ರೀತಿಯಲ್ಲೇ ಬಳಸುತ್ತೇವೆ. ಲಿಪಿಯನ್ನು ಬರೆಯುವುದೆಂದರೆ ಅಲ್ಲಿ ನಮ್ಮ ನೆನಪಿನ ಬಲದಿಂದ ಯಾವುದೋ ಒಂದು ಸ್ಥಾನದಲ್ಲಿರುವ ಕೀಲಿಯ ಮೇಲೆ ಒತ್ತುವುದು ಎಂದರ್ಥ. ಇನ್ನು ಇದೇ ಮಾದರಿ ಈಗಿನ ಕಂಪ್ಯೂಟರ್‌ಗಳನ್ನೂ ಬಳಕೆಯಾಗುತ್ತದೆ. ಆದರೆ ಭಿನ್ನವಾದ ನೆಲೆಯಲ್ಲಿ ಇದು ಪ್ರವೃತ್ತವಾಗುತ್ತದೆ. ನಾವು ಯಾವ ತಂತ್ರಾಂಶವನ್ನು ಬಳಸುತ್ತಿದ್ದೇವೆ ಎಂಬುದನ್ನು ಅವಲಂಬಿಸಿ ಕನ್ನಡದ ಲಿಪಿಯನ್ನು ತೆರೆಯ ಮೇಲೆ ಪಡೆಯಲು ನಾವು ಒತ್ತ ಬೇಕಾದ ಕೀಲಿಗಳೂ ಬೇರೆಯಾಗುತ್ತವೆ. ಬಹುಪಾಲು ಸಂದರ್ಭದಲ್ಲಿ ನಾವು ಇಂಗ್ಲಿಶ್ ಲಿಪಿಗಳನ್ನು ಒತ್ತಿ ಕನ್ನಡದ ಲಿಪಿಗಳನ್ನು ಪಡೆಯುವ ವಿಧಾನ ಈಗ ಲಭ್ಯ.

ಇಷ್ಟೆಲ್ಲ ವಿವರಣೆ ಯಾಕೆ ಬೇಕೆಂಬ ಪ್ರಶ್ನೆ ಈಗ ಎದುರಾಗುತ್ತದೆ. ಬಳಕೆಯ ಪ್ರಮಾಣವನ್ನು ಗಮನದಲ್ಲಿ ಇರಿಸಿಕೊಂಡರೆ ಕಣ್ಣಿನ ಬಳಕೆಯ ನೆಲೆಗಳಲ್ಲಿ ಲಿಪಿ ನಮಗೆ ಪ್ರಯುಕ್ತವಾಗುವ ಸಂದರ್ಭಗಳು ಹೆಚ್ಚು. ಕಿವಿಯ ನೆಲೆಯ ಬಳಕೆಗೆ ಎರಡನೆಯ ಸ್ಥಾನ. ಬಹುಮಟ್ಟಿಗೆ ಕೈ ನೆಲೆಯ ಬಳಕೆಗೆ ಅತಿ ಕಡಿಮೆ ಅವಕಾಶಗಳಿವೆ. ನಮಗಾಗಿ ಹಲವರು ಕನ್ನಡವನ್ನು "ಬರೆಯು"ತ್ತಾರೆ. ಲಿಪಿಯನ್ನು ನಾವೇ ಕೈ ಮೂಲಕ ಮೂಡಿಸಬೇಕಾಗಿ ಬರುವ ಪ್ರಸಂಗಗಳು ತುಂಬಾ ಕಡಿಮೆ. ಕನ್ನಡ ಹೆಚ್ಚು ಪ್ರಮಾಣದಲ್ಲಿ ಕೈ ನೆಲೆಯಲ್ಲಿ ಬಳಕೆಯಾಗುವುದು ಶಾಲಾ ತರಗತಿಗಳ ಉತ್ತರ ಪತ್ರಿಕೆಗಳಲ್ಲಿ ಮಾತ್ರ. ಅದು ಬಿಟ್ಟರೆ ನಾವು ನಮ್ಮ ಸಹಿಗಳನ್ನು ಹಾಕುವಾಗ ಮಾತ್ರ "ಬರೆಯು"ತ್ತೇವೆ. ಉಳಿದಂತೆ ಲಿಪಿ ನಮಗೆ ಕಣ್ಣು ಮತ್ತು ಕಿವಿಯ ನೆಲೆಗೆ ಮಾತ್ರ ಸೀಮಿತ.

ಈಗ ಋಕಾರದ ಮಾತಿಗೆ ಬರೋಣ. ಈ ಲಿಪಿ ಮತ್ತದರ ಚಿಹ್ನೆಗೆ ಒಂದು ಉಚ್ಚಾರವಿದೆ ಮತ್ತು ಒಂದು ಆಕಾರವಿದೆ. ಉಚ್ಚಾರ ಮುಖ್ಯವಾಗಿ ಕಿವಿಗೆ ಸೇರಿದ ಸಂಗತಿ. ಋಕಾರವನ್ನು ಲಿಪಿಮಾಲೆಯಿಂದ ತೆಗೆಯಬೇಕೆನ್ನುವವರು ಹೇಳುತ್ತಿರುವ ಮಾತೆಂದರೆ ಋಕಾರದ ಉಚ್ಚಾರವೀಗ ರಕಾರವನ್ನು ಸಮೀಪಿಸಿದೆ ಅಥವಾ ರಕಾರವೇ ಆಗಿಹೋಗಿದೆ ಎಂಬುದಾಗಿದೆ. ಆದ್ದರಿಂದ ಋಕಾರಕ್ಕೆ ಒಂದು ಪ್ರತ್ಯೇಕ ಉಚ್ಚಾರಣಾ ಸಾಧ್ಯತೆ ಇದ್ದರೂ ಅದು ಕನ್ನಡದ ಮಟ್ಟಿಗೆ ಈಗ ಲಭ್ಯವಿಲ್ಲ. ಅಂದರೆ ಋಕಾರವೀಗ ಒಂದು ಬರೆಯದ ಚಿಹ್ನೆಯಾಗಿ ಮಾತ್ರ ನಿಜವಾಗಿದೆ. ಕಣ್ಣಿನ ಮೂಲಕ ಅದನ್ನು ಗ್ರಹಿಸುವುದು ಮತ್ತು ಕೈ ಮೂಲಕ ಅದನ್ನು "ಬರೆಯುವುದು" ಸಾಧ್ಯ. ಕೈ ಮೂಲಕ ಬರೆಯುವ ಬಗೆಗೆ ಈಗಾಗಲೇ ಹೇಳಿದ ಸಂಗತಿಯನ್ನು ಗಮನಿಸಿದರೆ ಅದೀಗ ಒಂದು ಚಿತ್ರವನ್ನು ಮೂಡಿಸುವ ಸಂಗತಿಯಾಗಿ ಉಳಿದಿದೆಯೇ ಹೊರತು ಉಚ್ಚಾರಣೆಗೂ ಆ ಲಿಪಿಗೂ ಯಾವ ಸಂಬಂಧವೂ ಈಗ ಮುಖ್ಯವಾಗಿಲ್ಲ. ಒಂದು ವೇಳೆ ಋಕಾರವನ್ನು ಶಾಲೆಯಲ್ಲಿ ಕಲಿಸುವ ಕನ್ನಡದ ಲಿಪಿ ಮಾಲೆಯಿಂದ ಕೈ ಬಿಟ್ಟೆವೆಂದುಕೊಳ್ಳೋಣ. ಅದರಿಂದ ಏನಾಗುತ್ತದೆ. ಮೊದಲನೆಯ ಸಮಸ್ಯೆ, ಆ ಲಿಪಿಯುಕ್ತ ಪದಗಳನ್ನು ಹೇಗೆ

ಬರೆಯುವುದು ಎನ್ನುವುದಾಗಿದೆ. ಇದಕ್ಕೆ ಈಗಾಗಲೇ ಉತ್ತರವನ್ನು ನೀಡಿಯಾಗಿದೆ. ಹೇಗೆ ಉಚ್ಚರಿಸುತ್ತೇವೋ ಸಾಧ್ಯವಿದ್ದಷ್ಟೂ ಹಾಗೆ ಬರೆಯುವುದು ಸರಿಯಾದ ಮಾರ್ಗ. ಮುಂದಿನ ಪ್ರಶ್ನೆ. ಈಗಾಗಲೇ ಇರುವ ದಾಖಲೆಗಳಲ್ಲಿ ಋಕಾರದ ಲಿಪಿ ಬಳಕೆಯಾಗಿದೆಯಲ್ಲ. ಅದನ್ನು 'ಓದುವುದು' ಹೇಗೆ? ಅಂದರೆ ಕಣ್ಣಿನ ಮೂಲಕ ಆ ಲಿಪಿಯನ್ನು ಗ್ರಹಿಸುವುದು ಎಂದರ್ಥ. ಇದು ದೊಡ್ಡ ಸಮಸ್ಯೆಯಲ್ಲ. ಋಕಾರ ಕಣ್ಣಿನ ಚಿಹ್ನೆಯಾಗಿ ಕನ್ನಡದಲ್ಲಿ ಉಳಿದುಕೊಳ್ಳಬಾರದೆಂದು ಯಾರೂ ವಾದಿಸುತ್ತಿಲ್ಲ. ಱಳ ಮತ್ತು ಶಕಟರೇಫೆಯ ಚಿಹ್ನೆಗಳು ಕಣ್ಣಿನ ಅನುಭವವಾಗಿ ಈಗಲೂ ಲಿಪಿರೂಪದಲ್ಲಿ ಉಳಿದಿವೆಯಲ್ಲವೆ? ಕಣ್ಣಿನ ಲಿಪಿಯಾಗಿ ಋಕಾರವನ್ನು ಕಲಿಸುವುದು ದೊಡ್ಡ ವಿಚಾರವಲ್ಲ. ಹಾಗೆ ನೋಡಿದರೆ ನಮಗೆ ಶಕಟರೇಫೆ ಮತ್ತು ಱಳಗಳನ್ನು ಬರೆಯಲು ಹೇಳಿಕೊಡದಿದ್ದರೂ ಅವು ನಮಗೆ ಕೆಲವು 'ಓದುಗಳಲ್ಲಿ' ನಮ್ಮ ಕಣ್ಣಿನ ಅನುಭವದ ಭಾಗವಾಗಿಬಿಟ್ಟವು. ಇನ್ನು ಋಕಾರವನ್ನು ಕೈಬೆರಳುಗಳ ಮೂಲಕ 'ಬರೆಯುವ'ವರು ಈಗ ಅನುಸರಿಸುತ್ತಿರುವ ತಾಂತ್ರಿಕ ವಿಧಾನವನ್ನು ಅನುಸರಿಸುತ್ತಾರೆ. ಅದಕ್ಕೂ ಆ ಲಿಪಿಯ ಉಚ್ಚಾರಣೆಗೂ ಯಾವ ಸಂಬಂಧವೂ ಇಲ್ಲ. ಉದಾಹರಣೆಗೆ ನಾನೀಗ ಕಂಪ್ಯೂಟರ್‌ನಲ್ಲಿ 'ಬರೆಯುತ್ತಿರುವ' ಕನ್ನಡ ತಂತ್ರಾಂಶದಲ್ಲಿ ಋಕಾರವನ್ನು 'ಬರೆಯಲು', ಮೊದಲು ಇಂಗ್ಲಿಶ್‌ನ ದೊಡ್ಡಕ್ಷರ ಆರ್ ಒತ್ತಿ ಅನಂತರ ಅದರ ಜತೆಗೆ ಚಿಕ್ಕಕ್ಷರ ಯು ಒತ್ತಬೇಕಾಗುತ್ತದೆ. ಇವೆಲ್ಲವೂ ಕೆಲವರ ಸಮಸ್ಯೆ.

ಇಷ್ಟೆಲ್ಲ ವಿವರಣೆಯನ್ನು ನೀಡಿದ ಮೇಲೂ ಮತ್ತೆ ಕೆಲವು ಸಂದೇಹಗಳು ಹಾಗೆ ಉಳಿದುಕೊಳ್ಳುತ್ತವೆ. ಕೆಲವರು ಕೇಳುವುದುಂಟು. ಕನ್ನಡದಲ್ಲಿ ಉಚ್ಚಾರಣೆಯ ನೆಲೆಯಲ್ಲಿ ನಿಜಗೊಳ್ಳದ ಹಲವಾರು ಲಿಪಿ ಚಿಹ್ನೆಗಳಿವೆ. ಅವೆಲ್ಲವನ್ನೂ ಏನು ಮಾಡೋಣ? ಇದು ವಾದಕ್ಕಾಗಿ ವಾದ ಮಾಡುವ ವಿಧಾನವಾಗಿ ಕಾಣುತ್ತದೆ. ಅವುಗಳಿಗೂ ಉಪಯುಕ್ತತೆ ಕಡಿಮೆಯಾದಾಗ ಅವುಗಳನ್ನು ಬಿಟ್ಟುಕೊಡಬೇಕಾಗುತ್ತದೆ. ಹೊಸ ಲಿಪಿ ಚಿಹ್ನೆಗಳನ್ನು ಬಳಸಿಕೊಳ್ಳುವುದು ಈ ಕಾರ್ಯಕ್ರಮದ ಅಂಗವಾಗಿರುತ್ತದೆ. ಮಹಾಪ್ರಾಣದ ಚಿಹ್ನೆಗಳ ಬಗೆಗೆ ಈ ಪ್ರಶ್ನೆಯನ್ನು ಎತ್ತಲಾಗುತ್ತಿದೆ. ಕನ್ನಡದಲ್ಲಿ ಮಹಾಪ್ರಾಣಗಳು ಎಲ್ಲ ಅಲ್ಲದಿದ್ದರೂ ಕೆಲವು ಪಡೆದುಕೊಳ್ಳುತ್ತಿರುವ ಉಚ್ಚಾರಣಾ ವ್ಯತ್ಯಾಸಗಳ ಬಗೆಗೆ ನಾವಿನ್ನೂ ಅಧ್ಯಯನ ಮಾಡಿಲ್ಲ. ಆದ್ದರಿಂದ ಅವುಗಳ ಸ್ಥಾನಮಾನವನ್ನು ನಿರ್ಧರಿಸಲು ಇದು ಸಕಾಲವಲ್ಲ. ಅಲ್ಲದೆ ಇಂಗ್ಲಿಶಿನಿಂದ ಸ್ವೀಕರಿಸಿರುವ ಹಲವಾರು ಪದಗಳನ್ನು ಉಚ್ಚರಿಸಲು ನಾವೀಗ ಮಹಾಪ್ರಾಣಗಳನ್ನು ಆಶ್ರಯಿಸತೊಡಗಿದ್ದೇವೆ. ಇಂಗ್ಲಿಶಿನ ಹಲವಾರು ಘರ್ಷ ಉಚ್ಚಾರಣೆಗಳ ಬದಲಿಗೆ ಮಹಾಪ್ರಾಣಗಳ (ಸ್ಪರ್ಶ) ಉಚ್ಚಾರಣೆಯನ್ನು ನಾವೀಗ ಬಳಸುತ್ತಿದ್ದೇವೆ. ಫೆಯಿಲ್, ಫೈಲ್, ಥಿಂಕ್, ಥಾಟ್ ಮುಂತಾದ ಉದಾಹರಣೆಗಳನ್ನು ಗಮನಿಸಿ. ಹಾಗಾಗಿ ಋಕಾರದ ಪ್ರಶ್ನೆಯನ್ನು ಬೇರೆಯಾಗಿಯೇ ಪರಿಗಣಿಸುವುದು ಸೂಕ್ತ. ಋಕಾರವನ್ನು ಶಾಲಾ ಮಕ್ಕಳಿಗೆ ಕಲಿಸುವ ಕನ್ನಡ ಲಿಪಿ ಮಾಲೆಯಿಂದ ಕೈಬಿಡುವುದರಿಂದ ಹೆಚ್ಚಿನ ತೊಂದರೆಗಳಾಗುವುದಿಲ್ಲ ಎನ್ನುವ ಪ್ರಮೇಯವನ್ನು ಮುಂದಿಟ್ಟುಕೊಂಡು ಮೇಲಿನ ವಿವರಣೆಯನ್ನು ನೀಡುವುದು ಅವಶ್ಯವಾಯಿತು.

# ಕನ್ನಡದ ಅಕ್ಷರ ರಚನೆಯ ಒಂದು ನಿಯಮ

ಕನ್ನಡದ ಧ್ವನಿರಚನೆಯನ್ನು ಗಮನಿಸಿದವರಿಗೆ ಒಂದು ಸಂಗತಿ ಗೊತ್ತಾಗುತ್ತದೆ. ಅದನ್ನು ಹೀಗೆ ವಿವರಿಸಬಹುದು. ಕನ್ನಡದ ಪದಗಳಲ್ಲಿ ಕಂಡುಬರುವ ಧ್ವನಿಸಾತತ್ಯದಲ್ಲಿ ಪದಾದಿಯ ದೀರ್ಘ ಸ್ವರದ ಮುಂದೆ ಸಜಾತೀಯ ವ್ಯಂಜನ ದ್ವಿತ್ವವು ಬರುವುದಿಲ್ಲ. ಅಥವಾ ಯಾವುದೇ ಸ್ವಜಾತೀಯ ವ್ಯಂಜನ ದ್ವಿತ್ವದ ಹಿಂದಿನ ಸ್ವರ ಯಾವಾಗಲೂ ಹ್ರಸ್ವವೇ ಆಗಿರುತ್ತದೆ. ಈ ಕೆಳಗಿನ ಉದಾಹರಣೆಯನ್ನು ನೋಡಿ. ತಪ್ಪು, ಉಕ್ಕು, ಅಕ್ಕ, ಹಗ್ಗ, ಆದ್ರೆ, ಬಾಗ್ಲು, ಸದ್ರ, ಬಳ್ಳ, ಕೊಡ್ಲಿ, ಬದ್ಲು, ಹಾಡ್ಯ. ಈ ಪದಗಳಲ್ಲಿ ಮೇಲೆ ಹೇಳಿದ ಲಕ್ಷಣಗಳು ಕಾಣುತ್ತವೆ. ಕನ್ನಡ ಇತರ ಭಾಷೆಗಳಿಂದ ಸ್ವೀಕರಿಸಿದ ಪದಗಳಲ್ಲೂ ಇದೇ ಲಕ್ಷಣವನ್ನು ನಾವು ನೋಡಬಹುದು. ಉದಾ: ಪಾರ್ಕು, ತೀವ್ರ, ಬಾಲ್ಕನಿ, ಕಾವ್ಯ ಇತ್ಯಾದಿ. ಹಾಗಿದ್ದಲ್ಲಿ ಇದು ಕನ್ನಡದ ವಿಶೇಷ ಲಕ್ಷಣ ಹೇಗೆ? ಈ ಪ್ರಶ್ನೆ ನಮಗೆ ಎದುರಾಗುತ್ತದೆ. ಕನ್ನಡದ ಜ್ಞಾತಿ ಭಾಷೆಯಾದ ತಮಿಳಿನಲ್ಲಿ ಕನ್ನಡಕ್ಕೆ ನಿಷಿದ್ಧವಾದ ಧ್ವನಿರಚನೆಯುಳ್ಳ ಪದಗಳು ಕಾಣಸಿಗುತ್ತವೆ. ಉದಾ: ತೋಟ್ಟಂ, ಆಟ್ಟ, ಕಾಟ್ಟು, ಕಾತ್ತಿರು ಇತ್ಯಾದಿ. ಕನ್ನಡದಲ್ಲಿ ಇಂಥ ರಚನೆಗಳು ಸಾಧ್ಯವಿಲ್ಲ ಎನ್ನುವ ಅಂಶ ನಮಗೆ ಹಲವಾರು ಕಾರಣಗಳಿಂದ ಮುಖ್ಯವಾಗುತ್ತದೆ. ಅವುಗಳಲ್ಲಿ ಕೆಲವನ್ನು ಈಗ ನಾವು ಗಮನಿಸಬಹುದು.

1. ಕನ್ನಡಕ್ಕೆ ಯಾವುದಾದರೊಂದು ಭಾಷೆಯಿಂದ ಪದವೊಂದನ್ನು ಸ್ವೀಕರಿಸಬೇಕಾಗಿ ಬಂದಿತೆನ್ನೋಣ. ಆಗ ಮೇಲೆ ಹೇಳಿದ ಬಗೆಯ ರಚನೆಯುಳ್ಳ ಪದವೊಂದನ್ನು ಕನ್ನಡ ಸ್ವೀಕರಿಸಲಾರದು ಎಂದು ಖಚಿತವಾಗಿ ಹೇಳಬಹುದು. ಅಥವಾ ಅಂಥ ಪದವೊಂದನ್ನು ಸ್ವೀಕರಿಸಿದ್ದೇ ಆದರೆ, ಅದರ ಧ್ವನಿರಚನೆಯಲ್ಲಿ ಬದಲಾವಣೆಯನ್ನು ಮಾಡಿಕೊಂಡು ಕನ್ನಡದ ಸಹಜ ಧ್ವನಿನಿಯಮಗಳಿಗೆ ಅನುಗುಣವಾಗಿರುವಂತೆ ಬದಲಾಯಿಸಿಕೊಳ್ಳುತ್ತದೆ.

2. ಕನ್ನಡದ ಧ್ವನಿ ರಚನೆ ಮತ್ತು ಕನ್ನಡ ಅಕ್ಷರ ರಚನೆಯನ್ನು ಕುರಿತು ಅಧ್ಯಯನ ಮಾಡುವವರಿಗೆ ಇದರಿಂದ ಕೆಲವು ತಿಳುವಳಿಕೆಗಳು ನಮಗೆ ದೊರಕುತ್ತವೆ. ಕನ್ನಡ ಅಕ್ಷರಗಳನ್ನು ಸರಳ, ಭಾರ ಮತ್ತು ಅತಿಭಾರ ಎಂದು ಮೂರು ವಿಧಗಳಲ್ಲಿ ವಿಂಗಡಿಸಬಹುದು. ಸರಳ ಅಕ್ಷರಗಳ ಅಂತ್ಯದಲ್ಲಿ ವ್ಯಂಜನ ಬರುವುದಿಲ್ಲ ಮತ್ತು ಕೇಂದ್ರ ಹ್ರಸ್ವವಾಗಿರುತ್ತದೆ. ಆದಿಯಲ್ಲಿ ವ್ಯಂಜನ ಬರುವುದು ಐಚ್ಛಿಕ.

ಉದಾ: ಕ, ತ ಇತ್ಯಾದಿ. ಇಂಥ ಅಕ್ಷರಗಳಲ್ಲಿ ಪ್ರಥಮ ವ್ಯಂಜನ ಬಂದರೆ ಅಲ್ಲಿ ಒಂದಕ್ಕಿಂತ ಹೆಚ್ಚು (ಬಹುಮಟ್ಟಿಗೆ ಎರಡು) ವ್ಯಂಜನಗಳು ಬರಬಹುದು. ಈ ಬಗೆಯ ಅಕ್ಷರಗಳು ಅನ್ಯ ಭಾಷೆಯ ಪದಗಳಲ್ಲಿ ಮಾತ್ರ ಕಾಣಸಿಗುತ್ತವೆ. ಉದಾ: ಗ್ರ (ಗ್ರಹಣ), ಮ್ಲ (ಆಮ್ಲ), ಕ್ಷ(ಕ್ಷಮೆ), ಪ್ಲ (ಪ್ಲಸ್ಸು) ಇತ್ಯಾದಿ.

ಭಾರ ಅಕ್ಷರಗಳಲ್ಲಿ ಕೇಂದ್ರ ಸ್ವರವು ದೀರ್ಘವಾಗಿರುವುದು ಒಂದು ಮಾದರಿ. ಉದಾ: ಆ, ಕಾ, ಕೂ, ನೂ ಇತ್ಯಾದಿ. ಈ ಮಾದರಿಯ ಅಕ್ಷರಗಳಲ್ಲಿ ಅಂತ್ಯದ ಭಾಗದಲ್ಲಿ ವ್ಯಂಜನಗಳಿರುವುದಿಲ್ಲ. ಇನ್ನೊಂದು ಮಾದರಿಯಲ್ಲಿ ಕೇಂದ್ರ ಸ್ವರ ಹ್ರಸ್ವವೇ ಆಗಿರುತ್ತದೆ. ಆದರೆ ಕೊನೆಯಲ್ಲಿ ಒಂದು ವ್ಯಂಜನವಿರುತ್ತದೆ. ಉದಾ: ಕಲ್, ಬಿಟ್, ಸುಟ್, ತುಯ್, ಕಳ್ ಇತ್ಯಾದಿ. ಈ ಬಗೆಯ ಅಕ್ಷರಗಳು ದೇಶ್ಯ ಮತ್ತು ಅನ್ಯದೇಶ್ಯ ಪದಗಳೆರಡರಲ್ಲೂ ಕಾಣಸಿಗುತ್ತವೆ. ಮೂರನೆಯ ಮಾದರಿ ಅಕ್ಷರವೆಂದರೆ ಅತಿಭಾರದ ಬಗೆಯದ್ದು. ಇದರಲ್ಲೂ ಎರಡು ಬಗೆ. ಕೇಂದ್ರ ಸ್ವರ ಹ್ರಸ್ವವಾಗಿರುವುದು ಮೊದಲ ಮಾದರಿ. ಇದರಲ್ಲಿ ಅಂತ್ಯಭಾಗದ ವ್ಯಂಜನಗಳು ಎರಡಿರುತ್ತವೆ. ಕನ್ನಡವು ಈ ಎರಡು ವ್ಯಂಜನಗಳು ಬೇರೆ ಬೇರೆಯಾಗಿರಬೇಕು ಎಂಬ ಶರತ್ತನ್ನು ವಿಧಿಸುತ್ತದೆ. ಕಟ್ಟ್, ಕುಳ್ಳ್, ಬರ್ರ್ ಎಂಬ ಮಾದರಿಯ ಅಕ್ಷರಗಳು ಕನ್ನಡದಲ್ಲಿ ಸಾಧ್ಯವಾಗುವುದಿಲ್ಲ. ಇನ್ನೊಂದು ಮಾದರಿಯಲ್ಲಿ ಕೇಂದ್ರ ಸ್ವರವು ದೀರ್ಘವಾಗಿರುತ್ತದೆ. ಅಂತ್ಯದಲ್ಲಿ ಒಂದು ವ್ಯಂಜನವಿರುತ್ತದೆ. ಕಾರ್, ಊರ್, ಏರ್, ತೋರ್ ಇವೆಲ್ಲ ಈ ಮಾದರಿಯ ಭಾರ ಅಕ್ಷರಗಳು.

ಯಾವ ಬಗೆಯ ಅಕ್ಷರ ರಚನೆಯನ್ನು ಕನ್ನಡವು ಒಪ್ಪುವುದಿಲ್ಲ ಎನ್ನುವ ಸಂಗತಿ ನಮಗೆ ಮುಖ್ಯ. ಏಕೆಂದರೆ ಅದರಿಂದ ಕನ್ನಡವು ಇತರ ಭಾಷೆಗಳಿಂದ ಎರವಲು ಪಡೆಯುವಾಗ ಯಾವ ಬಗೆಯ ಅಕ್ಷರ ರಚನೆಯ ಪದಗಳನ್ನು ಸ್ವೀಕರಿಸುವುದಿಲ್ಲ ಎನ್ನುವುದನ್ನು ಗುರುತಿಸಬಹುದು. ಅಲ್ಲದೆ ಅಂಥ ರಚನೆಯುಳ್ಳ ಪದಗಳನ್ನು ಸ್ವೀಕರಿಸಲೇಬೇಕಾದರೆ ಆ ಪದದ ಅಕ್ಷರ ರಚನೆಯಲ್ಲಿ ಎಂಥ ವ್ಯತ್ಯಾಸಗಳನ್ನು ಮಾಡಿಕೊಳ್ಳಬಹುದು ಎಂಬುದೂ ಕೂಡಾ ನಮಗೆ ತಿಳಿಯುತ್ತದೆ.

ಈಗ ಮೂಲ ಪ್ರಶ್ನೆಗೆ ಬರೋಣ. ಕನ್ನಡದ ಪದದಲ್ಲಿ ಪ್ರಥಮ ಸ್ವರವು ದೀರ್ಘವಾಗಿದ್ದರೆ ಅದರ ಅನಂತರದಲ್ಲಿ ಸ್ವಜಾತೀಯ ವ್ಯಂಜನದ್ವಿತ್ವ ಬರುವುದಿಲ್ಲ. ಆದರೆ ವಿಜಾತೀಯ ವ್ಯಂಜನ ದ್ವಿತ್ವ ಬರಬಹುದು ಎಂಬ ಸಂಗತಿಯನ್ನು ಹೇಗೆ ಅರ್ಥ ಮಾಡಿಕೊಳ್ಳುವುದು. ಇದನ್ನು ನಿದರ್ಶನಗಳ ಮೂಲಕ ಅರ್ಥ ಮಾಡಿಕೊಳ್ಳಬೇಕು. ಆಸ್ತಿ, ಇಷ್ಟ, ಗುದ್ಲಿ ಇವೆಲ್ಲವೂ ಕನ್ನಡಕ್ಕೆ ಸಹಜ. ಆದರೆ ಕಾಟ್ಟು, ತೋಟ್ಟ ಮುಂತಾದವು ಅಸಹಜ ಎಂದಾಯ್ತು. ಅಕ್ಷರ ವಿಭಜನೆ ಮಾಡುವಾಗ **ಆಸ್ತಿ** ಎನ್ನುವುದನ್ನು **ಆ** ಮತ್ತು **ಸ್ತಿ** ಎಂದು ವಿಭಜಿಸಬೇಕೋ ಅಥವಾ **ಆಸ್** ಮತ್ತು **ತಿ** ಎಂದು ವಿಭಜಿಸಬೇಕೋ ಎಂಬುದು ಮುಖ್ಯ ಪ್ರಶ್ನೆ. ಇವೆರಡರಲ್ಲಿ ಆಯ್ಕೆ ಕಷ್ಟ. ಆದರೂ ಮೊದಲನೆಯ ವಿಭಜನೆ ಹೆಚ್ಚು ಸೂಕ್ತವೆಂದು ಹೇಳಲು ಕಾರಣಗಳಿವೆ ಅಥವಾ ಇವೆರಡರಲ್ಲಿ ಯಾವುದನ್ನು ಆಯ್ಕೆ ಮಾಡಿದರೂ ಕನ್ನಡದಲ್ಲಿ ಸಾಧ್ಯವಿರುವ ಅಕ್ಷರ ರಚನೆಯ ನಿಯಮಗಳಿಗೆ ಭಂಗ ಬರುವುದಿಲ್ಲ.

ಆದರೆ ನಾವು ನಿಷಿದ್ಧವೆಂದು ಹೇಳುತ್ತಿರುವ ಅಕ್ಷರ ರಚನೆಯಲ್ಲಿ ಸ್ವರ ಕೇಂದ್ರವಾಗಿ ದೀರ್ಘ ಸ್ವರವಿದ್ದರೆ (ಅತಿಭಾರಾಕ್ಷರ) ಮುಂದೆ ಒಂದೇ ವ್ಯಂಜನವಿರಬೇಕು. ಆದರೆ **ಆಟ್ವ** ಎಂಬ ಮಾದರಿಯ ಪದಗಳಲ್ಲಿ **ಆಟ್ ಟ** ಎಂದು ವಿಭಜಿಸಲು ಬರುವುದಿಲ್ಲ. **ಆಟ್ಟ್** ಮತ್ತು **ಆ** ಎಂದು ವಿಭಜಿಸುವುದು ಅವಶ್ಯ. ಹೀಗಾದಾಗ ಆಟ್ಟ್ ಎಂಬುದು ಅತಿಭಾರಾಕ್ಷರವಾಗಿ ಅದು ಕನ್ನಡಕ್ಕೆ ಹೊರತಾಗಿಬಿಡುತ್ತದೆ. **ಆಟ್ವ** ಎಂಬುದನ್ನು **ಆ** ಮತ್ತು **ಟ್ವ** ಎಂದು ಏಕೆ ವಿಭಜಿಸಬಾರದು ಎಂದು ಕೇಳಬಹುದು. ಸರಿಯೇ ಆದರೆ ಕನ್ನಡದಲ್ಲಿ ಅಕ್ಷರದ ಆರಂಭದಲ್ಲಿ ವ್ಯಂಜನದ್ವಿತ್ವಗಳು ಅದರಲ್ಲೂ ಸ್ವಜಾತೀಯ ವ್ಯಂಜನದ್ವಿತ್ವಗಳು ಬರುವುದಿಲ್ಲವಲ್ಲ. ಆದ್ದರಿಂದ ಈ ವಿಭಜನೆ ಸಾಧ್ಯವಿಲ್ಲ.

ಇಲ್ಲಿಯವರೆಗೆ ಓದಿದ ಕೆಲವರಾದರೂ ಒಂದು ಪ್ರಶ್ನೆಯನ್ನು ಹಾಕಲು ಸಿದ್ಧರಾಗಿರಬಹುದು. ಇಷ್ಟೆಲ್ಲ ಹೇಳಿದ ಮೇಲೂ 'ಆದ್ದರಿಂದ' ಎಂಬಂಥ ರೂಪಗಳು ಕನ್ನಡದಲ್ಲಿ ಇವೆಯಲ್ಲ? ಇದು ಇಲ್ಲಿ ನಿರೂಪಿಸಿದ ನಿಯಮಕ್ಕೆ ಹೊರತಾಗಿದೆಯಲ್ಲವೇ ಎಂಬುದೇ ಆ ಪ್ರಶ್ನೆ. 'ಆದ್ದರಿಂದ' ಎಂಬ ರಚನೆಯಲ್ಲಿ ಆ ಎಂಬ ದೀರ್ಘ ಸ್ವರದ ಮುಂದೆ ದ್ದ ಎಂಬ ಸಜಾತೀಯ ದ್ವಿತ್ವ ಬಂದಿದೆಯಲ್ಲ? ಆದರೆ ನಾವೀಗ ನಿರೂಪಿಸಿದ ನಿಯಮ ಪದಗಳ ಒಳಗಿನ ಅಕ್ಷರ ರಚನೆಗೆ ಸಂಬಂಧಿಸಿದೆ. ಎರಡು ಪದಗಳು ಸೇರಿ ಆಗುವ ರಚನೆಗಳಿಗಲ್ಲ. 'ಆದ್ದರಿಂದ' ಎಂಬುದು ಇಂಥ ರಚನೆ. ಇಂಥಲ್ಲಿ ಮೊದಲ ದಕಾರ ಮತ್ತು ಎರಡನೆಯ ದಕಾರದ ನಡುವೆ ಒಂದು ಪದಗಡಿ ಇರುತ್ತದೆ. ಪದಗಡಿಗಳಿರುವಲ್ಲಿ ಅಕ್ಷರ ರಚನೆಯ ನಿಯಮಗಳು ಪ್ರವರ್ತಿಸುವ ಕ್ರಮವೇ ಬೇರೆ. ಅದು ಬೇರೊಂದು ಟಿಪ್ಪಣಿಗೆ ವಸ್ತುವಾಗುತ್ತದೆ.

# ಹೆಣ್ಣು ಮತ್ತು ಭಾಷೆ

## ಹೆಣ್ಣಿನ ಭಾಷೆ ಮೌನವಾಗುವ ಬಗೆ

ಇಂತಹ ಒಂದು ಚರ್ಚೆ ಏಕೆ ಬೇಕು ? ನಾವು ಯಾವುದೇ ವಿಚಾರ ಕುರಿತು ಬೇಕಾದರೂ ಮಾತನಾಡಬಹುದು. ಆದರೆ ಈ ವಿಚಾರವನ್ನೇ ಕುರಿತು ಏಕೆ ಚರ್ಚೆ ಮಾಡಬೇಕು? ಅದೂ ಈಗ ಏಕೆ ಈ ಚರ್ಚೆ ಮಾಡಬೇಕು ? ಇವು ನಮ್ಮನ್ನು ಮೊದಲು ಕಾಡಿಸಬೇಕಾದ ಪ್ರಶ್ನೆಗಳು. ಹೆಣ್ಣಿನ ಸಾಮಾಜಿಕ ಸ್ಥಾನಮಾನವನ್ನು ಕುರಿತು, ಸಾಮಾಜಿಕ ವ್ಯಕ್ತಿತ್ವ ಕುರಿತು ಮತ್ತು ಭಾಷೆಯ ಸ್ವರೂಪವನ್ನು ಕುರಿತು ನಮ್ಮ ತಿಳುವಳಿಕೆಗಳು ದಿನೇದಿನೇ ಬದಲಾಗುತ್ತಿವೆ. ಹೀಗೆ ಬದಲಾಗುತ್ತಿರುವ ಹಿನ್ನೆಲೆಯಲ್ಲಿ ಈ ಎರಡು ಸಾಮಾಜಿಕ ಸಂಗತಿಗಳನ್ನು ಕುರಿತು, ಅವುಗಳ ಒಳ ಸಂಬಂಧಗಳನ್ನು ಕುರಿತು ಚರ್ಚೆ ನಡೆಸುವ ಅಗತ್ಯ ಈಗ ಹೆಚ್ಚಾಗಿದೆ. ಇದನ್ನು ಕುರಿತು ಚರ್ಚೆ ಮಾಡಲು ಬೇರೆ ಬೇರೆ ದಿಕ್ಕುಗಳಿರುತ್ತವೆ. ಸ್ತ್ರೀವಾದಿಗಳು ಇದರ ಕುರಿತು ಚರ್ಚೆ ಮಾಡಬಹುದು, ಸಮಾಜಶಾಸ್ತ್ರಜ್ಞರು ಇದರಲ್ಲಿ ಪ್ರವೇಶ ಮಾಡಬಹುದು, ಭಾಷಾಶಾಸ್ತ್ರಜ್ಞರು ಇದರಲ್ಲಿ ಪ್ರವೇಶ ಮಾಡಬಹುದು. ನಾನು ಪ್ರಾಸ್ತಾವಿಕವಾಗಿ ಮಾತನಾಡುತ್ತಿರುವಾಗ ನಾನೊಬ್ಬ ಭಾಷೆಯ ಅಧ್ಯಯನಕಾರನಾಗಿ ಮತ್ತು ಅದರ ಜೊತೆಗೆ ಸಾಹಿತ್ಯ ವಿದ್ಯಾರ್ಥಿಯಾಗಿ ಇದರ ಒಳಗಡೆ ಪ್ರವೇಶ ಮಾಡುತ್ತೇನೆ. ಸ್ತ್ರೀವಾದಿ ದೃಷ್ಟಿಕೋನ ಎನ್ನುವಂತಹದು ನನಗೆ ಜೊತೆಯಲ್ಲಿ ಬರುತ್ತಿರುವಂತಹ ದೃಷ್ಟಿಕೋನ. ಪ್ರಧಾನವಾಗಿ ಭಾಷೆಯ ದೃಷ್ಟಿಯಿಂದ ಈ ಅಧ್ಯಯನವನ್ನು ಹೇಗೆ ಪ್ರವೇಶ ಮಾಡಬಹುದು ಅನ್ನುವುದನ್ನು ಕುರಿತಂತೆ ಕೆಲವು ವಿಚಾರಗಳನ್ನು ನಿಮ್ಮ ಜೊತೆ ಹಂಚಿಕೊಳ್ಳಲು ಪ್ರಯತ್ನಿಸುತ್ತೇನೆ.

ಭಾಷೆಯ ಕುರಿತು ನಮ್ಮ ತಿಳುವಳಿಕೆ ಬದಲಾಗುತ್ತಿದೆ ಎಂದೆವು. ಆದರೆ ಬಹಳ ಮುಖ್ಯವಾಗಿ ಬದಲಾಗಿರುವ ತಿಳುವಳಿಕೆ ಏನು ಎಂದರೆ ಭಾಷೆ ನಾವು ಸಾಮಾನ್ಯವಾಗಿ ತಿಳಿದಿರುವಂತೆ ವಾಸ್ತವವನ್ನು ಮಾತ್ರ ಬಿಂಬಿಸುವ ಸಾಧನ ಅಲ್ಲ. ಅದರಲ್ಲಿ ವಾಸ್ತವವನ್ನು ಮಂಡಿಸುವ, ಬಿಂಬಿಸುವ ಕೆಲಸ ನಡೆಯದೇ ಇರಬಹುದು. ಭಾಷೆಯಲ್ಲಿ ನಾವು ಒಂದು ವಾಸ್ತವವನ್ನು ಹೇಳುತ್ತೇವೆ, ಅದರ ಮುಖಾಂತರ ಅಭಿಪ್ರಾಯ ಸಂವಹನ ಮಾಡುತ್ತೇವೆ, ಅದರ ಮುಖಾಂತರ ಏನನ್ನೋ ತಿಳಿಸಿ ಹೇಳುತ್ತೇವೆ ಎಂದು ತಿಳಿದುಕೊಂಡಿದ್ದೇವೆ. ಆದರೆ ವಾಸ್ತವವಾಗಿ ಭಾಷೆಯ ಮೂಲಕ ವಾಸ್ತವವನ್ನು ಕಟ್ಟುತ್ತಿರುತ್ತೇವೆ. ಇರುವ ವಾಸ್ತವವನ್ನು ಹೇಳುವುದಿಲ್ಲ. ವಾಸ್ತವವನ್ನು ಅಥವಾ ನಾವು

ವಾಸ್ತವವೆಂದು ತಿಳಿದದ್ದನ್ನು ಭಾಷೆಯಲ್ಲಿ ಕಟ್ಟುತ್ತಾ ಇರುತ್ತೇವೆ; ರಚಿಸುತ್ತಾ ಇರುತ್ತೇವೆ. ಭಾಷೆಯಲ್ಲಿ ಮಂಡಿತವಾಗುವ ವಾಸ್ತವವೇ ನಿಜವಾಗಿ ಇರುವ ವಾಸ್ತವವೆಂದು ಹೇಳಲು ಬರುವುದಿಲ್ಲ. ಅದು ಬೇರೆಯಾಗಿರಬಹುದು. ಈ ತಿಳುವಳಿಕೆ ನಮಗೆ ಇಂದು ಹೊಸದಾಗಿ ಬಂದಿರುವಂತಹದು. ಈ ದೃಷ್ಟಿಯಿಂದ ಇಂದಿನ ಈ ಚರ್ಚೆಯನ್ನು ಬೆಳೆಸಬೇಕಾಗಿದೆ. ಒಂದು ಸಣ್ಣ ಉದಾಹರಣೆ ಮುಖಾಂತರ ಹೇಗೆ ಭಾಷೆಯ ಮುಖಾಂತರ ವಾಸ್ತವವನ್ನು ಕಟ್ಟುತ್ತೇವೆ ಎಂಬುದನ್ನು ತಿಳಿಯೋಣ. ಇಲ್ಲಿ ಒಂದು ಚಿತ್ರವನ್ನು ಗಮನಿಸೋಣ. ಅಲ್ಲಿ ಭಾಷೆಯನ್ನು ಬಳಸಿರುವುದಿಲ್ಲ. ಅದು ಕೇವಲ ಒಂದು ಚಿತ್ರ. ಅದರಲ್ಲಿ ಕುದುರೆ ಇದೆ. ಅದರ ಮೇಲೆ ಒಬ್ಬ ಮನುಷ್ಯ ಕುಳಿತಿದ್ದಾನೆ. ಆ ಚಿತ್ರವನ್ನು ಕೊಟ್ಟು ವಿವರಣೆ ಕೊಡಿಯೆಂದು ಹೇಳಿದರೆ ಆಗ ನಾವು ಮನುಷ್ಯ ಕುದುರೆಯ ಮೇಲೆ ಕುಳಿತು ಹೋಗುತ್ತಿದ್ದಾನೆ ಎಂದು ಹೇಳುತ್ತೇವೆ. ನಾವು ಯಾರೂ ಕೂಡ ಮನುಷ್ಯನನ್ನು ಕುದುರೆ ಹೊತ್ತುಕೊಂಡು ಹೋಗುತ್ತಿದೆ ಎಂದು ಹೇಳುವುದಿಲ್ಲ. ವಾಸ್ತವ ಯಾವುದು ಇದರಲ್ಲಿ? ಮನುಷ್ಯ ಕುದುರೆಯ ಮೇಲೆ ಕುಳಿತುಕೊಂಡು ಹೋಗುತ್ತಾ ಇದ್ದಾನೋ ಅಥವಾ ಕುದುರೆ ಮನುಷ್ಯನನ್ನು ಹೊತ್ತುಕೊಂಡು ಹೋಗುತ್ತಾ ಇದೆಯೊ?. ವಾಸ್ತವ ಯಾವುದು ಅನ್ನುವುದು ಮುಖ್ಯವಲ್ಲ. ಭಾಷೆಯ ಮುಖಾಂತರ ವಾಸ್ತವವನ್ನು ಬಿಂಬಿಸುತ್ತಿರುವುದಿಲ್ಲ. ವಾಸ್ತವವನ್ನು ಕಟ್ಟುತ್ತಿರುತ್ತೇವೆ. ನಮ್ಮ ದೃಷ್ಟಿಕೋನಕ್ಕನುಗುಣವಾಗಿ ವಾಸ್ತವವನ್ನು ರಚಿಸುತ್ತಿರುತ್ತೇವೆ, ಕಟ್ಟುತ್ತಿರುತ್ತೇವೆ. ಈ ತಿಳುವಳಿಕೆಯ ಹಿನ್ನೆಲೆಯಲ್ಲಿ ಇಂದು ಹೆಣ್ಣು ಮತ್ತು ಭಾಷೆ ಈ ಸಂಬಂಧದ ಕುರಿತು ನಮ್ಮ ಚರ್ಚೆಯನ್ನು ಬೆಳೆಸಬೇಕು. ಈ ನಿಟ್ಟಿನಲ್ಲಿ ಮೂರು ಬಗೆಯ ಪ್ರಮೇಯ ಮತ್ತು ಮೂರು ಬಗೆಯ ಚರ್ಚೆಗಳನ್ನು ಮಂಡಿಸಲು ಇಷ್ಟಪಡುತ್ತೇನೆ. ಮೊದಲನೆಯ ಸಾಧ್ಯತೆಯನ್ನು ಸ್ವಲ್ಪ ಹಿಂದಿನಿಂದ, ಕವಿ ಕಾಳಿದಾಸನಿಂದ ಪ್ರಾರಂಭಿಸುತ್ತೇನೆ. ನಾನು ಮೊದಲು ಸಾಹಿತ್ಯದ ವಿದ್ಯಾರ್ಥಿಯಾದ್ದರಿಂದ ಕವಿ ಕಾಳಿದಾಸನ ಉದಾಹರಣೆ ಮುಖಾಂತರ ಚರ್ಚೆ ಪ್ರಾರಂಭಿಸುವುದು ಹೆಚ್ಚು ಉಪಯುಕ್ತ ಅನ್ನಿಸುತ್ತದೆ.

ಭಾಷೆಯಲ್ಲಿ ಗಂಡು ಮತ್ತು ಹೆಣ್ಣು ಎಂದು ಎರಡು ನೆಲೆಗಳು ಇರುತ್ತವೆ ಎನ್ನುವುದನ್ನು ಮೊದಲು ತಿಳಿದು, ತಿಳಿಸಿ ಹೇಳಲು ಪ್ರಯತ್ನಪಟ್ಟವನು ಕಾಳಿದಾಸ. ಅವನು ಹೇಳದ ವಾಕ್ ಮತ್ತು ಅರ್ಥ- ಇವರೆಡೂ ಒಂದುಗೂಡುವ ಕ್ರಮವನ್ನು ಕುರಿತು ಅಂದರೆ ಅವುಗಳ ದಾಂಪತ್ಯವನ್ನು ಕುರಿತು ತನ್ನ ಒಂದು ಕೃತಿಯ ಪ್ರಾರಂಭದ ಶ್ಲೋಕದಲ್ಲಿ ಹೇಳಿದ. ಅದು ಹೇಗೆ ಇರಬೇಕು ಅಂದರೆ, ಬರೆದ ವಾಕ್ಯ ಗಂಡಾ ಅಥವಾ ಹೆಣ್ಣಾ? ಶಬ್ದವೆಂಬುದು ಹೆಣ್ಣು, ಅರ್ಥವೆಂಬುದು ಗಂಡು ಎಂದನು. ಎಂದರೆ ನಾಮವೆಂದರೆ ಗಂಡು ರೂಪವೆಂಬುದು ಹೆಣ್ಣು ಎಂದು ಹೇಳಿದಂತಾಯಿತು. ಹಾಗಾದಾಗ ಪದವೆಂಬುದು ಹೆಣ್ಣು ಪದಾರ್ಥವೆಂಬುದು ಗಂಡು ಎಂದು ಗ್ರಹಿಸಬೇಕಾಗುತ್ತದೆ. ಕಾಳಿದಾಸ ಈ ಶ್ಲೋಕದಲ್ಲಿ ಭಾಷೆಯಲ್ಲಿರುವ ಗಂಡು ಮತ್ತು ಹೆಣ್ಣಿನ ನೆಲೆಯನ್ನು ಮಾತ್ರ ಹೇಳಿಲ್ಲ. ಇದನ್ನು ಗಂಡ ಮತ್ತು ಹೆಂಡತಿಯರ ಸಂಬಂಧಕ್ಕೆ ಎಳೆದು ತಂದಿದ್ದಾನೆ. ಅಪೂರ್ವ ದಾಂಪತ್ಯದಲ್ಲಿ ಹೇಗಿರಬೇಕು ಎನ್ನುವುದಕ್ಕೆ ಒಂದು ನಿದರ್ಶನವನ್ನು ಕೊಟ್ಟು ವಾಕ್ ಮತ್ತು ಅರ್ಥಗಳು ಆ ಅಪೂರ್ವ ದಾಂಪತ್ಯದ ಹಾಗಿರಬೇಕು ಎಂದು

ಸೂಚಿಸುತ್ತಾನೆ. ಅವನ ಇಡೀ ಸಾಹಿತ್ಯ ಈ ವಾಕ್ ಮತ್ತು ಅರ್ಥ ಸಂಯೋಗಕ್ಕಿಂತ ವಿಯೋಗದಿಂದ ಯಾವ ನೆಲೆಗಳು ಹುಟ್ಟುತ್ತವೆ ಎನ್ನುವುದರ ಅನ್ವೇಷಣೆಯೇ ಆಗಿದೆ. ಅವನ ಮಾಲವಿಕ ಮತ್ತು ಅಗ್ನಿಮಿತ್ರ ಇರಬಹುದು, ವಿಕ್ರಮ–ಊರ್ವಶಿ ಇರಬಹುದು, ದುಷ್ಯಂತ –ಶಕುಂತಲೆ ಇರಬಹುದು, ಯಕ್ಷ–ಯಕ್ಷಿ ಇರಬಹುದು, ಅಜ ಮತ್ತು ಇಂದುಮತಿ ಇರಬಹುದು. ಇವರೆಲ್ಲರೂ ಈ ವಾಕ್ ಮತ್ತು ಅರ್ಥಗಳ ವಿಯೋಗದ ವಿಘಟನೆಯ ನೆಲೆಯಲ್ಲಿ ಇರುವಂತಹವರು. ಅಥವಾ ಅವರೆಲ್ಲಾ ಅವೆರಡರ ಅಪೂರ್ವ ಸಂಯೋಗದ ನೆಲೆಯ ಶೋಧನೆಯಲ್ಲಿರಬಹುದು. ಆದರೆ ವಾಸ್ತವದಲ್ಲಿ ಇವೆರಡೂ ವಿಘಟಿತವಾಗಿರುತ್ತವೆ. ಒಂದು ಇನ್ನೊಂದರಿಂದ ದೂರ ಸರಿದಿರುತ್ತದೆ. ಅವುಗಳ ನಡುವೆ ದೊಡ್ಡ ಕಂದರ ಏರ್ಪಟ್ಟಿರುವುದನ್ನು ಕವಿ ಹುಡುಕುತ್ತಿರುತ್ತಾನೆ, ಅದನ್ನು ಮಂಡಿಸುತ್ತಿರುತ್ತಾನೆ. ಅವನ ಮೇಜರ್ ಥೀಮ್ ಎಂದರೆ ಶಬ್ದ ಮತ್ತು ಅರ್ಥಗಳು ವಿಘಟನೆಯಾಗಿರುವಂತಹುದು. ಕಾಳಿದಾಸನ ಅಭಿಜ್ಞಾನ ಶಾಕುಂತಲದ ಆರನೆಯ ಅಂಕದಲ್ಲಿ ಒಂದು ಚಿತ್ರ ಬರುತ್ತದೆ. ವಾಕ್ ಮತ್ತು ಅರ್ಥಗಳ ಅಪೂರ್ವ ಸಂಯೋಗದ ನೆಲೆಯನ್ನು, ಗಂಡು ಮತ್ತು ಹೆಣ್ಣಿನ (ಅಂದರೆ ಇಲ್ಲಿ ಗಂಡ–ಹೆಂಡತಿ) ಸಂಯೋಗದ, ದಾಂಪತ್ಯದ ವಿಶಿಷ್ಟವಾದ ಒಂದು ನೆಲೆಯನ್ನು ಒಂದು ಚಿತ್ರದ ಮುಖಾಂತರ ನಮ್ಮೆದುರು ಮಂಡಿಸಲು ಪ್ರಯತ್ನಿಸುತ್ತಾನೆ. ದುಷ್ಯಂತ ತಾನು ನೆನಪು ಮಾಡಿಕೊಳ್ಳುತ್ತಿರುವ ಶಕುಂತಲೆಯನ್ನು ಕುರಿತ, ಆಕೆಗೆ ಸಂಬಂಧಪಟ್ಟ ಸಂಗತಿಗಳಿರುವ ಒಂದು ಚಿತ್ರವನ್ನು ಬರೆಯುತ್ತಾನೆ. ಅದಕ್ಕಿಂತ ಮುಂಚೆ ಏನಾಗಿದೆಯೆಂದರೆ ಅವನಿಗೆ ವಾಕ್ ಮತ್ತು ಅರ್ಥಗಳ ವಿಘಟನೆಯಿಂದಾಗಿ ಶಬ್ದ ಕೇಳಿದರೂ ಅರ್ಥ ಗೊತ್ತಾಗುತ್ತಿಲ್ಲ. ಶಕುಂತಲೆಯನ್ನು ನೋಡುತ್ತಿದ್ದರೂ ಆಕೆ ಯಾರೆಂಬುದು ಅವನಿಗೆ ಗೊತ್ತಾಗುವುದಿಲ್ಲ. ಆಕೆ 'ಅರ್ಥ'ವಾದರೆ ಉಂಗುರ 'ಶಬ್ದ'. ಉಂಗುರದ ಸಾಹಚರ್ಯವಿಲ್ಲದ ಶಕುಂತಲೆಯನ್ನು ಅವನು ಗುರುತುಹಿಡಿಯಲಾರ. ಉಂಗುರವನ್ನ ನೋಡಿದ ಹೊರತು, ಉಂಗುರದ ಮುಖಾಂತರ ಅದರ ಸಂಬಂಧದಲ್ಲಿರುವ ಶಕುಂತಲೆಯ ನೆನಪು ಅವನಿಗೆ ಆಗುವುದಿಲ್ಲ.

ಇಲ್ಲಿ ಶಬ್ದ ಮತ್ತು ಅರ್ಥಗಳ ವಿಘಟನೆಯನ್ನು ನಾವು ನೋಡುತ್ತೇವೆ. ಆದರೆ ಆರನೆಯ ಅಂಕದ ಹೊತ್ತಿಗೆ ಅವನು ಉಂಗುರವನ್ನು ನೋಡಿದ್ದಾನೆ. ಇದರಿಂದ ಶಕುಂತಲೆಯ ನೆನಪನ್ನು ಪುನಾರಚಿಸಿಕೊಳ್ಳುತ್ತಾನೆ. ಆಗ ಒಂದು ಚಿತ್ರ ಬರೆಯುತ್ತಾನೆ. ಆ ಚಿತ್ರವನ್ನು ಅವನೇ ತನ್ನ ಮಾತಿನಲ್ಲಿ ವಿವರಿಸುತ್ತಾನೆ. ಆ ವಿವರಣೆಯಲ್ಲಿ ಮಾಲಿನಿ ನದಿಯ ತೀರದಲ್ಲಿ ಮರಳ ದಂಡೆಯಲ್ಲಿರುವ ಒಂದು ಮರದ ನೆರಳಿನಲ್ಲಿ ಒಂದು ಗಂಡುಜಿಂಕೆ ಮತ್ತು ಒಂದು ಹೆಣ್ಣುಜಿಂಕೆ ಬೇಸಿಗೆ ಮಧ್ಯಾಹ್ನದಲ್ಲಿ ವಿಶ್ರಮಿಸಿಕೊಳ್ಳುತ್ತಿರುವಾಗ ಹೆಣ್ಣುಜಿಂಕೆಗೆ ಕಣ್ಣಿನ ತುದಿಯಲ್ಲಿ ತುರಿಕೆ ಉಂಟಾಗುತ್ತದೆ. ಆ ತುರಿಕೆಯನ್ನು ನಿವಾರಿಸಿಕೊಳ್ಳಲು ಅರೆ ನಿದ್ರೆಯಲ್ಲಿರುವ ಗಂಡುಜಿಂಕೆಯ (ಗಂಡು ಜಿಂಕೆಗೆ ಚೂಪಾದ ಕೊಂಬುಗಳು ಇರುತ್ತವೆ ಎಂದು ನಮಗೆ ಗೊತ್ತು ) ಕೊಂಬಿನ ತುದಿಯಿಂದ ಕಣ್ಣಿನ ತುದಿಯನ್ನು ತುರಿಸಿಕೊಳ್ಳುತ್ತದೆ. ಜಿಂಕೆ ತುರಿಸಿಕೊಳ್ಳುತ್ತಿರುವ ಆ ಚಿತ್ರವನ್ನು ದುಷ್ಯಂತ ಬರೆಯುತ್ತಾನೆ. ಕಾಳಿದಾಸ ಅದರ ಮುಖಾಂತರ ವಾಕ್ ಮತ್ತು ಅರ್ಥದ ಅಪೂರ್ವ ಸಂಯೋಗದ ನೆಲೆಯನ್ನು ಹೇಳಲು ಪ್ರಯತ್ನ ಮಾಡುತ್ತಾನೆ. ಏಕೆಂದರೆ ಹೆಣ್ಣುಜಿಂಕೆ

ತುರಿಸಿಕೊಳ್ಳಲು ಪ್ರಯತ್ನಪಡುತ್ತಾ ಇರುವ ಅಂಗವು ಅತ್ಯಂತ ಸೂಕ್ಷವಾದದ್ದು. ಗಂಡುಜಿಂಕೆಯ ಕೊಂಬು ಕಿಂಚಿತ್ತು ಅಲುಗಾಡಿದರೂ ಹೆಣ್ಣುಜಿಂಕೆಯ ಕಣ್ಣಿಗೆ ಅಪಾಯ ಕಟ್ಟಿಟ್ಟಿದ್ದು. ಆದರೆ ಹೆಣ್ಣುಜಿಂಕೆ ಗಂಡುಜಿಂಕೆಯ ಮೇಲೆ ನಂಬಿಕೆ ಇಟ್ಟಿದೆ. ಆ ನಂಬಿಕೆಯ ಆಧಾರದ ಮೇಲೆ ತುರಿಸಿಕೊಳ್ಳಲು ಮುಂದಾಗಿದೆ. ಗಂಡುಜಿಂಕೆಗೂ ತನ್ನ ಮೇಲೆ ಹೆಣ್ಣುಜಿಂಕೆ ಇಟ್ಟಿರುವ ನಂಬಿಕೆಯನ್ನು ಕಾಯ್ದುಕೊಳ್ಳುವ ಜವಾಬುದಾರಿ ಇದೆ. ಅಲುಗಾಡದಂತೆ ಕೂರಬೇಕು. ಇದು ಕಾಳಿದಾಸನಲ್ಲಿ ಕಾಣುವ ಆಕಸ್ಮಿಕ ಚಿತ್ರವಾಗಿ ಮಾತ್ರ ಮುಖ್ಯವಾಗುವುದಿಲ್ಲ. ಇದು ಕಾಳಿದಾಸನ ಇಡೀ ಸಾಹಿತ್ಯದಲ್ಲಿ ದೊಡ್ಡ ಹುಡುಕಾಟವಾಗಿ ಕಾಣಿಸಿಕೊಳ್ಳುತ್ತದೆ.

ಹೀಗೆ ಸಾಹಿತ್ಯ ಕೃತಿಯ ಮೂಲಕ ಪ್ರವೇಶ ಮಾಡಿದ್ದಕ್ಕೆ ಕಾರಣಗಳಿವೆ. ಭಾಷೆಯಲ್ಲಿರುವ ಈ ಗಂಡು ಹೆಣ್ಣು ಎಂಬ ವಿಘಟನೆಯ ಮೂಲಕ ಗಂಡಿನ ಭಾಷೆ ಮತ್ತು ಹೆಣ್ಣಿನ ಭಾಷೆ ಎಂಬ ವಿಭಜನೆಗೆ ನಾನು ಮುಂದಾಗುತ್ತಿಲ್ಲ. ಈ ವಿಭಜನೆಗೆ ಮುಂದೆ ಬರುತ್ತೇನೆ. ಮೊದಲು ಭಾಷೆಯಲ್ಲೇ ಇರುವ ಗಂಡುತನ ಮತ್ತು ಹೆಣ್ಣುತನವನ್ನು ಕುರಿತು ವಿವೇಚಿಸೋಣ. ಅದನ್ನು ಮೊದಲು ವಿಘಟನೆ ಮಾಡಿ ನೋಡಿದ್ದು ಶಬ್ದ ಮತ್ತು ಅರ್ಥವನ್ನು ವಿಘಟನೆ ಮಾಡುವ ಮೂಲಕ. ಶಬ್ದವನ್ನು ಹೆಣ್ಣು ಎಂದೂ ಅರ್ಥವನ್ನು ಗಂಡು ಎಂದು ಹೇಳಿದರು. ಪಂಪನೂ ಇದನ್ನು ಪರಮ ಜಿನೇಂದ್ರವಾಣಿಯೆ ಸರಸ್ವತಿ ಬೇರದು ಪೆಣ್ಣ ರೂಪಂ ಧರಿಸಿ ನಿಂದುದಲ್ತು.... ಆ ಸರಸ್ವತಿಯೇ ಸಮಗೆ ಈಗೆ ವಾಗ್ವಿಳಾಸಮಂ ಎನ್ನುತ್ತಾನೆ. ಅಂದರೆ ಅಲ್ಲಿ ವಾಕ್ ಎಂದು ಹೇಳುವಾಗ ಸರಸ್ವತಿ ಎಂಬ ಹೆಣ್ಣಿನ ಚಿತ್ರವನ್ನು ಕೊಡುವುದು ಮುಖ್ಯವಾಗಿದೆ. ಜೈನರೂ ಕೂಡ ಇದೇ ಫಿಲಾಸಫಿಯನ್ನು ಅನುಸರಿಸಿದವರು. ಶಬ್ದ ಮತ್ತು ಅರ್ಥದ ಕ್ರಮಗಳನ್ನು ಜೈನರು ನೋಡುವ ಕ್ರಮದಲ್ಲಿ ಶಬ್ದ ಹೆಣ್ಣು ಎಂದು ತೋರಿದರೆ ಅರ್ಥ ಗಂಡು ಎಂದು ತೋರುತ್ತದೆ. ಅರ್ಥ ಅವಿಚ್ಚಿನ್ನವಾದಂತಹದು. ಅದಕ್ಕೆ ಮೊದಲು ಕೊನೆಗಳಿಲ್ಲ. ಆದರೆ ಶಬ್ದ ವಿಳಾಸವನ್ನು ಹೊಂದಿರುವಂತಹದ್ದು. ಈ ನೆಲೆಯನ್ನು ಜೈನರು ಮುಂದುವರೆಸುತ್ತಾರೆ. ಈ ರೀತಿ ಭಾಷೆಯಲ್ಲಿ ಹೆಣ್ಣುತನ ಗಂಡುತನ ಎನ್ನುವ ಒಂದು ಕಲ್ಪನಾ ನೆಲೆಯನ್ನು ನಾವು ಭಾರತೀಯ ಚಿಂತನೆಗಳಲ್ಲಿ ನೋಡುತ್ತೇವೆ. ಆದರೆ ಇನ್ನೂ ಸ್ವಲ್ಪ ಮುಂದುವರೆದು ನೋಡಿದರೆ ಈ ಭಾಷೆಯಲ್ಲಿರುವ ಹೆಣ್ಣು ಮತ್ತು ಗಂಡುತನದ ನೆಲೆಗಳನ್ನು ಆಧುನಿಕ ಭಾಷಶಾಸ್ತ್ರಜ್ಞರು ಇನ್ನಷ್ಟು ವಿಸ್ತರಿಸಿ ನಮ್ಮೆದುರು ಮಂಡಿಸುತ್ತಾರೆ. ಈ ನೆಲೆಗಳಲ್ಲಿ ಮೊದಲು 1930ರಲ್ಲಿ ರೊಮಾನ್ ಯಾಕೊಬ್ಸನ್ ಎಂಬ ಭಾಷಾಶಾಸ್ತ್ರಜ್ಞನ ವಿಚಾರಗಳು ಮುಖ್ಯವಾಗುತ್ತವೆ. ಇವರು ಭಾಷೆಗೆ ಸಂಬಂಧಿಸಿದಂತೆ ಮಂಡಿಸಿದ ವಿಚಾರಗಳಿಗೆ ಹಿನ್ನೆಲೆಯಾದ ಎರಡು ಪರಿಕಲ್ಪನೆಗಳು ಆ ಹೊತ್ತಿಗೆ ಬಳಕೆಯಲ್ಲಿದ್ದವು. ನಮಗೆ ಆ ವೇಳೆಗೆ ತಿಳಿದು ಬಂದಿದ್ದ ಸಂಗತಿ ಎಂದರೆ ನಮ್ಮ ಮೆದುಳಿನ ಎಡಭಾಗದಲ್ಲಿ ಭಾಷೆಯ ನಿಯಂತ್ರಣ ಕೇಂದ್ರಗಳಿರುತ್ತವೆಂಬುದು. ಅಂತಹ ಎರಡು ಅಂತರ್ ನಿಯಂತ್ರಣ ಕೇಂದ್ರಗಳಿವೆ. ಇಬ್ಬರು ಪ್ರಖ್ಯಾತ ನರವಿಜ್ಞಾನಿಗಳು ಅದರ ಬಗೆಗೆ ಸಂಶೋದನೆಗಳನ್ನು ಮಾಡಿ ಹೇಳಿದರು. ಪಾಲ್ ಬ್ರಾಕಾ ಮತ್ತು ಕಾಲ್ ವರ್ನಿಕ್ ಇಬ್ಬರು ಕೂಡ ನಮ್ಮ ಮೆದುಳಿನ ಎಡಭಾಗದಲ್ಲಿ ಇರುವ ಎರಡು ಕೇಂದ್ರಗಳನ್ನು ಕುರಿತು ವಿವರಣೆ ನೀಡಿದ್ದರು.

ಆ ಎರಡು ಕೇಂದ್ರಗಳಿಗೆ ಆಘಾತ ಉಂಟಾದಾಗ ವಾಕ್ ಸ್ತಂಭನ ಉಂಟಾಗುತ್ತದೆ. ಈ ವಾಕ್ ಸ್ತಂಭನದಲ್ಲಿ ಎರಡು ಬಗೆಗಳಿವೆ ಎನ್ನುವುದನ್ನು ಅವರು ಹೇಳುತ್ತಾರೆ. ಒಂದು ಬ್ರಾಕಾನ ಏರಿಯಾಗೆ ಆಘಾತವಾದಾಗ ಉಂಟಾಗುವ ವಾಕ್ ಸ್ತಂಭನ. ಇನ್ನೊಂದು ವರ್ನಿಕ್ ಏರಿಯಾಗೆ ಆಘಾತವಾದಾಗ ಉಂಟಾಗುವ ವಾಕ್ ಸ್ತಂಭನ. ಇವುಗಳನ್ನು ಕುರಿತು ಸಾಕಷ್ಟು ಚರ್ಚೆಗಳು ನಡೆದಿವೆ. ಆ ಸಂದರ್ಭದಲ್ಲಿ ರೊಮಾನ್ ಯಾಕೊಬ್ಸನ್ ನಮ್ಮ ಭಾಷಾಬಳಕೆಯ ಎರಡು ವಿಧಾನಗಳನ್ನು ಕುರಿತು ವಿವರಿಸುತ್ತಾನೆ. ಒಂದು ಮೆಟೋಫಾರಿಕ್ ಅಂದರೆ ಸಾದೃಶ್ಯಮೂಲವಾದ ಚಿಂತನಾಕ್ರಮ. ಇನ್ನೊಂದು ಮೆಟಾನಾಮಿಕ್ ಅಂದರೆ ಸಂಬಂಧವಮೂಲವಾಗಿರುವಂತಹದು. ಅಂದರೆ ಯಾವುದಾದರೂ ಎರಡು ಸಂಗತಿಗಳ ನಡುವೆ ಇರುವ ಸಾದೃಶ್ಯದ ಮೂಲಕ ಚಿಂತನೆಗಳನ್ನು ಮಾಡುವಂತಹದು. ಅದು ಮೆಟಫಾರಿಕ್ ಚಿಂತನೆ. ಇನ್ನೊಂದು ಮೆಟನಾಮಿಕ್ ಚಿಂತನೆ. ಇದು ಸಂಬಂಧ ಮೂಲವಾಗಿರುವಂತಹದು. ಎರಡು ಸಂಗತಿಗಳ ನಡುವೆ ಸಾದೃಶ್ಯ ಇರಬೇಕೆಂದಿಲ್ಲ. ಒಂದು ಇನ್ನೊಂದರೊಡನೆ ಯಾವುದೋ ಒಂದು ಬಗೆಯ ಸಂಬಂಧವನ್ನು ಕಲ್ಪಿಸಿಕೊಂಡಿರುತ್ತದೆ. ಈ ಎರಡು ಬಗೆಯ ಗ್ರಹಿಕೆ ಮತ್ತು ಅಭಿವ್ಯಕ್ತಿಯ ಸಾಧ್ಯತೆಯ ಕುರಿತು ರೊಮಾನ್ ಯಾಕೊಬ್ಸನ್ ಚರ್ಚಿಸಿದನು. ಈ ಎರಡು ಬಗೆಯ ಚಿಂತನೆಗಳನ್ನು ಸ್ತ್ರೀವಾದಿಗಳು ಗಟ್ಟಿಯಾಗಿ ಹಿಡಿದು ಒಂದು ಬಗೆಯ ಚಿಂತನೆಯನ್ನು ಗಂಡುಚಿಂತಾನಾಕ್ರಮವೆಂದೂ (ಅದು ಮೆಟಫಾರಿಕ್) ಮತ್ತು ಇನ್ನೊಂದು ಹೆಣ್ಣುಚಿಂತನಾಕ್ರಮವೆಂದೂ (ಅದು ಮೆಟನಾಮಿಕ್) ವಿವರಿಸತೊಡಗಿದರು. ಸಾದೃಶ್ಯ ಮೂಲವಾಗಿ ಚಿಂತಿಸತಕ್ಕದ್ದು ಗಂಡುಚಿಂತನಾಕ್ರಮ. ಸಂಬಂಧದ ಮೂಲವಾಗಿ ಚಿಂತಿಸತಕ್ಕದು , ಗ್ರಹಿಸತಕ್ಕದ್ದು ಮತ್ತು ಅಭಿವ್ಯಕ್ತಿ ಮಾಡತಕ್ಕದ್ದು ಹೆಣ್ಣುಚಿಂತನಾಕ್ರಮ. ಈ ವಾದವನ್ನು ಬಲವಾಗಿ ರೂಢಿಸುತ್ತಾ ಬಂದರು. ಇಲ್ಲೊಂದು ವಿವರಣೆ ಅಗತ್ಯ. ಮೆಟಫಾರಿಕ್ ಅಗಿ ಚಿಂತಿಸುವುದು ಎಂದ ಕೂಡಲೇ ಅದು ಗಂಡು ಮತ್ತು ಗಂಡಸರು ಯಾವಾಗಲೂ ಮೆಟಫಾರಿಕಾಗಿ ಯೋಚನೆ ಮಾಡುತ್ತಾರೆ ಎಂದಲ್ಲ. ಹಾಗೆಯೇ ಯಾವಾಗಲೂ ಹೆಂಗಸರು ಮೆಟನಾಮಿಕಾಗಿ ಯೋಚನೆ ಮಾಡುತ್ತಾರೆ ಎಂತಲ್ಲ. ಒಂದು ಗಂಡು ಬಗೆ, ಇನ್ನೊಂದು ಹೆಣ್ಣು ಬಗೆ. ಮೆಟನಾಮಿಕ್ ಅಥವಾ ಸಂಬಂಧ ಮೂಲಚಿಂತನೆಯನ್ನು ಗಂಡಸರೂ ಬಳಸಬಹುದು. ಹಾಗೆಯೇ ಮೆಟಫಾರಿಕ್ ಅಥವಾ ಸಾದೃಶ್ಯಮೂಲ ಚಿಂತನೆಯನ್ನು ಹೆಂಗಸರೂ ಬಳಸಬಹುದು. ಇದೇ ಮಾತನ್ನೇ ಮುಂದಕ್ಕೆ ಬೇರೆ ಬೇರೆ ರೀತಿಯಲ್ಲಿ ಬೇರೆ ಬೇರೆ ಪದಗಳಲ್ಲಿ ಹೇಳುತ್ತಾ ಬಂದರು. ಉದಾಹರಣೆಗೆ ಈ ಸಾದೃಶ್ಯವಮೂಲ ಚಿಂತನೆಯುನ್ನು, ಹಾಗೆ ಯೋಚನೆ ಮಾಡುವಂತಹುದನ್ನು ಆಂಡ್ರೋ–ಸೆಂಟ್ರಿಕ್ (ಪುರುಷ ಕೇಂದ್ರಿತ) ಎಂತಲೂ ಸಂಬಂಧ ಮೂಲಚಿಂತನೆಯನ್ನು ಗೈನೋ–ಸೆಂಟ್ರಿಕ್ (ಸ್ತ್ರೀ ಕೇಂದ್ರಿತ)ಎಂತಲೂ ಹೇಳಿದರು. ಈ ಬಗೆಯ ವಿಭಜನಾ ಕ್ರಮಕ್ಕೆ ಬೇರೆಬೇರೆ ಪರಿಭಾಷೆಯನ್ನು ರೂಪಿಸುತ್ತಾ ಬರಲಾಗಿದೆ. ಭಾಷಾಶಾಸ್ತ್ರಜ್ಞರು ಮತ್ತು ಸ್ತ್ರೀವಾದಿಗಳು ಈ ಎರಡೂ ವರ್ಗದಲ್ಲಿ ಈ ಚಿಂತನಾ ಕ್ರಮವನ್ನು ನಾವು ನೋಡುತ್ತೇವೆ. ಗಂಡುಚಿಂತನಾಕ್ರಮದ ಗ್ರಹಿಕೆ ಮತ್ತು ಅಭಿವ್ಯಕ್ತಿ ಯಾವಾಗಲೂ ಕೂಡಾ ಸವಾಲು ಹಾಕುವ ರೀತಿಯದು. ಏನನ್ನಾದರೂ ಸ್ಥಾಪಿಸುವ,

ಸಾಧಿಸುವ ಮಾದರಿಯದು. ಆ ಚಿಂತನಾಕ್ರಮವೇ ಒಂದು ಅಭಿಪ್ರಾಯವನ್ನು ಸ್ಥಾಪಿಸುವ ದೃಷ್ಟಿಯಿಂದ ಬೇರೊಂದು ಅಭಿಪ್ರಾಯವನ್ನು ನಿರಾಕರಿಸುವ ದೃಷ್ಟಿಯನ್ನು ಹೊಂದಿರುತ್ತದೆ. ಹೆಣ್ಣುಚಿಂತಾನಾಕ್ರಮ ಎನ್ನುವುದು ಹಾಗಲ್ಲ, ಅದು ಒಳಗೊಳ್ಳುವ ವಿಧಾನವನ್ನು ಅನುಸರಿಸುತ್ತದೆ. ಒಂದು ಚಿಂತನಾಕ್ರಮ ತನಗೆ ಒಪ್ಪಿತವಲ್ಲದ್ದನ್ನು ಹೊರಗಿಡುವ ವಿಧಾನವನ್ನು ಅನುಸರಿಸಿದರೆ, ಇನ್ನೊಂದು ಭಿನ್ನವಾದುದನ್ನು ಒಳಗೊಳ್ಳುವ ಮಾರ್ಗವನ್ನು ಅನುಸರಿಸುತ್ತದೆ. ಈ ವ್ಯತ್ಯಾಸವನ್ನು ಇನ್ನೂ ವಿಸ್ತರಿಸಿ ಚರ್ಚಿಸಿರುವುದುಂಟು. ಗಂಡುಚಿಂತನಾಕ್ರಮವನ್ನು ವಾದ ಹೂಡುವ ಬಗೆಯೆಂದೂ ಹೆಣ್ಣುಚಿಂತನಾಕ್ರಮವು ನಿರೂಪಣಾಮಾರ್ಗವನ್ನು ಅವಲಂಬಿಸುವ ಬಗೆಯೆಂದೂ ಹೇಳುತ್ತಾರೆ. ಈ ವಿಭಜನಾ ಕ್ರಮವನ್ನು ಈ ವಿವರಣೆಯನ್ನು ಮೇಲಿಂದ ಮೇಲೆ ಭಾಷಾಶಾಸ್ತ್ರಜ್ಞರು ಮತ್ತು ಸ್ತ್ರೀವಾದಿಗಳು ಬಳಸಿಕೊಂಡು ಬಂದಿದ್ದಾರೆ. ಈ ಚರ್ಚೆಯಲ್ಲಿ ಈ ಎರಡು ಬಗೆಯ ಅಭಿವ್ಯಕ್ತಿಯ ವಿಧಾನಗಳ ನಡುವೆ ತರತಮಭಾವವಿದೆಯೆಂದು ಯಾರೂ ಸೂಚಿಸುತ್ತಿಲ್ಲ. ಇವು ಎರಡು ಸಾಧ್ಯತೆಗಳು ಮಾತ್ರ ಒಂದು ಹೆಣ್ಣು ನೆಲೆಯ ಭಾಷಾಬಳಕೆಯಾದರೆ ಇನ್ನೊಂದು ಗಂಡುನೆಲೆಯ ಭಾಷಾಬಳಕೆಯಾಗಿದೆ. ಅವೆರಡರ ನಡುವೆ ವಿರೋಧೀ ನೆಲೆ ಇಲ್ಲ. ಅವೆರಡೂ ಪರಸ್ಪರ ಮುಖಾಮುಖಿಯಾಗುವ ನೆಲೆಯಲ್ಲಿಲ್ಲ. ಪೂರಕ ನೆಲೆಯಲ್ಲಿವೆ. ಇವುಗಳನ್ನು ಗಂಡಸಾದರೂ ಬಳಸಬಹುದು ಇಲ್ಲವೇ ಹೆಂಗಸಾದರೂ ಬಳಸಬಹುದು. ಇವೆರಡೂ ವಿಧಾನಗಳಿಗೆ ಗೆಲುವು ಸಾಧಿಸುವ ಅವಕಾಶಗಳಿರುತ್ತವೆ. ಸಾಧ್ಯತೆಗಳಿರುತ್ತವೆ. ಉದಾಹರಣೆಗೆ ವಾದ ಹೂಡುವ, ವಿರೋಧವನ್ನು ಹೊರಗಿಡುವ ವಿಧಾನವನ್ನು ಉತ್ತಮವೆನ್ನಲಾಗದು. ಹಾಗೆಯೇ ಒಳಗೊಳ್ಳುವ ವಾದವಿಧಾನ ಕೆಳದರ್ಜೆಯದೆಂದು ಹೇಳಲು ಬರುವುದಿಲ್ಲ. ವಾದಹೂಡುವ ಮಾದರಿ ವಿರುದ್ಧವಾದುದನ್ನು ಹತ್ತಿಕ್ಕಿ, ಅದನ್ನು ಕೆಳಗೆ ಹಾಕಿ ಅದರ ಮೇಲೆ ತನ್ನ ವಿಜಯವನ್ನು ಸ್ಥಾಪಿಸುತ್ತದೆ. ಹಾಗೆಯೇ ಇನ್ನೊಂದು ವಿಧದಲ್ಲಿ ನಿರೂಪಣಾ ವಿಧಾನ ಕೂಡಾ ಆ ಸಾಧ್ಯತೆಯನ್ನು ಹೊಂದಿದೆ. ಭಾಷಾಶಾಸ್ತ್ರಜ್ಞರು, ಸ್ತ್ರೀವಾದಿಗಳು ಹೇಳುವ ಪ್ರಕಾರ ಸಂಮೋಹಕ ನೆಲೆಯನ್ನು ಬಳಸಿ ಭಿನ್ನ ನೆಲೆಯನ್ನು ತನ್ನೊಳಗೆ ಮಾಡಿಕೊಳ್ಳುವ ಸಾಧ್ಯತೆ ಈ ವಿಧಾನಕ್ಕಿದೆ. ಹಾಗಾಗಿ ಗಂಡುವಿಧಾನವನ್ನು ಶೋಷಕವೆಂತಲೂ ಹೆಣ್ಣುವಿಧಾನವನ್ನು ಶೋಷಿತ ಅಥವಾ ದಮನಿತವೆಂತಲೂ ಸರಳೀಕರಿಸಿ ಹೇಳಬರುವುದಿಲ್ಲ.

ಆದರೆ ನಮ್ಮ ಚರ್ಚೆ ಈ ನೆಲೆಯಲ್ಲಿ ನಿಲ್ಲುವುದಕ್ಕೆ ಸಾಧ್ಯವಿಲ್ಲ. ಏಕೆಂದರೆ ಹೆಣ್ಣುತನ ಮತ್ತು ಗಂಡುತನ ಎಂಬ ಪರಿಕಲ್ಪನಾತ್ಮಕ ನೆಲೆಯಿಂದ ಹೆಂಗಸು ಮತ್ತು ಗಂಡಸು ಎಂಬ ನೆಲೆಗೆ ಬಂದಾಗ ಸಾಮಾಜಿಕವಾದ ರಚನೆಯೊಳಗೆ ಹಾಗೂ ವಾಸ್ತವ ನೆಲೆಗೆ ಬರುತ್ತೇವೆ. ಹಾಗೆ ರಚನೆಯೊಳಗೆ ಬಂದಾಗ ಹೆಣ್ಣು ಎಂಬುದು ಈಗಾಗಲೇ ಬಹಳ ಚರ್ಚೆಗೆ ಒಳಗಾಗಿರುವ ವಿಷಯ. ಸೆಕ್ಸ್ ಮತ್ತು ಜೆಂಡರ್ ನಡುವೆ ಇರುವ ವ್ಯತ್ಯಾಸಗಳನ್ನು ಈಗಾಗಲೇ ಸಾಕಷ್ಟು ಚರ್ಚಿಸಲಾಗಿದೆ. ಹೆಣ್ಣುತನ ಎಂಬುದು ಜೈವಿಕ ವಿಶಿಷ್ಟ ಸಂಗತಿ ಅಷ್ಟೇ ಅಲ್ಲ, ಸಾಮಾಜಿಕ ರಚನೆ ಕೂಡಾ. ಸಾಮಾಜಿಕವಾಗಿ ಹೆಣ್ಣುತನದ ಪಾತ್ರಗಳನ್ನು, ನಿಯೋಗಗಳನ್ನು, ಸ್ವರೂಪವನ್ನು, ಅದರ ಕರ್ತವ್ಯಗಳನ್ನು ನಾವು ರಚಿಸಿಕೊಂಡಿದ್ದೇವೆ, ಪೋಷಿಸುತ್ತಿದ್ದೇವೆ ಮತ್ತು ಬೆಳೆಸುತ್ತಿದ್ದೇವೆ. ಅದನ್ನು ಪೋಷಿಸಲು

ಬೆಳೆಸಲು ಮೇಲಿಂದ ಮೇಲೆ ಬೇಕಾದ ಪ್ರಯತ್ನಗಳನ್ನು ಸಾಮಾಜಿಕವಾಗಿ ಮಾಡಲಾಗುತ್ತಿದೆ. ಅದಕ್ಕೆ ಅನುಗುಣವಾಗಿ ಕಾರ್ಯ ನಿರ್ವಹಿಸುವ ಸಾಮಾಜಿಕ ಸಂಸ್ಥೆಗಳಿವೆ. ಅದರಲ್ಲಿ ಶಿಕ್ಷಣ, ಅಧಿಕಾರ, ಕಾನೂನು ಇಂತಹ ಸಂಗತಿಗಳು ಬೇಕಾದಷ್ಟಿವೆ. ಈ ಸಂಸ್ಥೆಗಳಲ್ಲಿ ಗಂಡಿಗೆ ಯಾವಾಗಲೂ ಕರ್ತೃವಿನ ನೆಲೆ. ಹೆಣ್ಣಿಗೆ ಯಾವಾಗಲೂ ಅನುಭೋಗಿಯ ನೆಲೆ ಅಷ್ಟೆ ಗಂಡು ಯಾವಾಗಲೂ ಕೊಡುವವನು, ಹೆಣ್ಣು ಯಾವಾಗಲೂ ಪಡೆಯುವವಳು. ಭಾಷೆಯ ಉತ್ಪಾದಕ ನೆಲೆಯಲ್ಲಿ ಗಂಡಸು ಮತ್ತು ಅದರ ಪಡೆದುಕೊಳ್ಳುವ ನೆಲೆಯಲ್ಲಿ ಹೆಂಗಸು ಇರುವಂತೆ ಎಲ್ಲ ವ್ಯವಸ್ಥೆಗಳೂ ರೂಪುಗೊಂಡಿವೆ. ಈ ಪಾತ್ರವಿಭಜನೆ ನಮ್ಮನ್ನು ಆಳುವ ಬಹಳ ದೊಡ್ಡ ರೂಪಕ. ಸ್ಲೀಪಿಂಗ್ ಬ್ಯೂಟಿ ಕಥೆ ನಿಮಗೆ ಗೊತ್ತು. ಆ ಕತೆಯಲ್ಲಿ ದೀರ್ಘಕಾಲದ ನಿದ್ದೆಗೆ ಒಳಗಾಗಿರುವ ಹೆಂಗಸಿದ್ದಾಳೆ. ಆಕೆ ಮಲಗಿದ್ದಾಗ ಒಬ್ಬ ಗಂಡು ಬಂದು ಮುತ್ತು ಕೊಟ್ಟಾಗ ಮಾತ್ರ ಆಕೆ ನಿದ್ರೆಯಿಂದ ಹೊರ ಬರುತ್ತಾಳೆ. ಅಂದರೆ ಆತ ಕೊಡಬೇಕು ಆಕೆ ಅದನ್ನು ಪಡೆಯಬೇಕು. ಅವಳು ಜೀವಂತಗೊಳ್ಳುವ ಕ್ರಿಯೆ ಅಲ್ಲಿದೆ. ಹೆಂಗಸಿಗೆ ಈ ಸ್ವೀಕರಿಸುವ ಪಾತ್ರದ ಜೊತೆಗೆ ಹಾಗೆ ಪಡೆದದ್ದನ್ನು ರಕ್ಷಿಸುವ, ಕಾಪಿಡುವ ಕೆಲಸವನ್ನು ಕೂಡ ಕೊಡಲಾಗಿದೆ. ಗರ್ಭಧರಿಸುವ ಅವಳು ಪಡೆದದ್ದನ್ನು ತನ್ನಲ್ಲೇ ಕಾಪಿಡಬೇಕು. ಆದರೆ ತಾನೇ ಇಟ್ಟುಕೊಳ್ಳುವಂತಿಲ್ಲ. ಅದನ್ನು ಅವಳು ಮತ್ತೆ ಸಮಾಜಕ್ಕೆ ಕೊಡಬೇಕಾಗುತ್ತದೆ.

ಮೇಲಿಂದ ಮೇಲೆ ನಮ್ಮ ಹೆಂಗಸರ ಬಗೆಗೆ ಇರುವ ಕತೆಗಳನ್ನು ,ಅವರ ಆಸೆ ಬುರುಕತನದ ಕತೆಗಳನ್ನು ಹೇಳುತ್ತಿರುತ್ತಾರೆ. ಅವರು ಮನೆಯ ಹಣವನ್ನು ಕದ್ದು ಸಾಸಿವೆ ಡಬ್ಬದಲ್ಲಿ ಬಚ್ಚಿಡುತ್ತಾರಂತೆ. ಸಾಸಿವೆ ಡಬ್ಬದಲ್ಲಿ ಕಾಸು ಹೆಣ್ಣುಮಕ್ಕಳು ಕಳ್ಳತನದಿಂದ ಬಚ್ಚಿಟ್ಟಿದ್ದರೂ ಅದನ್ನು ತಮಗಾಗಿ ಬಳಸುವಂತಿಲ್ಲ. ಅನಂತರ ಕುಟುಂಬದ ಅನುಕೂಲಕ್ಕಾಗಿ ಅದನ್ನು ಬಳಸುತ್ತಾರೆ. ಹಾಗೆ ಬಳಸುವ ಒತ್ತಾಯಗಳು ಅವರ ಮೇಲಿವೆ. ಅಂದರೆ ಇಲ್ಲಿ ಕೊಡುವ ಮತ್ತು ಪಡೆಯುವ ಜೊತೆಗೆ ಹೀಗೆ ಪಡೆದುಕೊಂಡದ್ದನ್ನು ಕಾಯ್ದಿರಿಸುವ ಕತೆಯನ್ನ ನೋಡುತ್ತಿದ್ದೇವೆ. (ಪಾಶ್ಚಾತ್ಯರಲ್ಲಿ ಕಾಣದಿರುವ ಆದರೆ ಭಾರತೀಯರ ಚಿಂತನೆಯಲ್ಲಿ ಕಾಣುವ ಹೆಂಗಸಿನ ಇನ್ನೊಂದು ನೆಲೆಯಿದೆ. ಈ ನೆಲೆಯಲ್ಲಿ ಹೆಂಗಸು ವಿನಾಶಕಾರಿಯಾಗಿ ತೋರುತ್ತಾಳೆ. ಇದು ಮೂಲಭೂತವಾಗಿ ಕಾಳಿಯ ಕಲ್ಪನೆ. ಈ ಎರಡೂ ಪಾತ್ರಗಳನ್ನು ತಾಯಿ ನಿರ್ವಹಿಸುತ್ತಾಳೆ. ತನಗೆ ಬೇಕಾದಾಗ ಕಾಪಿಡುವ, ಬೇಡವಾದಾಗ ಬೇಡವಾದದ್ದನ್ನು ನಾಶಗೊಳಿಸುವ ಪಾತ್ರವನ್ನು ವಹಿಸುತ್ತಾಳೆ. (ಶಿವರಾಮ ಕಾರಂತರ ಕಾದಂಬರಿಗಳ ಮುದುಕಿಯರಲ್ಲಿ ಅಥವಾ ತೇಜಸ್ವಿಯವರ ಕಿರುಗೂರಿನ ಗಯ್ಯಾಳಿಗಳು ಕೃತಿಯಲ್ಲಿ ಬರುವ ದಾನಮ್ಮನಂತವರು.) ಹೆಂಗಸಿಗೆ ಕೊಟ್ಟದ್ದನ್ನು ಪಡೆದುಕೊಳ್ಳುವ ನೆಲೆಯನ್ನು ಗೊತ್ತು ಮಾಡಿದ್ದರಿಂದ ಅವಳಿಗೆ ಭಾಷೆಯ ದೃಷ್ಟಿಯಿಂದ ಎರಡು ನಿಯಂತ್ರಣಗಳು ರೂಪುಗೊಂಡಿವೆ. ಅವುಗಳಲ್ಲಿ ಒಂದು ಶಬ್ದದಿಂದ ನಿಶ್ಶಬ್ದದ ಕಡೆಗೆ ಚಲಿಸುವುದು. ಅಂದರೆ ಸದ್ದಿನಿಂದ ಮೌನದ ಕಡೆಗೆ ಚಲನೆ. ಭಾಷಿಕ ಸಾಮರ್ಥ್ಯವನ್ನು ಪಡೆದುಕೊಳ್ಳುವ ಹಂತದಲ್ಲಿ ಹೆಣ್ಣು ಮತ್ತು ಗಂಡು ಎಂಬ ವ್ಯತ್ಯಾಸವಿಲ್ಲದೆ ಇರಬಹುದು. ಆದರೆ ಸಾಮರ್ಥ್ಯವನ್ನು ಪಡೆದುಕೊಂಡ ಮೇಲೆ ಅದರ ಬಳಕೆಯ ನೆಲೆಗೆ ಬಂದಾಗ ಹೆಂಗಸಿನ ಪ್ರಯಾಣ ಶಬ್ದದಿಂದ ಮೌನದ ಕಡೆಗೆ.

ಭಾಷಿಕ ಕ್ರಿಯೆಗೆ ಮೂರು ನೆಲೆಗಳಿವೆ. ಅರ್ಥ, ಭಾವ ಮತ್ತು ಕ್ರಿಯೆ. ಏನಾದರೂ ಮಾತಾಡಿದರೆ ಮಾತಿಗೊಂದು ಅರ್ಥವಿರುತ್ತದೆ ಮತ್ತು ಮಾತಿಗೊಂದು ಭಾವವಿರುತ್ತದೆ. ಮೂರನೆಯದು ಹಾಗೆ ಮಾತಾಡುವ ಮುಖಾಂತರ ಯಾವುದೋ ಒಂದು ಕ್ರಿಯೆ ಸಂಭವಿಸಬೇಕೆಂಬ ಉದ್ದೇಶವಿರುತ್ತದೆ. ಈ ಮೂರು ನೆಲೆಗಳನ್ನು ಗಮನಿಸಿಯೇ ನಾವು ಮಾತನಾಡುತ್ತೇವೆ. ಉದಾ: ಕಿಟಕಿ ಬಾಗಿಲು ಹಾಕು, ಕಿಟಕಿ ಬಾಗಿಲು ಹಾಕುತ್ತೀಯಾ, ದಯವಿಟ್ಟು ಕಿಟಕಿ ಬಾಗಿಲು ಹಾಕು. ಈ ಮೂರೂ ವಾಕ್ಯಗಳನ್ನು ಗಮನಿಸಿ. ಈ ಮೂರಕ್ಕೂ ಬೇರೆಬೇರೆ ಸಾಮಾಜಿಕ ನಿಯೋಗಗಳಿವೆ. ಇವೆಲ್ಲವುಗಳ ಅರ್ಥ ಒಂದೇ ಆಗಿರಬಹುದು. ಆದರೆ ಭಾವ ಬೇರೆಬೇರೆಯಾಗಿರುತ್ತವೆ. ಅಲ್ಲದೆ ಮೂರನೆಯ ನೆಲೆ (ಕ್ರಿಯೆಯ ನೆಲೆ)ಯೊಂದು ಇದೆ. ಈ ವಾಕ್ಯಗಳನ್ನು ಹೇಳುವ ಮುಖಾಂತರ ಯಾರಾದರೂ ಕಿಟಕಿ ಬಾಗಿಲು ಹಾಕಬೇಕು ಎಂಬ ಉದ್ದೇಶವಿರುತ್ತದೆ. ಅಂದರೆ ಒಂದು ಕ್ರಿಯೆ ಸಂಭವಿಸಬೇಕು. ಭಾಷಾಶಾಸ್ತ್ರಜ್ಞರು ಮತ್ತು ಸ್ತ್ರೀವಾದಿಗಳು ಹೇಳುವ ಪ್ರಕಾರ ಹೆಂಗಸಿನ ಭಾಷಾಬಳಕೆಯು ಈ ಮೂರು ನೆಲೆಗಳಲ್ಲೂ ಆಕೆಯನ್ನು ಮೌನಗೊಳಿಸುವ ಪ್ರಕ್ರಿಯೆಯಿದೆ. ಆಕೆ ಹೇಳುವ ಮಾತುಗಳು ಅರ್ಥವಿಹೀನವಾಗುವ ಹಾಗೆ, ಅವುಗಳ ಮೂಲಭಾವ ಪಲ್ಲಟವಾಗುವ ಹಾಗೆ ಮತ್ತು ಅವು ಕ್ರಿಯಾವಿಹೀನವಾಗುವ ಹಾಗೆ ಮಾಡುವ ರೀತಿಯಲ್ಲಿ ಈ ಸಮಾಜ ರೂಪುಗೊಂಡಿದೆ. ಆಕೆ ಭಾಷೆ ಬಳಸುವುದಿಲ್ಲವೆಂದಲ್ಲ. ಆಕೆ ಭಾಷೆ ಬಳಸುತ್ತಾಳೆ. ಆಕೆ ಬಳಸುವ ಭಾಷೆಗೆ ಅರ್ಥವಿಲ್ಲದೆ ಹೊದರೆ, ಬಳಸುವ ಭಾಷೆಯಿಂದ ಬೇರೊಂದು ಭಾವವನ್ನು ಗ್ರಹಿಸುವಂತಾದರೆ, ಬೇರೆ ಪರಿಣಾಮ ಬೀರುವ ಹಾಗೆ ಇದ್ದರೆ ಮತ್ತು ಅದು ಯಾವ ಕ್ರಿಯೆಯನ್ನು ಉದ್ದೇಶಿಸಿರುತ್ತದೋ ಆ ಕ್ರಿಯೆ ಆಗದಂತೆ ಮಾಡಿದರೆ ಆಗ ಭಾಷೆಯನ್ನು ನೀವು ಬಳಸಿಯೂ ಅದು ನಿರುಪಯುಕ್ತವಾಗುತ್ತದೆ. ಅದು ಇದ್ದೂ ಇಲ್ಲದ ಹಾಗೆ. ಹೆಂಗಸಿಗೆ ಭಾಷೆಯ ಸಾಮರ್ಥ್ಯ ಲಭ್ಯವಿದ್ದರೂ ಅದನ್ನು ಬಳಸಿದಾಗ ಅದರ ಉದ್ದೇಶ ಪೂರ್ಣಗೊಳ್ಳದ ರೀತಿಯಲ್ಲಿ ನಮ್ಮ ಸಾಮಾಜಿಕ ಸಂಯೋಜನೆ ರೂಪುಗೊಂಡಿದೆ. ಈ ಅಂಶವನ್ನು ಎಚ್ಚರಿಕೆಯಿಂದ ಗಮನಿಸುವುದು ಅಗತ್ಯ.

ಹೆಂಗಸು ಮಾತನಾಡದೆ ಇರುವುದು ಆಕೆಯ ಆಯ್ಕೆಯಾಗಿರಬಹುದು. ಯಾರೂ ಒತ್ತಾಯಪೂರ್ವಕವಾಗಿ ಆಕೆಯ ಮೇಲೆ ಹೇರಿದ ಸ್ಥಿತಿಯಾಗಿಲ್ಲದೆಯೂ ಇರಬಹುದು. ಸ್ತ್ರೀವಾದಿಗಳು ಈ ಪರಿಸ್ಥಿತಿಯನ್ನು ಯಾವ ರೀತಿಯಲ್ಲಿ ಬಳಸುತ್ತಿದ್ದಾರೆ ಎನ್ನುವುದು ಬಹಳ ಎಚ್ಚರಿಕೆಯಿಂದ ಗಮನಿಸಬೇಕು. ಸಾಮರ್ಥ್ಯವಿದ್ದು ಬಳಸದಿರುವುದು ಶಾಪ. ಇದು ಏಕಲವ್ಯ ಮತ್ತು ಕರ್ಣ ಇವರ ಕಥೆಯಲ್ಲಿರುವ ಸ್ಥಿತಿ. ಅವರಿಗೆ ಎಲ್ಲವನ್ನೂ ಬಳಸುವ ಸಾಮರ್ಥ್ಯವಿದೆ. ಆದರೆ ಬಳಸದಿರುವ ಶಾಪವೂ ಇದೆ. ಅಥವಾ ಬಳಸುವುದಿಲ್ಲ ಎಂಬ ಶರತ್ತು ಅಥವಾ ಬಳಸಬಾರದು ಎಂಬ ಕಟ್ಟುಪಾಡು ಅಥವಾ ಶಾಪವಿದೆ. ಇಂದು ಹೆಂಗಸಿಗೆ ಭಾಷೆಯೆಂಬುದು ಲಭ್ಯವಿದ್ದರೂ ಕೂಡ ಅದು ಸಾಮಾಜಿಕವಾಗಿ ಯಾವ ಬಗೆಯಲ್ಲಿ ಯಾವ ರೀತಿಯಲ್ಲಿ ಅದು ಗ್ರಹಿಕೆ ಮತ್ತು ಅಭಿವ್ಯಕ್ತಿಯಲ್ಲಿ ಬಳಕೆಯಾಗಬೇಕೋ ಹಾಗೆ ಬಳಕೆಯಾಗದ ರೀತಿಯಲ್ಲಿ ಒಂದು ಸಾಮಾಜಿಕ ಸಂರಚನೆ

ಇದೆ. ಅಂತಹ ಇಕ್ಕಟ್ಟಿನಲ್ಲಿ ಹೆಂಗಸು ಇದ್ದಾಳೆ ಎನ್ನುವುದು ನಮ್ಮ ಇಪ್ಪತ್ತನೇ ಶತಮಾನದ ಕೊನೆಯ ಘಟ್ಟದ ನಮ್ಮ ತಿಳುವಳಿಕೆಯಾಗಿದೆ. ಈ ಬಗೆಗೆ ನಮ್ಮ ಚರ್ಚೆ ಇನ್ನೂ ವಿಸ್ತಾರವಾಗಿ ಬೆಳೆಯಬೇಕಾಗಿ ಬಂದಿದೆ. ಬಹಳ ಸಂದರ್ಭದಲ್ಲಿ ಹೆಂಗಸಿನ ಅವಕಾಶ ವಂಚಿತ ಸ್ಥಿತಿಯನ್ನೇ ಕುರಿತು ದೊಡ್ಡದುಮಾಡಿ ಹೇಳುತ್ತೇವೆ. ಮಾನವ ಚರಿತ್ರೆಯಲ್ಲಿಯೂ ಅಥವಾ ನಾಗರಿಕ ಹಕ್ಕುಗಳ ಬಗ್ಗೆ ಮಾತನಾಡುವವರು ಕೂಡ ಹೆಂಗಸಿನ ಅವಕಾಶ ವಂಚಿತ ಸ್ಥಿತಿಯನ್ನು ಕುರಿತು ಮಾತನಾಡುತ್ತಾರೆ. ಅದರಿಂದ ಒಂದು ಸಹಾನುಭೂತಿಯನ್ನು ಅಥವಾ ಮರುಕವನ್ನು ಗಳಿಸಬಹುದು. ತೀರಾ ಇತ್ತೀಚೆಗೆ ಟಿ.ವಿ.ಯಲ್ಲಿ ಒಂದು ರಿಪೋರ್ಟ್ ನೋಡಿದೆ. ಅದರಲ್ಲಿ ಕಾಶ್ಮೀರದ ಭೂಕಂಪದ ಕಾರಣವನ್ನು ಮತ್ತು ಅದರ ಪರಿಣಾಮಗಳನ್ನು ತೋರಿಸಲಾಗಿತ್ತು. ಇದೆಲ್ಲದರ ಪರಿಣಾಮವಾಗುವುದು ಹೆಂಗಸರ ಮೇಲೆ ತಾನೆ? ಅದೆಲ್ಲ ಈಗಾಗಲೇ ಸಮಾಜಶಾಸ್ತ್ರಜ್ಞರು ಮತ್ತು ಅರ್ಥಶಾಸ್ತ್ರಜ್ಞರು ಅಧ್ಯಯನ ಮಾಡಿರುವ ಸಂಗತಿಗಳು. ಅಲ್ಲಿ ಏನಾಗಿತ್ತೆಂದರೆ, ಹತ್ತು ವರ್ಷದ ಹುಡುಗಿ ಉಳಿದುಕೊಂಡಿದ್ದಾಳೆ. ತಾಯಿ ಮತ್ತು ಅಣ್ಣನನ್ನು ಕಳೆದುಕೊಂಡು ಬಿಟ್ಟಿದ್ದಾಳೆ. ತಂದೆ ಇದ್ದಾನೆ. ತಮ್ಮ, ತಂಗಿ ಇದ್ದಾರೆ. ಆದ್ದರಿಂದ ಆ ಹುಡುಗಿ ಶಾಲೆಯ ಶಿಕ್ಷಣದಿಂದ ಹೊರಗೆ ಬಂದು ಮನೆಯನ್ನು ನಿರ್ವಹಣೆ ಮಾಡುವ ಸ್ಥಿತಿಗೆ ಬರುತ್ತಾಳೆ. ಮನೆಯ ಹೊಣೆಗಾರಿಕೆ ತೆಗೆದುಕೊಳ್ಳುತ್ತಾಳೆ. ಅದನ್ನು ನೋಡುವಾಗ ನೋಡುಗರಲ್ಲಿ ಆ ಹುಡುಗಿಯ ಬಗೆಗೆ ಮರುಕ ಹುಟ್ಟುತ್ತದೆ. ಹೆಂಗಸು ಎಷ್ಟು ದಮನಿತವಾಗಿದ್ದಾಳೆ, ಅವಕಾಶ ವಂಚಿತಳಾಗಿದ್ದಾಳೆ ಎನ್ನುವುದನ್ನು ಬಿಂಬಿಸುತ್ತದೆ. ವಾಸ್ತವವಾಗಿ ಇಂತಹ ಅವಕಾಶರಹಿತ ಅವಸ್ಥೆಯನ್ನು ಎತ್ತಿ ಹೇಳುತ್ತಾ ಹೋಗುವುದರಿಂದ ಆಗುವ ಪ್ರಯೋಜನ ಕಡಿಮೆ. ಅವಳು ದಮನಿತಳಾಗಿದ್ದಾಳೆ. ಸಾಮರ್ಥ್ಯವಿದ್ದರೂ ಅವಕಾಶವಿಲ್ಲದೆ ಅವಳು ಏಕೆ ದಮನಿತಳಾಗುತ್ತಾಳೆ? ಈ ಅಂಶ ಇಂದು ಚರ್ಚೆಗೆ ಒಳಗಾಗಬೇಕು. ಅಂದರೆ ಭಾಷೆಯ ಬಳಕೆ ಅಸಾಧ್ಯವಾಗುವ ಸ್ಥಿತಿಗೆ ಹೆಣ್ಣು ಒಳಗಾಗಿದ್ದಾಳೆ. ಆಕೆಯ ಸ್ಥಿತಿಗೆ ಭಾಷೆಯ ಬಳಕೆಯ ಅಸಾಮರ್ಥ್ಯವು ಕಾರಣವೋ ಅಥವಾ ಬಳಕೆಯ ಅವಕಾಶಗಳು ಇಲ್ಲದಿರುವುದು ಕಾರಣವೋ ಎಂಬುದು ಚರ್ಚೆಗೆ ಒಳಗಾಗಬೇಕಾಗಿದೆ. ಬಳಸಿದರೂ ಅದು ಉದ್ದೇಶಕ್ಕೆ ಅನುಗುಣವಾಗಿ ಇರುವುದಿಲ್ಲ. ಬಳಸುವವರ ಅಪೇಕ್ಷೆಗಳನ್ನು ಪೂರೈಸುವಂತಿರುವುದಿಲ್ಲ. ಇದು ಮಹಿಳೆಯ ದಮನಿತ ಸ್ಥಿತಿಯನ್ನು ವಿವರಿಸುತ್ತದೆ. ಇಲ್ಲಿ ಏನು ಆಗುತ್ತಿದೆಯೆಂದರೆ ನಾನು ಮೊದಲೇ ಮಂಡಿಸಿದ ಪ್ರಶ್ನೆಯಲ್ಲಿ ಭಾಷೆಯ ಎರಡು ಸಾಧ್ಯತೆಯನ್ನು ಹೇಳಿದೆ. ಭಾಷೆಯನ್ನು ಹೆಂಗಸಾದರೂ ಬಳಸಬಹುದು ಅಥವಾ ಗಂಡಸಾದರೂ ಬಳಸಬಹುದು. ಅದರಲ್ಲಿ ಹೆಣ್ಣುತನ ಮತ್ತು ಗಂಡುತನವೆಂಬ ಭಿನ್ನತೆಗಳಿವೆಯೆಂಬ ವಾದವನ್ನು ನೋಡಿದೆವು. ಈ ಭಿನ್ನತೆಗೂ ಹೆಂಗಸಿನ ಭಾಷೆ ಮತ್ತು ಗಂಡಸಿನ ಭಾಷೆಗೆ ಸಂಬಂಧವಿರಬೇಕಿಲ್ಲವೆಂಬುದನ್ನು ಗಮನಿಸಿದೆವು. ಈಗ ಹೆಂಗಸಿನ ಭಾಷೆ ಮತ್ತು ಗಂಡಸಿನ ಭಾಷೆಗಳಲ್ಲಿ ಅಂದರೆ ಅವರ ಭಾಷೆಯ ಬಳಕೆಯಲ್ಲಿ ತಾರತಮ್ಯವಿರುವುದೆಂಬುದನ್ನು ಗಮನಿಸುತ್ತಿದ್ದೇವೆ.. ಗಂಡಸರು ಮಾತನಾಡುವಾಗ ಅವರ ಮಾತು ಎಲ್ಲವನ್ನು ಒಳಗೊಂಡಿರುತ್ತದೆ. ಆದರೆ ಹೆಂಗಸರು ಮಾತನಾಡುವಾಗ ಅವರ ಮಾತು ಕೆಲವು ನಿರ್ದಿಷ್ಟವಾದ ಅರ್ಥ ಕಟ್ಟುಪಾಡುಗಳಿಗೆ ಅನುಗುಣವಾಗಿ

ಬಳಕೆಯಾಗುತ್ತದೆ. ಇದನ್ನು ಶಿಷ್ಟ ಮತ್ತು ಪರಿಶಿಷ್ಟ ಎಂತಲೂ ನೋಡಬಹುದು. ಶಿಷ್ಟವಾಗಿರುವಂತಹದು ಗಂಡಿನ ಭಾಷೆ. ಅದು ಸರ್ವತಂತ್ರ ಸ್ವತಂತ್ರ (ಅನ್ ಮಾರ್ಕ್‌ಡ್). ಅವರು ಮಾತನಾಡುತ್ತಾ ಇದ್ದರೆ ಅದು ಗಂಡಸರ ಮಾತು ಎಂಬುದನ್ನು ವಿಶೇಷವಾಗಿ ಗಮನಿಸುವ ಅಗತ್ಯವಿರುವುದಿಲ್ಲ. ಹೆಣ್ಣಿನ ಭಾಷೆ ಅಧೀನ (ಮಾರ್ಕ್‌ಡ್) ಅಂದರೆ ಅದು ಕೆಲವು ಕಟ್ಟುಪಾಡುಗಳಲ್ಲಿ ಮಾತ್ರ ನಿರ್ದಿಷ್ಟ ಅರ್ಥ ಪಡೆದುಕೊಂಡಿರುತ್ತದೆ. ಕಟ್ಟುಪಾಡುಗಳಿಗೆ ಅನುಗುಣವಾಗಿ ಬಳಕೆಯಾಗುತ್ತದೆ. ಇದನ್ನು ಶಿಷ್ಟ ಮತ್ತು ಪರಿಶಿಷ್ಟಗಳ ಸಂಬಂಧದಲ್ಲಿ ನೋಡಬೇಕಾಗುತ್ತದೆಂದು ಹೇಳಿದೆ. ಶಿಷ್ಟವಾಗಿರುವುದು ಗಂಡಿನ ಭಾಷೆ, ಸಾರ್ವತ್ರಿಕವಾದದ್ದು. ಯಾವುದೇ ನಿರೂಪಣೆಯಾದರೂ ಅದು ನೇರವಾಗಿ ಗಂಡಸಿಗೆ ಅನ್ವಯವಾಗುತ್ತದೆ. ಹೆಂಗಸಿಗೆ ಅನ್ವಯವಾಗುವುದಿಲ್ಲ. ಮತ್ತೆ ಹೆಂಗಸಿಗೆ ಅನ್ವಯವಾಗುವಂತೆ ವ್ಯಾಖ್ಯಾನ ಮಾಡಬೇಕಾಗುತ್ತದೆ. ಅದು ಪರಿಶಿಷ್ಟ, ಸೇರ್ಪಡೆ. ಆ ಮೇಲೆ ಬಂದು ಸೇರಬೇಕಾಗಿರುವಂತಹದು. ಜೋಡಣೆಯಾಗಿರಬೇಕಾದಂತಹದು. ಈ ಸ್ಥಿತಿಯಲ್ಲಿ ಭಾಷಾ ಬಳಕೆ ಇದೆ ಎನ್ನುವುದು ಅವರ ಅರಿವಿಗೆ ಬರುವುದು ಇನ್ನೊಂದು ಹಂತ. ಬಳಸುವವರು ಈ ಸ್ಥಿತಿಯ ಬಗೆಗೆ ಪ್ರಜ್ಞಾವಂತರಾಗುತ್ತಾರೆ. ಇದು ಅತ್ಯಂತ ನೋವಿನ ಹಂತ. ಇದು ಅತ್ಯಂತ ಉದ್ವಿಗ್ನ ಸ್ಥಿತಿ. ಬಳಕೆಗೆ ಮಿತಿಗಳಿವೆ ಎನ್ನುವುದು ಗೊತ್ತಿಲ್ಲದದಿರುವುದು ಒಂದು ಬಗೆ. ಆದರೆ ಬಳಕೆಯ ಮಿತಿಗಳು ಅರಿವಿಗೆ ಬಂದರೂ ಹಾಗೇ ಬಳಸಬೇಕಾಗಿ ಬರುವುದು ನೋವಿನ ಸ್ಥಿತಿ. ಅಂತಹ ಉದ್ವಿಗ್ನ ಸ್ಥಿತಿಗೆ ಹೆಂಗಸು ಒಳಗಾಗುವುದನ್ನು ನಾವು ಹೇಗೆ ವ್ಯಾಖ್ಯಾನಿಸಬೇಕೆಂಬುದು ಮುಖ್ಯ ಪ್ರಶ್ನೆ. ಈ ಹಂತದ ಅರಿವಿನ ನೋವನ್ನು ವಿಜೃಂಭಿಸುತ್ತಾ ಕೂರಬೇಕಿಲ್ಲ. ಹೀಗೆ ತಮ್ಮ ಭಾಷಾ ಬಳಕೆಯ ಮಿತಿಗಳ ಬಗೆಗೆ ಅರಿವನ್ನು ಪಡೆದ ಹೆಂಗಸರು ತಮ್ಮ ಭಾಷೆಯ ಬಳಕೆಗೆ ಇರುವ ತಾರತಮ್ಯದ ನೆಲೆಯನ್ನು ಅರ್ಥಮಾಡಿಕೊಂಡಾಗ ಆ ತಾರತಮ್ಯವನ್ನು ನಿವಾರಿಸುವ ಹಂತದಲ್ಲಿ ಕೆಲಸಮಾಡಬೇಕೋ ಅಥವಾ ಆ ವ್ಯತ್ಯಾಸವನ್ನು ಚಹರೆ ಎಂಬಂತೆ ಕಾಯ್ದುಕೊಳ್ಳುವ ಹಂತದಲ್ಲಿ ಕೆಲಸ ಮಾಡಬೇಕೊ ಎನ್ನುವುದು ಇವತ್ತಿನ ಸ್ತ್ರೀವಾದಿಗಳಿಗೆ ಮತ್ತು ಭಾಷಾಶಾಸ್ತ್ರಜ್ಞರ ಎದುರಿರುವ ಅತ್ಯಂತ ದೊಡ್ಡ ಪ್ರಶ್ನೆ, ಇದೊಂದು ಗಂಭೀರ ಸ್ಥಿತಿ. ಇಲ್ಲಿರುವ ಈ ತಾರತಮ್ಯದ ಸ್ಥಿತಿಯನ್ನು ಕಳೆದು ಒಂದು ಸಮಾನತೆಯ ಸ್ಥಿತಿಯು ಸಾಧ್ಯವಾಗುವಂತೆ ಮಾಡಬೇಕಾ? ಅಥವಾ ತಾರತಮ್ಯದ ಸ್ಥಿತಿಯನ್ನೇ ಹೆಣ್ಣಿನ ಭಾಷೆಯ ವಿಶಿಷ್ಟ ನೆಲೆಯೆಂದು ಗ್ರಹಿಸಿ ಅದರ ವಿಶಿಷ್ಟತೆಯನ್ನು ಕಾಯ್ದುಕೊಳ್ಳಬೇಕಾ? ಇದಕ್ಕೊಂದು ಉದಾಹರಣೆ ನೋಡೋಣ. ಅಮೇರಿಕಾದವರ ಸಮಾನತೆಯ ಕಲ್ಪನೆ ವಿಚಿತ್ರವಾದದ್ದು. ಲಿಂಗ ಸಮಾನತೆಯನ್ನು ತರಲು ಭಾಷೆಯಲ್ಲಿ ಪರಿವರ್ತನೆ-ಬದಲಾವಣೆ ತರುವ ಹಾದಿಯನ್ನು ಹಿಡಿದರು. ಚೇರ್ಮನ್ ಎಂಬುದನ್ನು ಚೇರ್ ಪರ್ಸನ್ ಎಂದು ಬದಲಿಸಿದರು. ನಿಗ್ರೋಗಳನ್ನು ಬ್ಲ್ಯಾಕ್ ಪೀಪಲ್ ಎಂದರು, ಅನಂತರ ಬ್ಲ್ಯಾಕ್ ಎಂಬುದನ್ನು ಬಿಟ್ಟು ಆಫ್ರಿಕನ್ ಅಮೇರಿಕನ್ಸ್ ಎಂದು ಕರೆದರು. ಹೀಗೆ ಪರ್ಯಾಯ ನಾಮಕರಣದ ಮುಖಾಂತರ ಅವರು ಇತರರಿಗೆ ಸಮಾನರು ಎನ್ನುತ್ತೇವೆ ಎಂದರು. ಇದರಿಂದ ಹಲವಾರು ನಗೆಹನಿಗಳು ಸೃಷ್ಟಿಯಾಗಿವೆ ಅಷ್ಟೆ. ಭಾಷೆಯಲ್ಲಿ ಬದಲಾವಣೆ ಮಾಡುವ ಮುಖಾಂತರ ವಾಸ್ತವಸ್ಥಿತಿಯನ್ನು ಮುಚ್ಚಿಡುತ್ತಾ ಇರುತ್ತೇವೆ. ಇದರಿಂದ

ಈ ಪ್ರಜ್ಞಾ ಪಲ್ಲಟದ ಸ್ಥಿತಿಯಲ್ಲಿರುವ ದಮನಿತರೆಲ್ಲರೂ (ಇಲ್ಲಿ ಕೇವಲ ಹೆಂಗಸರ ಬಗ್ಗೆ ಮಾತನಾಡುತ್ತಿಲ್ಲ) ಅನುಭವಿಸುವ ಇಕ್ಕಟ್ಟೆಂದರೆ ಅವರಲ್ಲಿ ಉಂಟಾಗುವ ದ್ವಂದ್ವತೆ. ಎಂದರೆ ತಮ್ಮ ದಮನಿತ ಸ್ಥಿತಿಯ ವೈಶಿಷ್ಟಗಳನ್ನು ಕಾಯ್ದುಕೊಳ್ಳಬೇಕು. ಕಾಯ್ದುಕೊಳ್ಳುವ ಮುಖಾಂತರವೇ ಇತರರಿಗೆ ಅದು ಚುಚ್ಚುವ ಹಾಗೆ ಆಗಬೇಕು. ಎರಡನೆಯದು ಅಲ್ಲಿ ದಮನಿತ ಸ್ಥಿತಿಯ ಅರಿವು ಕೂಡಾ ಇರುತ್ತದೆ. ಅದನ್ನು ಬಿಟ್ಟುಕೊಡಲು ಆಗುವುದಿಲ್ಲ. ಅದರ ಇಕ್ಕಟ್ಟನ್ನು ಕುರಿತು ಬ್ಲಾಕ್ ಫೆಮಿನಿಸಂನಲ್ಲಿ ಬಹಳ ಚರ್ಚೆಗಳು ನಡೆದಿವೆ. ಇದು ಭಾರತದ ಸ್ಥಿತಿಯಲ್ಲಿಯೂ ಬಹಳ ದೊಡ್ಡ ಪ್ರಶ್ನೆಯಾಗಿದೆ. ಭಾಷಾಬಳಕೆಯಲ್ಲಿ ಹೆಂಗಸು ಒಂದು ತರತಮ ಭಾವದ ಸ್ಥಿತಿಗೆ ಒಳಗಾಗಿದ್ದಾಳೆ. ಆ ತರತಮ ಭಾವದ ಸ್ಥಿತಿಯ ಅರಿವಿಗೆ ಒಳಗಾದಾಗ ಅದಕ್ಕೆ ಆಕೆಯ ಪ್ರತಿಕ್ರಿಯೆ ಹೇಗಿರಬೇಕು ಎಂಬುದು ದೊಡ್ಡ ಪ್ರಶ್ನೆಯಾಗಿ ನಮ್ಮೆದುರು ನಿಂತಿದೆ.

ಮೂರು ನಿಟ್ಟಿನಲ್ಲಿ ಚರ್ಚೆಯಾಗಬೇಕು. ಮೊದಲನೆಯದು ಭಾಷೆಯಲ್ಲಿ ಗಂಡುತನ ಮತ್ತು ಹೆಣ್ಣುತನ ಎನ್ನುವಂತಹ ವಿಭಜನೆಯನ್ನು ಕುರಿತ ಚರ್ಚೆ. ಚರ್ಚಿತವಾದ ಅಥವಾ ಮಂಡಿತವಾದ ನೆಲೆಯಲ್ಲಿ ಅವೆರಡರ ನಡುವೆ ತರತಮ ಭಾವ ಇದೆಯೋ ಇಲ್ಲವೋ ಎಂಬುದನ್ನು ಗಮನಿಸಬೇಕು. ಎರಡನೆಯದು ಸಾಮಾಜಿಕವಾಗಿ ಹೆಂಗಸು ಒಂದು ರಚನೆ ಆಗಿರುವುದರಿಂದ ಆಕೆ ಹೇಗೆ ದಮನಿತಳಾಗುತ್ತಾಳೆಂಬುದು ಮುಂದಿನ ಚರ್ಚೆಯ ವಿಷಯ. ತನಗೊಂದು ಸ್ಥಾನವನ್ನು ಪಡೆದುಕೊಳ್ಳುವ ನೆಲೆಯಲ್ಲಿ ಆಕೆ ಇರುವುದರಿಂದಾಗಿ ಭಾಷೆಯ ಬಳಕೆಯ ಮತ್ತು ಗ್ರಹಿಕೆಯ ನೆಲೆಯಲ್ಲಿ ಆಕೆ ಮೌನದ ನೆಲೆಗೆ ದಾಟುವ ಹಾಗೆ ಸಾಮಾಜಿಕ ರಚನೆಗಳು ಕೆಲಸ ಮಾಡುತ್ತಿರುವುದನ್ನು ಗುರುತಿಸುವುದು ಮುಂದಿನ ಹಂತ. ಮೂರನೆಯ ವಿಷಯವೆಂದರೆ ಈ ಅರಿವು ಉಂಟಾದಾಗ ಹೆಂಗಸು ಯಾವ ಹೆಜ್ಜೆಯನ್ನು ಇಡಬೇಕಾಗುತ್ತದೆ. ಪ್ರಜ್ಞೆಯ ದ್ವಂದ್ವದ ನೆಲೆಯಿಂದ ಆಕೆ ಹೇಗೆ ತನ್ನ ಮುಂದಿನ ದಾರಿಯನ್ನು ಕಂಡುಕೊಳ್ಳಬೇಕು ಎನ್ನುವುದು. ಈ ಎಲ್ಲವನ್ನು ನಾವು ಚರ್ಚೆ ಮಾಡಬೇಕಾಗಿದೆ. ಕನ್ನಡದಲ್ಲಿ ಈ ಚರ್ಚೆಗಳು ಕಳೆದ ನಲವತ್ತು ವರ್ಷಗಳಿಂದ ನಡೆಯುತ್ತಿವೆ. ಕನ್ನಡದಲ್ಲಿ ಮಾತ್ರವಲ್ಲ, ಪ್ರಪಂಚದಾದ್ಯಂತ ಇಂತಹುದೇ ಚರ್ಚೆಗಳು ನಡೆಯುತ್ತಿವೆ. ಇಲ್ಲಿ ಹಲವು ಎಳೆಗಳನ್ನು ಬಿಡಿಸಿಟ್ಟಿದ್ದೇನೆ. ಎಲ್ಲವನ್ನೂ ಇಲ್ಲಿ ಮಂಡಿಸುವುದು ಸಾಧ್ಯವಾಗಿಲ್ಲ.

### ಹೆಣ್ಣಿನ ಭಾಷಾ ಸಾಮರ್ಥ್ಯ ಕಳೆದುಹೋಗುವ ಬಗೆ

ಸಾಮಾನ್ಯವಾಗಿ ನಾವು ತಿಳಿದಿರುವಂತೆ ಭಾಷೆ ಎನ್ನುವುದು ಮನುಷ್ಯರಿಗೆ ಇರುವ ವಿಶೇಷ ಸಾಮರ್ಥ್ಯ ಹೀಗೆ ತಿಳಿದುಕೊಂಡರೂ ಈ ಸಾಮರ್ಥ್ಯ ಎಲ್ಲರಿಗೂ ಸಮ ಪ್ರಮಾಣದಲ್ಲಿ ಲಭ್ಯವಿಲ್ಲ. ಸಾಮಾಜಿಕವಾಗಿ ಆ ಸಾಮರ್ಥ್ಯ ಬಳಕೆಯಲ್ಲಿ ಕೆಲವು ತಾರತಮ್ಯಗಳನ್ನು ಆಚರಿಸಲಾಗುತ್ತದೆ. ಇದನ್ನು ಒಂದು ಪ್ರಮೇಯವಾಗಿ ನೀವು ತಿಳಿದುಕೊಂಡು, ಅದಕ್ಕೆ ಬೇಕಾದ ಪುರಾವೆಗಳನ್ನು ಬೇರೆ ಬೇರೆ ಸಂದರ್ಭಗಳಿಂದ ಗ್ರಹಿಬಹುದು. ಹೆಂಗಸರಿಗೆ ಸಂಬಂದಪಟ್ಟಂತೆ ಈ ತಾರತಮ್ಯ ಯಾವ ರೀತಿ ಇದೆ ಎಂಬುದನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನ ಪಡುತ್ತಿದ್ದೇವೆ. ಇದನ್ನು ನಾವೀಗ

ಎರಡು ನೆಲೆಗಳಲ್ಲಿ ಚರ್ಚೆ ಮಾಡಬೇಕಿದೆ.

1) ಭಾಷಾಕಲಿಕೆ

2) ಭಾಷಾಬಳಕೆ

ಇವೆರೆಡನ್ನೂ ಬೇರೆ ಬೇರೆಯಾಗಿಯೇ ಚರ್ಚೆ ಮಾಡೋಣ.

ಮೊದಲನೆಯದಾಗಿ ಭಾಷಾಕಲಿಕೆಯನ್ನು ಗಮನಿಸೋಣ. ಇದನ್ನು ಕುರಿತು ಎರಡು ಸಂಗತಿಗಳನ್ನು ನಾವು ಗುರುತಿಸಿಕೊಳ್ಳಬೇಕು. ಭಾಷೆಯನ್ನು ನಾವು ಎರಡು ರೀತಿಯಿಂದ ಕಲಿಯುತ್ತೇವೆ. 1) ಔಪಚಾರಿಕ 2) ಅನೌಪಚಾರಿಕ

ಔಪಚಾರಿಕ ಕಲಿಕೆ ಎಂದರೆ ಭಾಷೆಯನ್ನು ಕಲಿಯಬೇಕೆಂಬ ಉದ್ದೇಶದಿಂದಲೇ ಅದಕ್ಕೊಂದು ತರಬೇತಿಯನ್ನು ಪಡೆದುಕೊಳ್ಳುವುದು. ಏನು ಕಲಿಯುತ್ತೇವೆ ಎಂಬುದು ಕಲಿಯುವವರಿಗೆ ಗೊತ್ತಿರುತ್ತದೆ. ಮತ್ತು ಅಲ್ಲಿ ಕಲಿಸುವವರಿರುತ್ತಾರೆ. ಉದಾ: ಈಜುವುದನ್ನು ಕಲಿಯುವುದು. ಇದೊಂದು ಔಪಚಾರಿಕ ಕ್ರಿಯೆ. ಇದನ್ನು ಯಾರೂ ಇದ್ದಕ್ಕಿದ್ದಂತೆ ರಾತ್ರಿ ಬೆಳಗಾಗುವುದರಲ್ಲಿ ಕಲಿಯಲಾಗುವುದಿಲ್ಲ. ಅದಕ್ಕೊಂದು ನಿರಂತರ ಕಲಿಕೆ ಇರುತ್ತದೆ. ಕಲಿಸುವವರು ಮತ್ತು ಕಲಿಯುವವರಿದ್ದು, ಈ ಪ್ರಕ್ರಿಯೆ ಒಂದು ಹಂತದವರೆಗೆ ಸಾಗುತ್ತದೆ. ಇದಕ್ಕೊಂದು ಅವಧಿ, ವಿವಿಧ ಹಂತಗಳು ಮತ್ತು ಮಾದರಿಗಳು ಇರುತ್ತವೆ.

ಹೀಗೆ ಕಲಿಕೆ ಎನ್ನುವುದು ಒಂದು ನಿರ್ದಿಷ್ಟವಾದ ಮತ್ತು ಕಲಿಯುವವರೆಲ್ಲರಿಗೂ ಸಮಾನವಾದ ಒಂದು ಪ್ರಕ್ರಿಯೆ. ಎಲ್ಲರಿಗೂ ಸಮಾನವಾದದ್ದು ಏಕೆಂದರೆ, ಅದನ್ನು ಒಬ್ಬರು ಇನ್ನೊಬ್ಬರಿಗಿಂತ ಬೇರೆಯ ರೀತಿ ಕಲಿಯುವುದಿಲ್ಲ. ಅಂದರೆ ಅದು ಬಹುಮಟ್ಟಿಗೆ ಪ್ರಮಾಣಭೂತವಾದದ್ದು. ಇದನ್ನು ಔಪಚಾರಿಕ ಕಲಿಕೆ ಎನ್ನುತ್ತೇವೆ. ಹೀಗೆ ಭಾಷಾ ಕಲಿಕೆಯೂ ಕೂಡಾ ಔಪಚಾರಿಕವಾಗಿರಬಹುದು. ಇದನ್ನು ಅರ್ಥಮಾಡಿಕೊಳ್ಳಲು ಬಹಳ ಕಷ್ಟಪಡಬೇಕಿಲ್ಲ. ಏಕೆಂದರೆ ಶಿಕ್ಷಣ ಕ್ರಮದಲ್ಲಿ ವಿದ್ಯಾರ್ಥಿಗಳಿಗೆ ಒಂದನೇ ತರಗತಿಯಿಂದ ಭಾಷೆಯನ್ನು ಕಲಿಸುತ್ತಾರೆ. ಅದಕ್ಕೆ ತರಗತಿಗಳು, ಅಧ್ಯಾಪಕರು, ಪಠ್ಯಕ್ರಮ, ಪರೀಕ್ಷೆ, ಮೌಲ್ಯಮಾಪನ ಹೀಗೆ ಹಲವಾರು ಕ್ರಮಗಳಿರುತ್ತವೆ. ಇಲ್ಲಿ ಒಂದು ವಿಧಾನದಲ್ಲಿ ಒಂದು ಭಾಷೆಯನ್ನು ಕಲಿಸುವ ವ್ಯವಸ್ಥೆ ಇರುತ್ತದೆ. ಇನ್ನು ಭಾಷೆಯನ್ನು ಅನೌಪಚಾರಿಕವಾಗಿ ಕಲಿಯುವುದೆಂದರೆ ಅದಕ್ಕೊಂದು ವ್ಯವಸ್ಥಿತವಾದ ಕಲಿಕಾಪ್ರಕ್ರಿಯೆ ಇರುವುದಿಲ್ಲ. ಕಲಿಕೆ ತಂತಾನೇ ಸಂಭವಿಸುತ್ತಿರುತ್ತದೆ.

ಉದಾ: ಮಗುವಿನ ಭಾಷಾಕಲಿಕೆ. ಇಲ್ಲಿ ಸುತ್ತ–ಮುತ್ತಲಿನವರು ಹತ್ತಾರು ಕೆಲಸದ ನಡುವೆ ಮಾತನಾಡುತ್ತಾರೆ. ಮಗುವಿಗೆ ಭಾಷೆ ಕಲಿಸಬೇಕೆಂದೇನಿಲ್ಲ. ಹೀಗೆ ಸಹಜ ಮಾತುಗಾರಿಕೆಯಿಂದ ಮಗು ಭಾಷೆಯನ್ನು ಆಲಿಸಿ ಅರ್ಥ ಮಾಡಿಕೊಳ್ಳುತ್ತಲೇ ಭಾಷೆಯನ್ನು ತನ್ನ ಬೆಳವಣಿಗೆಯ ಹಲವಾರು ಚಟುವಟಿಕೆಗಳ ಜೊತೆ ಕಲಿಯುತ್ತದೆ. ಇದು ಅನೌಪಚಾರಿಕ ಕಲಿಕೆ. ಇದು ಔಪಚಾರಿಕ ಕಲಿಕೆಗಿಂತ ಭಿನ್ನವಾಗಿರುತ್ತದೆ. ಏಕೆಂದರೆ ಇದು ಕಲಿಸುವವರಿರದೇ,

ಕಲಿಯುವವರು ನಿರ್ದಿಷ್ಟ ಉದ್ದೇಶಕ್ಕೆಂದೇ ಕಲಿಯದೇ ಇರುವ ಸಂದರ್ಭ ಇಲ್ಲಿ ಪ್ರಮಾಣೀಕೃತ ಕಲಿಕಾ ಮಾದರಿಗಳಿರುವುದಿಲ್ಲ. ಪ್ರಕ್ರಿಯೆಗಳಿರುವುದಿಲ್ಲ.

ಭಾಷೆಗೂ ಔಪಚಾರಿಕ ಮತ್ತು ಅನೌಪಚಾರಿಕ ಎಂಬ ಎರಡೂ ನೆಲೆಗಳಿವೆ ಎನ್ನುವುದಾದರೆ, ಈಗ ನಮ್ಮ ಪ್ರಶ್ನೆ ಇರುವುದು ಭಾಷೆಯಲ್ಲಿರುವ ಈ ಲಿಂಗತಾರತಮ್ಯ ಎನ್ನುವುದು ಔಪಚಾರಿಕ ಕಲಿಕೆಯಲ್ಲಿ ಹೆಚ್ಚು ಕಾಣಸಿಗುತ್ತದೆಯೋ ಅಥವಾ ಅನೌಪಚಾರಿಕ ಕಲಿಕೆಯಲ್ಲಿ ಹೆಚ್ಚಿರುತ್ತದೆಯೋ ಎಂಬ ಬಗೆಗೆ. ವಿಭಿನ್ನ ಅಭಿಪ್ರಾಯಗಳೂ ಎರಡೂ ಕಡೆಗಳಲ್ಲೂ ಇರುವುದರಿಂದ ಒಟ್ಟಾರೆ ಲಿಂಗತಾರತಮ್ಯದ ನೆಲೆಗಳು ಎರಡೂ ಬಗೆಗಳಲ್ಲೂ ಇವೆ ಎನ್ನುವುದು ಹೆಚ್ಚು ಸೂಕ್ತ. ಔಪಚಾರಿಕ ಕಲಿಕೆಯಲ್ಲಿ ಈ ಲಿಂಗತಾರತಮ್ಯ ನೆಲೆಗಳನ್ನು ಗುರುತಿಸುವುದು ಸುಲಭ ಅಥವಾ ಈ ಕುರಿತು ಈಗಾಗಲೇ ಹಲವು ವಿಚಾರಗಳು ಮಂಡಿತವಾಗಿವೆ. ಕಲಿಸುತ್ತಿರುವ ಭಾಷೆ ಮತ್ತು ಕಲಿಸುತ್ತಿರುವ ಪ್ರಕ್ರಿಯೆ ಈ ಎರಡೂ ಪುರುಷ ಕೇಂದ್ರಿತವಾಗಿರುತ್ತವೆ. ಹೆಣ್ಣುಮಕ್ಕಳು ಭಾಷೆಯನ್ನು ಕಲಿಯುತ್ತಿದ್ದರೂ ಅವರು ಪುರುಷ ಕೇಂದ್ರಿತ ನೆಲೆಗಳಲ್ಲಿ ಕಲಿಯುತ್ತಿರುತ್ತಾರೆ. ಹೀಗೆ ತಮ್ಮದಲ್ಲದ ಮತ್ತು ತಮಗೆ ಹೆಚ್ಚು ಉಪಯುಕ್ತವಲ್ಲದ ಭಾಷೆಯನ್ನು ಕಲಿಯುತ್ತಾ, ಕೊನೆಗೆ ಯಾವುದನ್ನು ತಾವು ಬಳಸಲಾಗುವುದಿಲ್ಲವೋ ಅಥವಾ ಬಳಸಿದರೆ ಅದು ತಮ್ಮ ನಿಜವಾದ ಅಭಿವ್ಯಕ್ತಿ ಆಗುವುದಿಲ್ಲವೋ ಆ ಭಾಷಾ ಪ್ರಭೇದವನ್ನು ಅವರು ಪಡೆದುಕೊಳ್ಳುತ್ತಿರುತ್ತಾರೆ. ಇದಕ್ಕೇನಾದರೂ ಪುರಾವೆಗಳಿವೆಯೋ? ಇದನ್ನು ಎರಡು ರೀತಿಗಳಲ್ಲಿ ಚರ್ಚಿಸಬಹುದು.

1) ಕಲಿಕಾ ಪ್ರಕ್ರಿಯೆಯು ಪುರುಷ ಕೇಂದ್ರಿತವಾಗಿರುವುದನ್ನು ಗುರುತಿಸುವುದು.

2) ಪುರುಷ ಕೇಂದ್ರಿತವಾದ ಭಾಷಾ ಪ್ರಭೇದವಿದೆಯೆಂಬುದನ್ನು ಗುರುತಿಸುವುದು.

ಪುರುಷ ಕೇಂದ್ರೀತ ಕಲಿಕಾ ಪ್ರಕ್ರಿಯೆ ಹೀಗಿದೆ. ಎರಡನೆಯದು ಸುಲಭ. ಮೊದಲನೆಯದಕ್ಕೆ ಸಂಬಂದಪಟ್ಟಂತೆ ಪಠ್ಯ, ಪಠ್ಯಕ್ರಮ ಇದರಲ್ಲಿ ಪುರುಷ ಕೇಂದ್ರಿತ ನೆಲೆಗಳಿರುತ್ತವೆ. ಇದಕ್ಕೆ ಬೇಕಾದಷ್ಟು ಉದಾಹರಣೆಗಳಿವೆ. ಆದರೆ ಕಲಿಕಾ ಪ್ರಕ್ರಿಯೆ, ಕಲಿಸುವ ವಿಧಾನದಲ್ಲಿ ಏನಾದರೂ ಪುರುಷ ಪ್ರಧಾನವಾದ ಮಾದರಿಗಳಿವೆಯೇ? ಇದೆ ಎಂದು ಅನ್ನಿಸಿದೆಯೇ? ಪಠ್ಯಗಳಲ್ಲಿರುವ ಲಿಂಗತಾರತಮ್ಯಕ್ಕೆ ಸಂಬಂಧಪಟ್ಟಂತೆ ಕನ್ನಡದಲ್ಲಿ ಸಾಕಷ್ಟು ಲೇಖನಗಳು ಬಂದಿವೆ. ಅದನ್ನು ನೀವು ಗಮನಿಸಿದ್ದೀರಿ. ಪಠ್ಯಗಳಲ್ಲಿ ಎದ್ದುಕಾಣುವ ಹೆಣ್ಣು ಮತ್ತು ಗಂಡುಗಳ ಪಾತ್ರ ಸ್ಥಿರೀಕರಣದ ಬಗೆಗೆ ಸಾಕಷ್ಟು ಚರ್ಚೆಗಳು ನಡೆದಿವೆ. ಆದರೆ ಈ ಲಿಂಗತಾರತಮ್ಯದ ಪಠ್ಯವನ್ನು ಕಲಿಸುವ ರೀತಿಯಲ್ಲಿ ಏನಾದರೂ ಲಿಂಗತಾರತಮ್ಯ ಬೆಳೆಸುವ ವಿಧಾನಗಳಿವೆಯೇ? ಅಂದರೆ ಬೋಧನೆಯ ವಿಧಾನಗಳು ಹುಡುಗರಿಗೆ ಹೆಚ್ಚು ಅನುಕೂಲಕರವಾಗಿವೆಯೇ? ಇವೇ ಬೋಧನೆಯ ವಿಧಾನಗಳು ಹುಡುಗಿಯರಿಗೆ ಅನನುಕೂಲಕರವೇ? ಅವರ ಕಲಿಕೆಗೆ ಅಡ್ಡಿಯನ್ನು ತಡೆಗಳನ್ನು ಉಂಟು ಮಾಡುತ್ತವೆ ಎನಿಸಿದೆಯೇ? ತರಗತಿಯಲ್ಲಿ ವಿದ್ಯಾರ್ಥಿಗಳನ್ನು ಪಾಠ ಕೇಳಲು ಸಿದ್ಧಗೊಳಿಸುವಾಗಲೇ ಹುಡುಗರಿಗೆ ಹೆಚ್ಚು ಗಮನ ನೀಡಲಾಗುತ್ತದೆ. ಮತ್ತು ಹುಡುಗಿಯರನ್ನು ಅಲಕ್ಷ್ಯಕ್ಕೆ ಗುರಿಮಾಡಲಾಗುತ್ತದೆಂದು ಹೇಳಲಾಗಿದೆ. ಆದರೆ

ಯಾರೂ ಕೂಡಾ ಇದರ ಬಗೆಗೆ ಹೆಚ್ಚಿನ ಸಂಶೋಧನೆ ಮಾಡಿ ಇದು ನಿಜವೆಂದು ತೋರಿಸಿಕೊಟ್ಟಿಲ್ಲ.

ಶಿಕ್ಷಕ ತರಬೇತಿಯಲ್ಲಿ ಬೋಧನಾ ವಿಧಾನ, ಬೋಧನೆಯ ಸಿದ್ಧಾಂತ ಮತ್ತು ಕಲಿಕೆಯ ತಾತ್ವಿಕತೆಗಳನ್ನು ಕುರಿತು ತಿಳಿಸಿಕೊಡುತ್ತಾರೆ. ಅವೆಲ್ಲವೂ ಹೆಚ್ಚುಮಟ್ಟಿಗೆ ತಾರ್ಕಿಕತೆಯನ್ನು ಅವಲಂಬಿಸಿರುತ್ತದೆ. ಅಂದರೆ ಅದೊಂದು ಆಲೋಚನಾವಿಧಾನ. ಬೋಧನೆಯ ವಿಧಾನದ ಹಿಂದಿನ ತರ್ಕ ಹುಡುಗರಿಗೆ ಹೆಚ್ಚು ಅನುಕೂಲಕರವಾಗಿದೆ. ಏಕೆಂದರೆ ಆ ತಾರ್ಕಿಕತೆ ಗಂಡು ಆಲೋಚನೆ ಮಾಡುವ ಸಾಮಾನ್ಯ ವಿಧಾನಕ್ಕೆ ಹೆಚ್ಚು ಹತ್ತಿರವಾಗಿದೆ. ಆದರೆ ಹಾಗೆಂದು ಹೆಣ್ಣು ಮಕ್ಕಳು ಲೋಕವನ್ನು ಗ್ರಹಿಸುವ, ಅಭಿವ್ಯಕ್ತಿಸುವ ಮತ್ತು ಆಲೋಚನೆ ಮಾಡುವುದನ್ನು ಅತಾರ್ತಿಕ ಎಂದು ಹೇಳಲಾಗುವುದಿಲ್ಲ. ಅದು ತರ್ಕದ ಇನ್ನೊಂದು ಬಗೆ. ಒಂದು ಬಿಡಿ ಬಿಡಿಯಾಗಿ ಗ್ರಹಿಸುವ ವಿಧಾನ, ಇದು ಗಂಡಸಿನ ಆಲೋಚನಾ ವಿಧಾನ. ಇಡಿಯಾಗಿ ಗ್ರಹಿಸುವ ವಿಧಾನ, ಹೆಂಗಸಿನ ಆಲೋಚನಾ ವಿಧಾನವಾಗಿದೆ. ಹೀಗೆ ಇಬ್ಬರ ಆಲೋಚನೆ ಮತ್ತು ಲೋಕಗ್ರಹಿಕೆಯ ವಿಧಾನಗಳಲ್ಲಿ ವ್ಯತ್ಯಾಸಗಳಿವೆ. ಈ ಸಂಗತಿಯನ್ನು ಆಧರಿಸಿದ ಅಧ್ಯಯನಗಳು ಶಿಕ್ಷಣದ ವಿಧಾನಗಳು ಹೆಚ್ಚು ಗಂಡಸರಿಗೆ ಉಪಯುಕ್ತವಾಗಿರುವುದನ್ನು ತೋರಿಸಿಕೊಟ್ಟಿವೆ. ಈ ಬಗೆಯ ಬೋಧನಾ ವಿಧಾನಗಳು ಮತ್ತು ಪಠ್ಯಕ್ರಮಗಳೇ ಶಿಕ್ಷಣ ಕ್ರಮದಲ್ಲಿ ಜಾರಿಯಲ್ಲಿವೆ. ಈ ವಿಧಾನಗಳು ಹುಡುಗಿಯರಿಗೆ ಹೆಚ್ಚು ಅನುಕೂಲಕರವಾಗಿಲ್ಲ. ಆದರೂ ಔಪಚಾರಿಕ ಭಾಷಾಕಲಿಕೆಯಲ್ಲಿ ಹೆಚ್ಚು ಮುಂದಿರುವುದು ಹುಡುಗಿಯರೇ. ಭಾಷಾಸಾಮರ್ಥ್ಯದ ನಾಲ್ಕು ಕೌಶಲಗಳಲ್ಲಿ ಅಂದರೆ– ಮಾತನಾಡುವುದು, ಓದುವುದು, ಬರೆಯುವುದು, ಕೇಳಿ ಅರ್ಥ ಮಾಡಿಕೊಳ್ಳುವುದರಲ್ಲಿ– ಹುಡುಗಿಯರೇ ಮುಂದಿರುವುದು ವಿಚಿತ್ರದ ಸಂಗತಿ. ಆದ್ದರಿಂದ ಬೋಧನೆಯ ಉದ್ದೇಶ ಏನೇ ಇದ್ದರೂ ಅದರ ಪರಿಣಾಮ ಬೇರೆಯಾಗಬಹುದು. ನಾವು ಅಂದುಕೊಂಡ ಉದ್ದೇಶ ನೆರವೇರದೇ ಹೋಗಬಹುದು. ಅದಕ್ಕೆ ವಿರುದ್ಧವಾದ ಪರಿಣಾಮಗಳು ಉಂಟಾಗಬಹುದು. ಉದಾ: ಬ್ರಿಟಿಷರು ಈ ದೇಶಕ್ಕೆ ಇಂಗ್ಲಿಶ್ ಕಲಿಕೆಯನ್ನು ತಂದು ಇಂಗ್ಲಿಶ್ ಕಲಿಸಿದರು. ಈ ದೇಶವನ್ನು ಹೆಚ್ಚು ಗುಲಾಮಗಿರಿಯಲ್ಲಿಡಬೇಕೆಂಬ ಕಾರಣದಿಂದ ಈ ಕ್ರಮಕ್ಕೆ ಅವರು ಮುಂದಾದರು. ಆದರೆ ಇಂಗ್ಲಿಶ್ ಎಂಬ ಉಪಕರಣವೇ ಅವರ ವಿರುದ್ಧ ಬಳಸುವ ಅಸ್ತ್ರವಾಯ್ತು. ಶೇಕ್ಸ್‌ಪಿಯರ್–ನ ಸುಪ್ರಸಿದ್ಧ ನಾಟಕ ಟೆಂಪೆಸ್ಟ್ ನಲ್ಲಿ (ಕನ್ನಡಕ್ಕೆ 'ಚಂಡಮಾರುತ' ವೆಂದು ಇದನ್ನು ಎ.ಎನ್.ಮೂರ್ತಿರಾಯರು ಅನುವಾದ ಮಾಡಿದ್ದಾರೆ. ಕುವೆಂಪುರವರು 'ಬಿರುಗಾಳಿ'ಯಲ್ಲಿ ಅದನ್ನು ಕನ್ನಡದ ಪರಿಸರಕ್ಕೆ ಹೊಂದಿಸಿಕೊಂಡಿದ್ದಾರೆ) ಆ ನಾಟಕದಲ್ಲಿ ಪ್ರಾಸ್ಪರೊ ಎಂಬ ಪದಚ್ಯುತ ರಾಜನ ಪಾತ್ರವಿದೆ. ಅವನು ಮಂತ್ರಶಕ್ತಿಯನ್ನು ಹೊಂದಿದ್ದ. ದ್ವೀಪವೊಂದಕ್ಕೆ ಬಂದು ಅಲ್ಲಿನ ಎಲ್ಲಾ ಶಕ್ತಿಗಳನ್ನೂ ವಶಮಾಡಿಕೊಳ್ಳುವನು. ಒಂದು ಅತಿಮಾನುಷ ಶಕ್ತಿ ಏರಿಯಲ್, ಹಾಗೆಯೇ ಅಮಾನುಷ(ರಾಕ್ಷಸ) ಶಕ್ತಿ ಕ್ಯಾಲಿಬನ್. ಕ್ಯಾಲಿಬನ್‌ಗೆ ಮಾತುಬಾರದಿರುವಾಗ ಅವನಿಗೆ ಇವನು ಭಾಷೆ ಕಲಿಸುವನು. ಭಾಷೆ ಕಲಿಸಿದ ನಂತರ ಕ್ಯಾಲಿಬನ್ ಪ್ರಾಸ್ಫರೊ ವಿರುದ್ಧ ತಿರುಗಿ ಬೀಳುತ್ತಾನೆ. ನೀನು ಯಾವ ಭಾಷೆಯನ್ನು ಕಲಿಸಿ ನನ್ನನ್ನು ಹಿಡಿತದಲ್ಲಿಟ್ಟುಕೊಳ್ಳಲು

ಪ್ರಯತ್ನಿಸಿದೆಯೋ ಅದೇ ಭಾಷೆಯನ್ನು ಬಳಸಿ ನಿನ್ನ ವಿರುದ್ಧ ಬಂಡಾಯ ಹೂಡುವೆನೆಂದು ಪ್ರಾಸ್ಪರೊಗೆ ಹೇಳುತ್ತಾನೆ. ಆದ್ದರಿಂದ ಅಧೀನ ಎಂಬ ಕಾರಣಕ್ಕೆ ಭಾಷೆ ಕಲಿಸಿದಾಗ, ಕಲಿತವರಿಗೆ ಆ ಭಾಷೆ ಹತ್ತಿರವಾಗಿ ಬಿಡುತ್ತದೆ. ಆದ್ದರಿಂದ ಕಲಿಸುವ ಪ್ರಕ್ರಿಯೆಯ ಉದ್ದೇಶ ಏನೇ ಆದರೂ ಪರಿಣಾಮ ಇದೇ ಎಂದು ಹೇಳಲಾಗುವುದಿಲ್ಲ. ಅನೇಕ ವೇಳೆ ಅದು ಬೇರೆಯಾಗಿರಬಹುದು.

ಈ ಮೇಲೆ ವಿವರಿಸಿದಂತೆ, ಉದಾಹರಿಸಿದಂತೆ ಹುಡುಗಿಯರಿಗೆ ಉಪಯುಕ್ತವಲ್ಲದ ಕಲಿಕಾ ಮಾದರಿಗಳಿದ್ದಾಗ್ಯೂ, ಅವರು ಗಂಡಿಗಿಂತ ಹೆಚ್ಚು ಭಾಷಾ ಸಾಮರ್ಥ್ಯ ಪಡೆದಿರುತ್ತಾರೆ. ಇದಕ್ಕೆ ಸಾಕಷ್ಟು ಪುರಾವೆಗಳಿವೆ. ಉದಾ: ತರಗತಿಗಳಲ್ಲಿನ ಅವರ ಶೈಕ್ಷಣಿಕ ಸಾಧನೆಗಳು. ಸಾಂಪ್ರದಾಯಿಕ ಶಿಕ್ಷಣ ಕ್ರಮದಲ್ಲಿ ಸಾಧನೆಯನ್ನು ಅಳೆಯುವ ಸಾಧನವೆಂದರೆ ಅವರ ಭಾಷಾಭಿವ್ಯಕ್ತಿ ಸಾಮರ್ಥ್ಯ. ಯಾವುದೇ ವಿಷಯದ ಬಗ್ಗೆ ಪರೀಕ್ಷೆ ಬರೆದರೂ ಭಾಷೆಯನ್ನು ಬಳಸುವುದು ಅನಿವಾರ್ಯ. ಹಾಗಾಗಿ ಹೆಚ್ಚು ಅಭಿವ್ಯಕ್ತಿ ಸಾಮರ್ಥ್ಯ ಹೊಂದಿರುವ ಹುಡುಗಿಯರು ಚೆನ್ನಾಗಿ ಬರೆದು ಶೈಕ್ಷಣಿಕವಾಗಿ ಸಮರ್ಥರೆನಿಸುವರು. ಕೆಳಹಂತದ ತರಗತಿಗಳಲ್ಲಿ ಹೆಚ್ಚು ಶೈಕ್ಷಣಿಕ ಸಾಧನೆ ಮಾಡುವವರು ಹುಡುಗಿಯರೇ ಆಗಿರುತ್ತಾರೆ. ಅವರೇ ಹೆಚ್ಚು ಅಂಕ ಪಡೆದು ಪಾಸಾಗುವರು. ಇದನ್ನು ಸಮರ್ಥಿಸುವ ಮಾಹಿತಿ ಸಾಕಷ್ಟಿದೆ. ಕಲಿಕಾ ಪ್ರಕ್ರಿಯೆಗಳು ಅವರನ್ನು ವೈರುಧ್ಯದ ಸ್ಥಿತಿಗೆ ಒಳಗು ಮಾಡಿದರೂ ಅವರು ಸೂಕ್ತ ಸಾಧನೆ ತೋರಿಸುತ್ತಾರೆ. ಹೀಗೆ ಪಡೆದುಕೊಂಡ ಸಾಮರ್ಥ್ಯವನ್ನು ಅವರು ಬೆಳೆಯುತ್ತಾ ಹೋದಂತೆಲ್ಲಾ ಕಳೆದುಕೊಳ್ಳುತ್ತಾ ಹೋಗುತ್ತಾರೆ. ಹುಡುಗಿಯರು ನಿಧಾನವಾಗಿ ತಮ್ಮ ಸಾಧನೆಯ ಮೊನಚನ್ನು ಕಳೆದುಕೊಂಡು ನಿರಂತರ ಸಾಧನೆ ಮಾಡಲು ಸಾಧ್ಯವಿಲ್ಲದವರಂತಾಗುತ್ತಾರೆ. ತಮ್ಮ ಸಾಮರ್ಥ್ಯವನ್ನು ಸಾಮಾಜಿಕವಾಗಿ ಉಪಯುಕ್ತ ರೀತಿಯಲ್ಲಿ ಅವರು ಬಳಸಲಾಗುವುದಿಲ್ಲ.

ಈಗ ಎರಡನೇ ಹಂತಕ್ಕೆ ಬರೋಣ. ಅನೌಪಚಾರಿಕ ಕಲಿಕೆಯ ಲಕ್ಷಣಗಳನ್ನು ಈಗಾಗಲೇ ನಾವು ಚರ್ಚೆ ಮಾಡಿದ್ದೇವೆ. ಇದು ತಂತಾನೇ ಸಂಭವಿಸುತ್ತಿರುತ್ತದೆ. ಇಲ್ಲಿನ ತಾರತಮ್ಯಗಳನ್ನು ಅಳೆಯಲು ಮಾನದಂಡಗಳಿಲ್ಲ. ಏಕೆಂದರೆ ಪ್ರಮಾಣೀಕೃತ ಕಲಿಕಾ ಮಾದರಿಗಳಿಲ್ಲದಿರುವುದರಿಂದ ತಾರತಮ್ಯ ಗುರುತಿಸುವುದು ಸಮರ್ಪಕವಾಗಿ ಸಾಧ್ಯವಿಲ್ಲ. ಅಲ್ಲದೇ ಇದು ಸಂದರ್ಭಕ್ಕೆ, ಸನ್ನಿವೇಶಕ್ಕೆ ತಕ್ಕಂತೆ ಭಿನ್ನವಾಗಿರಬಹುದು. ಏಕೆಂದರೆ ಕೆಲವು ಕುಟುಂಬಗಳಲ್ಲಿ ಹತ್ತಾರು ಜನ ಮಾತನಾಡುವುದನ್ನು ಮಗು ಆಲಿಸಿದರೆ, ಇನ್ನೂ ಕೆಲವು ಕುಟುಂಬಗಳಲ್ಲಿ ಒಬ್ಬರೇ ಮಾತನಾಡುವುದನ್ನು ಕೇಳಬಹುದು. ಅನಾಥ ಮಕ್ಕಳೊಂದಿಗೆ ದಿವಸಗಟ್ಟಲೇ ಯಾರೂ ಮಾತನಾಡದೇ ಇರಬಹುದು. ಅಥವಾ ಕೆಲವು ನಿಮಿಷ ಮಾತ್ರ ಮಾತನಾಡಬಹುದು. ಹಾಗಾಗಿ ಇದಕ್ಕೆ ಸಮರೂಪ ಎಂಬುದಿಲ್ಲ. ಒಂದು ಭಾಷಿಕ ಸಮುದಾಯವನ್ನು ತೆಗೆದುಕೊಂಡರೆ ಆ ಗುಂಪಿನ ಎಲ್ಲಾ ಮಕ್ಕಳಿಗೂ ಅನೌಪಚಾರಿಕ ಭಾಷಾಕಲಿಕೆಯ ಪರಿಸರ ಒಂದೇ ರೀತಿ ಇರುವುದಿಲ್ಲ. ಆದ್ದರಿಂದ ಗಂಡು–ಹೆಣ್ಣುಗಳ ಭಾಷಾಕಲಿಕೆಯಲ್ಲಿರುವ ತಾರತಮ್ಯವನ್ನು ಖಚಿತವಾಗಿ ವಿವರಿಸಲು ಬರುವುದಿಲ್ಲ.

ಹೆಣ್ಣುಮಕ್ಕಳು ಮನೆಯಲ್ಲಿ ಹೆಚ್ಚು ಜೋರಾಗಿ ಮಾತನಾಡದಂತೆ ತಡೆಯಲಾಗುತ್ತದೆ. ಅದು ಬಳಕೆಗೆ ಸಂಬಂಧಿಸಿದ ಪ್ರಶ್ನೆ, ಕಲಿಕೆಗೆ ಸಂಬಂಧಿಸಿದಂತೆ ಇದು ಅನ್ವಯವಾಗುವುದಿಲ್ಲ. ಈ ಇಡೀ ಪ್ರಶ್ನೆಯನ್ನು ಸದ್ಯ ಅಮಾನತಿನಲ್ಲಿಡುತ್ತೇನೆ. ಆದರೂ ಕಲಿಕೆಗೆ ಸಂಬಂದಿಸಿದಂತೆ ನಿಯಂತ್ರಣಗಳನ್ನು ಹುಡುಗಿಯರು ಅನುಭವಿಸುತ್ತಾರೆಂಬುದು ನಿಜ. ಬಳಕೆಗೆ ಸಂಬಂದಿಸಿದಂತೆ ಎರಡು ನೆಲೆಗಳನ್ನು ಗುರುತಿಸಬಹುದು. ಒಂದು ಭಾಷೆ ಎಂಬ ಸಾಮರ್ಥ್ಯವನ್ನು ಪಡೆದುಕೊಳ್ಳುವುದು. ಇನ್ನೊಂದು ಭಾಷೆ ಎಂಬ ಸಾಮರ್ಥ್ಯವನ್ನು ಬಳಸುವುದು. ಸಾಮರ್ಥ್ಯ ಇದೆ ಎಂದ ಮಾತ್ರಕ್ಕೆ ಬಳಸುತ್ತೇವೆಂದಲ್ಲ. ಬಳಸಬೇಕಾದ ಒತ್ತಾಯ ಬಾರದಿದ್ದಾಗ ಅದು ಹಾಗೇ ಬಳಕೆಯಾಗದೆ ಉಳಿದುಬಿಡಬಹುದು. ಉದಾ: ಸಂಗೀತ ನನಗೆ ಗೊತ್ತು ಎನ್ನುವುದಾದರೂ ಅದನ್ನು ಇತರರು ನಂಬಬೇಕಾದರೆ ನಾವು ಹಾಡಬೇಕು. ಹಾಗಾದಾಗ ಮಾತ್ರ ನಮ್ಮ ಸಾಮರ್ಥ್ಯ ಗೊತ್ತಾಗುತ್ತದೆ. ಇಲ್ಲದಿದ್ದರೆ ಗೊತ್ತಾಗುವುದಿಲ್ಲ. ನನಗೆ ಸಂಗೀತ ಗೊತ್ತು. ಆದರೆ ಹಾಡುವುದಿಲ್ಲ ಎಂದರೆ ಸಾಮರ್ಥ್ಯ ಇದೆಯೋ, ಇಲ್ಲವೋ ಎಂಬುದು ತಿಳಿಯುವುದಿಲ್ಲ. ಆದ್ದರಿಂದ ಸಾಮರ್ಥ್ಯದ ಸಾಬೀತಿಗೆ ಬಳಕೆ ಎಂಬುದು ಅತ್ಯಗತ್ಯವಾದ ಪರೀಕ್ಷೆ. ಸಾಮರ್ಥ್ಯ ಇದೆ ಎಂಬುದು ಬಳಕೆಯ ಮುಖಾಂತರ ಗೊತ್ತಾಗುತ್ತದೆ. ಸಾಮರ್ಥ್ಯ ಪಡೆದುಕೊಳ್ಳುವುದು ಮತ್ತು ಬಳಸುವುದು ಎರಡೂ ಮುಖ್ಯ. ಬಳಕೆ ಮತ್ತು ಸಾಮರ್ಥ್ಯ ಇವೆರಡೂ ಪೂರಕವಾಗಿರುತ್ತವೆ. ಬಳಸುವವರ ಸಾಮರ್ಥ್ಯವನ್ನು ಪರೀಕ್ಷಿಸಿದಂತೆಲ್ಲಾ ಅವರ ಸಾಮರ್ಥ್ಯದ ನಿಜರೂಪ ಗೊತ್ತಾಗುತ್ತದೆ. ಕಲಿಕೆ ಮತ್ತು ಬಳಕೆಯ ನಡುವೆ ಒಂದು ಬಗೆಯ ಅಂತರ್ಸಂಬಂಧವಿದೆ.

ಬಳಕೆಗೂ ಔಪಚಾರಿಕ ಮತ್ತು ಅನೌಪಚಾರಿಕ ನೆಲೆಗಳಿರುತ್ತವೆ. ಔಪಚಾರಿಕ ಬಳಕೆ ಎಂದರೆ ಈಗ ನಾನು ಮಾತನಾಡುತ್ತಿರುವ ಬಗೆ. ಔಪಚಾರಿಕ ಕಲಿಕೆಯಂತಲೇ ಇಲ್ಲೂ ಅದೇ ನಿಯಮಗಳಿರುತ್ತವೆ. ಕನ್ನಡ ಮಾತನಾಡಿದರೂ ಇದು ತರಗತಿ ಭಾಷೆ. ಇಲ್ಲಿ ಎಲ್ಲವೂ ನಿರ್ಧರಿತವಾಗಿರುತ್ತದೆ. ಇಲ್ಲಿ ಹೇಳುವವರಿಗೂ ಮತ್ತು ಕೇಳುವವರಿಗೂ ಒಂದು ಬಗೆಯ ಸಂಬಂಧವಿದ್ದು, ನಿರ್ದಿಷ್ಟ ಸಂದರ್ಭಬದ್ಧ ನಿಯಮಗಳಿರುತ್ತವೆ. ಯಾವಾಗ ಯಾರು ಏಕೆ ಇತ್ಯಾದಿ ಈ ಎಲ್ಲವೂ ಸಾಮಾಜಿಕವಾಗಿ ನಿರ್ಧರಿತವಾಗಿರುತ್ತವೆ. ಒಬ್ಬ ರಾಜಕಾರಣಿ ಭಾಷಣ ಮಾಡುತ್ತಿದ್ದರೆ, ಅಥವಾ ಸರ್ಕಾರ ಒಂದು ಆದೇಶ ಹೊರಡಿಸಿದರೆ ಅಲ್ಲೆಲ್ಲಾ ಭಾಷೆ ಗೊತ್ತಾದ ಬಳಕೆಯ ನಿಯಮಗಳಿಗನುಗುಣವಾಗಿರುತ್ತದೆ. ಆ ಭಾಷೆಯನ್ನು ಯಾರು, ಯಾರಿಗಾಗಿ, ಯಾವ ಉದ್ದೇಶಕ್ಕಾಗಿ ಬಳಸಿರುತ್ತಾರೆ ಎಂಬುದು ಖಚಿತವಾಗಿರುತ್ತದೆ. ಉದಾ: ವೃತ್ತಪತ್ರಿಕೆ ಭಾಷೆ. ಯಾರು, ಯಾರಿಗಾಗಿ ಹೇಳುತ್ತಾರೆಂಬುದು ನಿಗದಿತ. ಹಾಗೆಯೇ. ಅರ್ಥಮಾಡಿಕೊಳ್ಳಲು ನಿಯಮಗಳಿವೆ. ಅದಕ್ಕನುಗುಣವಾಗಿ ಓದುತ್ತೇವೆ, ಅರ್ಥಮಾಡಿಕೊಳ್ಳುತ್ತೇವೆ. ಅದನ್ನು ನಮಗೆ ಯಾರೂ ಹೇಳಿಕೊಟ್ಟಿರುವುದಿಲ್ಲ. ಅನೌಪಚಾರಿಕ ಬಳಕೆಯ ವಲಯಗಳಲ್ಲಿ ಹಾಗಲ್ಲ. ಅಲ್ಲಿ ಯಾರು, ಯಾರಿಗೆ, ಏಕೆ, ಹೇಗೆ ಇತ್ಯಾದಿಗಳು ನಿರ್ದಿಷ್ಟವಾಗಿರದೇ, ಹರಟೆ ರೂಪದಲ್ಲಿರುತ್ತವೆ. ಯಾವುದೇ ವಿಚಾರವಿರಬಹುದು, ಹತ್ತಾರು ಸಂದರ್ಭಗಳಿರುತ್ತವೆ. ಇವುಗಳು ವ್ಯಾಖ್ಯಾನ ಆಗಿರುವುದಿಲ್ಲ.

ಸಾಮಾಜಿಕವಾಗಿ ಪಡೆದುಕೊಂಡ ಭಾಷಾಸಾಮರ್ಥ್ಯದ ಬಳಕೆಯಲ್ಲಿ ಔಪಚಾರಿಕ ಮತ್ತು ಅನೌಪಚಾರಿಕ ವಲಯಗಳೆರಡರಲ್ಲಿ ಲಿಂಗತಾರತಮ್ಯದ ನೆಲೆಗಳಿರುತ್ತವೆಯೇ? ಕಲಿಕೆಗೆ ಸಂಬಂದಪಟ್ಟಂತೆ ಅಂಶಗಳು ಬಳಕೆಗೂ ಅನ್ವಯಿಸುತ್ತವೆಯೋ? ಬಳಕೆಯ ಪ್ರಶ್ನೆಗೆ ಸಂಬಂಧಿಸಿದಂತೆ, ನಾಲ್ಕು ಕೌಶಲ್ಯಗಳನ್ನು ಬಳಸುವ ಸಂದರ್ಭ ಬಂದಾಗ ಹೆಂಗಸಿಗೆ ಔಪಚಾರಿಕ ಮತ್ತು ಅನೌಪಚಾರಿಕ ವಲಯಗಳಲ್ಲಿ ತಾರತಮ್ಯ ಇರುತ್ತದೆಯೇ ? ಇದು ಬಹಳ ಸಂಕೀರ್ಣವಾದ ಪ್ರಶ್ನೆ. ಔಪಚಾರಿಕ, ಅನೌಪಚಾರಿಕ ವಲಯಗಳಲ್ಲಿ ಭಾಷಾಬಳಕೆಗೆ ಸಂಬಂಧಪಟ್ಟ ತರ–ತಮ ಭಾವ ಹೇಗಿರುತ್ತದೆ? ತಾರತಮ್ಯ ಹೆಚ್ಚಿರುತ್ತದೆ ಎನ್ನುವುದಾದರೂ ಹೇಗೆ? ಮನೆಯಲ್ಲಿ ದೊಡ್ಡವರ ಎದುರು ಮಾತನಾಡಬಾರದೆಂಬ ನಿಯಂತ್ರಣ ಗಂಡು ಮತ್ತು ಹೆಣ್ಣು ಮಕ್ಕಳಿಗೂ ಇದ್ದರೂ ಅದನ್ನು ಹೆಣ್ಣು ಉಲ್ಲಂಘಿಸುವುದಿಲ್ಲ. ಇದು ಬೇರೆ ಪ್ರಶ್ನೆ. ಆದರೆ ಅನೌಪಚಾರಿಕ ವ್ಯವಸ್ಥೆಯಲ್ಲಿ ಕೆಲವು ನಿಯಂತ್ರಣಗಳಿರುತ್ತವೆ. ಈ ಬಗೆಯ ನಿಯಂತ್ರಣಗಳನ್ನು ಸಮಾಜ ಹೊಂದಿದೆ. ಹೌದೇ ಅಥವಾ ಇಲ್ಲವೇ? ಒತ್ತಡ ಇರುತ್ತದೆ ಎಂಬ ಭಾವನೆ ಇದೆ. ಇದು ಬಳಕೆಯನ್ನು ನಿಯಂತ್ರಿಸುವಂತದ್ದು. ಬಳಕೆಯ ಸ್ವರೂಪವನ್ನು ಯಾವುದಾದರೂ ನಿಯಂತ್ರಿಸುತ್ತದೆಯೇ? ಬಳಸದೇ ಇರುವುದು ಬೇರೆ. ಆದರೆ ಬಳಸಿದರೆ ಹೀಗೆ ಬಳಸಬೇಕೆಂಬ ನಿಯಂತ್ರಣಗಳಿವೆಯೇ? ನಿರ್ದೇಶನಗಳಿವೆಯೇ? ಮೃದುವಾದ ವಾಕ್ಯಗಳನ್ನೇ ಬಳಸಬೇಕು. ವಿನಯದಿಂದ ಮಾತನಾಡಬೇಕು. ಆದೇಶ ಮಾಡಬಾರದು ಎಂದು ಹೇಳಲಾಗುತ್ತದೆ. ಇದಕ್ಕೆ ಹೆಣ್ಣು ಮಕ್ಕಳು ಯಾರಾದರೂ ನಿಮ್ಮ ಅನುಭವದ ಮೂಲಕ ಉದಾಹರಣೆಗಳನ್ನು ಗಮನಿಸಿಕೊಳ್ಳಿ.

ಅನೌಪಚಾರಿಕ ವಲಯದಲ್ಲಿ ಹೆಂಗಸರಿಗೆ ಭಾಷಾಬಳಕೆಯ ಮೇಲೆ ಎರಡು ಬಗೆಯ ನಿಯಂತ್ರಣಗಳಿವೆ. 1) ಭಾಷೆಯನ್ನು ಬಳಸದೇ ಇರುವುದು. 2) ಬಳಸಿದರೆ ಸಾಮಾಜಿಕ ನಿರೀಕ್ಷೆ ಮತ್ತು ನಿರ್ದೇಶನಕ್ಕೆ ತಕ್ಕಂತೆ ಬಳಸಬೇಕೆಂಬ ಒತ್ತಡವಿರುವುದು. ಬಳಕೆಯ ಭಾಷಾಸ್ವರೂಪಗಳನ್ನು ಈ ಎರಡು ಅಂಶಗಳೇ ನಿರ್ದೇಶಿಸುತ್ತವೆ. ಕಲಿಕೆಗೆ ಏನೇ ಅಡೆತಡೆಗಳಿದ್ದರೂ ಪರಿಣಾಮ ಬೇರೆಂಬಾದಂತೆ, ಇಲ್ಲಿ ಬಳಕೆಗೆ ನಿಯಂತ್ರಣಗಳಿದ್ದರೂ, ಅದರ ಉಲ್ಲಂಘನೆ ಸಾಧ್ಯ. ಅದು ಪಾಲನೆಯಾಗದೇ ಇದ್ದರೂ ಅದರ ಮೀರುವಿಕೆ ಹೇಗಿದೆ ಎಂಬುದು ಕುತೂಹಲದ ಸಂಗತಿ. ಸ್ತ್ರೀವಾದಿಗಳು, ಮಹಿಳಾ ಅಧ್ಯಯನಗಳಲ್ಲಿ ಆಸಕ್ತಿ ಹೊಂದಿದವರು ಈ ಕುರಿತ ಅಧ್ಯಯನಗಳಲ್ಲಿ ತೊಡಗಿದ್ದಾರೆ. ಈಗಾಗಲೇ ಇರುವುದನ್ನು ಬೇರೆ ಬೇರೆ ಉದಾಹರಣೆಗಳಿಂದ ಹೇಳದೆ ಅದರೊಳಗೆ ನಮಗೆ ಗೊತ್ತಿರದೇ ಅಡಗಿರುವ ಸಂಗತಿಗಳನ್ನು ಹೊರತರಬೇಕು. ನಿಯಂತ್ರಣ ಇದ್ದಾಗ ನಿಯಂತ್ರಣ ಇದೆ ಎಂದು ಅಧ್ಯಯನದ ಮೂಲಕ ಹೇಳುವುದು ಪ್ರಮುಖ ಗುರಿಯಲ್ಲ. ಹಾಗೆ ನಿಯಂತ್ರಣ ಇದ್ದಾಗ ಅದರ ಪರಿಣಾಮ ಹೇಗೆ ಕಾಣಿಸಿಕೊಳ್ಳುತ್ತದೆ, ಅದನ್ನು ಮೀರುವ ಹುನ್ನಾರಗಳಿವೆಯೇ ಎಂಬುದು ಪ್ರಮುಖ ಸಂಗತಿ. ಉದಾ: ಯಾರೋ ಜೈಲಿನಲ್ಲಿದ್ದಾರೆಂದರೆ ಅದೊಂದು ಹೇಳಿಕೆ ಮಾತ್ರ. ಹಾಗೆ ಜೈಲಿನಲ್ಲಿದ್ದರೂ ಅವರು ಎಲ್ಲಾ ಸಂದರ್ಭಗಳಲ್ಲೂ ಬಂಧನದ ಅನುಭವದಲ್ಲೇ ಇರುವುದಿಲ್ಲ. ಅದರಿಂದ ಹೊರಬರುವ ನಿರಂತರ ಪ್ರಯತ್ನದಲ್ಲಿ ತೊಡಗಿರುತ್ತಾರೆ. ಅದರಲ್ಲೂ ಭೌತಿಕವಾಗಿ

ಅಲ್ಲದಿದ್ದರೂ ಮಾನಸಿಕವಾಗಿ ಬಿಡುಗಡೆಗೆ ಯತ್ನಿಸುತ್ತಾರೆ. ಬೌತಿಕವಾಗಿ ನಿಯಂತ್ರಣ ಹೊಂದಿದ್ದರೂ ಮಾನಸಿಕವಾಗಿ ಬಿಡುಗಡೆ ಹೊಂದಬಹುದು. ಅಥವಾ ಅಂತಹ ಬಿಡುಗಡೆಗೆ ಪ್ರಯತ್ನಿಸುತ್ತಿರಬಹುದು.ಆದರೆ ಸಾಮಾಜಿಕ ಗ್ರಹಿಕೆಯ ಮಟ್ಟಿಗೆ ಅವರು ಬಂಧನದಲ್ಲಿರುತ್ತಾರೆ. ಹೀಗೆ ಬಂಧನಕ್ಕೆ ಸಂಬಂಧಪಟ್ಟ ಮಾತನ್ನು ಭಾಷಾಸಂದರ್ಭಕ್ಕೂ ಹೊಂದಿಸಿ ನೋಡಬಹುದೇ? ಅನೌಪಚಾರಿಕ ವಲಯದಲ್ಲಿಯೇ ದಿನವೂ ಹುಡುಗಿಯನ್ನು ಕುರಿತು, ಏಕೆ ಕಿರುಚುತ್ತೀಯಾ, ಇದರಲ್ಲಿ ತಲೆ ಹಾಕಬೇಡ ಇತ್ಯಾದಿಯಾಗಿ ಖಚಿತವಾಗಿ ಗುರುತಿಟ್ಟು ಹೇಳಲಾಗುತ್ತದೆ. ಇಲ್ಲಿ ಅಂತಹ ಒಂದು ನಿರ್ದೇಶನವು ಇದೆ ಅಂತ ಭಾಗವಹಿಸುವವರು ಗುಪ್ತವಾಗಿ ತಿಳಿಯುತ್ತಾರೆ. ತರಗತಿಯಲ್ಲಿ ಹುಡುಗಿಯರೇಕೆ ಮಾತನಾಡುವುದಿಲ್ಲ, ಭಾಗವಹಿಸುವುದಿಲ್ಲ?. ಹಾಗೇ ಭಾಗವಹಿಸಬೇಡಿ ಎಂದು ಯಾರೂ ಹೇಳಿರದಿದ್ದರೂ, ಅಂತಹ ಭಾಗವಹಿಸುವಿಕೆಯ ಅವಕಾಶವೊಂದು ತಮಗಿದೆ, ತಾವು ಅದನ್ನು ಬಳಸುತ್ತಿಲ್ಲ ಎಂಬುದನ್ನು ಅವರು ಗುರುತಿಸಿಕೊಳ್ಳುವುದಿಲ್ಲ. ನಿಗದಿತ ನಿರ್ದೇಶನಗಳಿರದಿದ್ದರೂ ಮಾನಸಿಕವಾಗಿ ಅವರು ಅಂತಹ ನಿರ್ದೇಶನಗಳಿರುವುದನ್ನು ಗ್ರಹಿಸುತ್ತಾರೆ. ಮಾತನಾಡಲು ಹೇಳಿದರೂ ಅವರು ಮಾತನಾಡುವುದಿಲ್ಲ. ನಾವೇನು ಪ್ರತಿಕ್ರಿಯಿಸುವುದಿಲ್ಲವೆಂದು ಹಠಮಾಡಿ ಮೌನವಹಿಸುವುದಿಲ್ಲ. ಇದು ಬೇರೆಯಾದ ಬಗೆಯ ಪ್ರತಿಕ್ರಿಯೆಯಾಗಿರುತ್ತದೆ.

ಔಪಚಾರಿಕ, ಅನೌಪಚಾರಿಕ ವಲಯಗಳಲ್ಲಿ ಹೆಂಗಸರಿಗೆ ಭಾಷಾಬಳಕೆಗೆ ಸಂಬಧಿಸಿದ ಈ ಬಗೆಯ ತಾರತಮ್ಯಗಳು ಇದ್ದೇ ಇರುತ್ತವೆ. ಕೆಲವು ವೇಳೆ ನೇರ ನಿರ್ದೇಶನದಿಂದ, ಕೆಲವೊಮ್ಮೆ ಗ್ರಹೀತವಾದ, ಪರೋಕ್ಷವಾದ ನಂಬಿಕೆಗಳಿಂದ ರೂಪುಗೊಂಡ ನಿಯಂತ್ರಣಗಳಿರುತ್ತವೆ. ಹೀಗಿದ್ದಾಗಲೂ ಭಾಷಾಬಳಕೆಯ ವಿಷಯ ಬಂದಾಗ ಹೆಚ್ಚು ಮಾತನಾಡುವವರು ಹೆಂಗಸರೆಂದೇ ಹೇಳಲಾಗುತ್ತದೆ. ಗಯ್ಯಾಳಿ, ವಾಚಾಳಿ, ಹರಟೆ ಹೊಡೆಯುವವರೆಂದು ಹೆಂಗಸರನ್ನು ವರ್ಣಿಸಲಾಗುತ್ತದೆ, ಟೀಕಿಸಲಾಗುತ್ತದೆ. ಇದು ವಿಚಿತ್ರ ಸಂಗತಿ. ತಮ್ಮ ಭಾಷಾಬಳಕೆಯ ಮೇಲೆ ನಿಯಂತ್ರಣ ಇದ್ದರೂ ಆ ನಿಯಂತ್ರಣವನ್ನು ಅವರು ತಮ್ಮ ಅನುಭವದ ಭಾಗವನ್ನಾಗಿ ಮಾಡಿಕೊಂಡಿದ್ದರೂ ಸಾಮಾಜಿಕ ಗ್ರಹಿಕೆಯಲ್ಲಿ ಹೆಂಗಸು ಮತ್ತು ಮಾತಿಗೆ ನಿಕಟವಾದ ಸಂಬಂಧವನ್ನು ಕಲ್ಪಿಸಲಾಗಿದೆ. ಹೆಚ್ಚು ಮಾತನಾಡುವವರು ಹೆಂಗಸರೆಂದೇ ಭಾವಿಸಲಾಗಿದೆ, ನಂಬಲಾಗಿದೆ, ನಂಬಿಸಲಾಗಿದೆ, ಇದು ವಾಸ್ತವವೇ? ಅಥವಾ ಇದು ಭಾಷೆಯಲ್ಲಿ ಕೇವಲ ನುಡಿಗಟ್ಟಾಗಿದೆಯೇ? ಈ ಬಗೆಗೆ ಹಲವು ಸಂಶೋಧನೆಗಳು ನಡೆದಿವೆ. ಕೆಲಸದ ಸ್ಥಳಗಳಲ್ಲಿ, ಮನೆಗಳಲ್ಲಿ, ಮಾರುಕಟ್ಟೆ ಹೀಗೆ ಹೆಂಗಸು ಪಾಲ್ಗೊಳ್ಳುವ ಬೇರೆ ಬೇರೆ ವಲಯಗಳನ್ನಿಟ್ಟುಕೊಂಡು ಅಲ್ಲಿ ಹೆಂಗಸಿನ ಭಾಷೆಯ ಬಳಕೆಯ ಪ್ರಮಾಣ ಒಟ್ಟು ಭಾಷೆಯ ಬಳಕೆಯ ಪ್ರಮಾಣಗಳನ್ನು ಒಂದು ಪರಿಮಾಣಾತ್ಮಕ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಇಂತಹ ವಿಶ್ಲೇಷಣೆಗಳಿಂದ ನಾವು ನಂಬಿರುವ ಹಾಗೆ ಹೆಂಗಸಿನ ಮಾತುಗಾರಿಕೆ ಹೆಚ್ಚಿರುವುದಿಲ್ಲ ಎಂಬುದು ತಿಳಿದು ಬಂದಿದೆ. ಹೆಂಗಸಿನಲ್ಲಿ ಭಾಷೆ ಬಳಕೆ ಹೆಚ್ಚೆಂಬುದು ಒಂದು ನಂಬಿಕೆಯೇ ಹೊರತು ವಾಸ್ತವ ಸಂಗತಿಯಲ್ಲ.

ನಾನು ಇಲ್ಲಿ ಹೆಂಗಸರೆಂದು ಹೇಳಿದೆನೇ ಹೊರತು ಹುಡುಗಿಯರೆಂದಲ್ಲ.

ಏಕೆಂದರೆ ಈ ವ್ಯತ್ಯಾಸ ಕೇವಲ ವಯಸ್ಸಿಗೆ ಮಾತ್ರ ಸಂಬಂಧಿದ್ದಾಗಿರದೇ ನಾನಾಗಲೇ ಎತ್ತಿದ ಪ್ರಶ್ನೆ. ಕಲಿಕೆಯಲ್ಲಿ ಹುಡುಗರಿಗಿಂತ ಹುಡುಗಿಯರಿಗೆ ಹೆಚ್ಚು ಭಾಷಾ ಸಾಮರ್ಥ್ಯವಿದ್ದರೂ ನಿಧಾನವಾಗಿ ಅದನ್ನವರು ಕಳೆದುಕೊಳ್ಳುವರು. ಈ ಸಂಗತಿಗೂ ಈಗ ಹೇಳಿದಂತೆ ಹೆಂಗಸರು ಹೆಚ್ಚು ಮಾತನಾಡುವುದಿಲ್ಲ ಎನ್ನುವುದಕ್ಕೂ ನೇರ ಸಂಬಂಧವಿದೆ ಎನಿಸುತ್ತದೆ. ಹುಡುಗಿಯರು ಹೆಂಗಸರಾಗುತ್ತ ಹೋದಂತೆಲ್ಲಾ ಅವರು ಮಾತಿನಿಂದ ಮೌನದಕಡೆಗೆ ಪಯಣಿಸುತ್ತಾರೆ. ಇದು ಒಂದು ರೂಪಕ. ಇಲ್ಲಿ ಮೌನದ ಸ್ಥಿತಿ ಒಂದು ಬಯಸಿದ ಸ್ಥಿತಿಯಲ್ಲ. ಹಾಗಿರುವಾಗ ಇಂತಹ ಮೌನದ ಸ್ಥಿತಿಯನ್ನು ಅನುಭವಿಸುತ್ತಿರುವ ಹೆಂಗಸು ಅದಕ್ಕೆ ಹೇಗೆ ಪ್ರತಿಕ್ರಿಯಿಸುತ್ತಾಳೆ, ಅದರ ಸ್ವರೂಪ ಎಂತಹುದು ಈ ಅಂಶಗಳು ಕುತೂಹಲಕಾರಿಯಾಗಿವೆ. ತಾರತಮ್ಯ ಭಾಷಿಕವಾಗಿ ಆಚರಣೆಯಲ್ಲಿದೆ ಎಂಬುದನ್ನು ಅರ್ಥಮಾಡಿಕೊಳ್ಳವುದು ಸುಲಭ. ಇದಕ್ಕೆ ಹೆಂಗಸಿನ ಪ್ರತಿಕ್ರಿಯೆಯ ರೀತಿ ಸಾಮಾಜಿಕವಾಗಿ ಹೇಗಿರುತ್ತದೆ. ಔಪಚಾರಿಕ ಮತ್ತು ಅನೌಪಚಾರಿಕವಾಗಿ ಬಳಕೆ ಮತ್ತು ಕಲಿಕೆಯಲ್ಲಿ ಇದರ ಸ್ವರೂಪ ಹೇಗಿದೆ ಎಂಬುದನ್ನು ನಾವು ಸ್ಥೂಲವಾಗಿ ಪರಿಚಯ ಮಾಡಿಕೊಂಡಿದ್ದೇವೆ.

ಭಾಷೆಯ ಸ್ವರೂಪ, ಬಳಕೆ ಅಥವಾ ರಚನೆ ಎರಡರಲ್ಲೂ ಗುರುತಿಸಬಹುದಾದ ವ್ಯತ್ಯಾಸಗಳಿರುತ್ತವೆ. ಅದನ್ನು ನೀವು ತಿಳಿದುಕೊಂಡಿದ್ದೀರಿ. ವ್ಯತ್ಯಾಸ ಯಾವಾಗಲೂ ಎರಡು ರೀತಿಯಲ್ಲಿರುತ್ತವೆ.1. ಭಿನ್ನತೆ 2. ತಾರತಮ್ಯ ಇವೆರಡೂ ಬೇರೆ ಬೇರೆ. ಭಿನ್ನತೆ ಇದೆಯೆಂದ ಮಾತ್ರಕ್ಕೆ ತಾರತಮ್ಯವಿರಲೇಬೇಕೆಂದಿಲ್ಲ. ಸಮಾಜದಲ್ಲಿ ಸಮಾನತೆ ಬೇಕೆಂಬುದನ್ನು ಹೇಳುತ್ತಿರುವಾಗ ಅದಕ್ಕೆ ವಿರುದ್ಧವಾಗಿ ಕೆಲವರು ವಾದ ಮಾಡುತ್ತಾರೆ. ಅವರು ಮಂಡಿಸುವ ವಾದ ಹೀಗಿರುತ್ತದೆ. ಅಂದರೆ ನಿಸರ್ಗದಲ್ಲೇ ಸಮಾನತೆ ಇಲ್ಲ. ಅಲ್ಲೇ ಅಸಮಾನತೆ ಇದೆ. ನಿಸರ್ಗದಲ್ಲಿ ಇಲ್ಲದಿರುವುದನ್ನು ನೀವೇಕೆ ಸಾಧಿಸಲು ಪ್ರಯತ್ನಪಡುತ್ತೀರಿ. ಉದಾ: ಕೈಯಲ್ಲಿರುವ ಐದು ಬೆರಳು ಒಂದೇ ರೀತಿಯಾಗಿರುವುದಿಲ್ಲ. ಈ ವ್ಯತ್ಯಾಸವನ್ನು ನಾವು ಕಾಯ್ದುಕೊಳ್ಳಬೇಕು. ಈ ಬಗೆಯ ವಾದಗಳನ್ನು ಹೆಚ್ಚಾಗಿ ಶಿಕ್ಷಣದ ಪ್ರಾಥಮಿಕ ಹಂತದಲ್ಲೇ ಕೇಳಬಹುದು. ಅಲ್ಲದೇ ಹೆಚ್ಚು ಅಸಮಾನತೆಯನ್ನು ಪ್ರತಿಪಾದಿಸುವವರು, ಕಾಯ್ದುಕೊಳ್ಳುವವರು ಶಾಲಾ ಅಧ್ಯಾಪಕರೇ. ಇವರು ಭಿನ್ನತೆಯನ್ನು ಮತ್ತು ತಾರತಮ್ಯಗಳನ್ನು ಸಮಗೊಳಿಸಲು ಪ್ರಯತ್ನಿಸುತ್ತಾರೆ. ಆದರೆ ಭಿನ್ನತೆಯನ್ನು ಯಾರೂ ಆಚರಿಸುವುದಿಲ್ಲ. ಅದನ್ನು ಮೀರಲು ಆಗುವುದಿಲ್ಲ. ಕಪ್ಪು,ಬಿಳಿ,ಕೆಂಪು ಹೀಗೆ ಗುರುತಿಸಿದರೆ ಅದು ವ್ಯತ್ಯಾಸವನ್ನು ಹೇಳಿದಂತೆ. ಅದು ತರತಮಭಾವವಲ್ಲ, ಆದರೆ ಕಪ್ಪಾಗಿರುವುದರಿಂದಲೇ ಅದು ತ್ಯಾಜ್ಯ, ಬಿಳಿಯಾಗಿರುವುದರಿಂದಲೇ ಮೇಲು, ಸ್ವೀಕಾರಾರ್ಹ ಎಂದು ಹೇಳಿದರೆ ಅದು ತಾರತಮ್ಯವಾಗುತ್ತದೆ. ಹೆಂಗಸಿನ ಭಾಷೆಗೂ ಗಂಡಿನ ಭಾಷೆಗೂ ಕೆಲವು ವ್ಯತ್ಯಾಸಗಳಿರುತ್ತವೆ. ಆ ವ್ಯತ್ಯಾಸಗಳಲ್ಲಿ ಕೆಲವು ಭಿನ್ನತೆಗಳಿರಬಹುದು. ಮತ್ತೆ ಕೆಲವು ತಾರತಮ್ಯಗಳಾಗಿರಬಹುದು. ಭಿನ್ನತೆಯ ನೆಲೆಗಳು ನಮಗೆ ಹೆಚ್ಚು ಆಸಕ್ತಿಗಳಾಗಿರದೇ, ಯಾವುದು ತಾರತಮ್ಯದ ನೆಲೆಯಲ್ಲಿರುತ್ತವೆಯೋ, ಅವು ನಮ್ಮ ಅಧ್ಯಯನಕ್ಕೆ ಒಳಗಾಗಬೇಕಾದದ್ದು. ಈ ಭಿನ್ನತೆಯ ನೆಲೆಯನ್ನು, ತಾರತಮ್ಯವೆಂದು ತುಂಬಾ ಸಂದರ್ಭಗಳಲ್ಲಿ ಹೇಳುತ್ತೇವೆ.

ಉದಾ:- ದೇಹರಚನೆಯಿಂದಾಗಿ ಹೆಂಗಸು-ಗಂಡಸು ಮಾತನಾಡುವಂತದ್ದು ಭಿನ್ನವಾಗಿರಬಹುದು. ಧ್ವನಿಪೆಟ್ಟಿಗೆಯಲ್ಲಿನ ಬದಲಾವಣೆ ಗಂಡಸಿನಲ್ಲಾದಷ್ಟು ಹೆಂಗಸಿನಲ್ಲಾಗುವುದಿಲ್ಲ. ಹೀಗಿರುವಾಗ ಧ್ವನಿಯಲ್ಲಿನ ಪಿಚ್ ಬೇರೆಬೇರೆಯಾಗಿರುತ್ತದೆ. ಇದನ್ನು ಗುರುತಿಸುವುದು ಸುಲಭ. ಇದರಿಂದಾಗಿಯೇ ಹೆಂಗಸರು ಮತ್ತು ಗಂಡಸು ಮಾತನಾಡುವುದನ್ನು ಗುರುತಿಸಬಹುದು. ಇದು ವ್ಯತ್ಯಾಸ, ಭಿನ್ನತೆ ಅಷ್ಟೇ, ಇದು ದೇಹರಚನೆಯಿಂದಾಗಿರುವಂತದ್ದು. ಅದು ದತ್ತವಾದಂತದ್ದು. ಇದರ ಪರಿಣಾಮದಿಂದಾಗಿ ಭಾಷಿಕ ಬಳಕೆಯಲ್ಲಿ ಉಂಟಾದ ಪರಿಣಾಮಗಳು, ಈ ವ್ಯತ್ಯಾಸಗಳು ಕಾಣಿಸುತ್ತವೆ. ಇವುಗಳನ್ನು ಅಧ್ಯಯನ ಮಾಡದೇ ಒಪ್ಪಿಕೊಂಡು ಬಿಡುತ್ತೇವೆ. ಆದರೆ ಬೇರೊಂದು ಕಾರಣಕ್ಕೆ ಈ ಭಿನ್ನತೆಗಳು ಅಧ್ಯಯನಕ್ಕೆ ಒದಗಿ ಬರುತ್ತವೆ. ಇಷ್ಟಲ್ಲದೇ ತರ-ತಮ ಭಾವಗಳಿರುತ್ತವೆ. ಈ ರೀತಿ ಇರುವುದರಿಂದಲೇ ಗಂಡಸಿನ ಭಾಷೆ ಹೆಂಗಸಿನ ಭಾಷೆ ಎಂದು ವಿಭಾಗಿಸಲಾಗಿದ್ದು, ಇದನ್ನೇ ಅವರ ಸ್ವಭಾವವನ್ನು ಅರಿಯಲಾಗಲಿ, ಸಾಮಾಜಿಕ ಸ್ಥಾನಮಾನಗಳ ನಿರ್ಧಾರಕ್ಕಾಗಲೀ ಬಳಸಿದರೆ ನಾವು ಈ ಭಿನ್ನತೆಯನ್ನು ತಾರತಮ್ಯವಾಗಿ ನೆಲಗೊಳಿಸಿದಂತಾಗುತ್ತದೆ. ಕುತೂಹಲವೆಂದರೆ ಈ ತಾರತಮ್ಯ ಹೆಂಗಸಿನ ಭಾಷೆಯ ಬಳಕೆ ಅಥವಾ ರಚನೆಯಲ್ಲಿ ಒಂದು ಶೋಷಣೆಯ ನೆಲೆಗಟ್ಟಾಗಿ ಕಾಣಿಸಿಕೊಳ್ಳುತ್ತದೆ ಎಂಬುದು. ಈ ಭಿನ್ನತೆಯ ನೆಲೆಯನ್ನು ಗಮನಿಸಿದಾಗ ಸಾಮುದಾಯಿಕವಾಗಿ ಕೆಲವು ಭಾಷೆಗಳನ್ನು ಗಂಡು, ಕೆಲವನ್ನು ಸಾಮಾನ್ಯ ಭಾಷೆ ಎಂದು ಹೇಳಲಾಗುತ್ತದೆ. ಹುಬ್ಬಳ್ಳಿ ಭಾಷೆಯನ್ನು ಗಂಡು ಮೆಟ್ಟಿನ ಭಾಷೆ ಎಂದು ಕರೆಯಲಾಗುತ್ತದೆ. ಅದು ಹೇಗೆಂದು ಗೊತ್ತಿಲ್ಲ. ಇದೆಲ್ಲ ಸಾಮಾನ್ಯ ತಿಳುವಳಿಕೆ. ಅದನ್ನು ಯಾರೂ ಸಾಧಿಸಿ ತೋರಿಸಲು ಆಗುವುದಿಲ್ಲ. ಹೀಗೆ ಕೆಲವು ಆರೋಪಗಳನ್ನು ಮಾಡಲಾಗುತ್ತದೆ. ಈ ಆರೋಪಗಳಿಗೆ ತಾರ್ಕಿಕವಾದ ಭದ್ರತೆ ಇರುತ್ತದೆ ಎಂದು ನನಗನಿಸುವುದಿಲ್ಲ. ಈ ನಂಬಿಕೆ ಹಾಗೆ ನಿರಂತರವಾಗಿ ಉಳಿದು ಬರುವುದಿಲ್ಲ. ಗಂಡು-ಹೆಣ್ಣಿನ ಭಾಷೆಗಳಲ್ಲಿ ಈ ವ್ಯತ್ಯಾಸಗಳು ಉಂಟಾಗಲು ದೈಹಿಕ ನೆಲೆಗಳನ್ನು ದಾಟಿ ಅದೊಂದು ಸಾಮಾಜಿಕ ರಚನೆಯಾಗಿ ಕಾಣಿಸಿಕೊಳ್ಳುವುದಕ್ಕೆ ಕಾರಣಗಳೇನು ಮತ್ತು ಈ ಕಾರಣಗಳು ಯಾವ ರೀತಿ ಅವಿಷ್ಕಾರಗೊಳ್ಳುತ್ತವೆಂಬ ಬಗೆಗೆ ಕೆಲವು ವಿಚಾರಗಳನ್ನು ಗಮನಿಸೋಣ.

ಇವರೆಗೆ ಸಾಮಾನ್ಯವಾಗಿ ನಡೆದಿರುವ ಅಧ್ಯಯನಗಳ ಪ್ರಕಾರ ಹೆಣ್ಣಿನ ಭಾಷೆ ಮತ್ತು ಗಂಡಿನ ಭಾಷೆಯ ಲಕ್ಷಣಗಳಲ್ಲಿರುವ ವ್ಯತ್ಯಾಸಗಳನ್ನು ಕುರಿತಾಗಿ ಹೇಳಲಾಗಿರುವುದನ್ನು ಎರಡು ಪದಗಳ ಮೂಲಕ ವಿವರಿಸಲು ಪ್ರಯತ್ನಿಸುತ್ತೇನೆ. ಇವುಗಳಲ್ಲಿ ಒಂದನ್ನು ರಿಪೋರ್ಟ್ ಇನ್ನೊಂದನ್ನು ರಾಪೋರ್ಟ್ ಎಂದು ಕರೆಯಲಾಗಿದೆ. ಗಂಡಿನ ಭಾಷಾ ಸಂವಹನವು ಯಾರ ಜೊತೆಯಲ್ಲಿ ನಡೆಯುತ್ತಿರಲಿ ಅವರು ಎಲ್ಲಿ, ಹೇಗೆ ಮಾತನಾಡುತ್ತಿರಲಿ ಅದರ ಮೂಲ ಲಕ್ಷಣ ರಿಪೋರ್ಟಿಂಗ್ ಆಗಿರುತ್ತದೆ. ಅವರು ತಮ್ಮನ್ನು ತಾವು ಮಂಡಿಸಿಕೊಳ್ಳುತ್ತಿರುತ್ತಾರೆ. ಗಂಡಿನ ಭಾಷೆಯ ಪ್ರಧಾನ ಲಕ್ಷಣ ತನ್ನನ್ನು ತಾನು ಹೊರಗಿಟ್ಟುಕೊಂಡು ಅಂದರೆ ತನ್ನ ವ್ಯಕ್ತಿತ್ವ ಮನಸ್ಥಿತಿಯನ್ನು ಹೊರಗಿರಿಸಿಕೊಂಡು ಸಂಭಾಷಣೆ/ಸಂವಹನದಲ್ಲಿ ತೊಡಗಿರುವುದು. ಹೆಂಗಸಿನ

ಭಾಷೆಯಲ್ಲಿ ರಾಪೋರ್ಟ್ ಕಲ್ಪಿಸಿಕೊಳ್ಳುವುದು ಮುಖ್ಯವಾಗಿರುತ್ತದೆ. ಒಂದು ಬಗೆಯ ಸಂಬಂಧವನ್ನು ಕಲ್ಪಿಸಿಕೊಳ್ಳುವುದು ಅವರ ಭಾಷಾಸಂವಹನದ ಮುಖ್ಯ ಲಕ್ಷಣವಾಗಿರುತ್ತದೆ. ಅವರು ಯಾವಾಗಲೂ ಮಾತನಾಡುವವರ ಜೊತೆ ಒಂದು ಬಗೆಯ ಸಂಬಂಧ ಕಲ್ಪಿಸಿಕೊಳ್ಳಲು ಯತ್ನಿಸುತ್ತಿರುತ್ತಾರೆ. ಅದಕ್ಕಾಗಿ ಆ ಸಂಬಂಧದ ಪರಿಕರಗಳನ್ನು ಭಾಷೆಯಲ್ಲಿ ಅಡಕಗೊಳಿಸಿಕೊಂಡಿರುತ್ತಾರೆ. ಗಂಡಸು ಮಾತನಾಡುವಾಗ ಯಾವುದೇ ಸಂಗತಿಯಾಗಿದ್ದರೂ ಅದೊಂದು ನಿರ್ಧಾರದ ನೆಲೆಯಲ್ಲಿರುತ್ತದೆ. ಪ್ರತಿಕ್ರಿಯೆಯನ್ನು ನಿರೀಕ್ಷಿಸುವ ನೆಲೆಯಲ್ಲಿರುವುದಿಲ್ಲ. ಆದರೆ ಹೆಂಗಸು ಮಾತನಾಡುವಾಗ ಕೇಳಿಸಿಕೊಳ್ಳುವವರ ಅಭಿಪ್ರಾಯವನ್ನು ಕೂಡಾ ಮುಖ್ಯವೆಂದು ಭಾವಿಸುತ್ತಾಳೆ. ಅದಕ್ಕೆಂದು ಅವರಿಗೆ ಪ್ರತಿಕ್ರಿಯೆ ಮುಖ್ಯವಾಗಿರುತ್ತದೆ. ಆ ಪ್ರತಿಕ್ರಿಯೆ ತೆಗೆದುಕೊಂಡು, ತನ್ನ ಮಾತನ್ನು ಮುಂದುವರಿಸಬಲ್ಲೆ ಅನ್ನುವ ರೀತಿಯಲ್ಲಿ ಅವರು ವಾಕ್ಯರಚನೆಮಾಡುವರು.

**ಮೌನವಾಗುವಿಕೆ ಮತ್ತು ಮೂಕವಾಗುವಿಕೆ**

ಸಮಾಜದಲ್ಲಿ ಜಾತಿಯ ಪದ್ಧತಿ ಇದೆ. ಈ ಪದ್ಧತಿ ಯಾಕೆ ಉಂಟಾಯಿತು ಎಂಬುದನ್ನು ತಿಳಿದುಕೊಳ್ಳಲು ಪ್ರಯತ್ನಿಸಿದರೆ ಆ ಬಗೆಯ ಅಧ್ಯಯನವನ್ನು ಕಾರಣ ಮೀಮಾಂಸೆ ಎನ್ನುತ್ತೇವೆ. ಆದರೆ ಜಾತಿಪದ್ಧತಿ ಇರುವುದರಿಂದ ಸಮಾಜದಲ್ಲಿ ಏನಾಗುತ್ತಿದೆ ಎಂದು ಕಂಡುಕೊಳ್ಳಲು ಹೊರಟರೆ ಆ ಬಗೆಯ ಅಧ್ಯಯನವನ್ನು ಪ್ರಕ್ರಿಯಾ ಮೀಮಾಂಸೆ ಎನ್ನುತ್ತೇವೆ. ಜಾತಿಪದ್ಧತಿ ಹೀಗೆ ಮುಂದುವರೆದರೆ ಅಥವಾ ಇದನ್ನು ಹೀಗೇ ಉಳಿಸಿಕೊಂಡರೆ ಸಮಾಜದ ಬೆಳವಣಿಗೆಯ ಮೇಲೆ ಏನು ಪರಿಣಾಮವಾಗುತ್ತದೆ ಎಂದು ವಿಶ್ಲೇಸಿಸುವುದು ಪರಿಣಾಮ ಮೀಮಾಂಸೆಯಾಗುತ್ತದೆ. ನಮ್ಮ ಬಹುಪಾಲು ಅಧ್ಯಯನಗಳು ಕಾರಣ ಮೀಮಾಂಸೆಯ ನೆಲೆಯಲ್ಲಿರುತ್ತವೆ. ಅಂದರೆ ಯಾವುದೇ ಒಂದು ಸಾಮಾಜಿಕ ಸಂಗತಿ ಏಕೆ ಉಂಟಾಯಿತು ಎಂಬುದನ್ನು ವಿಶ್ಲೇಷಿಸುವತ್ತ ನಮ್ಮ ಗಮನವನ್ನು ಹರಿಸುತ್ತೇವೆ, ಹೆಚ್ಚೆಂದರೆ ಆ ಸಾಮಾಜಿಕ ಸಂಗತಿ ಇರುವುದರಿಂದ ಈಗೇನಾಗುತ್ತಿದೆ ಎಂಬ ಪರಿಸ್ಥಿತಿಯನ್ನು ವಿವರಿಸುತ್ತೇವೆ. ಎಷ್ಟೋ ಸಂದರ್ಭದಲ್ಲಿ ಇದು ಹೀಗೆ ಇದ್ದರೆ ಮುಂದೆ ಏನಾಗಬಹುದು ಎನ್ನುವುದನ್ನು ಕುರಿತು ಯೋಚಿಸುತ್ತಿರುತ್ತೇವೆ. ಇದನ್ನು ಮುಂಗಾಣ್ಕೆಯ ಅಧ್ಯಯನಗಳೆನ್ನುತ್ತೇವೆ. ಅದಕ್ಕೆ ಪರಿಣಾಮ ಮೀಮಾಂಸೆ ಎನ್ನುತ್ತೇವೆ. ಆದ್ದರಿಂದ ಲಿಂಗತಾರತಮ್ಯ ಅನ್ನುವುದು ಇದೆಯೆಂದು ಒಪ್ಪಿಕೊಂಡರೆ ಅದನ್ನು ನಮ್ಮ ಸಮಾಜದ ಒಂದು ಭಾಗವಾಗಿ ನೋಡಿದರೆ ಏನಾಗುತ್ತದೆ? ತಾರತಮ್ಯ ಏಕೆ ಉಂಟಾಯಿತು ಅಂತ ವಿಶ್ಲೇಷಿಸುವುದು ಕಾರಣಮೀಮಾಂಸೆ. ಅದು ಇರುವುದರಿಂದ ಸಮಾಜದಲ್ಲಿ ಹೆಂಗಸು ಅನುಭವಿಸುತ್ತಾ ಇರುವ ಸಂಕಷ್ಟಗಳೇನು, ಕಷ್ಟಗಳೇನು, ಅದರಿಂದ ಆಕೆಯ ಜೀವನಕ್ರಮದಲ್ಲಿ ಏನು ಏರುಪೇರುಗಳು ಆಗುತ್ತಾ ಇವೆ ಎಂಬುದನ್ನು ಅಧ್ಯಯನ ಮಾಡುವುದು ಪ್ರಕ್ರಿಯಾಮೀಮಾಂಸೆ. ಈ ತಾರತಮ್ಯ ಹೀಗೇ ಮುಂದುವರೆದರೆ ಸಮಾಜದ ಒಟ್ಟಾರೆ ಬೆಳವಣಿಗೆಯ ಮೇಲೆ ಏನು ಪರಿಣಾಮವಾಗುತ್ತದೆ ಎನ್ನುವುದನ್ನು ತಿಳಿಯ ಹೊರಡುವುದು ಪರಿಣಾಮ ಮೀಮಾಂಸೆ.

ಆರ್ಥಿಕ ನೆಲೆಯಲ್ಲಿ ಸಮಾಜವನ್ನು ಅಧ್ಯಯನ ಮಾಡುವವರು ಬಡತನವನ್ನು ಕುರಿತು ಒಂದು ವಿವರಣೆಯನ್ನು ನಮ್ಮ ಮುಂದಿಡುತ್ತಾರೆ ಎಂದುಕೊಳ್ಳಿ. ಉದಾ:- ಈ ದೇಶದಲ್ಲಿ ಸುಮಾರು ಶೇ.ನಲವತ್ತು ಜನ ಬಡತನದ ರೇಖೆಯ ಕೆಳಗಿದ್ದಾರೆಂದು ಗುರುತಿಸಲಾಗಿದೆ. ಎಂದರೆ ಹಾಗೆ ಗುರುತಿಸಲು ಒಂದು ವಿಧಾನವನ್ನು ರೂಪಿಸಿಕೊಂಡಿರಬೇಕು. ಅಂದರೆ ಒಂದು ನಿರ್ದಿಷ್ಟ ಆದಾಯದ ಮಟ್ಟವನ್ನು ಗುರುತಿಸಿಕೊಂಡು ಅದಕ್ಕಿಂತ ಕಡಿಮೆ ವರಮಾನ ಇರುವವರನ್ನು ಬಡವರೆಂದು ಗುರುತಿಸುತ್ತಾರೆ. ಒಂದು ಪರಾಮರ್ಶನ ಬಿಂದುವನ್ನಿರಿಸಿ ಈ ನಿರ್ಣಯವನ್ನು ಮಾಡುತ್ತಾರೆ. ಈ ಅಧ್ಯಯನ ಮಾಡಿದ ಬಳಿಕ ಅದರ ಉಪಯೋಗದ ಪ್ರಶ್ನೆ ಬರುತ್ತದೆ. ತಾವು ಪಡೆದುಕೊಂಡ ಜ್ಞಾನವು ಇರುವ ಪರಿಸ್ಥಿತಿಯನ್ನು ಬದಲಾಯಿಸದೇ ಹೋದರೆ ಆ ಜ್ಞಾನದ ಪ್ರಯೋಜನವೇನು? ಯಾವುದೇ ತಿಳುವಳಿಕೆಯು ಆ ಪರಿಸ್ಥಿತಿಯನ್ನು ಬದಲಾಯಿಸುವಂತಿರಬೇಕು. ಉದಾ: ದೇಹರಚನಾ ಶಾಸ್ತ್ರವನ್ನು ಅಧ್ಯಯನ ಮಾಡುವವರಿಗೆ, ಬ್ಯಾಕ್ಟೀರಿಯಾದಿಂದಾಗಿ ಉಂಟಾಗುವ ಕಾಯಿಲೆಗಳನ್ನು ಕುರಿತು ತಿಳುವಳಿಕೆ ಮೂಡಿಸಿಕೊಂಡವರಿಗೆ, ಆ ತಿಳುವಳಿಕೆಯನ್ನು ಗಳಿಸಿಕೊಂಡರೆ ಸಾಲದು. ಅದನ್ನು ಅವರು ಔಷಧಗಳ ತಯಾರಿಕೆಯಲ್ಲಿ ಬಳಸಿಕೊಳ್ಳುತ್ತಾರೆ. ಅಂದರೆ ಬ್ಯಾಕ್ಟೀರಿಯಾಗಳಿಂದ ದೇಹವನ್ನು ಬಿಡುಗಡೆ ಮಾಡಿ ಅದನ್ನು ಹೆಚ್ಚು ಆರೋಗ್ಯಕರವನ್ನಾಗಿ ಮಾಡುವುದಕ್ಕೆ ಏನು ಮಾಡಬೇಕು ಎಂಬ ಸಂಶೋಧನೆಗಳತ್ತ ವಾಲುತ್ತಾರೆ. ಇದು ಪರಿಣಾಮ ಮೀಮಾಂಸೆ. ಯಾವುದೇ ಅಧ್ಯಯನ ಮಾಡುವಾಗ ಅದು ಕಾರಣ ಮೀಮಾಂಸೆಯಾಗಿದೆಯಾ ಅಥವಾ ಪ್ರಕ್ರಿಯಾ ಮೀಮಾಂಸೆಯನ್ನು ಮಾಡುತ್ತಿದೆಯಾ ಅನ್ನುವುದರ ತಿಳುವಳಿಕೆ ಮೂಡಿದಾಗ ಆ ಅಧ್ಯಯನಗಳ ಉಪಯುಕ್ತತೆಯನ್ನು ಗುರುತಿಸಲು ಸಾಧ್ಯವಾಗುತ್ತದೆ.

ಭಾಷೆಯು ಲಿಂಗತಾರತಮ್ಯದ ಸೂಚಕವಾಗಿ ಯಾವ ರೀತಿ ಕೆಲಸ ಮಾಡುತ್ತಿದೆಯೆಂಬುದನ್ನು, ಭಾಷಾಬಳಕೆ ಮತ್ತು ಕಲಿಕೆಯ ನೆಲೆಯನ್ನು ಆಧರಿಸಿ ತಿಳಿದುಕೊಳ್ಳುತ್ತಿದ್ದೇವೆ. ಈ ತಾರತಮ್ಯ ಬಳಕೆಯಲ್ಲಿ, ಅಂದರೆ ವಿವಿಧ ಭಾಷಿಕ ಘಟಕ ಬಳಕೆಯಲ್ಲಿ ಹೇಗೆ ಕಾಣಿಸಿಕೊಳ್ಳುತ್ತದೆ ಎಂಬುದನ್ನು ಗಮನಿಸುತ್ತಿದ್ದೇವೆ. ಇದೀಗ ಭಾಷಾಅಧ್ಯಯನದ ಭಾಗವಲ್ಲ. ಮಹಿಳಾ ಅಧ್ಯಯನದ ನೆಲೆಯಿಂದ ಇದನ್ನು ಗುರುತಿಸಿಕೊಳ್ಳುತ್ತಿದ್ದೇವೆ. ಒಂದು ಉದಾಹರಣೆಯನ್ನು ನೋಡೋಣ. ಏಕವಚನವನ್ನು ಬಳಸುವಾಗ ಹೆಂಗಸರಿಗೆ ಯಾವ ರೀತಿಯನ್ನು ಅನುಸರಿಸಲಾಗುತ್ತದೆ ಗಂಡಸರಿಗೆ ಯಾವ ನೆಲೆಯನ್ನು ಬಳಸಲಾಗುತ್ತದೆ ಎಂಬುದನ್ನು ಗಮನಿಸಬಹುದಾಗಿದೆ. ಕರ್ನಾಟಕದ ಸಮಾಜವನ್ನಾಧರಿಸಿ ಕನ್ನಡ ಭಾಷಾಬಳಕೆಯನ್ನು ಈಗ ಬಹುಮಟ್ಟಿಗೆ ತಿಳಿದುಕೊಳ್ಳಲಾಗಿದೆ. ಹೆಂಗಸಿಗೆ ಸಂಬಂಧಪಟ್ಟ ಪದಕೋಶದ ಬಗ್ಗೆ ಹೇಳಬೇಕಾದಾಗ ನಾವು ಇರುವ ಪದದಿಂದ ಹೊಸದೊಂದನ್ನು ಸೃಷ್ಟಿಸಿಕೊಳ್ಳಬೇಕಾದ ಅಗತ್ಯವಿದೆಯೆಂಬುದು ಈಗ ಹೆಚ್ಚು ಖಚಿತಗೊಂಡಿರುವ ಮಾತು. ಯಾವುದೇ ವೃತ್ತಿಸೂಚಕ ಪದ ತಂತಾನೇ ಗಂಡಸನ್ನು ಸೂಚಿಸುತ್ತಿರುತ್ತದೆ. ಸಾಮಾನ್ಯವಾಗಿ ಅದು ಪುರುಷ ಕೇಂದ್ರಿತವಾಗಿಯೇ ಇರುತ್ತದೆ.

ಅದೇ ವೃತ್ತಿಯಲ್ಲಿರುವ ಹೆಂಗಸನ್ನು ಸೂಚಿಸಲು ವಿಶೇಷಪದವೊಂದನ್ನು ರೂಪಿಸಿಕೊಳ್ಳಬೇಕು. ಆದ್ದರಿಂದ ಪದಕೋಶ ಯಾವಾಗಲೂ ಗಂಡಸನ್ನು ಒಳಗೊಂಡೇ ಇರುತ್ತದೆ. ಹೆಂಗಸು ಒಳಗೊಳ್ಳಬೇಕಾದರೆ ಹೊಸ ಪದವೊಂದನ್ನು ರಚಿಸಿಕೊಳ್ಳಬೇಕು.ಯಾವುದೇ ಭಾಷೆಯಲ್ಲಿ ಗಮನಿಸಿದರೆ ವ್ಯಕ್ತಿವಾಚಕಗಳು ಪುಲ್ಲಿಂಗ ವಾಚಿಯಾಗಿರುತ್ತವೆ. ಆದರೆ ಸ್ತ್ರೀಲಿಂಗ ವಾಚಿಗಳು ರೂಪುಗೊಳ್ಳಬೇಕು. ಆ ಪುಲ್ಲಿಂಗವಾಚಿ ಪದಗಳನ್ನೂ ಹೆಂಗಸರಿಗೆ ಅನ್ವಯವಾಗುವಂತೆ ಬದಲಿಸಿಕೊಳ್ಳಬೇಕಾಗುತ್ತದೆ. ಉದಾ: ಕುರುಡ-ಕುರುಡಿ, ಬಡವ-ಬಡವಿ. ಆದ್ದರಿಂದ ಯಾವುದೇ ಶಾಲಾವ್ಯಾಕರಣವನ್ನು ತೆಗೆದು ನೋಡಿದರೆ ಕೆಲವು ಪದಗಳನ್ನು ನೀಡಿ ಇವುಗಳ ಸ್ತ್ರೀಲಿಂಗ ರೂಪ ಬರೆಯಿರಿ ಎಂದು ಹೇಳುವ ಅಭ್ಯಾಸಗಳಿರುತ್ತವೆ. ಅದಕ್ಕೆ ಅನುಕೂಲಕರವಾದ ಕೆಲವು ನಿಯಮಗಳನ್ನು ಹೇಳುತ್ತಾರೆ. 'ಅ' ಕಾರಂತವಾಗಿದ್ದರೆ, 'ಇ' ಕಾರಂತವಾಗಿ ಮಾಡಿ ಬರೆಯಿರಿ ಎಂದು ಹೇಳುವುದು ಅಂತಹ ಒಂದು ನಿಯಮ. ಆದರೆ ಮೊದಲೇ ಸ್ತ್ರೀಲಿಂಗ ರೂಪವಿದ್ದು ಅದಕ್ಕೆ ಪುಲ್ಲಿಂಗ ರೂಪವನ್ನು ರೂಪಿಸಿಕೊಳ್ಳುವುದು ಅಪರೂಪ. ಯಾವುದೇ ಭಾಷೆಯಾದರೂ ಸಹ ಅದು ನೇರವಾಗಿ ಹೇಳುತ್ತಿಲ್ಲವೆಂದರೂ ಅದು ಸಹಜವೆಂಬಂತೆ ಪುರುಷನನ್ನು ಕೇಂದ್ರೀಕರಿಸಿಕೊಂಡೇ ಇರುತ್ತದೆ. ಅಲ್ಲಿ ಸ್ತ್ರೀಯನ್ನು ಸೇರಿಸಬೇಕಾದರೆ ಕೆಲವು ನಿಯಮಗಳನ್ನು ಅನುಸರಿಸಲೇಬೇಕು. ಭಾಷಾರಚನೆ ಮತ್ತು ಭಾಷಾಬಳಕೆಯಲ್ಲಿ ಈ ಪ್ರವೃತ್ತಿ ಎಲ್ಲೆಡೆ ಕಂಡುಬರುತ್ತದೆ.

ಆದರೆ ಬಹುಮುಖ್ಯವಾದ ಸಂಗತಿಯೆಂದರೆ, ಹೆಂಗಸು ಭಾಷೆ ಕಲಿಯುವ ಸಂದರ್ಭದಲ್ಲಿ ಒಂದು ವಿಶೇಷವಾದ ಸಾಮರ್ಥ್ಯವನ್ನು ಬಿಂಬಿಸುತ್ತಾಳೆ. ಗಂಡಸಿಗಿಂತ ವೇಗವಾಗಿ ಭಾಷಾಸಾಮರ್ಥ್ಯವನ್ನು ಆಕೆ ಪಡೆದುಕೊಳ್ಳುತ್ತಾಳೆ. ಅದಕ್ಕೆ ಸಂಶೋಧನೆಗಳು ಸಾಕ್ಷಿಯಾಗಿವೆ. ವಾಸ್ತವವಾಗಿ ಈ ಸಾಮರ್ಥ್ಯವನ್ನು ಬಳಸುವ ಸಂದರ್ಭ ಬಂದಾಗ ಮಾತ್ರ ಸಾಮಾಜಿಕವಾದ ಅಡೆತಡೆಗಳುಂಟಾಗುತ್ತವೆ. ಹೀಗಾಗಿ ಹೆಂಗಸಿನ ಮಾತಿನ ಬಳಕೆಯ ಪ್ರಮಾಣ ಕಡಿಮೆಯಾಗುತ್ತಾ ಹೋಗುತ್ತದೆ. ಮಾತಿನ ಸಾಧ್ಯತೆಗಳಿದ್ದರೂ ಅದು ಹೊರಗೆ ತೋರ್ಪಡದೇ ಒಳಗಡೆಯೇ ಇರುವಂತಾಗಿಬಿಡುತ್ತದೆ. ಕೊನೆಗೆ ಮಾತಿನ ಚಲನವಲನಗಳಿದ್ದು ಅದಕ್ಕೆ ಯಾವ ಅರ್ಥಸಾಧ್ಯತೆಗಳೂ ಇಲ್ಲವಾಗುತ್ತವೆ. ಟೆಲಿವಿಶನ್ ನೋಡುವಾಗ ಮ್ಯೂಟ್ ಬಟನ್ ಒತ್ತಿದರೆ ಏನಾಗುತ್ತದೆಂಬುದನ್ನು ಗಮನಿಸಿರಿ. ಅಂದರೆ ಮಾತಾಡುತ್ತಿದ್ದರೂ ಅದು ನಮಗೆ ಕೇಳುವ ಸ್ಥಿತಿಯಲ್ಲಿ ಇರುವುದಿಲ್ಲ. ಹೆಂಗಸಿನ ಸ್ಥಿತಿ ಹೀಗೆ ಮ್ಯೂಟ್ ಮಾಡಿದ ಅವಸ್ಥೆಯೋ ಅಥವಾ ಆಕೆ ಮೌನವನ್ನು ಆಶ್ರಯಿಸುತ್ತಾಳೋ ಎಂಬುದು ಮುಖ್ಯ ಚರ್ಚೆಯ ವಿಷಯವಾಗಬೇಕು. ಹಾಗಾಗಿ ಹೆಂಗಸಿನ ಸ್ಥಿತಿ ಮೌನವೋ ಮೂಕವೋ ಎಂಬ ಪ್ರಶ್ನೆ ಮೂಡುತ್ತದೆ. ಇವೆರಡೂ ಸ್ಥಿತಿಗಳು ಬೇರೆಬೇರೆ ತಾನೆ?. ಹೆಂಗಸಿಗೆ ಯಾಕೆ ಈ ಸ್ಥಿತಿಯು ಬರುತ್ತದೆ? ಹೆಂಗಸು ಇದನ್ನು ಹೇಗೆ ಎದುರಿಸುತ್ತಾಳೆ?

ಎರಡನೇ ಪ್ರಶ್ನೆ ಗಂಡಸರು ತಮ್ಮ ಅಭಿವ್ಯಕ್ತಿಗಾಗಿ ಭಾಷೆಯುನ್ನು ಬಳಸುತ್ತಿರಬೇಕಾದರೆ ಇಡೀ ಭಾಷೆಯ ಬಳಕೆಯ ವಲಯುಗಳನ್ನು ತಮ್ಮ ಉದ್ದೇಶಗಳಿಗನುಗುಣವಾಗಿ ರೂಪಸಿಕೊಂಡಿರುತ್ತಾರೆ. ಅದೇ ಭಾಷೆಯನ್ನು ಬಳಸಬೇಕೆಂಬ

ಒತ್ತಾಯ ಹೆಂಗಸಿನ ಮೇಲಿರುತ್ತದೆ. ಅಂದರೆ ಹೆಣ್ಣಿಗೆ ವಿಶಿಷ್ಟವಾದ ಅಭಿವ್ಯಕ್ತಿ ವಿಧಾನಕ್ಕೆ ತಕ್ಕ ಭಾಷೆಯ ರಚನೆಗಳು ಬಳಕೆಯ ಸಾಧ್ಯತೆಗಳು ಇಲ್ಲ. ಇರುವ ಭಾಷೆಯೊಡನೆ ಸಂಬಂಧವನ್ನು ಕಲ್ಪಿಸಿಕೊಳ್ಳಬೇಕಾದ ಒತ್ತಡ ಆಕೆಯ ಮೇಲಿದೆ. ಈ ಜಗತ್ತಿನಲ್ಲಿ ಆಕೆಗೆ ಲಭ್ಯವಿರುವ ಅಭಿವ್ಯಕ್ತಿ ವಲಯಗಳು ಯಾವ ರೀತಿಯಲ್ಲಿವೆಯೆಂದರೆ ಗಂಡಸು ಹೇಗೆ ಭಾಷೆಯನ್ನು ಬಳಸುತ್ತಾನೋ ಹೆಂಗಸೂ ಹಾಗೇ ಭಾಷೆಯನ್ನು ಬಳಸಬೇಕು. ಆದರೆ ಇದು ಒಂದು ಸವಾಲು. ಇಲ್ಲಿ ಗಂಡು–ಹೆಣ್ಣು ಇಬ್ಬರ ಭಾಷೆಯನ್ನು ಹೇಳುತ್ತಾ ಹೆಣ್ಣಿನ ಭಾಷೆಯನ್ನು ಮೂಲ ರೂಪದ ವಿಕಲ್ಪವೆಂದು ಹೇಳಲಾಗುತ್ತದೆ. ಸಾಮಾಜಿಕ ಸಂಕಥನಗಳಲ್ಲಿ ಒತ್ತಾಯವು ಯಾವ ರೀತಿ ಇರುತ್ತದೆಂದರೆ ಈಕೆ ಕೂಡ ಯಾವ ರೀತಿಯ ಪದವನ್ನು ಹೇಗೆ ಬಳಸಬೇಕೆಂಬ ಬಗೆಗೆ ನಿಯಮಗಳು ಇರುತ್ತವೆ. ಉದಾ: ನಿಮಗೆ ತೆಲುಗು ಗೊತ್ತು, ಕನ್ನಡ ಗೊತ್ತಿಲ್ಲವೆಂದುಕೊಳ್ಳಿ. ಒಂದು ವಾತಾವರಣದಲ್ಲಿ ನೀವು ಕನ್ನಡ ಬಳಸಬೇಕಾಗಿ ಬಂದರೆ ಕನ್ನಡ ಕಲಿತುಕೊಳ್ಳಬೇಕಾಗುತ್ತದೆ ಹಾಗೂ ತೆಲುಗು ಮಾತಾಡದೇ ಇರಬೇಕಾಗುತ್ತದೆ. ಇಲ್ಲದಿದ್ದರೆ 1.ಕೆಲವು ಸಾರಿ ಆಂಗಿಕ ಚಲನ–ವಲನದಿಂದ, 2. ನಮ್ಮ ಭಾಷೆಯಲ್ಲಿ ಮಾತನಾಡದೇ ಇರುವುದರಿಂದ, 3. ನಮ್ಮ ಪಾಡಿಗೆ ನಾವು ಸುಮ್ಮನಿರುವ ಮೂಲಕ ಸಂದರ್ಭವನ್ನು ನಿರ್ವಹಿಸುವುದುಂಟು. ಹೆಚ್ಚು ಕಡಿಮೆ ಗಂಡಸಿಗೆ ಈ ಹೆಣ್ಣುಭಾಷಾಪ್ರಭೇದವನ್ನು ಬಳಸುವ ಒತ್ತಾಯವಿಲ್ಲ. ಹೆಣ್ಣಿಗೆ ತನ್ನ ಪ್ರಭೇದದ ಜೊತೆಗೆ ಗಂಡಸರ ಭಾಷಾಪ್ರಭೇದವನ್ನೂ ಬಳಸುವ ಒತ್ತಡವಿದ್ದು ಈ ಒತ್ತಡ ಬರುತ್ತದೆ. ಭಾಷಾಶಾಸ್ತ್ರದಲ್ಲಿ ಇದನ್ನು ಬೈಡೈಲೆಕ್ಸಿಸಂ ಎನ್ನುತ್ತಾರೆ. ಎರಡು ದೋಣಿಗಳಲ್ಲಿ ಸವಾರಿ ಮಾಡುವ ಕೆಲಸವಿದು. ಅಂದರೆ ಎರಡು ವಲಯಗಳಲ್ಲಿ ನಿಮ್ಮ ಸಾಮರ್ಥ್ಯವನ್ನು ಬಳಸಬೇಕಾಗುತ್ತದೆ. ಎರಡು ವಲಯಗಳಲ್ಲಿ ಹೀಗೆ ಬಳಸುವ ಅವಕಾಶ ಬರುತ್ತದೆಯಾದರೆ ಆಗ ಒಂದು ವಲಯದಲ್ಲಿ ಸಹಜವಾಗಿ ನಿಮ್ಮ ಸಾಮರ್ಥ್ಯಕ್ಕೆ ಕುಂದು ಬರುತ್ತದೆ. ಉದಾ: ಇಂಗ್ಲಿಶ್ ಮತ್ತು ಕನ್ನಡ ಎರಡೂ ಒಬ್ಬ ವ್ಯಕ್ತಿಗೆ ಬರುತ್ತದೆ ಎಂದುಕೊಳ್ಳಿ. ಆಗ ಯಾವುದು ಚೆನ್ನಾಗಿ ಬರುತ್ತದೆ ಎಂದಾಗ 'ಕನ್ನಡ' ಚೆನ್ನಾಗಿ ಬರುತ್ತದೆಯೆಂದು ಹೇಳುತ್ತಾರೆಂದುಕೊಳ್ಳಿ. ಆಗ ಇಂಗ್ಲಿಶ್ ಕನ್ನಡದಷ್ಟು ಚೆನ್ನಾಗಿ ಬರುವುದಿಲ್ಲ ಎಂದು ಹೇಳುತ್ತಾರೆಯೇ ಹೊರತು ಎರಡೂ ಭಾಷೆಗಳು ಚೆನ್ನಾಗಿ ಬರುತ್ತದೆಯೆಂದು ಹೇಳಲಾಗದು. ಅದೇ ರೀತಿಯಾಗಿ ಹೆಣ್ಣು ಎರಡು ಪ್ರಭೇದಗಳನ್ನು ಬಳಸಬೇಕಾದಾಗ ಅವಳು ಗಂಡಸಿನ ಭಾಷಾಪ್ರಭೇದದ ಬಳಕೆಯಲ್ಲಿ ಅಷ್ಟು ಸಮರ್ಥಳಾಗಿರುವುದಿಲ್ಲ. ಸಹಜವಾಗಿ ಅವಳ ಭಾಷೆಯು ಗಂಡಸಿನದರಷ್ಟು ಸಮರ್ಥವಾಗಿರುವುದಿಲ್ಲ. ಇದನ್ನು ಆಕೆಯ ಅಸಾಮರ್ಥ್ಯ ಎಂದೆಲ್ಲಾ ಹೇಳಲಾಗುತ್ತದೆ. ಬೇರೆ ಬೇರೆ ವಲಯದಲ್ಲಿ ಲಿಂಗತಾರತಮ್ಯದ ನೆಲೆಗಳು ಹೇಗೆ ಕ್ರಿಯಾಶೀಲವಾಗುತ್ತವೆ ಎಂಬುದನ್ನು ಗಮನಿಸಿ ಆ ಹಂತದ ತಿಳುವಳಿಕೆಯನ್ನು ಭಾಷೆಯ ನೆಲೆಗೂ ಅನ್ವಯಿಸಿ ಹೇಳಲಾಗುತ್ತಿದೆ. ಉದಾ: ದೈಹಿಕ ಶ್ರಮವಹಿಸಿ ಎಂಟುಗಂಟೆಗಳ ಕಾಲ ಬಿಸಿಲಲ್ಲಿ ದುಡಿಯುವ ಸಾಮರ್ಥ್ಯವು ಗಂಡಿಗಿರುತ್ತದೆಯೆಂದಾದರೆ, ಹೆಣ್ಣಿಗೂ ಆ ಜಾಗದಲ್ಲಿ ನೀನು ಕೂಡ ದುಡಿ ಎಂದು ಹೇಳಲಾಗುತ್ತದೆ. ಆ ದುಡಿಮೆಗೆ ಹೋದಾಗ ಸಹಜವಾಗಿ ಈತನ ದೈಹಿಕ ಶ್ರಮದಿಂದ ದುಡಿಮೆಯು ಎಷ್ಟು ಸಾಧ್ಯವಾಗುತ್ತದೋ ಅಷ್ಟು ಸಾಧನೆ

ಹೆಣ್ಣಿಗೆ ಸಾಧ್ಯವಾಗದಾದಾಗ ಇದು ಈಕೆಯ ಅಸಾಮರ್ಥ್ಯವೆಂದು ವ್ಯಾಖ್ಯಾನಿಸಬಹುದೇ?. ಉದಾ:ಗೆ ಗಂಡು ನೂರು ಕೆ.ಜಿ ಚೀಲವನ್ನು ಎತ್ತುವನು. ಹೆಣ್ಣು ಅರವತ್ತು ಕೆ.ಜಿ ಮಾತ್ರ ಎತ್ತಬಲ್ಲಳು ಇದರಿಂದ ಹೆಣ್ಣು ಎಷ್ಟೇ ಶ್ರಮ ಪಟ್ಟರೂ ಹೋಲಿಸಿ ಹೇಳುವಾಗ ಸಹ ಆಕೆಯ ಸಾಧನೆ ಗಂಡಸಿಗಿಂತ ಕಡಿಮೆಯೇ ಆಗುತ್ತದೆ. ಇಂತಹ ಒಂದು ವಾತಾವರಣ ಸೃಷ್ಟಿಯಾಗುತ್ತದೆ. ಗಂಡಸಿನ ವಲಯದಲ್ಲಿ ಹೆಂಗಸು ತಮ್ಮ ಸಾಮರ್ಥ್ಯ ಪ್ರಕಟಿಸಬೇಕೆಂದಾಗ ಆಕೆಗೆ ಕೂಡ ಆತನಷ್ಟೇ ಸಾಧನೆ ಮಾಡಬೇಕೆನ್ನುವ ಒತ್ತಾಯವಿರುತ್ತದೆ. ಇದು ಕೇವಲ ಭಾಷೆಗೆ ಸಂಬಂಧ ಪಟ್ಟ ಸಂಗತಿಯಲ್ಲ. ಎಲ್ಲ ವಲಯದಲ್ಲೂ ಇದ್ದು ಭಾಷೆಯಲ್ಲಿಯೂ ಕಾಣಿಸಿಕೊಳ್ಳುತ್ತದೆ. ಗಂಡಸು ಭಾಷೆಯನ್ನು ಹೇಗೆ ಬಳಸುತ್ತಾನೋ ಅಲ್ಲಿ ಆ ಹೆಣ್ಣು ಪ್ರವೇಶ ಪಡೆಯಬೇಕಾದಾಗ ಎರಡು ಬಗೆಯ ಭಾಷೆಯನ್ನು ಬಳಸಬೇಕು, ಬಳಸಲು ಹೊರಟಾಗ ಆಕೆ ಗಂಡಸಿಗಿಂತ ಎರಡನೆ ದರ್ಜೆಯಲ್ಲಿ ಕಾಣಿಸಿಕೊಳ್ಳುತ್ತಾಳೆ. ಅದರ ವ್ಯಾಖ್ಯಾನದಲ್ಲಿ ಭಾಷಾಬಳಕೆಯಲ್ಲಿ ಗಂಡಸು ಸಮರ್ಥ, ಹೆಣ್ಣು ಆತನಷ್ಟು ಸಮರ್ಥಳಲ್ಲವೆಂಬ ನೆಲೆ ರೂಪುಗೊಳ್ಳುತ್ತದೆ. ಆದಕಾರಣ ಶ್ರೇಷ್ಠ ಕವಿಯತ್ರಿಯರಿಲ್ಲ, ಕಥೆಗಾರರಿಲ್ಲ, ಕಾದಂಬರಿಕಾರರಿಲ್ಲ, ನಾಟಕಕಾರ್ತಿಯರಿಲ್ಲ, ಭಾಷಣಕಾರ್ತಿಯರಿಲ್ಲ, ಈ ಸಂಕಥನಗಳೆಲ್ಲವೂ ಗಂಡಸಿನ ಭಾಷೆಯ ವಲಯಗಳಾಗಿ ರೂಪುಗೊಂಡಿವೆ. ಅಲ್ಲಿ ಪ್ರವೇಶ ಪಡೆಯಬೇಕಾದರೆ ಹೆಂಗಸು ಸಹಜವಾಗಿಯೇ ಆ ರೀತಿಯ ಭಾಷೆಯನ್ನು ಬಳಸಬೇಕಾದಾಗ ಸಹಜವಾಗಿ ಅಲ್ಲಿ ಆಕೆಯ ಕುಂದು ಕಂಡುಬರುತ್ತದೆ. ಅದನ್ನೇ ಅಸಾಮರ್ಥ್ಯ ಎಂದು ಪರಿಗಣಿಸಲಾಗುತ್ತದೆ.

ಇಂಥ ಪರಿಸ್ಥಿತಿಯನ್ನು ಹೇಗೆ ನಿಭಾಯಿಸಬೇಕೆಂಬುದು ಎರಡನೇ ಪ್ರಶ್ನೆಯಾಗಿದೆ. ಇದು ಹೀಗಿದೆ ಎಂದ ಮಾತ್ರಕ್ಕೆ ಹೀಗೇ ಇರಬೇಕೆಂದೇನೂ ಇಲ್ಲ. ಉದಾ: ಶೇಕ್ಸ ಪಿಯರ್‌ನ ನಾಟಕ ಮರ್ಚೆಂಟ್ ಆಫ್ ವೆನಿಸ್. ಅದರಲ್ಲಿ ಆಂಟೋನಿ ಅಂತ ಒಬ್ಬ ಸಾಹುಕಾರನಿರುತ್ತಾನೆ. ಅವನ ಹಡಗುಗಳು ಮುಳುಗಿರುವುದರಿಂದ ಅವನಿಗೆ ಹಣ ಬೇಕಾಗಿರುತ್ತದೆ. ವ್ಯಾಪಾರಿ ಶೈಲಾಕ್‌ನಿಂದ ಹಣ ಸಾಲ ಪಡೆದುಕೊಳ್ಳುತ್ತಾನೆ. ಶೈಲಾಕ್ ಒಂದು ಶರತ್ತನ್ನು ಹಾಕಿ ಸಾಲ ನೀಡಿರುತ್ತಾನೆ. ಇಷ್ಟು ಸಮಯದಲ್ಲಿ ನನಗೆ ಹಣ ಮರಳಿಸಬೇಕು. ಇಲ್ಲವಾದರೆ ನಿನ್ನ ದೇಹದಲ್ಲಿನ ಒಂದು ಪೌಂಡ್ ಮಾಂಸವನ್ನು ಕೊಡಬೇಕು ಎಂಬುದೇ ಆ ಶರತ್ತು. ಅದಕ್ಕೆ ಹಳೆಯ ದ್ವೇಷ ಕಾರಣವಾಗಿರುತ್ತದೆ. ಹಣ ತೀರಿಸಲು ಆಗದಿದ್ದಾಗ ಆ ಶೈಲಾಕ್ ತನ್ನ ಶರತ್ತು ಮುಂದಿಡುತ್ತಾನೆ. ಕತ್ತಿ ಮಸೆಯಲು ಆರಂಭಿಸುತ್ತಾನೆ. ಆಗ ಆಂಟೋನಿ ಪರವಾಗಿ ವಾದ ಮಾಡುವ ಲಾಯರನು ಚಾಣಾಕ್ಷತನದಿಂದ ವಾದ ಮಾಡಿ ಶೈಲಾಕನಿಗೆ ಹೀಗೆ ಹೇಳುತ್ತಾನೆ. ಮಾಂಸ ತೆಗೆದುಕೊಳ್ಳ ಬಹುದು, ಆದರೆ ಹಾಗೆ ತೆಗೆದುಕೊಳ್ಳುವಾಗ ಒಂದು ತೊಟ್ಟು ರಕ್ತ ಕೂಡ ಚೆಲ್ಲಕೂಡದು, ಒಂದು ತೊಟ್ಟು ರಕ್ತ ಕೆಳಗೆ ಬಿದ್ದರೂ ಅದಕ್ಕೆ ನೀನು ದಂಡ ತೆರಬೇಕು. ಅಲ್ಲಿ ಲಾಯರ್ ಆಗಿ ಬಂದವಳು ಆಂಟೋನಿಯ ಪ್ರೇಯಸಿಯಾಗಿರುತ್ತಾಳೆ. ಪೋರ್ಷಿಯಾ ಎಂಬುದು ಅವಳ ಹೆಸರು, ಇಲ್ಲಿ ಅವಳು ವೇಷ ಮರೆಸಿಕೊಂಡು ಬಂದಿರುತ್ತಾಳೆ. ಲಾಯರ್ ತರಹ ಗಂಡು ವೇಷ ಹಾಕಿರುತ್ತಾಳೆ. ಅವಳು ಗಂಡುವೇಷ ತೊಟ್ಟು

ಲಾಯರ್ ಆಗಿ ಯಾಕೆ ಬಂದಳು ಎಂಬುದು ತುಂಬಾ ಕುತೂಹಲಕಾರಿ. ಅಂದರೆ ಪ್ರಭಾವಯುತವಾಗಿ ವಾದ ಮಂಡಿಸಬೇಕಾದರೆ ಗಂಡು-ಹೆಣ್ಣುಗಳ ನಡುವೆ ಇರುವ ವ್ಯತ್ಯಾಸವನ್ನು ಕಳೆದುಕೊಳ್ಳಬೇಕು. ಅಂದರೆ ಯಾವುದೇ ಬಗೆಯ ವ್ಯತ್ಯಾಸವೇ ಇರಲಿ, ಅದನ್ನು ಕಳೆದುಕೊಳ್ಳಬೇಕೆಂಬ ಒತ್ತಾಯವನ್ನೇ ಪರಿಣಾಮ ಮೀಮಾಂಸೆ ಎನ್ನಲಾಗುತ್ತದೆ. ನಿರಾಕರಿಸಬೇಕು ಎನ್ನುವ ಒತ್ತಡವಿದ್ದರೆ, ಇನ್ನೊಂದು ಪ್ರತಿಕ್ರಿಯೆ ಎಂದರೆ ವ್ಯತ್ಯಾಸವನ್ನು ಕಾಯ್ದು ಕೊಳ್ಳಬೇಕು. ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನದಲ್ಲಿ ಈ ರೀತಿಯ ಭಾಷಾವ್ಯತ್ಯಾಸವನ್ನು ಕಾಯ್ದುಕೊಳ್ಳಲಾಗುತ್ತದೋ ಅಥವಾ ಕಳೆದುಕೊಳ್ಳಲಾಗುತ್ತದೋ ಎಂದರೆ ಎರಡೂ ಸಾಧ್ಯತೆಗಳು ಇರುತ್ತವೆ ಎನ್ನುವುದೇ ನಿಜ. ಕಳೆದುಕೊಳ್ಳುವ ಒತ್ತಾಯ ಅಮೇರಿಕನ್ ಸ್ತ್ರೀವಾದದಲ್ಲಿದೆ. ಇದಕ್ಕೋಸ್ಕರ ಯಾವ ಯಾವ ಕ್ಷೇತ್ರದಲ್ಲಿ ಗಂಡಸು ಸಾಧಿಸುತ್ತಾನೆಯೋ ಅಲ್ಲೆಲ್ಲ ಕಡೆಯೂ ಹೆಣ್ಣು ಕೂಡ ಸಾಧಿಸಬಲ್ಲಳೆಂದು ತೋರಿಸುವ ಹಪಾಹಪಿ ಇರುತ್ತದೆ. ಈ ವ್ಯತ್ಯಾಸ ಕಳೆದುಕೊಳ್ಳುವುದನ್ನು ಮಾಧ್ಯಮಗಳು ಎತ್ತಿ ಹೇಳುತ್ತವೆ. ಸುದ್ದಿ ಮಾಡುತ್ತವೆ. ಇಲ್ಲಿ ವ್ಯತ್ಯಾಸವನ್ನು ಕಳೆದುಕೊಳ್ಳುವುದು ಮುಖ್ಯವಾಗುತ್ತದೆ.. ಫ್ರೆಂಚ್ ಸ್ತ್ರೀವಾದಿಗಳು ಈ ವ್ಯತ್ಯಾಸವನ್ನು ಕಾಯ್ದುಕೊಳ್ಳಬೇಕು ಎಂದು ಹೇಳುತ್ತಾರೆ. ಅದರ ಜೊತೆಗೆ ಸಾಮಾಜಿಕ ತಾರತಮ್ಯದ ನಿವಾರಣೆಯ ಅಗತ್ಯವನ್ನು ಕುರಿತು ಹೇಳುತ್ತಾರೆ. ಇದು ಬಹಳ ವಿಶಿಷ್ಟವಾದುದು. ಇವೆರಡೂ, ಭಾಷೆಯಲ್ಲಿ ಯಾವ ರೀತಿ ಕ್ರಿಯಾಶೀಲವಾಗುತ್ತವೆಂಬುದು ಗಮನಾರ್ಹ. ಉದಾ: ಸೈಕಲ್ ನೋಡಿ. ಅದರ ರಚನೆ ಗಂಡಸರ ಪರವಾಗಿದೆ. ಅಂದರೆ ಹೆಣ್ಣು ತನ್ನ ವೇಷವನ್ನು ಮರೆಸಿ/ ಬದಲಿಸಿ ಸೈಕಲ್ ಸವಾರಿ ಮಾಡಬಹುದು. ಇಲ್ಲಿ ಗಂಡು-ಹೆಣ್ಣಿನ ವ್ಯತ್ಯಾಸ ಕಾಯ್ದುಕೊಳ್ಳಬೇಕಾದರೆ ಅದರ ಮಧ್ಯೆ ಇರುವ ಬಾರನ್ನು ಬದಲಿಸಬೇಕು. ಅಂದರೆ ಒಂದು ವಸ್ತು ಗಂಡಸಿನ ಪರವಾಗಿದ್ದಾಗ ಹೆಣ್ಣು ಅದರ ಸೌಲಭ್ಯ ಪಡೆಯಬೇಕಾದರೆ ಅದಕ್ಕೆ ಯಾವ ರೀತಿಯ ಅಡೆತಡೆಗಳು ಬರುತ್ತವೆ ಎಂದು ಗಮನಿಸಿ ಅದಕ್ಕೆ ಹೊಂದಿಕೊಳ್ಳುವುದು, ಇಲ್ಲವಾದರೆ ಅದರ ಉಪಕರಣವನ್ನೇ ಬದಲಿಸುವುದು. ಇಂತಹ ಎರಡು ಆಯ್ಕೆಗಳಲ್ಲಿ ಒಂದನ್ನು ಆರಿಸಿಕೊಳ್ಳಬೇಕಾಗುತ್ತದೆ. ಅಂದರೆ ಗಂಡಸಿನ ಭಾಷಾ ಮಾದರಿಯಲ್ಲಿಯೇ ಹೆಣ್ಣು ತನ್ನನ್ನು ಗುರುತಿಸಿಕೊಳ್ಳುವುದು ಅಂದರೆ ತನ್ನನ್ನು ತಾನೆ ಕಳೆದುಕೊಳ್ಳುವುದು ಎಂದರ್ಥ. ಉದಾ: ಚಿತ್ರಾಂಗದೆಯನ್ನು ಗಮನಿಸಿ. ಅವಳನ್ನು ಗಂಡಸಿನಂತೆ ಬೆಳೆಸುತ್ತಾರೆ. ಅರ್ಜುನ ಯಾತ್ರೆ ಬಂದ ಸಂದರ್ಭದಲ್ಲಿ ಗುಟ್ಟು ಗೊತ್ತಾಗುತ್ತದೆ. ಅಂದರೆ ಈ ವ್ಯತ್ಯಾಸ ಕಳೆದುಕೊಳ್ಳಬೇಕೆನ್ನುವ ಸಾಮಾಜಿಕ ಒತ್ತಡವಿದೆ. ಅಂದರೆ ಭಾಷೆಯಲ್ಲಿ ಕೂಡ ಈ ರೀತಿ ಒತ್ತಾಯವಿರುತ್ತದೆ. ಹೆಣ್ಣಿಗೆ ಗಂಡಸಿನ ಭಾಷೆಯನ್ನೇ ಬಳಸುವಂತೆ ಸವಾಲು ಹಾಕಲಾಗುತ್ತದೆ. ಇದೊಂದು ಬಲೆ. ಸ್ತ್ರೀವಾದಿಗಳು ಇದನ್ನು ಒಂದು ಬೋನು ಎನ್ನುತ್ತಾರೆ. ಬಹುತೇಕ ಹೆಂಗಸರು ಈ ವಿವರಣೆಯನ್ನು ಒಪ್ಪುತ್ತಾರೆ. ಬಹುತೇಕ ಗಂಡುಭಾಷಾ ಸಂಕಥನಗಳಲ್ಲಿ ತನ್ನ ಪಾತ್ರವನ್ನು ಒಪ್ಪಿಕೊಳ್ಳುತ್ತಾಳೆ. ವ್ಯತ್ಯಾಸ ಕಾಯ್ದುಕೊಳ್ಳುವುದು ಅಗತ್ಯವಾದರೆ ಹಾಗೆ ಮಾಡಿದಾಗ ಅದು ತಾರತಮ್ಯವಾಗದ ರೀತಿಯಲ್ಲಿ ನಿರ್ವಹಿಸಬೇಕಾಗುತ್ತದೆ. ಅದು ಕೇವಲ ಭಿನ್ನತೆಯಾಗಿರಬೇಕೇ ವಿನಃ ತಾರತಮ್ಯವಾಗಕೂಡದು. ಈ ರೀತಿಯ ವ್ಯಾಖ್ಯೆ ಕೂಡ ಸ್ತ್ರೀವಾದಿ ಆಶಯವಾಗಿ ಕಾಣಿಸುತ್ತದೆ. ಅಂದರೆ ಭಾಷೆಯ ಪ್ರಭೇದಗಳಲ್ಲಿರುವ ವ್ಯತ್ಯಾಸವು ತರತಮಭಾವವನ್ನು

ಮುಂಡಿಸುವ ನೆಲೆಯಲ್ಲಿ ಕ್ರಿಯಾಶೀಲವಾಗುವುದನ್ನು, ಅಂತಹ ರೀತಿಯನ್ನು ಸಾಂಸ್ಕೃತಿಕವಾಗಿ ನಿವಾರಣೆ ಮಾಡಬೇಕಾಗುತ್ತದೆ. ಆ ವ್ಯತ್ಯಾಸವು ಕೇವಲ ಭಿನ್ನತೆಯಾಗಬೇಕೇ ಹೊರತು ಮೇಲು–ಕೀಳು, ಉತ್ತಮ–ಅದಮ, ಸರಿ–ತಪ್ಪು, ಅನ್ನುವ ನೆಲೆಯಲ್ಲಿ ಇರಕೂಡದು. ಮತ್ತೆ ಹೆಂಗಸಿನ ಭಾಷೆ–ಗಂಡಸಿನ ಭಾಷೆ ಅದು ಕೇವಲ ವಿವರಣೆ, ಅದರಾಚೆಗೆ ಮತ್ತೇನೂ ಅಲ್ಲ ಎನ್ನುವ ಚಿಂತನಾಸರಣಿಯನ್ನು ರೂಪಿಸಿದ್ದಾರೆ. ಸಾಮಾಜಿಕವಾಗಿ ಇರುವ ಈ ತಾರತಮ್ಯವನ್ನು ನಿರಾಕರಿಸುವುದರಿಂದ ಉಪಯೋಗವಿಲ್ಲ. ಏಕೆಂದರೆ ಅದು ಇದ್ದೇ ಇರುತ್ತದೆ. ಇಲ್ಲವೇ ಇಲ್ಲ ಎಂದು ಕಣ್ಮುಚ್ಚಿಕೊಳ್ಳಲು ಆಗುವುದಿಲ್ಲ. ತುಂಬಾ ಸಂದರ್ಭದಲ್ಲಿ ಇರುವ ಅಸಮಾನತೆಯನ್ನು ಇಲ್ಲ ಎಂದು ಹೇಳಲಾಗುವುದಿಲ್ಲ.

ಹೆಂಗಸು ಬಳಸುವ ಭಾಷಾಪರಿಕರಗಳ ವಿಶಿಷ್ಟತೆಗಳನ್ನು ಅರಿಯಲು ಈಚೆಗೆ ಕಂಪ್ಯೂಟರ್ ಮೀಡಿಯೇಟೆಡ್ ಕಮ್ಯೂನಿಕೇಷನ್‌ಗಳ ಮಾಹಿತಿಯನ್ನು ಬಳಸುತ್ತಿದ್ದಾರೆ. ಏಕೆಂದರೆ ಬೇರೆ ಸಂವಹನ ಮಾಧ್ಯಮಗಳಲ್ಲಿ ಮಾತಾಡುತ್ತಾ ಇದ್ದರೆ ಮಾತಾಡುತ್ತಾ ಇರುವವರು ಗಂಡಸು ಇಲ್ಲವೇ ಹೆಂಗಸು ಎಂಬುದು ಗೊತ್ತಾಗುತ್ತದೆ. ಅದನ್ನು ಮುಚ್ಚಿಡುವುದಕ್ಕೆ ಆಗುವುದಿಲ್ಲ. ಒಬ್ಬ ವ್ಯಕ್ತಿ ತೆರೆ ಹಿಂದೆ ನಿಂತು ಮಾತಾಡುತ್ತಿದ್ದರೂ ಕೂಡ ನಾವು ಅದು ಯಾರೆಂದು ಕಂಡು ಹಿಡಿಯುತ್ತೇವೆ. ಆ ವ್ಯಕ್ತಿ ಗಂಡಸಾಗಿದ್ದು ನಿರಂತರವಾಗಿ ಹೆಂಗಸಿನ ಧ್ವನಿಯನ್ನು ಅನುಕರಿಸುತ್ತಿದ್ದರೂ ಖಂಡಿತವಾಗಿ ಅದು ಗಂಡಸು ಎನ್ನುವುದು ನಮಗೆ ಗೊತ್ತಾಗುತ್ತದೆ. ಅದು ಮೇಲೆ ಹೇಳಿದ ಸಂದರ್ಭದಲ್ಲಿ ಗೊತ್ತಾಗುವುದಿಲ್ಲ. ಅಲ್ಲಿ ಹೆಂಗಸು ನಿಜವಾಗಿ ತನ್ನ ದೈಹಿಕ ಮತ್ತು ಮಾನಸಿಕ ಚಹರೆಯನ್ನು ಉಳಿಸಿಕೊಂಡಿರುತ್ತಾಳೆ. ಅಲ್ಲಿ ಯಾರು ಮಾತಾಡುತ್ತಿದ್ದಾರೆ ಅನ್ನುವುದನ್ನು ಮುಚ್ಚಿಡಲಾಗುತ್ತದೆ.. ಅವರಿಗೆ ಒಂದು ಗುರುತಿನ ಹೆಸರು (ನಿಜವಾದುದಲ್ಲ) ಇರುತ್ತದೆ. ಗಂಟೆಗಟ್ಟಲೆ ಬರೆಯುವುದರ ಮುಖಾಂತರ ಮಾತಾಡುತ್ತಾ ಇರುತ್ತಾರೆ. ಚಾಟಿಂಗ್ ಅಂದರೆ ಮಾತು ಅನ್ನುವ ಅರ್ಥ ಇದೆ. ಇಲ್ಲಿ ಗಂಡಸು ಅಥವಾ ಹೆಂಗಸು ಅನ್ನುವುದನ್ನು ಮುಚ್ಚಿಟ್ಟರೂ ಕೂಡ ಅವರ ಭಾಷೆಯ ಬಳಕೆಯಲ್ಲಿಯೇ ಆ ಚಹರೆ ಕಾಣಿಸಿಕೊಳ್ಳುತ್ತದೆ. ಇತ್ತೀಚಿಗೆ ಈ ಬಗೆಯ ಅಧ್ಯಯನ ನಡೆಯುತ್ತಿವೆ. ಹೆಣ್ಣುಮಕ್ಕಳು ಹೀಗೆ ಮುಚ್ಚಿಟ್ಟುಕೊಂಡರೂ ಅವರ ಭಾಷೆಯಲ್ಲಿ ಅವರು ಮಾತಾಡುತ್ತಾ ಇರುತ್ತಾರೆ. ಇದೇ ರೀತಿ ಗಂಡಿಗೂ ಕೂಡ ಸಾಧ್ಯ. ಈ ಬಗೆಯ ಮಾತುಕತೆಗಳ ದಾಖಲೆಗಳನ್ನು ಇಟ್ಟುಕೊಂಡು ಈಗ ಅಧ್ಯಯನ ಮಾಡಲಾಗುತ್ತದೆ. ಅಲ್ಲಿ ಈ ರೀತಿಯ ಲಕ್ಷಣಗಳು ಗಾಢವಾಗಿ ಕಾಣಿಸಿಕೊಳ್ಳುತ್ತವೆ. ಸಮಾಜ ನಿರ್ಮಿತವಾದ ವ್ಯವಸ್ಥೆಯಲ್ಲಿ ಇರುವ ಲಿಂಗತಾರತಮ್ಯದ ಪ್ರಭಾವ ಭಾಷೆಯಲ್ಲೂ ಕಂಡು ಬರುತ್ತದೆ. ಎಲ್ಲದಕ್ಕೂ ಕಾರಣ ಸಾಮಾಜಿಕ ತಾರತಮ್ಯ ಅಥವಾ ಇದಕ್ಕೆ ಹೆಂಗಸು ಕೊಟ್ಟ ಪ್ರತಿಕ್ರಿಯೆಯೆ ಆಗಬಹುದು. ಇಲ್ಲಿ ಒಂದೇ ರೀತಿಯ ಬಳಕೆ ಇರುವುದಿಲ್ಲ. ಈ ಬದಲಾವಣೆಗಳು ಅದು ಪ್ರಜ್ಞಾಪೂರ್ವಕವಾಗಿ ಮಾಡಿಕೊಂಡಿದ್ದಲ್ಲದೇ ಇರಬಹುದು. ಆ ಪಾತ್ರ ಅವರು ಅಳವಡಿಸಿಕೊಂಡಿರಬಹುದು.

ಸಾಮಾಜಿಕವಾಗಿ ಇರುವ ಲಿಂಗತಾರತಮ್ಯದ ನೆಲೆಯನ್ನು ಹೆಂಗಸರು ಅನುಭವಿಸುತ್ತಾ ಅದಕ್ಕೆ ಪ್ರತಿಕ್ರಿಯೆಯಾಗಿ ಅಥವಾ ಪರಿಣಾಮವಾಗಿ ತಮ್ಮ ಭಾಷೆಯಲ್ಲಿ ಬದಲಾವಣೆಗಳನ್ನು ಅಳವಡಿಸಿಕೊಳ್ಳುತ್ತಾರೆ. ಗಂಡಸಿನ ಭಾಷೆಗಿಂತ ಭಿನ್ನವಾದ

ಭಾಷೆಯನ್ನು ಬಳಸುತ್ತಾರೆ. ಆದರೆ ಇದು ಕೇವಲ ಒಬ್ಬ ವ್ಯಕ್ತಿಯ ಪ್ರತಿಕ್ರಿಯೆಯಾದರೆ ಅಷ್ಟು ಆಸಕ್ತಿದಾಯಕವಾಗಿರುವುದಿಲ್ಲ. ಹೆಂಗಸಿನ ಭಾಷೆಯಲ್ಲಿನ ಹೆಂಗಸಿನ ವ್ಯತ್ಯಾಸ ಕೇವಲ ಒಂದು ಪ್ರಕರಣದಲ್ಲಿ ಕಾಣಿಸಿಕೊಂಡಿಲ್ಲ. ಇಡೀ ಜಗತ್ತಿನ ಯಾವುದೇ ಒಂದು ಭಾಷಿಕ ಸಮುದಾಯದಲ್ಲಿ ಕೂಡ ಈ ಲಕ್ಷಣ ಅವರ ಭಾಷೆಯ ಬಳಕೆಯಲ್ಲಿ ಕಾಣಿಸಿಕೊಳ್ಳುತ್ತದೆ ಎನ್ನುವುದೇನೇ ನಮಗೆ ಮುಖ್ಯ ಸಂಗತಿಯಾಗಿದೆ.

## ಹೆಣ್ಣಿನ ಮೌನವು ಸ್ವಗತವಾಗುವ ಪ್ರಕ್ರಿಯೆ

ಎಲ್ಲೆಡೆಯೂ ವ್ಯತ್ಯಾಸವಿದ್ದೇ ಇರುತ್ತದೆ. ಆದರೆ ವ್ಯತ್ಯಾಸಗಳಿದ್ದ ಮಾತ್ರಕ್ಕೆ ತಾರತಮ್ಯವಿರಬೇಕೆಂದಿಲ್ಲ. ತಾರತಮ್ಯ ನಮ್ಮ ಸೃಷ್ಟಿ. ತಾರತಮ್ಯಕ್ಕೆ ಕಾರಣಗಳಿರುತ್ತವೆ. ಆ ಕಾರಣಗಳನ್ನು ವಿವರಿಸಿಕೊಳ್ಳಬೇಕಾಗುತ್ತದೆ. ಆ ವ್ಯತ್ಯಾಸ ಹೇಗಾಯ್ತು ಮತ್ತು ಹೇಗೆ ಕಾಯ್ದುಕೊಳ್ಳಲಾಗುತ್ತದೆ, ಅಲ್ಲದೆ ಆ ವ್ಯತ್ಯಾಸವೇ ತಾರತಮ್ಯವಾಗಿ ಮಾರ್ಪಟ್ಟಿರುವ ಬಗೆ ಹೇಗೆ ಎಂಬುದನ್ನು ಗುರುತಿಸಿಕೊಳ್ಳಬೇಕಾಗುತ್ತದೆ. ಭಾಷೆಯ ರಚನೆ ಮತ್ತು ಬಳಕೆಯ ವಿಚಾರದಲ್ಲೂ ಗಂಡಸು ಮತ್ತು ಹೆಂಗಸರಲ್ಲಿ ವ್ಯತ್ಯಾಸವಿದ್ದು ಅದು ತಾರತಮ್ಯ ಸೂಚಕವೂ ಆಗಿದೆ. ಹೆಂಗಸು ತನ್ನ ಭಾಷಾಸ್ವರೂಪವನ್ನು ಹಾಗೆಯೇ ಕಾಯ್ದುಕೊಳ್ಳಬೇಕು ಎಂಬ ವಾದವೊಂದಿದೆ. ಅದಕ್ಕೋಸ್ಕರವೇ ಫ್ರೆಂಚ್ ಸ್ತ್ರೀವಾದಿ ಭಾಷಾಚಿಂತಕರು ಹೆಣ್ಣುಭಾಷೆ ರೂಪಗೊಳ್ಳಬೇಕು ಎಂದು ವಾದಿಸಿದರು. ಹೆಂಗಸಿನಲ್ಲಿ ಅವಳದ್ದೇ ಆದ ಒಂದು ಭಾಷಾ ಪ್ರಭೇದ ರೂಪುಗೊಳ್ಳಬೇಕು. ಆಕೆ ಅದನ್ನು ಬಳಸಬೇಕು. ಅದನ್ನು ಬಳಸಲು ಯಾವುದೇ ಬಗೆಯ ಹಿಂಜರಿಕೆ ಇರಕೂಡದು. ಇದಕ್ಕಾಗಿ ಅವರು ಒಂದು ಕಾರ್ಯಕ್ರಮವನ್ನು ರೂಪಿಸಿದರು. ಇದಕ್ಕೆ ಸಂಬಂಧಿಸಿದಂತೆ ಒಂದು ಚರ್ಚೆಯನ್ನು ಬೆಳೆಸುತ್ತಾ ಹೋದರು. ಹೀಗಾಗಿ ನಾವು ಎರಡು ಪ್ರಶ್ನೆಗಳನ್ನು ಒಟ್ಟಿಗೆ ಎದುರಿಸಬೇಕಾಗುತ್ತದೆ. ಮೊದಲ ಪ್ರಶ್ನೆಯೆಂದರೆ ಗಂಡಸರು ಬಳಸುವ ಭಾಷಾಪ್ರಭೇದವನ್ನೇ ಹೆಂಗಸು ಬಳಸಬೇಕೆನ್ನುವ ಒತ್ತಾಯ ಸಮಾಜದಲ್ಲಿದೆ. ಅದರಿಂದಾಗಿ ಈ ಪರಿಸ್ಥಿತಿಯನ್ನು ಹೆಂಗಸು ಹೇಗೆ ನಿಭಾಯಿಸುತ್ತಾಳೆ ಎಂಬುದೊಂದು ಪ್ರಶ್ನೆ. ಅದಕ್ಕೆ ಸರಳವಾದ ಉತ್ತರವೊಂದನ್ನು ಕಂಡುಕೊಳ್ಳಲಾಗಿದೆ. ಇದನ್ನೇ ಮೌನವನ್ನು ಆಶ್ರಯಿಸುವುದು ಎಂದು ಗುರುತಿಸಲಾಗಿದೆ. ಗಂಡಸಿನ ಭಾಷಾ ಪ್ರಭೇದವನ್ನು ಬಳಸಲೇಬೇಕೆಂಬ ಒತ್ತಾಯವಿದ್ದಾಗ ಹೆಂಗಸು ತನ್ನ ಮಾತಿನ ಬಳಕೆಯನ್ನೇ ಕಡಿಮೆ ಮಾಡುವುದು ಒಂದು ಪ್ರತಿಕ್ರಿಯೆಯಾಗಬಹುದಷ್ಟೆ. ಎರಡನೆಯ ಪ್ರಶ್ನೆಯೊಂದಿದೆ. ಈ ವ್ಯತ್ಯಾಸವನ್ನು ಕಾಯ್ದುಕೊಳ್ಳುವುದು ಮತ್ತು ಕಳೆದುಕೊಳ್ಳುವುದು–ಇವುಗಳಲ್ಲಿ ಯಾವ ಆಯ್ಕೆಯನ್ನು ಮಾಡಿಕೊಳ್ಳಬೇಕೆಂಬುದು. ಆಯ್ಕೆ ಯಾವುದೇ ಆದರೂ ಈ ಸಂಬಂಧದ ಪ್ರಕ್ರಿಯೆಗಳು ಸಾಮಾಜಿಕವಾಗಿ ಸಂಚಲನೆಗೊಂಡಾಗ ಅದರ ಪರಿಣಾಮ ಏನಾಗುತ್ತದೆ ಎನ್ನುವ ಚರ್ಚೆಯನ್ನು ಬೆಳೆಸೋಣ. ಆ ಪ್ರಶ್ನೆಗಳಿಗೆ ನಮ್ಮ ಪರಿಸರದಿಂದ ನಿದರ್ಶನಗಳನ್ನು ಕೊಡುವುದಕ್ಕೆ ಪ್ರಯತ್ನ ಮಾಡುತ್ತೇನೆ.

ಈ ತರಗತಿಯಲ್ಲಿ ನಿನ್ನೆ ಒಂದು ಉದಾಹರಣೆ ಕೊಟ್ಟರು. ಅದರಂತೆ ಯಾವುದೇ ಒಂದು ಕುಟುಂಬದಲ್ಲಿ ಒಂದು ನಿರ್ಧಾರ ತೆಗೆದುಕೊಳ್ಳಬೇಕಾಗಿ ಬಂದಾಗ, ಆ

ನಿರ್ಧಾರ ತೆಗೆದುಕೊಳ್ಳುವಾಗ ತಾಯಿಯನ್ನು ಕೇಳುತ್ತಾರೆ ಎಂದರು. ಅದರಿಂದ ಹೆಣ್ಣಿಗೆ ಕುಟುಂಬದಲ್ಲಿ ಮಹತ್ವವನ್ನು ನೀಡಿದಂತಾಗುವುದಿಲ್ಲವೇ ಎಂಬುದು, ಆ ಉದಾಹರಣೆ ನೀಡಿದವರ ಪ್ರಶ್ನೆ. ತಾಯಿಯ ನಿರ್ಧಾರವನ್ನು ಕೇಳುತ್ತಾರೆ ನಿಜ. ಅದು ಯಾವಾಗಲೂ ಕೂಡ ಎರಡು ತರಹ ಇರಬಹುದು. ಒಂದು ಔಪಚಾರಿಕವಾಗಿ ಕೇಳಿರಬಹುದು. ಅಂದರೆ ಈಗಾಗಲೇ ಏನು ಮಾಡಬೇಕೆಂದು ತೀರ್ಮಾನವಾಗಿರುತ್ತದೆ. ಆದರೆ ಕೊನೆಯಲ್ಲಿ ಕೇಳಿಬಿಡೋಣ ಅಂತ ಕೇಳುವುದು. ಎರಡನೆಯ ಬಗೆಯೆಂದರೆ ನಿರ್ಧಾರ ಪೂರ್ವನಿಶ್ಚಿತವಾಗದೇ ಇದ್ದರೂ ಕೂಡ, ಇವಳು ಏನು ಹೇಳಿದರೂ ಗಂಡಸರು ತಾವು ತೆಗೆದುಕೊಳ್ಳಬೇಕಾದ ನಿರ್ಣಯ ತಾವೇ ತೆಗೆದುಕೊಳ್ಳುವುದು. ಕುಟುಂಬಗಳಲ್ಲಿ ಪ್ರತಿ ದಿವಸ ನೋಡಿದರೆ ಹೆಂಗಸಿನ ಪಾತ್ರದಲ್ಲಿ ಈ ಅಂಶ ಸ್ಪಷ್ಟವಾಗುತ್ತದೆ. ಅಂದರೆ ಹೆಂಗಸಿಗೆ ಮಾತನಾಡುವ ಅವಕಾಶವಿರುತ್ತದೆ. ಆದರೆ ಮಾತಿಗೆ ಅಧಿಕಾರವಿರುವುದಿಲ್ಲ. ನನ್ನ ಮಾತು ನಡೆಯುವುದಿಲ್ಲ ಎಂದು ಹೆಂಗಸರು ಹೇಳುವುದನ್ನು ನೀವು ಕೇಳಿರಬೇಕಲ್ಲ. ಮಾತಿಗೆ ನಡೆಯುವುದಕ್ಕೆ ಬರುವುದಿಲ್ಲವಲ್ಲ. ಮಾತು ನಡೆಯುವುದಿಲ್ಲ ಅಂದರೆ ಅರ್ಥ ಏನು? ಅಂದರೆ ಮಾತಾಡುವುದಕ್ಕೆ ಅವಕಾಶವಿಲ್ಲ ಎಂದಲ್ಲ. ಹೆಂಗಸು ಮಾತಾಡಬಹುದು. ಆದರೆ ಮಾತು ನಡೆಯುವುದಿಲ್ಲ. ಯಾಕೆಂದರೆ ಆಕೆಯ ಮಾತಿಗೆ ಅಧಿಕಾರವಿಲ್ಲ. ಆದರೆ ಮಾತಾಡುವುದು ಕೇವಲ ಒಂದು ಆಚರಣೆಯಲ್ಲ. ಅದಕ್ಕೊಂದು ಉದ್ದೇಶವಿರುತ್ತದೆ. ಕೆಲವೊಮ್ಮೆ ಆಚರಣೆಗಳಿಗೆ ಉದ್ದೇಶವಿರುವುದಿಲ್ಲ. ಅವುಗಳನ್ನು ಆಚರಿಸುವುದೇ ಅವುಗಳ ಉದ್ದೇಶವಾಗಿಬಿಡುತ್ತದೆ. ಅದೇ ಅವುಗಳ ಕೊನೆಯಾಗಬಹುದು. ಅವುಗಳ ಪರಿಣಾಮ ಏನೂ ಇರುವುದಿಲ್ಲ. ಅಂತಹ ಆಚರಣೆಗಳನ್ನು ನೀವು ಗಮನಿಸಿದ್ದೀರಿ. ಆಚರಣೆಗಳಿಗೆ ಅರ್ಥ ಇರಲೇಬೇಕು ಎಂಬ ಒತ್ತಾಯವಿಲ್ಲ. ಉದಾಹರಣೆಗೆ ತನ್ನ ಪಾಡಿಗೆ ತಾನು ಯಾರೋ ಕೈ ಬೀಸಿಕೊಂಡು ಹೋಗುತ್ತಾ ಇರುತ್ತಾರೆ. ಎದುರಿಗೆ ಯಾರೋ ಬರುತ್ತಾ ಇರುತ್ತಾರೆ. ಅವರು ಪರಿಚಿತರು ಎಂದುಕೊಳ್ಳಿ. ಅವರು ಇವರನ್ನು ನೋಡಿ ನಗುತ್ತಾರೆ. ಏನಿದರ ಅರ್ಥ? ಅರ್ಥ ಏನಿಲ್ಲ. ಅದು ಹಾಗೇ ಆಗಬೇಕಷ್ಟೇ. ಆ ಕ್ಷಣಕ್ಕೆ ಅದು ಆಗದೆ ಇದ್ದರೆ ಮಾತ್ರ, ನೋಡಿದರೂ ನೋಡದಂತೆ ಹೋದರು. ನನ್ನ ಕಂಡರೆ ನಗಲಿಲ್ಲ ಎಂಬ ಮಾತಿಗೆ ಕಾರಣವಾಗುತ್ತದೆ. ನಕ್ಕರೆ ಅರ್ಥ ಏನಿಲ್ಲ . ಅದು ಏನನ್ನೂ ಸಂವಹಿಸುತ್ತಿರುವುದಿಲ್ಲ. ಹೆಂಗಸಿನ ಭಾಷೆಗೆ ಕೂಡ ಹೀಗೆ ಒಂದು ಆಚರಣೆಯ ಲಕ್ಷಣವಿರುತ್ತದೆ.

ಕೆಲವೊಮ್ಮೆ ಅದಕ್ಕೆ ಒಂದು ಬದಲಾವಣೆ ಉಂಟು ಮಾಡುವ ಅಧಿಕಾರ ಇರುತ್ತದೆ. ಇದನ್ನು ತುಂಬಾ ಜನ ಹೆಂಗಸರು ಬೆಳೆಯುತ್ತಾ ಹೋದಂತೆ ಅನುಭವಿಸುತ್ತಾರೆ. ಅದು ಅವರ ಅರಿವಿನ ಭಾಗವಾಗುತ್ತದೆ. ಅವರ ಸಂಕಥನಗಳು ಕೇವಲ ಸಂಭವಿಸಬೇಕಷ್ಟೆ. ಅದೊಂದು ಸಣ್ಣ ಅಭಿಪ್ರಾಯ ಕೇಳುವುದಿರಬಹುದು, ಚರ್ಚೆಗಳಿರಬಹುದು, ನಿರೂಪಣೆ ಮುಂತಾದವುಗಳು ಇರಬಹುದು.ಅದಕ್ಕೆ ಗುರಿ ಅಥವಾ ಉದ್ದೇಶ ಇರುವುದಿಲ್ಲ. ಹೇಗಾದರೂ ಅದು ನಡೆಯುತ್ತಾ ಇರಬೇಕಷ್ಟೆ ಹೆಂಗಸು ಮಾತನಾಡುವಾಗ ಅವಳ

ಮಾತಿನ ವಿಷಯ ಅವಳ ಕುಟುಂಬಕ್ಕೆ ಇಲ್ಲವೇ ಅವಳಿಗೆ ಸಂಬಂಧಪಟ್ಟ ಅಥವಾ ಸಂಬಂಧಪಡದಿರುವ ಸಂಗತಿಯಾಗಿರಲಿ, ಅಲ್ಲಿ ಹೆಂಗಸಿನ ಮಾತಾಡುವಿಕೆ ಕೇವಲ ಒಂದು ಆಚರಣೆಯಾಗಿರುತ್ತದೆ. ಹೆಣ್ಣು ಗಂಡಿನ ಸಂಭಾಷಣೆಯಲ್ಲಿ ಹೆಣ್ಣಿನ ಅಭಿಪ್ರಾಯ ಕೇಳಿಸಿಕೊಳ್ಳುತ್ತಾರೆ. ಆದರೆ ಅದನ್ನು ನಿರಾಕರಿಸುವುದಿಲ್ಲ. ಅದರ ಪಾಡಿಗೆ ಅದು ಇರುವಂತೆ ಇರುತ್ತದೆ ಎನ್ನುವಂತೆ ಇರುತ್ತಾರೆ. ತಮ್ಮ ಮಾತನ್ನು ಮುಂದುವರೆಸುತ್ತಾರೆ. ಆಕೆಗಿರುವ ಭಾಷಿಕ ಬಳಕೆಯ ಅವಕಾಶವನ್ನು ಮಂಡನೆಗೆ ಅನುವುಮಾಡಿಕೊಟ್ಟರೂ ಅಲ್ಲಿ ಅದು ಕೇವಲ ಆಚರಣೆಯಾಗಿರುತ್ತದೆ. ತುಂಬಾ ಸಂದರ್ಭದಲ್ಲಿ ಇದಕ್ಕೆ ಬೆಲೆಯಿಲ್ಲವೆಂಬುದರ ಅರಿವು ಹೆಂಗಸರಿಗಿರುವುದಿಲ್ಲ. ತಮಗಿರುವ ಮಾತಿನ ಅವಕಾಶದ ಬಳಕೆಯಾಗುತ್ತಿದೆಯೆಂದು ಭಾವಿಸುತ್ತಾರೆ. ಈ ಪರಿಸ್ಥಿತಿ ಇದ್ದರೂ ಅದರ ಅರಿವು ಇರುವುದಿಲ್ಲ. ಉದಾ: ಒಬ್ಬರ ಬೆನ್ನ ಮೇಲೆ ನಾನೊಬ್ಬ ಶತದಡ್ಡ ಎಂದು ಬರೆದ ಚೀಟಿ ಅಂಟಿಸಿದಾಗ ಜನ ಅದನ್ನು ನೋಡಿ ನಗುತ್ತಾ ಇರುತ್ತಾರೆ ಎಂದುಕೊಳ್ಳಿ. ಚೀಟಿ ಬೆನ್ನ ಮೇಲೆ ಇರುವವರಿಗೆ ಜನರು ನಗುವುದೇಕೆ ಎನ್ನುವುದು ಗೊತ್ತಾಗುವುದಿಲ್ಲ. ಆದರೆ ಅದು ತನ್ನ ಬೆನ್ನ ಮೇಲಿರುವವರಿಗೆ ಚೀಟಿಯನ್ನು ನೋಡಿ ನಗುತ್ತಿರುವುದು ಎಂದು ಗೊತ್ತಾದ ತಕ್ಷಣ ಪರಿಸ್ಥಿತಿಯು ಬದಲಾಗುತ್ತದೆ; ಅರಿವಾಗುತ್ತದೆ. ಆಗ ಅವರ ಮನಸ್ಥಿತಿ ಏನಾಗುತ್ತದೆ?. ಅಂದರೆ ಪರಿಸ್ಥಿತಿ ಇರುವುದು ಬೇರೆ, ಅದರ ಅರಿವು ಮೂಡುವುದು ಬೇರೆ. ಎಷ್ಟೋ ಜನ ಹೆಂಗಸರಿಗೆ ಈ ಪರಿಸ್ಥಿತಿಯ ಅರಿವಾಗದೇ ಅವರ ಜೀವನದ ಯಾತ್ರೆಯನ್ನು ಪೂರ್ತಿಗೊಳಿಸುತ್ತಾರೆ. ಅದು ಅರಿವಿನ ಭಾಗವಾಗುವುದೇ ಇಲ್ಲ. ನನ್ನ ಮಾತಿಗೆ ಬೆಲೆ ಇಲ್ಲ, ನಾನು ಆಡುವ ಮಾತು ಕೇವಲ ಆಚರಣೆಯಾಗುತ್ತದೆ ಎಂಬುದನ್ನು ಅವರು ಅರಿಯುವುದಿಲ್ಲ. ತಮ್ಮ ಮಾತುಗಳಿಗೆ ಮುಂಚಾಚು ಇಲ್ಲವೆಂಬುದನ್ನು ಗೊತ್ತುಮಾಡಿಕೊಳ್ಳುವುದೂ ಇಲ್ಲ. ಅದಕ್ಕಾಗಿ ಹೆಣ್ಣು ಮಕ್ಕಳು ಕಥೆ ಹೇಳೋದು ಹೆಚ್ಚು . ಉದಾ: ಅಜ್ಜಿ ಕಥೆಗಳಿವೆ / ಅಜ್ಜನ ಕಥೆಗಳಿಲ್ಲ. ದೆವ್ವದ ಕಥೆ ಹೇಳುವುದು ಮಕ್ಕಳಿಗೆ ಭಯವುಂಟುಮಾಡುವುದಕ್ಕಲ್ಲ. ಆ ಕಥೆಗಳು ಭಾಷಿಕವಾದವು. ಅದನ್ನು ಕೇಳುತ್ತಿರುವ ಸಂದರ್ಭದಲ್ಲಷ್ಟೇ ಅದರ ಪರಿಣಾಮ. ಕೇಳುವ ಸಮಯ ಮತ್ತು ಸ್ಥಳಗಳಾಚೆಗೆ ಅವುಗಳಿಗೆ ಮಹತ್ವ ಇಲ್ಲ.

ಹೆಂಗಸರಿಗೆ ಈ ಸಂಗತಿ ಗೊತ್ತಾದ ಮೇಲೆ ಅದರ ಪ್ರತಿಕ್ರಿಯೆ ಏನಾಗಬಹುದು. ಆ ಬಗೆಯನ್ನು, ಮಾತನ್ನು ತ್ಯಜಿಸುವ ಬಗೆಗಳನ್ನು ಹಲವು ಸಂಕಥನಗಳು ಮೈಗೂಡಿಸಿಕೊಂಡಿವೆ. ಹೆಂಗಸಿಗೆ ತನ್ನ ಮಾತಿನ ಅವಕಾಶಗಳು ಬಳಕೆಯಾದರೂ ಅದು ಕೇವಲ ಆಚರಣೆಯಾಗಿರುತ್ತದೆ ಎಂಬುದನ್ನು ಅರಿಯುವ ಹಂತವೊಂದು ಬರುತ್ತಿದೆ. ಆಗ ತನ್ನ ಆ ಸ್ಥಿತಿಗೆ ಅವಳ ಪ್ರಜ್ಞಾಪೂರ್ವಕ ಪ್ರತಿಕ್ರಿಯೆಯೆಂದರೆ ಮಾತು ಕೇವಲ ಆಚರಣೆಯಾಗುತ್ತಿರುವುದರಿಂದ ಆ ಮಾತನ್ನು ಬಳಸದೆ ಮೌನವಾಗುವುದು. ತನ್ನ ಮಾತಿಗೆ ಮುಂಚಾಚಿಲ್ಲ ಎಂದು ತಿಳಿದಾಗ ಅದರ ಬಳಕೆಯನ್ನೇ ಕಡಿಮೆ ಮಾಡುತ್ತಾರೆ. ಉದಾ: ಗಾಂಧೀ ಹೋರಾಟದಲ್ಲಿ ಮೌನ, ಉಪವಾಸಗಳು ಹೆಚ್ಚು ಕಂಡುಬರುತ್ತವೆ. ಇದು ಅವರ ತಾಯಿಯಿಂದ ಅವರು ಕಲಿತದ್ದೆಂದು, ಅವರ

ಪ್ರಭಾವದಿಂದ ಆದವರು ಈ ಮಾರ್ಗಗಳನ್ನು ಆಯ್ದುಕೊಂಡರೆಂದು ಗುರುತಿಸಲಾಗಿದೆ. ಇಂತಹುದೇ ಇನ್ನೊಂದು ಉದಾಹರಣೆ, ಮುನಿಸಿಕೊಳ್ಳುವುದು. ಮುನಿಸಿಕೊಂಡಾಗ ಕೂಡ ಮಾತು ಇರುವುದಿಲ್ಲ. ಮಾತಿನ ಅವಕಾಶವನ್ನು ಸ್ವ ಇಚ್ಛೆಯಿಂದಲೇ ಬಿಟ್ಟುಕೊಡಲಾಗುತ್ತದೆ. ಹೆಣ್ಣು ಮಕ್ಕಳು ಹೆಚ್ಚು ಟೂ ಬಿಡುತ್ತಾರೆ. ಗಂಡು ಮಕ್ಕಳು ಟೂ ಬಿಟ್ಟರೆ ಅವರನ್ನು ಹೆಣ್ಣಿಗ ಎಂದು ಕರೆಯುವುದುಂಟು. ಭಾಷೆಯ ಬಳಕೆಯು ಯಾವಾಗ ಆಚರಣೆಯಾಗಿರುತ್ತದೋ, ಅಂಥಲ್ಲಿ ಹೆಣ್ಣು ತನ್ನ ಭಾಷಾಬಳಕೆಗೆ ನಿರ್ಬಂಧ ಹಾಕಿಕೊಳ್ಳುತ್ತಾಳೆ. ಇದೊಂದು ರೀತಿಯ ನಿರಾಕರಣೆ. ಏಕೆಂದರೆ ಮಾತಾಡಿದರೆ ಅವಕಾಶದ ದುರುಪಯೋಗವಾಗುತ್ತದೆ. ಅಂದರೆ ಆಕೆ ಭಾಷೆಯ ಬಳಕೆಯಲ್ಲಿ ಮಾತನಾಡುವಲ್ಲಿ ನಿರ್ಬಂಧ ಹಾಕಿಕೊಳ್ಳುತ್ತಾಳೆ. ಆದರೆ ಆಕೆ ಮಾತನ್ನು ಕೇಳುವುದರ ಮೇಲೆ ನಿರ್ಬಂಧ ಹಾಕಿಕೊಳ್ಳುವುದಿಲ್ಲ. ಭಾಷೆ ಹೊರಗಿನಿಂದ ಆಕೆಯೊಳಗೆ ಪ್ರವೇಶಿಸುತ್ತದೆ. ಆದರೆ ಹೀಗೆ ಕೇಳಿಸಿಕೊಂಡ ಮಾತಿಗೆ ತನ್ನ ಮಾತಿನ ಮುಖಾಂತರ ಪ್ರತಿಕ್ರಿಯೆ ನೀಡುವುದಿಲ್ಲ ಅಷ್ಟೆ. ಅಂದರೆ ಹೆಂಗಸು ತನ್ನ ಒಳಗಡೆ ತನ್ನ ಪಾಡಿಗೆ ತಾನು ಮಾತನಾಡಿಕೊಳ್ಳುವ ಹೊಸ ತಂತ್ರಗಾರಿಕೆ ನಿರ್ಮಾಣವಾಗುತ್ತದೆ. ಅಂದರೆ ಹೆಂಗಸು ಮೌನವಾಗಿದ್ದಾಗ, ಆಕೆಗೆ ಅವಕಾಶ ನಿರಾಕರಿಸಿದಾಗ ಅಲ್ಲಿ ಹೊಸ ಜಗತ್ತಿನ ನಿರ್ಮಾಣವಾಗುತ್ತದೆ. ಆ ಮೂಲಕ ಅವಳೊಳಗೆ ಒಂದು ಮಾತುಗಾರಿಕೆ ಬೆಳೆಯುತ್ತದೆ. ಸ್ತ್ರೀವಾದಿಗಳು ಮತ್ತು ಮಹಿಳಾ ಅಧ್ಯಯನಕಾರರು ಈ ಒಳಗಿನ ಮಾತುಗಳನ್ನು ಕೇಳಿಸಿಕೊಳ್ಳಬೇಕೆನ್ನುತ್ತಾರೆ. ಅದನ್ನು ಹೊರಹಾಕುವ ಹಾಗೆ ಮಾಡಲು ತಂತ್ರಗಳನ್ನು ರೂಪಿಸಬೇಕೆನ್ನುತ್ತಾರೆ. ಈ ಅಂತರಂಗದ ಮಾತುಗಳನ್ನು ಭಾಷಿಕವಾಗಿ ಆವಿಷ್ಕಾರಗೊಳಿಸಲು ಸಾಧ್ಯವಾಗುವಂತಾಗಬೇಕು. ಅಂದರೆ ಸ್ವಗತಗಳನ್ನು ಹೊರ ತರುವ ಪ್ರಯತ್ನ ಮಾಡುವ ಅಗತ್ಯವಿದೆ. ಗಂಡು ಹೆಣ್ಣುಗಳ ಭಾಷೆಯ ಬಳಕೆಯಲ್ಲಿ ಸಾಮಾಜಿಕವಾಗಿ ನಿರ್ಮಾಣವಾದ ತಾರತಮ್ಯದಿಂದಾಗಿ, ಅದರ ಪರಿಣಾಮದಿಂದಾಗಿ ಈ ಸ್ವಗತಗಳು, ಅವುಗಳ ಅಗತ್ಯಗಳು ಉಂಟಾದವು. ಭಾಷೆಯ ಸೌಲಭ್ಯದ ನಿರಾಕರಣೆಯಾದರೆ ಅದು ಮತ್ತೊಂದು ರೀತಿಯಲ್ಲಿ ಬಳಕೆಯಾಗುತ್ತದೆ. ಇದು ಒಂದು ಬಗೆಯ ಪ್ರತಿಭಟನೆ ಎಂದು ಕೆಲವರು ವಾದಿಸುವುದುಂಟು. ಇನ್ನೊಂದು ನೆಲೆಯಲ್ಲಿ ಪ್ರತಿಭಟನೆಯ ಮಾಧ್ಯಮವಾಗಿ ಭಾಷೆ ಬಳಕೆಯಾಗುತ್ತದೆ. ಆದರೆ ಪ್ರಯತ್ನಪೂರ್ವಕವಾಗಿ ಅದನ್ನು ಬಳಸದ ಹೊರತು ಅದರ ಸಾಧ್ಯತೆಗಳು ಗೋಚರವಾಗುವುದಿಲ್ಲ. ಈ ಸಾಧ್ಯತೆಯ ಅರಿವು ಉಂಟಾದಾಗ ನಮ್ಮ ಸಂಶೋಧನೆಗಳು ಈ ಕಡೆಗೆ ಹರಿಯಬೇಕಾಗುತ್ತದೆ.

ಮಾತಿನ ಬಳಕೆಯನ್ನು ಹೆಣ್ಣು ಕಡಿಮೆ ಮಾಡಿಕೊಂಡಳೆನ್ನಿ, ಜಗತ್ತು ಅವಳ ಒಳಗಡೆ ಆಕಾರ ಪಡೆಯತೊಡಗುತ್ತದೆ. ಕಣ್ಣು ಕಿವಿಗಳ ಮುಖಾಂತರ ಅವಳಲ್ಲಿ ಒಂದು ಭಾಷಿಕ ಸಂಕಥನವು ಸೃಷ್ಟಿಯಾಗುತ್ತದೆ. ಇಂದಿನ ಸಂಶೋಧನೆಯಲ್ಲಿ ನಾವು ಕೇಳಿಸಿಕೊಳ್ಳಲಾಗದ ಈ ವಲಯಗಳನ್ನು ಹೊರತೆಗೆಯಬೇಕು ಎನ್ನುವ ಆಸಕ್ತಿಗಳು ಬೆಳೆಯುತ್ತಿವೆ. ಅವುಗಳನ್ನು ಅಧ್ಯಯನಕ್ಕೆ ಆಕರವಾಗಿ ಬಳಸಿಕೊಳ್ಳುವ ಚಿಂತನಾ ಕ್ರಮವಿದೆ.

(ಮಹಿಳಾ ಅಧ್ಯಯನದಲ್ಲಿ) ಉದಾ: ಅಮೇರಿಕಾದಲ್ಲಿ ಗುಲಾಮಗಿರಿಯ ಹೋರಾಟದಲ್ಲಿ ಹೆಣ್ಣು ಮುಂಚೂಣಿಯಲ್ಲಿದ್ದಾಳೆ. ಅವರು ಅನುಭವಿಸಿದ ಇಕ್ಕಟ್ಟುಗಳು ಶತಮಾನದ ನಂತರ ಹೊರತೆಗೆಯುತ್ತಿದ್ದಾರೆ. ಆದ್ದರಿಂದ ಇಂತವುಗಳು ಒಳಗಡೆ ಇರುವುದು ಗೊತ್ತಿರುವುದಿಲ್ಲ. ಅದನ್ನು ಹೊರತೆಗೆಯುತ್ತದೆ. ಉದಾ: ಅಕ್ಕಮಹಾದೇವಿಯ ವಚನಗಳನ್ನು ಸ್ವಗತಗಳಾಗಿ ನೋಡಬೇಕು. ಬಸವಣ್ಣನ ವಚನಗಳು ವರದಿಯ ನೆಲೆಯಲ್ಲಿವೆ. ಅಕ್ಕನ ಪ್ರಯಾಣ ಸ್ವಗತಗಳ ಪಯಣ. ಅದನ್ನು ವಾಚ್ಯವಾಗಿ ನೋಡಬೇಕು. ಪುರುಷ ಜಗತ್ತಿನಲ್ಲಿ ಆಕೆ ತನ್ನ ಪ್ರಯಾಣಕ್ಕೆ ಜಾಗ ಮಾಡಿಕೊಂಡಿರುವುದಾಗಿದೆ. ಇದೇ ರೀತಿ ಮೀರಾಳ ಮಾತುಗಳು ಸಹ. ಈ ಹೆಂಗಸು ತನ್ನ ಭಾಷಿಕ ವ್ಯತ್ಯಾಸದ ಕಾರ್ಯಕ್ರಮಕ್ಕೆ ಒಳಗಾದಾಗ, ತಾನೆಂದೂ ಗೆಲ್ಲಲಾರದ ಪ್ರಕ್ರಿಯೆಗೆ ಒಳಗಾಗಿರುತ್ತಾಳೆ. ಉದಾ: ಕವಿ-ಕವಯಿತ್ರಿ ಎಂದು ಕರೆಯಬೇಕೋ? ಅಂದರೆ, ಕೆಲವು ಸಾಹಿತಿಗಳು ತಮ್ಮನ್ನು ಪ್ರತ್ಯೇಕವಾಗಿ ನೋಡುವ ಅಗತ್ಯವಿಲ್ಲ. ಹೆಣ್ಣುಮಕ್ಕಳು ಕವಿತೆ ಜಾಸ್ತಿ ಬರೆಯುತ್ತಾರೆ. ಅಡಿಗ, ನರಸಿಂಹಸ್ವಾಮಿ ಇವರ ಕಾಲದಲ್ಲಿ ಬರುವ ಪ್ರಸಿದ್ಧ ಕವಯಿತ್ರಿಯರನ್ನು ಹೆಸರಿಸುವುದಿಲ್ಲ. ಗಟ್ಟಿದನಿಯ ಕವಯಿತ್ರಿಯರನ್ನು ಗುರುತಿಸಿಲ್ಲ. ಅಂದರೆ ಇಲ್ಲಿ ಅವರಿಲ್ಲ ಎಂದರ್ಥ ಅಲ್ಲ. ಗಂಡಸು ಹೆಂಗಸಿನ ಮಾದರಿ ಅನುಸರಿಸಿ ಅವನಂತೆ ಇರುತ್ತೇನೆ ಎಂದು ಭಾಷಿಕ ಸವಾಲು ಹಾಕಿದಾಗ ಅವಳು ನಾಲ್ಕು ಹೆಜ್ಜೆ ಹಿಂಜರಿದು ಇರುತ್ತಾಳೆ. ಏಕೆಂದರೆ ಅದು ತನ್ನದಲ್ಲದ್ದು. ಆದ್ದರಿಂದ ಅಲ್ಲಿ ಅವಳು ಖಚಿತವಾಗಿ ಗುರುತಿಸಿಕೊಳ್ಳಲು ಸಾಧ್ಯವಿಲ್ಲ. ಹೆಂಗಸರು ಹೆಚ್ಚು ಕವಿತೆ ಬರೆಯುವುದು ಯಾಕೆ? ಬರೆಯುವ ಒತ್ತಡ ಯಾಕೆ ಬರುತ್ತದೆ. ಮುಕ್ತವಾದ ಅಭಿವ್ಯಕ್ತಿ ಸ್ವಾತಂತ್ರ್ಯ ಇಲ್ಲದಿದ್ದಾಗ ಈ ರೀತಿಯಾಗಬಹುದು. ಕವಿತೆಯಲ್ಲಿ ಏನೋ ಒಂದು ನಿಲುವು, ಅಭಿಪ್ರಾಯ ಇರುತ್ತದೆ. ಆದರೆ ಅವರು ಬೇರೆಯವರಿಗೆ ಹೇಳಬೇಕು ಎಂದರೆ ಕೇಳುಗರು ಇರಬೇಕಲ್ಲವೆ? ಒಬ್ಬೊಬ್ಬರಿಗೆ ಮಾತ್ರ ಹೇಳುವುದಕ್ಕಿಂತ ಕವಿತೆ ಅನೇಕರ ಮನ ಮುಟ್ಟುವುದು. ಅಂದರೆ ಒಂದು ಪ್ರಕ್ರಿಯೆಯಾಗಿರುವ ಮೌನ ಸ್ವಗತಗಳಿಗೆ ಕಾರಣವಾಗುತ್ತದೆ. ಆಗ ಅದು ಕವಿತೆಯಾಗಬಹುದು. ಅಂದರೆ ಪ್ರತಿಯೊಂದು ಕವಿತೆಯೂ ರಚಿಸುತ್ತಿರುವವರಲ್ಲಿ ಅಂತಸ್ತವಾಗಿರುವ ಜಗತ್ತನ್ನು ಹೇಳುತ್ತಿರುತ್ತದೆ. ಅದು ಸ್ವಂತ ಅನುಭವವನ್ನು ಮಂಡಿಸುವ ಅಥವಾ ಅಂತಹ ಅನುಭವಗಳನ್ನು ಸಾಮಾನ್ಯೀಕರಿಸುವ ಯತ್ನವಾಗಿರುತ್ತದೆ. ಹೆಂಗಸರು ಭಾಷಿಕ ಅಭಿವ್ಯಕ್ತಿಗೆ ಒಂದು ಅವಕಾಶ ಇದ್ದರೂ ಅದು ಪರಿಣಾಮವಿಲ್ಲದೆ ನಿರ್ಲಕ್ಷ್ಯಕ್ಕೊಳಗಾದರೆ ಆಗ ಆ ಒತ್ತಡವೇ ಕೊನೆಗೆ ಒಂದು ರೀತಿಯಲ್ಲಿ ಕವಿತೆಯಾಗುತ್ತದೆ. ಉದಾ: ಜನಪದ ರಚಕರು ತವರನ್ನು ಕುರಿತು ಹೀಗೆ ತಮ್ಮ ಭಾವನೆಗಳನ್ನು ತೋಡಿಕೊಳ್ಳುತ್ತಾರೆ.

**ಮಳಿಯು ಬಂದರ ಬರಲಿ,**
**ಹೊಳಿಯು ಬರಬ್ಯಾಡ ಶಿವನೆ**
**ಹೊಳಿಯಾಚೆಗೆ ನನ್ನ ತವರವರ ಇರುತಾರೆ.**
**ಹರಿಗೋಲಿಗೆ ಬೇಕು ಹಿಡಿಹೊನ್ನ.**

ತನ್ನ ತವರು ಬಿಟ್ಟು ಬರುವಾಗ ತನ್ನ ತವರಿನ ಕುರಿತು ಹೇಳುತ್ತಾಳೆ. ಇದರ ಮೂಲ ಹುಡುಕಿದರೆ ಇದಕ್ಕೆ ಜಾನಪದ ಆಕರವಿದೆಯೆಂದು ತಿಳಿಯುವುದು ಕಷ್ಟವಾಗುತ್ತದೆ. ಅಂದರೆ ಸ್ವಯಂಸ್ಫೂರ್ತತೆ ಇಲ್ಲಿ ಮುಖ್ಯ ಲಕ್ಷಣವಾಗಿಲ್ಲ. ಬಹಳ ಎಚ್ಚರದ ಸ್ಥಿತಿಯ, ಪ್ರಜ್ಞಾವಂತ ಮನಸ್ಸಿನ ಪ್ರಕ್ರಿಯೆಗಳು ಇಲ್ಲಿ ಆಕಾರ ತಳೆದಿರುವುದು ಸ್ಪಷ್ಟ. ಕೆಲವೊಮ್ಮೆ ಇಂತಹ ಭಾವಗಳು ಸ್ವಗತವಾಗಿ ಹೊರಬಂದರೆ, ಇನ್ನೊಂದು ಕಡೆ ಇದೇ ಭಾವಗಳು ಬೇರೊಂದು ಬಗೆಯ ಸೃಜನಶೀಲ ಬರವಣಿಗೆಯಾಗಿ ಆಕಾರ ತಳೆಯುತ್ತವೆ. ಉದಾ: ಬ್ರಿಟನ್ನಿನ ವಿಕ್ಟೋರಿಯಾ ರಾಣಿಯ ಕಾಲದಲ್ಲಿ ಇಡೀ ಸಮಾಜದಲ್ಲಿ ಹೆಂಗಸಿನ ಪಾತ್ರವನ್ನು ಅತಿ ಹೆಚ್ಚಿನ ಕಟ್ಟುಪಾದುಗಳಿಗೆ ಗುರಿಮಾಡಲಾಗಿತ್ತು. ಅಂತಹ ಸಂದರ್ಭದಲ್ಲಿ ಇಂಗ್ಲೆಂಡಿನ ಕಾದಂಬರಿಕಾರ್ತಿ ಜೇನ್ ಆಸ್ಟೀನ್ (ಅವರ ಕಾದಂಬರಿಯೊಂದು ಕನ್ನಡದಲ್ಲಿ ಹಮ್ಮು-ಬಿಮ್ಮು ಎಂಬ ಹೆಸರಿನಲ್ಲಿ ಅನುವಾದಿತವಾಗಿದೆ) ಯಾವ ನಿರ್ಬಂಧಿತ ಜಗತ್ತನ್ನು ಹೆಣ್ಣಿನ ಮೇಲೆ ಹೇರಲಾಗುತ್ತೋ ಆ ಜಗತ್ತಿನ ಅನೂಹ್ಯವಾದ ಮೂಲೆಗಳನ್ನು, ಬೇರೆಯವರಿಗೆ ಕಾಣದಂತಹ ಸಂಕೀರ್ಣವಾದ ಮನೆಯೊಳಗಿನ ಜಗತ್ತನ್ನು ಹೊರಗಿರಿಸಿದಳು. ಅದು ಅದರಲ್ಲಿ ಬಂಧಿಯಾದವರಿಗೆ ಮಾತ್ರ ಕಾಣಿಸುವ ಜಗತ್ತು. ಆಕೆ ಹೆಂಗಸಿಗೆ ಹಾಕಿದ ಶರತ್ತನ್ನು ಹೇಗೆ ಸ್ವೀಕರಿಸಿದಳೆಂದರೆ ಆಕೆ ಅನಾವರಣಗೊಳಿಸಿದ ಮನೆಯೊಳಗಿನ ಜಗತ್ತನ್ನು ಬಹಳ ಅಭೂತಪೂರ್ವವಾದ ಜಗತ್ತು ಎಂದು ವಿಮರ್ಶಕರು ವಿಮರ್ಶಿಸಿದ್ದಾರೆ. ತನಗೆ ಒದಗಿದ ಸೀಮಿತ ಜಗತ್ತೇ ಹೆಂಗಸಿನ ಸೃಜನಶೀಲ ಜಗತ್ತು ಎಂದಾಕೆ ವಿವರಿಸಿದಳು. ಆದ್ದರಿಂದ ಹೆಂಗಸರ ಭಾಷಿಕ ಸಂಕಥನಕ್ಕೆ ನಿರ್ಬಂಧ ಹೇರಿದರೆ ಅದಕ್ಕೆ ಪ್ರತಿಕ್ರಿಯೆ ಎರಡು ವಿಧದಲ್ಲಿರಬಹುದು. ಅವುಗಳಲ್ಲಿ ಒಂದು ಮೌನವಾದರೆ ಇನ್ನೊಂದು ಕ್ರಿಯಾಶೀಲವಾದ ಬರೆವಣಿಗೆಯಾಗಿರುತ್ತದೆ.

# ದ ಸೆಕೆಂಡ್‌ಸೆಕ್ಸ್: ಓದಿಗೆ ಮೊದಲು

ಓದುವ ಪಿಶಾಚಿ ಹೆಗಲೇರಿದರೆ ಅದರಿಂದ ಬಿಡುಗಡೆ ಸುಲಭವಲ್ಲ. ಏನಾದರೂ ಓದುತ್ತಲೇ ಇರುತ್ತೇವೆ. ಓದಿದ್ದನ್ನು ಮರೆಯುತ್ತೇವೆ. ಮರೆಯದಿದ್ದರೆ ಮತ್ತೊಂದನ್ನು ಓದುವುದು ಕಷ್ಟ. ಆದರೆ ಕೆಲವು ಪುಸ್ತಕಗಳು ಹಾಗಲ್ಲ. ಅವು ನಮ್ಮ ಅರಿವಿನ ಪರಿಧಿಯನ್ನು ವಿಸ್ತರಿಸುತ್ತಿರುತ್ತವೆ. ಮತ್ತೆ ಕೆಲವು ನಮ್ಮ ತಿಳುವಳಿಕೆಯನ್ನೆಲ್ಲ ಬುಡಮೇಲು ಮಾಡುತ್ತವೆ; ಯೋಚಿಸುವ ವಿಧಾನವನ್ನೇ ಬದಲಾಯಿಸಿಕೊಳ್ಳಲು ಸೂಚಿಸುತ್ತವೆ. ನಾನು 'ಸೂಚಿಸುತ್ತವೆ' ಎಂದೆ; 'ಒತ್ತಾಯಿಸುತ್ತವೆ' ಎನ್ನಲಿಲ್ಲ. ಹೀಗೆ ಒತ್ತಾಯಿಸುವ ಪುಸ್ತಕಗಳೂ ಕೆಲವು ಇರುತ್ತವೆ. ನಮ್ಮ ಪಠ್ಯಪುಸ್ತಕಗಳು, ಧರ್ಮಪ್ರಚಾರದ ಪುಸ್ತಕಗಳು ಇಂತಹವುಗಳು. ಆದರೆ ಹೀಗೆ ಒತ್ತಾಯಿಸದೆ ನಾವು ಯೋಚಿಸುವ ವಿಧಾನವನ್ನು ನಾವೇ ಬದಲಿಸಿಕೊಳ್ಳಲು ಕಾರಣವಾಗುವ ಪುಸ್ತಕಗಳು ಕೆಲವಿರುತ್ತವೆ. ಸಿಮೋನ್ ದ ಬೊವಾ ಅವರ 'ದ ಸೆಕೆಂಡ್ ಸೆಕ್ಸ್' ಅಂತಹ ಪುಸ್ತಕ.

ಮೂಲ ಫ್ರೆಂಚ್ ಭಾಷೆಯ ಪುಸ್ತಕದ ಏಳುನೂರು ಪುಟಗಳ ಇಂಗ್ಲಿಶ್ ಅನುವಾದವನ್ನು ಓದುವುದೂ ಸುಲಭವಲ್ಲ. ಹಾಗೆ 'ಓದಿಸಿಕೊಂಡು' ಹೋಗುವ ಪುಸ್ತಕವೂ ಅಲ್ಲ ಇದು. ಇದಕ್ಕಿಂತ ದೊಡ್ಡ ಪುಸ್ತಕಗಳನ್ನು 'ಸುಲಲಿತ'ವಾಗಿ ಚಿಕ್ಕವರು ಓದುವುದನ್ನು ನೋಡಿದ್ದೇನೆ. ಈ ಪುಸ್ತಕವನ್ನು ಓದುವುದು ಒಂದು ಪ್ರವಾಸವೂ ಅಲ್ಲ, ಯಾತ್ರೆಯೂ ಅಲ್ಲ. ಉದ್ದಕ್ಕೂ ನಿಂತುನಿಂತು ನಮ್ಮನ್ನು ನಾವೇ ಪರಿವರ್ತಿಸಿಕೊಳ್ಳುತ್ತಾ ಸಾಗಬೇಕಾದ ಪಯಣ. ಲೇಖಕಿ 'ಒಪ್ಪಿಸುವ', 'ನಿವೇದಿಸುವ' 'ವಾದಿಸುವ' 'ಘೋಷಿಸುವ' ಧಾಟಿಯಲ್ಲಿ ಬರೆಯುವುದಿಲ್ಲ. ಆಕೆಯದೂ ಹುಡುಕಾಟ. ಅವರೊಡನೆ ಸಾಗುವ ನಮ್ಮದೂ ಹುಡುಕಾಟ. ನಮ್ಮ ಸಂವೇದನೆಗಳು ಎಲ್ಲಿಯೂ ಜಡಗೊಳ್ಳದಂತೆ ಮಾಡುವ ವಿಶಿಷ್ಟ ಬಗೆಯೊಂದು ಈ ಬರೆಹದ ಮುಖ್ಯ ಗುಣವಾಗಿದೆ. ಕನ್ನಡ ಓದುಗರಲ್ಲಿ ಬೇರೆ ಭಾಷೆಯ, ಮುಖ್ಯವಾಗಿ ಇಂಗ್ಲಿಶ್‌ನ ಓದಿಗೆ ತೆರೆದುಕೊಂಡಿರುವವರು ಇರುವಂತೆ ಕೇವಲ ಕನ್ನಡದ ಓದನ್ನೇ ನೆಮ್ಮಿದವರೂ ಇರುತ್ತಾರೆ. ಹೀಗೆ ಭಿನ್ನ ಸಿದ್ಧತೆಯಲ್ಲಿ ಈ ಪುಸ್ತಕವನ್ನು ಓದುವಾಗ ಸಮಸ್ಯೆಗಳು ಬೇರೆ ಬೇರೆಯಾಗುತ್ತವೆ. ನನ್ನ ಮುಂದಿನ ಮಾತುಗಳನ್ನು, ಕನ್ನಡದ ಓದನ್ನೇ ನೆಮ್ಮಿದವರನ್ನು ಗುರಿಯಾಗಿರಿಸಿಕೊಂಡು ಬರೆದಿದ್ದೇನೆ.

ಸಿಮೋನ್ ದ ಬೋವಾ ಅಸ್ತಿತ್ವವಾದಿ ಚಿಂತಕಿ. ಎರಡನೆಯ ಮಹಾಯುದ್ಧದ ಅನಂತರದ ಕಾಲದ ಫ್ರಾನ್ಸ್‌ನಲ್ಲಿ ಈ ಗ್ರಂಥ ಬರೆದಿದ್ದಾರೆ. ಫ್ರಾನ್ಸ್ ಹಲವು ಸೈದ್ಧಾಂತಿಕ

ಚರ್ಚೆಗಳಿಗೆ ಕಾರಣರಾದ ಚಿಂತಕರನ್ನು ರೂಪಿಸಿದೆ. ಹಾಗೆ ನೋಡಿದರೆ ಇಂಗ್ಲಿಶ್ ಭಾಷೆಯ ಪರಂಪರೆಯಲ್ಲಿ ಕಾಣಸಿಗದಷ್ಟು ಪ್ರಮಾಣದ ಅಮೂರ್ತ ನೆಲೆಯ ಚಿಂತನೆಗಳು ಫ್ರೆಂಚ್ ಭಾಷೆಯಲ್ಲಿ ಮೈತಳೆದಿವೆ. ಆ ಚಿಂತನೆಗಳ ಪರಿಭಾಷೆಯನ್ನು ಇಂಗ್ಲಿಶ್‌ಗೆ ಅನುವಾದಿಸಿಕೊಂಡಿದ್ದಾರೆ. ಎಷ್ಟೋ ವೇಳೆ ಆ ಪರಿಭಾಷೆ ಮೂಲದ ಅರ್ಥಸಾಧ್ಯತೆಗಳನ್ನು ಇಡಿಯಾಗಿ ಹೇಳಲು ಸಾಧ್ಯವಾಗದೇ ಹೋಗಿರುವುದುಂಟು. ನಾವು ಇಂಗ್ಲಿಶ್‌ನಲ್ಲಿ ಓದುವಾಗ ಸಹಜವಾಗಿಯೇ ಈ ಗೊಂದಲಗಳು ನಮಗೂ ರವಾನೆಯಾಗುತ್ತವೆ. ಆದರೆ ಇಂಗ್ಲಿಶ್, ಫ್ರೆಂಚ್ ಎರಡೂ ಬಲ್ಲವರು ಈ ಗೋಜಲನ್ನು ಈಚಿನ ದಶಕಗಳಲ್ಲಿ ಕಡಿಮೆ ಮಾಡಿದ್ದಾರೆ.

ಅಸ್ತಿತ್ವವಾದ, ಮನುಷ್ಯರನ್ನು ಇತರ ಜೀವಿವರ್ಗಗಳಿಂದ ಬೇರೆ ಮಾಡಿ ನೋಡುತ್ತದೆ. ಅದರಂತೆ ಮನುಷ್ಯರಿಗೆ ಇತರ ಯಾವ ಜೀವಿವರ್ಗಕ್ಕೂ ಇರದ ಪ್ರಜ್ಞೆಯಿದೆ ಎಂಬುದು ಒಂದು ನೆಲೆಯಾದರೆ, ಪ್ರತಿಯೊಬ್ಬ ಮನುಷ್ಯರೂ ಸ್ವತಂತ್ರರು ಎನ್ನುವುದು ಇನ್ನೊಂದು ನೆಲೆ. ಸ್ವತಂತ್ರರು ಎನ್ನುವುದಕ್ಕಿಂತ ಸ್ವಾತಂತ್ರ್ಯದ ಆಯ್ಕೆಯ ಅವಕಾಶ ಪ್ರತಿಯೊಬ್ಬ ಮನುಷ್ಯರಿಗೂ ಇರುತ್ತದೆ ಎನ್ನುವುದು ಹೆಚ್ಚು ಸರಿ. ಈ ಸ್ವಾತಂತ್ರ್ಯದ ಆಯ್ಕೆಯ ಅವಕಾಶ ಇರುವುದರಿಂದಲೇ ಮನುಷ್ಯರ ಬದುಕನ್ನು 'ಹೊರಗಿನಿಂದ' ನಿಯಂತ್ರಿಸುವ, ನಿರ್ದೇಶಿಸುವ ಯಾವ 'ಅಧಿಕಾರ' ಕೇಂದ್ರವೂ ಇರುವುದಿಲ್ಲ. 'ಹೊರಗಿನ' ನೆಲೆಗಳೆಂದರೆ ಸಮಾಜ, ಚರಿತ್ರೆ, ನೀತಿಸಂಹಿತೆ ಮುಂತಾದವು ಮಾತ್ರವಲ್ಲ; ಜೈವಿಕ ರಚನೆ, ಮನೋಸ್ತರಗಳೂ ಸೇರುತ್ತವೆ. ಈ ಸ್ವಾತಂತ್ರ್ಯದ ಪರಿಕಲ್ಪನೆಯನ್ನು ಆ ಹೊತ್ತಿನ ಇತರ ಸಹಜ್ಞಾನ ಶಾಖೆಗಳ ಚಿಂತನೆಗಳೊಡನೆ ಇರಿಸಿ ನೋಡಬೇಕು. ಸುಪ್ತಚಿತ್ತದ ನಿರ್ದೇಶನಗಳ ಬಗ್ಗೆ ಫ್ರಾಯ್ಡ್ ಮಂಡಿಸಿದ ಸಿದ್ಧಾಂತ, ಡಾರ್ವಿನ್‌ನ ವಿಕಾಸವಾದದ ಹಿನ್ನೆಲೆಯಲ್ಲಿ ಬೆಳೆದ ಜೈವಿಕನೆಲೆಯ ನಿಯಂತ್ರಣ ಸಿದ್ಧಾಂತ, ಆರ್ಥಿಕ ಸಾಮಾಜಿಕ ಸಂದರ್ಭದ ನಿರ್ದೇಶನಗಳನ್ನು ಕುರಿತ ಮಾರ್ಕ್ಸ್‌ವಾದದ ಒಂದು ಮಾದರಿ, ನೀತಿಸಂಹಿತೆಯ ಕಟ್ಟುಪಾಡುಗಳನ್ನು ಕುರಿತ ಪಾರಂಪರಿಕ ಚಿಂತನೆಗಳು ಇವೆಲ್ಲವೂ ಒಂದಲ್ಲ ಒಂದು ಬಗೆಯಲ್ಲಿ ಮನುಷ್ಯರಿಗೆ ಸ್ವಾತಂತ್ರ್ಯವನ್ನು, ನಿರ್ಧಾರದ ಅವಕಾಶವನ್ನು ನಿರಾಕರಿಸಿದ್ದವು. ಈ ಹಿನ್ನೆಲೆಯಲ್ಲಿ ಅಸ್ತಿತ್ವವಾದ ನಿರೂಪಿಸುವ ಸ್ವಾತಂತ್ರ್ಯದ ಪರಿಕಲ್ಪನೆಯನ್ನು ಅರಿಯಬೇಕು.

ಮನುಷ್ಯರು ಸ್ವತಂತ್ರರಾದ್ದರಿಂದ ತಮ್ಮ ಕ್ರಿಯೆಗಳ ಜವಾಬ್ದಾರಿಯನ್ನು ತಾವೇ ಹೊರಬೇಕಾಗುತ್ತದೆ. ಏಕೆಂದರೆ ಅವರ ಕ್ರಿಯೆಗಳು 'ಹೊರಗಿನ' ಒತ್ತಡಗಳ ಪರಿಣಾಮವಾಗಿರದೆ ಅವರ ಆಯ್ಕೆಗಳಾಗಿರುತ್ತವೆ; ಅವರ ನಿರ್ಧಾರಗಳಾಗುತ್ತವೆ. ಆದರೆ ಮನುಷ್ಯರು ಈ ಸ್ವಾತಂತ್ರ್ಯವು ತರುವ ಹೊಣೆಯನ್ನು ನಿರ್ವಹಿಸಲು ಹೆದರುತ್ತಾರೆ. ಅದರಿಂದಾಗಿ ಆ ಅವಕಾಶವನ್ನು ಬಿಟ್ಟುಕೊಡುತ್ತಾರೆ. ತಾವು ಆಯ್ಕೆಯ ಸ್ವಾತಂತ್ರ್ಯವನ್ನು ಬಳಸದಿರಲು ನೆಪಗಳನ್ನು ಹುಡುಕುತ್ತಾರೆ. ಈ ನೆಪಗಳು ಸತ್ಯವೆಂದು ನಂಬುತ್ತಾರೆ. ಸಾರ್ತ್ರ್‌ಪ್ರಣೀತ ಅಸ್ತಿತ್ವವಾದದಲ್ಲಿ ಈ ನೆಪಗಳಲ್ಲಿ ಮುಖ್ಯವಾದುದನ್ನು 'ಕೆಟ್ಟ ನಂಬಿಕೆ' (ಬ್ಯಾಡ್ ಫೇಯ್ತ್) ಎಂದು ಕರೆಯಲಾಗಿದೆ. ಕನ್ನಡದ ಈ ಪದ ಅಷ್ಟು ಸೂಕ್ತವಾದುದಲ್ಲ. ಬ್ಯಾಡ್ ಫೇಯ್ತ್ ಎಂದರೇನು? ವ್ಯಕ್ತಿಗಳು ಆಯ್ಕೆಗಳನ್ನು ಮಾಡಿಕೊಳ್ಳಲು ತಮಗಿರುವ

ಸ್ವಾತಂತ್ರ್ಯವನ್ನು ಬಳಸಿದರೆ ಹೊಸ ಜವಾಬ್ದಾರಿಗಳನ್ನು ಹೊರಬೇಕಾಗುತ್ತದೆ. ಆದರೆ ಈ ಜವಾಬ್ದಾರಿಯನ್ನು ಹೊರಲು ಸಿದ್ಧರಿಲ್ಲದೆ ಅದರಿಂದ ತಪ್ಪಿಸಿಕೊಳ್ಳಲು ಕಾರಣಗಳನ್ನು ಹುಡುಕುತ್ತಾರೆ. ಸಾಮಾಜಿಕ, ನೈತಿಕ ನೆಲೆಗಳಲ್ಲಿ ಅವರಿಗೆ ಈ ಹೊಣೆಯಿಂದ ಹೊರಬರಲು ನೆಪಗಳು ದೊರಕುತ್ತವೆ. ವ್ಯಕ್ತಿಗಳ ವರ್ತನೆಗಳ ಬಗೆಗೆ ಲಾಗಾಯ್ತಿನಿಂದಲೂ ಬೆಳೆದುಬಂದ ನಂಬಿಕೆಗಳೇ ಈ ನೆಪಗಳು. ಈ ನೆಪಗಳೇ ಸರಿಯೆಂದು ನಂಬಿ ವ್ಯಕ್ತಿಗಳು ಅವುಗಳನ್ನೇ ಆಚರಿಸುತ್ತಾರೆ. ಆಯ್ದುಕೊಳ್ಳುವ ಅವಕಾಶಕ್ಕೆ ಬಾಗಿಲು ಮುಚ್ಚುತ್ತಾರೆ. ಈ ನೆಪಗಳೇ ಬ್ಯಾಡ್‌ಫೇಯ್ತ್‌ಗಳು. ನಾವೇಕೆ ಸ್ವತಂತ್ರ ನಿರ್ಣಯಗಳನ್ನು ತೆಗೆದುಕೊಳ್ಳಲು ಹಿಂಜರಿಯುತ್ತೇವೆ? ನಮ್ಮ ವರ್ತನೆಯನ್ನು ಹಿಂಜರಿಕೆ ಎಂದು ಒಪ್ಪದೆ ಅದಕ್ಕೆ ಸಾಮಾಜಿಕ, ನೈತಿಕ ಹೀಗೆ ಯಾವುದೋ ನೆಲೆಯ ಕಾರಣವನ್ನು ನೆಪವಾಗಿ ಮುಂದೊಡ್ಡುತ್ತೇವೆ. ಹೀಗೆ ಮಾಡುವ ವ್ಯಕ್ತಿಗಳು 'ಅನಧಿಕೃತ' ನೆಲೆಯಲ್ಲಿ ಜೀವಿಸುತ್ತಿರುತ್ತಾರೆ. 'ಅಧಿಕೃತ'ವಾಗುವುದೆಂದರೆ ಆಯ್ಕೆಯ ಸ್ವಾತಂತ್ರ್ಯವನ್ನು ಬಳಸುವುದು; ಜೊತೆಗೆ ಹುಟ್ಟುವ 'ಏಕಾಕಿತನ'ದ ತಲ್ಲಣಗಳನ್ನು ಅನುಭವಿಸುವುದು. ಹೀಗಲ್ಲದಿದ್ದರೆ ಅದು ಅಧಿಕೃತವಾದ ಜೀವನಕ್ರಮವಲ್ಲ.

ಅಸ್ತಿತ್ವವಾದದ ಇನ್ನೊಂದು ಮುಖ್ಯ ಪರಿಕಲ್ಪನೆಯೆಂದರೆ 'ಇರುವಿಕೆ' ಮತ್ತು 'ಆಗುವಿಕೆ'. ವ್ಯಕ್ತಿಯು ಸಿದ್ಧರೂಪದಲ್ಲಿ 'ಇರುವುದಿಲ್ಲ'; ನಿರಂತರವಾಗಿ 'ಆಗಬೇಕಾ'ಗುತ್ತದೆ. ಆದ್ದರಿಂದಲೇ ಅಸ್ತಿತ್ವ ಮೊದಲು, ಅನಂತರ ತಿರುಳು. ಅಂದರೆ ಒಬ್ಬ ವ್ಯಕ್ತಿಯನ್ನು ನಾವು ಹೀಗೇ ಎಂದು ವ್ಯಾಖ್ಯಾನಿಸಲು ಬರುವುದಿಲ್ಲ. ಆ ವ್ಯಕ್ತಿ ಕೂಡಾ ತಾನು ಹೀಗೆಯೇ ಇದ್ದೇನೆ ಎಂದುಕೊಳ್ಳಲು ಸಾಧ್ಯವಾಗಲಾರದು. ಆದ್ದರಿಂದ ತಿರುಳನ್ನು, ಸಾರಾಂಶವನ್ನು ಮುಂಚೂಣಿಗೆ ತರುವುದು ಸಾಧ್ಯವಿಲ್ಲ. 'ವ್ಯಕ್ತಿ ಏನು ಆಗಿರುವುದಿಲ್ಲವೋ ಅದೇ ಆ ವ್ಯಕ್ತಿಯ ನಿಜವಾದ ಅಸ್ತಿತ್ವ' ಎಂಬ ದಿಗಿಲು ತರುವ ವ್ಯಾಖ್ಯೆಯನ್ನು ಅಸ್ತಿತ್ವವಾದಿಗಳು ಮಂಡಿಸುತ್ತಾರೆ. ಹೀಗೆ 'ಇರುವುದು' ನಶ್ವರತೆಯ, ಬದ್ಧತೆಯ, ಬದಲಾಗದ ಸ್ಥಿತಿಯ ಸೂಚಕ. ಆದರೆ 'ಆಗುವ' ಆಯ್ಕೆ ಮಾಡಿಕೊಳ್ಳುವವರು 'ಮೀರುತ್ತಾರೆ'. ತಮ್ಮ ಗುರಿಯತ್ತ ಸಾಗುತ್ತ ನಿರಂತರವಾಗಿ ಬದಲಾಗುತ್ತಾರೆ. ಈ 'ಮೀರುವಿಕೆ' ವ್ಯಕ್ತಿಗಳಿಗೆ ಅತ್ಯಗತ್ಯ

'ಆಗುವಿಕೆ' ಮತ್ತು 'ಇರುವಿಕೆ'ಗಳು ಅಸ್ತಿತ್ವವಾದದ ಪ್ರಮುಖ ಚಿಂತನಾ ನೆಲೆಗಳು. ಯಾವ ವ್ಯಕ್ತಿಯಾಗಲೀ ಇರುವಂತೆಯೇ ಉಳಿಯುವುದಲ, ಅದೇ ತನ್ನ ತಿರುಳು ಎಂದು ಭಾವಿಸುವುದು ಅಸ್ತಿತ್ವವಾದಿಗಳ ಪ್ರಕಾರ ಬದ್ಧತೆಯಾಗುತ್ತದೆ; ಅದು ನಶ್ವರತೆಯ ಸೂಚಕ. ಮೀರುವಿಕೆ ಎಂದರೆ ಈ ಬದ್ಧತೆಯನ್ನು ದಾಟುವುದು. ಮೀರುವುದು ಎಂದರೆ ಕಳೆದುಕೊಳ್ಳುವುದಲ್ಲ. ತನ್ನ ವೈಶಿಷ್ಟ್ಯಗಳನ್ನು ಬಿಟ್ಟುಕೊಟ್ಟೂ ಕೂಡಾ ಜೀವಂತವಾಗಿ ಉಳಿಯುವುದು. ಈ ವೈಚಾರಿಕ ನೆಲೆಯನ್ನು ಹೆಣ್ಣಿನ ಸಂದರ್ಭಕ್ಕೆ ಅನ್ವಯಿಸಿದರೆ ವಿಶಿಷ್ಟ ಪರಿಸ್ಥಿತಿ ಗೋಚರಿಸುತ್ತದೆ. ಹೆಣ್ಣು ತನಗೆ ಸಾಮಾಜಿಕ, ಜೈವಿಕ ಮತ್ತು ನೈತಿಕ ನೆಲೆಗಳಲ್ಲಿ ದೊರೆತ ಚೌಕಟ್ಟನ್ನು ಮೀರುವ ಮೂಲಕವೇ ಸದಾ ಜೀವಂತವಾಗಿ ಉಳಿಯಲು ಸಾಧ್ಯ. ಆದರೆ ಮೀರುವ ಅಪೇಕ್ಷೆಗಳಿದ್ದರೂ ಮೀರುವ ಅವಕಾಶಗಳಿಲ್ಲದಿರುವುದು ಒಂದು ವಿಪರ್ಯಾಸ. ಮತ್ತೆ ಕೆಲವೊಮ್ಮೆ ಇಂತಹ ಮೀರುವಿಕೆಯ 'ನಟನೆ'ಗಳನ್ನು

ಮಾತ್ರ ಆಕೆ ಮಾಡುತ್ತಿರುತ್ತಾಳೆ. ಈ 'ನಟನೆ'ಯಲ್ಲಿ ಕ್ರಿಯೆಯ ಎಲ್ಲ ಹೊಣೆಗಳಿದ್ದರೂ ಕೊನೆಯ ಫಲಿತವಾಗಿ ಏನೂ ಬದಲಾವಣೆ ಆಗಿರುವುದಿಲ್ಲ. ಬೊವಾ ಈ ಪರಿಸ್ಥಿತಿಯನ್ನು ವಿವರವಾಗಿ ಮಂಡಿಸಿದ್ದಾರೆ.

ಅಸ್ತಿತ್ವವಾದದ ಈ ಹಿನ್ನೆಲೆ ಸಿಮೊನ್ ದ ಬೊವಾ ಅವರ ಈ ಬರೆವಣಿಗೆಯನ್ನು ಅರಿಯಲು ಅಗತ್ಯ. ಗಂಡು-ಹೆಣ್ಣಿನ ಸಂಬಂಧಗಳನ್ನು ಯಜಮಾನ-ಗುಲಾಮ, ಪ್ರಧಾನ-ಅಧೀನ, ಶೋಷಕ-ಶೋಷಿತ ಈ ಸಂಬಂಧಗಳಲ್ಲಿ ಗ್ರಹಿಸಲಾಗುತ್ತದೆ. ಅಸ್ತಿತ್ವವಾದಿಗಳು ಈ ಸಂಬಂಧವನ್ನು ಏಕಮುಖವಾಗಿ ನೋಡುವುದಿಲ್ಲ. ಯಜಮಾನ-ಗುಲಾಮ ಸಂಬಂಧದಲ್ಲಿ ಎಲ್ಲವನ್ನೂ ನಿಯಂತ್ರಿಸುವ ವ್ಯಕ್ತಿ ಯಜಮಾನ ಎಂದು ತಿಳಿಯುವುದು ಏಕಮುಖ ಗ್ರಹಿಕೆ. ಆದರೆ ಗುಲಾಮತನದಲ್ಲಿರುವ ವ್ಯಕ್ತಿ ಕೂಡ ತನ್ನ ಆಯ್ಕೆಗಳ ಮೂಲಕ ಈ ಸಂಬಂಧದ ಸ್ವರೂಪವನ್ನು ನಿರ್ಧರಿಸಲು ಸಾಧ್ಯ. ಗಂಡು-ಹೆಣ್ಣಿನ ಸಂಬಂಧವೂ ಹೀಗೆಯೇ. ಕ್ರಿಯಾಶೀಲತೆಯೆಲ್ಲ ಗಂಡಸಿನ ಪಾಲು, ಹೆಣ್ಣು ಸದಾ ನಿಷ್ಕ್ರಿಯಳು, ಮೀರಲಾರದವಳು ಎಂದು ತಿಳಿಯುವುದನ್ನು ಸಿಮೊನ್ ದ ಬೊವಾ ಒಪ್ಪುವುದಿಲ್ಲ. ತನ್ನ ಆಯ್ಕೆಯ ಮೂಲಕ ನಿಷ್ಕ್ರಿಯಳಾಗಿರುವುದಕ್ಕೆ ಹೆಣ್ಣು ಸಮ್ಮತಿ ನೀಡಬಹುದಷ್ಟೇ ಹೊರತು, ಹಾಗಿರಬೇಕೆಂದು ನಿರ್ಧಾರವಾಗಿಲ್ಲ. ಈ ನಿಟ್ಟಿನಲ್ಲಿ ನೋಡಿದಾಗ 'ಚಿರಂತನ ಹೆಣ್ಣುತನ' ಎಂಬುದು ಇಲ್ಲವೆಂದೇ ಸಿಮೊನ್ ದ ಬೊವಾ ವಾದಿಸುತ್ತಾರೆ. ಅಂದರೆ ಮಾನವಜೀವಿಯೊಂದನ್ನು ಜೈವಿಕವಾಗಿ ಹೆಣ್ಣು ಎಂದು ಗುರುತಿಸುತ್ತೇವೆ. ಆದರೆ ಹೆಣ್ಣುತನವೆಂಬುದನ್ನು ಇಂಥದೇ ಎಂದು ಗುರುತುಮಾಡಿ ಹೇಳಲಾಗುವುದಿಲ್ಲ. ಈ ಅಂಶವನ್ನು ಎಚ್ಚರಿಕೆಯಿಂದ ಪರಿಶೀಲಿಸಬೇಕು. ಈ ಮೊದಲೇ ಹೇಳಿದಂತೆ ಹೆಣ್ಣುತನವೆಂಬುದು ಮೊದಲೇ ಇರುವುದಿಲ್ಲ. ಹೆಣ್ಣಾಗಿ ರೂಪುಗೊಳ್ಳುವ ಕ್ರಿಯೆ ಎಡೆಬಿಡದೆ ಸಂಭವಿಸುತ್ತಲೇ ಇರುತ್ತದೆ.

ಹೆಂಗಸಿಗೆ ಲಭಿಸುವ ಲೋಕದ ಬಗೆಗೆ ಸಿಮೊನ್ ದ ಬೊವಾ ತುಂಬ ವಿವರವಾಗಿ ಚರ್ಚಿಸುತ್ತಾರೆ. ಜೈವಿಕವಾದ ಸಂಗತಿಗಳು ಸಾಮಾಜಿಕ ನೆಲೆಯ ಅರ್ಥಗಳನ್ನು ಪಡೆಯುವುದು ಅವರಿಗೆ ಮುಖ್ಯ ಪರಿವರ್ತನೆಯಾಗಿ ಕಂಡಿದೆ. ಲೈಂಗಿಕತೆ ಮತ್ತು ತಾಯ್ತನಗಳನ್ನು ಕುರಿತಂತೆ ಈ ನೆಲೆಯ ಚರ್ಚೆ ಬೆಳೆದಿದೆ. ಮಾನವರಿಗೆ ದತ್ತವಾದ ಸನ್ನಿವೇಶಗಳನ್ನು ಮೀರುವ ಅವಕಾಶ ಇರುತ್ತದೆ. ಹಾಗೆ ಮೀರುವ ಸ್ವಾತಂತ್ರ್ಯವನ್ನು ಪಡೆಯಲು ಗಂಡಸಿಗೆ ಇರುವ ಸಾಧ್ಯತೆಗಳು ಹೆಂಗಸಿಗೆ ಇಲ್ಲವೆಂಬುದೇ ಈವರೆಗಿನ ಚರಿತ್ರೆಯ ಫಲಿತವಾಗಿದೆ. 'ಹೆಂಗಸಿಗೆ ಮೀರುವ ಸಾಧ್ಯತೆಗಳು ಇಲ್ಲವಾಗಿವೆ' ಎಂಬ ವಾಸ್ತವವನ್ನು ಗ್ರಹಿಸಲಾಗದೆ 'ಹೆಂಗಸಿಗೆ ಮೀರುವುದು ಸಾಧ್ಯವೇ ಇಲ್ಲ'ವೆಂಬಂತೆ ಈವರೆಗೆ ಹಲವು ನೆಲೆಗಳಲ್ಲಿ ವ್ಯಾಖ್ಯಾನಿಸುತ್ತಾ ಬರಲಾಗಿದೆ. ಇದು ಇನ್ನೊಂದು ಆಘಾತಕಾರಿ ಅಂಶ. ಚರಿತ್ರೆಯ ಗತಿಶೀಲತೆಯಲ್ಲಿ ಗಂಡಸು ಮತ್ತು ಹೆಂಗಸು ಇವರ ಸ್ಥಾನ ನಿರ್ದೇಶನಗಳು ನಡೆದಿರುವುದು ಒಂದು ನೆಲೆ. ಈ ಸ್ಥಾನ ನಿರ್ದೇಶನವನ್ನು ಒಪ್ಪುವುದೇ ಅಲ್ಲದೇ ಅದನ್ನು ಸಮರ್ಥಿಸುವಂತೆ ಜ್ಞಾನಶಿಸ್ತುಗಳು ತಾತ್ತ್ವಿಕನೆಲೆಗಳನ್ನು ರೂಪಿಸಿವೆ. ಮನೋವಿಶ್ಲೇಷಣಾ ಸಿದ್ಧಾಂತಗಳನ್ನು ಈ ನಿಟ್ಟಿನಲ್ಲಿ ಸಿಮೊನ್ ದ ಬೊವಾ ವಿವರವಾಗಿ ಪರಿಶೀಲಿಸುತ್ತಾರೆ.

ಸ್ತ್ರೀವಾದದ ಒಂದು ನೆಲೆ ಯಾವಾಗಲೂ ಗಂಡು ಹೆಣ್ಣಿನ ಸಂಬಂಧವನ್ನು ಏಕಪಕ್ಷೀಯವಾಗಿ ನೋಡುತ್ತದೆ. ಅಂದರೆ ಗಂಡಸನ್ನು ಅಧಿಕಾರದ ಸ್ಥಾನದಲ್ಲಿ, ಶೋಷಕನ ಸ್ಥಾನದಲ್ಲಿ ಇರಿಸುತ್ತದೆ; ಹೆಂಗಸು ಶೋಷಿತಳಾಗಿಯೇ ಚಿತ್ರಿತಳಾಗುತ್ತಾಳೆ. ಈ ಗ್ರಹಿಕೆ ಸ್ಥಗಿತ ನೆಲೆಯಲ್ಲಿದೆ. ಹೆಂಗಸು ಸ್ವಾತಂತ್ರ್ಯದ ಅವಕಾಶಗಳನ್ನು ಪಡೆಯದಂತೆ ನೋಡಿಕೊಂಡ ಗಂಡಸಿಗೆ ಅಪರಿಮಿತವಾದ ಸ್ವಾತಂತ್ರ್ಯ ದೊರಕುತ್ತದೆಂದು ಯೋಚಿಸುವುದು ಸರಿಯಲ್ಲ. ಹೆಂಗಸಿನ ಈ ಬಂಧಿತ ಸ್ಥಿತಿಯಿಂದಾಗಿ ಗಂಡಸೂ ಅಪರಿಪೂರ್ಣವಾಗಿ ಉಳಿಯುತ್ತಾನೆ. ಈ ತಿಳುವಳಿಕೆ ಅಗತ್ಯವಾಗಿದೆ. ಸಿಮೋನ್ ದ ಬೊವಾ ಅವರು ಅಸ್ತಿತ್ವ ವಾದಿ ಚಿಂತನೆಗಳ ನೆಲೆಗಟ್ಟಿನಲ್ಲಿ ಗಂಡಸಿನ ಈ ಊನತೆಯನ್ನು ಸರಿಯಾಗಿಯೇ ಗುರುತಿಸುತ್ತಾರೆ. ಮೇಲುನೋಟಕ್ಕೆ ಈ ವಿಶ್ಲೇಷಣೆ ಪುರುಷನಿಗೆ ವಿನಾಯತಿಗಳನ್ನು ನೀಡುವಂತೆ ತೋರುತ್ತದೆ. ಹಾಗೆಯೇ ಈವರೆಗೆ ಸಂಭವಿಸಿರುವ ಏರುಪೇರುಗಳ ಹೊಣೆಯಿಂದ ಪುರುಷನನ್ನು ಬಿಡುಗಡೆ ಮಾಡುವಂತೆ ಕಾಣುತ್ತದೆ.

ಈ ಸೂಕ್ಷ್ಮ ಸಂಬಂಧಗಳನ್ನು ಅರಿಯಲು ಮತ್ತೆ ಅಸ್ತಿತ್ವವಾದಿ ನೆಲೆಗಳಿಗೆ ಹೋಗಬೇಕು. ಪ್ರಜ್ಞೆಯ ಎರಡು ಬಗೆಗಳನ್ನು ಈ ಚಿಂತಕರು ಗುರುತಿಸುತ್ತಾರೆ. ತನ್ನತನದ ಅರಿವು ಮೂಡುವುದು ಒಂದು ಬಗೆ, ಈ ಅರಿವು ತನ್ನಲ್ಲಿ ಮೂಡಿದೆ ಎಂಬ ಅರಿವು ಮೂಡುವುದು ಇನ್ನೊಂದು ಬಗೆ. ಎರಡನೆಯ ಬಗೆಯ ಅರಿವು ಹೊಣೆಗಳನ್ನು ತರುತ್ತದೆ. ಕೆಲವೊಮ್ಮೆ ವ್ಯಕ್ತಿಯನ್ನು ಏಕಾಂಗಿಯನ್ನಾಗಿ ಮಾಡುತ್ತದೆ. ನಿಜವಾದ ಪರಿವರ್ತನೆಗಳಿಗೆ ಕಾರಣವಾಗುತ್ತದೆ. ಈ ಸನ್ನಿವೇಶವನ್ನು ಗ್ರಹಿಸಲು ಪಂಪನ ಆದಿಪುರಾಣದ ನೀಲಾಂಜನೆಯ ನೃತ್ಯ ಪ್ರಸಂಗ ನಮಗೆ ನೆರವಾಗಬಹುದು. ನೀಲಾಂಜನೆಯ ನೃತ್ಯ ನಡೆಯುವಾಗಲೇ ಆಕೆಯ ಆಯಸ್ಸು ಮುಗಿದರೂ ನೋಡುವವರಿಗೆ ಅದು ಗಮನಕ್ಕೆ ಬಾರದಂತೆ ಆಕೆಯಲ್ಲಿ ಮತ್ತೊಂದು ಜೀವವನ್ನು ಇಂದ್ರ ತುಂಬಿದನಷ್ಟೇ?. ಇದನ್ನೆಲ್ಲ ನೋಡುತ್ತಿದ್ದವರಲ್ಲಿ ಆದಿನಾಥನೂ ಒಬ್ಬ. ಇತರರಿಗೆ ಗೊತ್ತಾಗದೇ ಹೋದ ಈ ಬದಲಾವಣೆ ಅವನಿಗೆ ಗೊತ್ತಾಯಿತು. ಅದು ಅವನಲ್ಲಿ ಮೂಡಿದ ಪ್ರಜ್ಞೆಯ ಒಂದು ಬಗೆ. ಇದಿಷ್ಟೇ ಆಗಿದ್ದರೆ ಅವನು ಕೇವಲ ಪ್ರತಿಭಾವಂತನಾಗಿ ತೋರುತ್ತಿದ್ದ. ಆದರೆ ಈ ಅರಿವು ಅವನಲ್ಲಿ ಮತ್ತೊಂದು ಬಗೆಯ ಪ್ರಜ್ಞೆಯ ಉದಯಕ್ಕೆ ಕಾರಣವಾಗುತ್ತದೆ. ಜೀವನದ ನಶ್ವರತೆಯ ತಿಳಿವು ಆದಿನಾಥನಿಗಾಯಿತು. ಈ ಅರಿವು ಮೂಡಿದ ವ್ಯಕ್ತಿ ಮೊದಲಿನಂತಿರುವುದು ಸಾಧ್ಯವಿಲ್ಲ. ಹೊಣೆ, ಏಕಾಕಿತನ, ಬದಲಾವಣೆಗಳು ಅನಿವಾರ್ಯ. ಆತ ಎಲ್ಲವನ್ನೂ ತೊರೆಯುವ ನಿಶ್ಚಯ ಮಾಡುತ್ತಾನೆ. ಒಂದು ಜೀವ ಹೋಗಿ ಇನ್ನೊಂದು ಜೀವ ಬಂದದ್ದು ನೀಲಾಂಜನೆಯ ವಿಷಯದಲ್ಲಿ ಚಮತ್ಕಾರವಾದರೆ, ಜೀವನದ ಒಂದು ಅವಸ್ಥೆ ಕಳೆದು ಇನ್ನೊಂದು ಅವಸ್ಥೆ ಮೂಡಿದ ಆದಿನಾಥನಲ್ಲಿ ಅದು ನಕಾರಾತ್ಮದ ಮೀರುವಿಕೆಗೆ ಕಾರಣವಾಗುತ್ತದೆ. ಪ್ರಜ್ಞೆಯ ಈ ಎರಡು ಬಗೆಗಳ ಗ್ರಹಿಕೆಯನ್ನು ಅರಿಯಲು ಈ ನಿದರ್ಶನ ಬೇಕೆನಿಸಿತು. ಹಾಗಾಗಿ ಈ ವಿವರಣೆ.

ಪ್ರಜ್ಞೆಯ ಎರಡನೆಯ ಬಗೆಯನ್ನು ಅರಿತರೆ ಆಗ ಗಂಡು ಹೆಣ್ಣಿನ ಸಂಬಂಧದಲ್ಲಿ ಇಬ್ಬರೂ ಹೇಗೆ ಪರಸ್ಪರ ಅವಲಂಬಿತರಾಗಿದ್ದಾರೆಂಬುದನ್ನು ತಿಳಿಯುವುದು

ಸುಲಭವಾಗುತ್ತದೆ. ಮೊದಲನೆಯ ಬಗೆಯಲ್ಲೇ ನಿಂತರೆ ಗಂಡಸು ಶೋಷಕ ಮತ್ತು ಮುಕ್ತನಂತೆ, ಹೆಂಗಸು ಶೋಷಿತೆ ಮತ್ತು ಬಂಧಿಯಂತೆ ತೋರುತ್ತಾರೆ. ಅವರಿಬ್ಬರಿಗೂ ಬಿಡುಗಡೆಯಿಲ್ಲ. ಇಬ್ಬರೂ ತಂತಮ್ಮ ಪರಿಸ್ಥಿತಿಗಳಿಗೆ ಬಂಧಿಗಳಾಗಿಯೇ ಉಳಿಯುತ್ತಾರೆ. ಬದಲಾಗಲು ಯತ್ನಿಸುವ ಹೆಣ್ಣು, ಬದಲಾಗದಂತೆ ತಡೆಯುವ ಗಂಡು ಮುಗಿಯದ ನಾಟಕದ ಪಾತ್ರಗಳಂತೆ ತೋರುತ್ತಾರೆ.

ಕನ್ನಡ ಚಿಂತನೆಯ ಮಟ್ಟಿಗೆ ಸಿಮೊನ್ ದ ಬೊವಾ ಅವರ ವಿಚಾರಗಳು ಹೊಸ ದಿಕ್ಕುಗಳನ್ನು ತೆರೆಯಬಲ್ಲವು. ಈಗ ನಾವು ಯೋಚಿಸುತ್ತಿರುವ ನೆಲೆಗಳ ಮಿತಿಗಳನ್ನು ತೋರಿಸಲು ಇವು ಸಮರ್ಥವಾಗಿವೆ. ಗಂಡು ಹೆಣ್ಣಿನ ಸಂಬಂಧದ 'ಅನುರೂಪತೆ'ಯನ್ನು ಎರಡು ಬಗೆಗಳಲ್ಲಿ ಕನ್ನಡ ಸಾಹಿತ್ಯ ಮಂಡಿಸಿದೆ. ಒಂದು, ಅವರಿಬ್ಬರ ನಡುವೆ ಭಿನ್ನತೆ ಮತ್ತು ತಾರತಮ್ಯಗಳು ಇದ್ದು ಅವು ಸ್ಥಗಿತ ಸ್ಥಿತಿಯನ್ನು ತಲುಪುವುದನ್ನು ಹೇಳಿದರೆ, ಮತ್ತೊಂದು ಆ ಭಿನ್ನತೆ, ತಾರತಮ್ಯಗಳು ಇಲ್ಲವಾಗುವ ಅವಸ್ಥೆಯನ್ನು ಕಲ್ಪಿಸಿಕೊಳ್ಳುತ್ತವೆ. ಮೊದಲ ಬಗೆಗೆ ಪಂಪನ ಆದಿಪುರಾಣದ ಬಹುಖ್ಯಾತ ಶ್ರೀಮತಿ–ವಜ್ರಜಂಘರ ಪ್ರಸಂಗ ನಿದರ್ಶನ. 'ಓಪರ್ ಓಪರೊಳ್ ಒಡಸಾಯು'ವುದು ಅಲ್ಲಿ ಆದರ್ಶವೆನಿಸಿದೆ. 'ಒಲುಮೆಯೊಳಗೊಂದು ನಾವು. ನಮಗಿಲ್ಲ ಸಾವು ನೋವು' ಎಂದು ಕವಿಗಳು ಹಾಡುತ್ತಾರೆ. ಇದು ಒಂದು ನೆಲೆ. 'ಮೊಲೆ ಮುಡಿ ಬಂದರೆ ಹೆಣ್ಣು, ಗಡ್ಡ ಮೀಸೆ ಬಂದರೆ ಗಂಡು. ನಡುವೆ ಸುಳಿವ ಆತ್ಮ ಹೆಣ್ಣೂ ಅಲ್ಲ; ಗಂಡೂ ಅಲ್ಲ' ಎನ್ನುವುದು ಇನ್ನೊಂದು ನೆಲೆ. ಎರಡೂ ಅತಿರೇಕಗಳೇ ಸರಿ. 'ಇರುವುದನ್ನು ಮರೆಸುವ ಸದ್ಯತನಮಗ್ನತೆ' (=ಸಾವು) ಒಂದು ಅತಿರೇಕ. ಹಾಗಿಲ್ಲದೆ ಭಿನ್ನತೆಗಳನ್ನೇ ತಾರ್ಕಿಕವಾಗಿ ನಿರಾಕರಿಸುವುದು ಇನ್ನೊಂದು ಅತಿರೇಕ. ಮೊದಲನೆಯದು ಗಂಡು ಹೆಣ್ಣುಗಳ ಚಾರಿತ್ರಿಕ ಹೊಣೆಗಳನ್ನೇ ನಿರಾಕರಿಸಿದರೆ, ಎರಡನೆಯದು ಅವರ ಚರಿತ್ರೆಯನ್ನೇ ನಿರಾಕರಿಸುತ್ತದೆ. ಇವೆರಡೂ ಅಲ್ಲದೆ ಮೂರನೆಯ ನೆಲೆಯೂ ಒಂದಿದೆ. ಅದು ಗಂಡು ಹೆಣ್ಣುಗಳು ಧ್ರುವಗಳಂತೆ ದೂರವಿದ್ದರೂ ಅವರ ನಡುವೆ ಚುಂಬಕಗಾಳಿ ಬೀಸುವುದನ್ನು ಕಲ್ಪಿಸಿಕೊಳ್ಳುತ್ತದೆ. ಆದರೆ ಇಬ್ಬರೂ ಎಂದಿಗೂ ಒಡೆದ ಬೇಳೆಗಳಂತೆ, ಮಿಲನದ ಚಿಹ್ನೆಗಳು ಅಸಾಧ್ಯವಾಗುವಂತೆ ಬದುಕುತ್ತಾರೆಂದು ವ್ಯಾಖ್ಯಾನಿಸುತ್ತದೆ. ಈ ವ್ಯಾಖ್ಯೆಗೂ ಮಿತಿಗಳಿವೆ. ಇಲ್ಲಿ ಚರಿತ್ರೆಗೆ ನಿನ್ನೆಗಳಿರುವಂತೆ ನಾಳೆಗಳೂ ಇರುತ್ತವೆನ್ನುವುದನ್ನು ಮರೆಯಲಾಗಿದೆ. ಕನ್ನಡದ ಮನಸ್ಸುಗಳು ಒಗ್ಗಿಹೋದ ಈ ಚಿಂತನಾ ಪರಿಧಿಗಳನ್ನು ಭೇದಿಸುವ ಶಕ್ತಿ ಸಿಮೊನ್ ದ ಬೊವಾ ಅವರ ಈ ಬರೆವಣಿಗೆಗೆ ಇದೆಯೆಂದೇ ನನ್ನ ನಂಬಿಕೆ. ಮತ್ತೆ ಮೊದಲಿಗೆ ಹೋಗೋಣ. ನಾವು ಯೋಚಿಸುತ್ತಿರುವ ಪರಿಯನ್ನು ಬದಲಿಸಿಕೊಳ್ಳಲು ಪ್ರೇರಿಸುವ ಪುಸ್ತಕವಿದೆಂದು ಹೇಳಿದೆ ನಿಜ. ಇದನ್ನು ಓದಿಯಾದ ಮೇಲೆ ನಾವು ಮೊದಲಿನಂತೆ ಉಳಿಯುವುದು ಅಸಾಧ್ಯ. ಇದಕ್ಕಾಗಿ ಭ್ರಮಾಜನಕ ನೆಲೆಗಳನ್ನು ಕೃತಿ ಸೃಷ್ಟಿಸಿಲ್ಲ. ಭ್ರಮೆಗಳನ್ನು ಒಡೆಯುತ್ತಲೇ ನಾವು ನೋಡಿದರೂ ಕಾಣದಂತಿದ್ದ ನೆಲೆಗಳನ್ನು ಬಿಡಿಸಿಡುತ್ತಾ ಹೋಗುತ್ತದೆ. ಆ ಮಟ್ಟಿಗೆ ಇದು ಕೆಲವರು ಹೇಳುವಂತೆ ಶತಮಾನಕ್ಕೊಮ್ಮೆ ಮೂಡಿಬರುವ ಪುಸ್ತಕಗಳಲ್ಲಿ ಒಂದಾಗಿದೆ.

## ಕನ್ನಡ ವಿಶ್ವವಿದ್ಯಾಲಯ ಎದುರಿಸಲಿರುವ ದಿಟವಾದ ಬಿಕ್ಕಟ್ಟು ಬೇರೆಯೇ ಇದೆ

ವಿಜಯನಗರ ಪುನಶ್ಚೇತನ ಟ್ರಸ್ಟ್‌ಗೆ ಕನ್ನಡ ವಿಶ್ವವಿದ್ಯಾಲಯದ ಕ್ಯಾಂಪಸ್ ವಿದ್ಯಾರಣ್ಯದಲ್ಲಿ 80 ಎಕರೆ ಜಾಗವನ್ನು ನೀಡುತ್ತಿರುವ ಬಗೆಗೆ ವಿದ್ಯಾರಣ್ಯದಲ್ಲಿರುವವರು ಮತ್ತು ನಾಡಿನ ಎಲ್ಲ ಕಡೆಯ ಚಿಂತಕರು, ಈ ನೆಲ ಕೈಬದಲಿ ಮಾಡುವುದಕ್ಕೆ ತಮ್ಮ ಒಪ್ಪಿಗೆ ಇಲ್ಲವೆಂಬ ಮಾತನ್ನು ಹೇಳುತ್ತಿದ್ದಾರೆ. ಪತ್ರಿಕೆಗಳಲ್ಲೂ ಈ ಸುದ್ದಿ ಮುಂಚೂಣಿಯಲ್ಲೇ ಇದೆ. ನಾಡಿನ ಚಿಂತಕರು ಸರಕಾರದ ನೀತಿನಿಯಮಗಳನ್ನು ಒಪ್ಪದಿರುವುದರಿಂದಲೂ ಜತೆಗೆ ಕನ್ನಡ ವಿಶ್ವವಿದ್ಯಾಲಯದ ಹಿತಕ್ಕೆ ಧಕ್ಕೆ ಆಗಬಾರದೆಂಬ ಉದ್ದೇಶದಿಂದಲೂ ನೆಲವನ್ನು ಕೈಬದಲು ಮಾಡುವ ನಡೆಗೆ ಒಪ್ಪಿಗೆಯನ್ನು ನೀಡುತ್ತಿಲ್ಲ. ಇದು ಸರಿ. (ಹೀಗೆ ಕೈ ಬದಲಾಗುವ ನೆಲ ವಿದ್ಯಾರಣ್ಯದ ಯಾವ ಕಡೆಯಲ್ಲಿದೆ ಎನ್ನುವುದು, ಅದರ ಸರ್ವೇ ನಂಬರುಗಳೇನು ಎನ್ನುವುದು ಕಾರ್ಯಕಾರಿ ಸಮಿತಿಯ ನಡವಳಿಯಲ್ಲಾಗಲಿ ಸರಕಾರದ ನಡವಳಿಯಲ್ಲಾಗಲೀ ದಾಖಲೆಯಾಗಿಲ್ಲದಿರುವುದು ಸೋಜಿಗ) ವಿಶ್ವವಿದ್ಯಾಲಯವನ್ನು ನೆಲೆಗೊಳಿಸಿರುವ 1991ರ ಕನ್ನಡ ವಿಶ್ವ ವಿದ್ಯಾಲಯದ ಅಧಿನಿಯಮ ಮತ್ತು ಮೊದಲ ಪರಿನಿಯಮಗಳ ಚೌಕಟ್ಟಿನಲ್ಲೇ ತನ್ನ ಹಿಡಿತದಲ್ಲಿರುವ ನೆಲವನ್ನು ವಿಶ್ವವಿದ್ಯಾಲಯದ ಆಡಳಿತ ತಾನೇ ಕಾಯ್ದುಕೊಳ್ಳಬಹುದು. ಅದು ಬೇರೆ ಯಾರಿಗೂ ಸೇರದಂತೆ ನೋಡಿಕೊಳ್ಳಬಹುದಾಗಿದೆ. ಹಿಂದೊಮ್ಮೆ ಸರಕಾರವೇ ಕೇಂದ್ರ ಮೀಸಲು ಪಡೆಯ ತುಕಡಿಯೊಂದನ್ನು ನೆಲೆಗೊಳಿಸಲು ವಿದ್ಯಾರಣ್ಯದ ನೆಲವನ್ನು ಕೇಳಿದ್ದುಂಟು. ಆದರೆ ವಿಶ್ವವಿದ್ಯಾಲಯಕ್ಕೆ ಸೇರಿದ ನೆಲವನ್ನು ಬಳಸುವ, ಬೆಳೆಸುವ ಮತ್ತು ಕಾಯ್ದುಕೊಳ್ಳುವ ಹೊಣೆ ವಿಶ್ವವಿದ್ಯಾಲಯದ ಪ್ರಾಧಿಕಾರಗಳಿಗೆ ದೊರೆತಿದೆಯೇ ಹೊರತು ಅದನ್ನು ಮಾರುವ, ಬೇರೆಯವರಿಗೆ ಬಿಟ್ಟುಕೊಡುವ ಹಕ್ಕು ಇಲ್ಲ. ಈ ನಿಟ್ಟಿನಲ್ಲಿ ಟ್ರಸ್ಟ್‌ಗೆ ನೆಲವನ್ನು ನೀಡುವುದು ಆಗದ ಮಾತು. ಆದರೆ ಆ ನೆಲದಲ್ಲಿ ಬೇಕಾದ ಸೌಲಭ್ಯಗಳನ್ನು ಕಟ್ಟಿ ಬಳಿಕ ಅದನ್ನು ಮರಳಿಸುವ ಮಾತನ್ನೂ ಹೇಳಲಾಗುತ್ತಿದೆ. ಆದರೆ ಈ ಹೊಣೆ ಹೊರಲು ಇನ್ನೇನು ಇಪ್ಪತ್ತು ತುಂಬಲಿರುವ ವಿಶ್ವವಿದ್ಯಾಲಯಕ್ಕೆ ಆಗದ ಮಾತೇನು? ಅದಕ್ಕಾಗಿ ಸರಕಾರ ಒಂದು ಟ್ರಸ್ಟ್ ಅನ್ನು ನೆಲೆಗೊಳಿಸಬೇಕೇಕೆ?

ಅಂದರೆ ನಾವು ದಿಟವಾಗಿ ಮಾಡಬೇಕಾದ್ದು ಏನು? ವಿಜಯನಗರ ಪುನಶ್ಚೇತನ ಟ್ರಸ್ಟ್ ಎಂಬುದನ್ನು ಜಾರಿಗೆ ಕೊಟ್ಟಿರುವುದನ್ನು ಒಪ್ಪಬಾರದು. ಪುನಶ್ಚೇತನ ಎನ್ನುವ

ಮಾತೇ ದಿಗಿಲು ತರುತ್ತದೆ. ಹಳೆಯ ಕತೆಯೊಂದರಲ್ಲಿ ಕಲಿತ ನಾಲ್ವರು ಕಾಡಿನೊಳಗೆ ತಮ್ಮ ಕಣ್ಣಿಗೆ ಬಿದ್ದ ಮೂಳೆಗಳನ್ನು ನೋಡಿ ಅವು ಹುಲಿಯದ್ದೆಂದು ಗೊತ್ತು ಮಾಡಿಕೊಂಡು ತಮ್ಮ ಜಾಣ್ಮೆಯಿಂದ ಅದನ್ನು 'ಪುನಶ್ಚೇತನ'ಗೊಳಿಸಿ ಕೊನೆಗೆ ಎದ್ದುಬಂದ ಹುಲಿಯ ಹಸಿವಿಗೆ ತುತ್ತಾದದ್ದನ್ನು ಕೇಳಿದ್ದೇವೆ (ಅವರಲ್ಲಿದ್ದ ಜಾಣನೊಬ್ಬ ಹೇಗೋ ತಪ್ಪಿಸಿಕೊಂಡನಂತೆ) ಈ ಪುನಶ್ಚೇತನದ ಮಾತು ಹೊಸದೇನಲ್ಲ; ಹಿಂದೆಯೂ ಕೇಳಿಬಂದಿತ್ತು. ಮತ್ತೆಮತ್ತೆ ಕೇಳಿ ಬರುತ್ತಿದೆ. ರಾಮಕೃಷ್ಣ ಹೆಗಡೆಯವರು ಮುಖ್ಯಮಂತ್ರಿಗಳಾಗಿದ್ದಾಗ ಹಂಪಿಯ ಉದ್ಧಾರಕ್ಕೆ ಏನು ಮಾಡಬಹುದು ಎನ್ನುವುದನ್ನು ತಿಳಿಸಿಕೊಡಲು ಎಂ.ವಿ. ಕಾಮತರನ್ನು ಕೋರಿದ್ದರು. ಅವರು ನೀಡಿದ ವರದಿಯಲ್ಲಿ ಹೀಗೆಯೇ ಹಂಪಿಯ ಬಳಿ ಒಂದು ಕಿರು ಹಂಪಿಯನ್ನು ಕಟ್ಟುವ ಸಲಹೆ ನೀಡಿದ್ದರು. ಆ ಕಿರು ಹಂಪಿಯು, ಅದನ್ನು ನೋಡಲು ಹೋದವರಿಗೆ 450 ಚ.ಕಿಮೀ ಹರಡಿಕೊಂಡಿರುವ ದಿಟಹಂಪಿಯನ್ನು ನೋಡದಿದ್ದರೂ ಎಲ್ಲವನ್ನು ನೋಡಿದ ಹಾಗೆ ತಿಳಿಸಿಕೊಡುವಂತಿರಬೇಕು ಎನ್ನುವುದು ಕಾಮತರ ನಿಲುವಾಗಿತ್ತು. ಈ ಕಿರು ಹಂಪಿಗೆ ಯುವಜನರು ಬರಬೇಕು ಎಲ್ಲವನ್ನು ತಿಳಿದುಕೊಳ್ಳುವಂತಾಗಬೇಕು ಎಂಬ ಗುರಿಯೂ ಇದ್ದಿತು. ಆದರೆ ಮುಂದೆ ನಡೆದ ಏನೇನೊ ಬದಲಾವಣೆಗಳಿಂದ ಆ ಕಿರು ಹಂಪಿಯ ಕನಸು ಕರಗಿ ಹೋಯಿತು. ಈಗ ಮರಿ ವಿಜಯನಗರವನ್ನು ಕಟ್ಟುವ ಪುನಶ್ಚೇತನ ಯೋಜನೆ ಮುಂದೆ ಬಂದಿದೆ.

ನಾಡಿನ ಜನತೆ ಹಂಪಿ ಮತ್ತು ವಿಜಯನಗರಗಳನ್ನು ಬೇರೆಬೇರೆಯಾಗಿಯೇ ನೊಡಿದೆ. ಬರೆದ, ಬರೆಯಲಾಗುತ್ತಿರುವ ಚರಿತ್ರೆ ಏನೇ ಹೇಳಲಿ ಜನರು ಹಂಪಿಯನ್ನು ನೆಮ್ಮಿರುವಷ್ಟು ವಿಜಯಗರವನ್ನು ನೆಮ್ಮಿಲ್ಲ. ಕನ್ನಡ ವಿಶ್ವವಿದ್ಯಾಲಯದ ಮೊದಲ ದಿನಗಳಲ್ಲಿ ಗೆಳೆಯ ಪುರುಷೋತ್ತಮ ಬಿಳಿಮಲೆ ಮತ್ತವರ ಜತೆಗಾರರು ಹಂಪಿಯ ಪರಿಸರದಲ್ಲಿ ಸುತ್ತಾಡಿ ಅಲ್ಲಿನ ಜನಪದದ ನೆಲೆಗಳನ್ನು ಹುಡುಕಲು ಹೊರಟಾಗ ಅವರಿಗೆ ಅಚ್ಚರಿ ಕಾದಿತ್ತು. ಬರೆದ ಚರಿತ್ರೆ ಹಾಡಿ ಹೊಗಳುತ್ತಿರುವ ವಿಜಯನಗರ ಸಾಮ್ರಾಜ್ಯ ಜನರ ನೆನಪಿನಲ್ಲಿ ಯಾವ ನೀರ್ಗೆರೆಯನ್ನೂ ಉಳಿಸದೆ ಮಾಸಿ ಹೋಗಿತ್ತು. ಆದರೆ ಆ ಚರಿತ್ರೆ ಕಡೆಗಣಿಸಿದ ಇಲ್ಲವೆ ಪಕ್ಕಕ್ಕೆ ತಳ್ಳಿದ್ದ ಕುಮಾರರಾಮ ಮಾತ್ರ ಬಲವಾಗಿ ಬೇರೂರಿದ್ದ. ಅಲ್ಲದೆ ಹಂಪಿ ಈಗಲೂ ಜನರ ನಂಬುಗೆಯ ನೆಲೆಯಾಗಿದೆ. ಪಂಪಮ್ಮನ ಮದುವೆ ಜನರಿಗೆ ದೊಡ್ಡ ಹಬ್ಬ. ಆದರೆ ಸಾಮ್ರಾಜ್ಯ ಅಲ್ಲ. ಹಾಗಿದ್ದಲ್ಲಿ ಪುನಶ್ಚೇತನಗೊಳಿಸಬೇಕಾದದ್ದು ಏನನ್ನು ಮತ್ತು ಏಕೆ? ಜನ ತಮ್ಮ ನೆನಪಿನಿಂದ ಅಳಿಸಿ ಹಾಕಿರುವ ಸಾಮ್ರಾಜ್ಯದ ಕತೆಯನ್ನು ಮತ್ತೆ ಕಟ್ಟಬೇಕೆಂದು ಹೊರಟಿರುವುದೇಕೆ? ಇದಕ್ಕಾಗಿ ಕೋಟಿಗಟ್ಟಲೆ ಹಣವನ್ನು ಬಳಸುವುದು ಸರಿಯೇ? ಹೀಗಾಗಿ ನಾಡಿನ ಚಿಂತಕರು ವಿಜಯ ನಗರ ಪುನಶ್ಚೇತನ ಟ್ರಸ್ಟ್ ಅನ್ನು ಸರಕಾರ ತನ್ನ ಕಾರ್ಯಕ್ರಮವನ್ನಾಗಿ ನೆಲೆಗೊಳಿಸಿರುವುದನ್ನು ಒಪ್ಪಬಾರದು. ಆ ಟ್ರಸ್ಟ್ ವಿದ್ಯಾರಣ್ಯದಲ್ಲಿ ಕಟ್ಟಡಗಳನ್ನು ಕಟ್ಟುತ್ತದೋ ಇಲ್ಲವೇ ಮತ್ತೆಲ್ಲಿ ಕಟ್ಟುವುದೋ ಎಂಬುದು ಈಗ ಮುಖ್ಯವಲ್ಲ. ಆ ಟ್ರಸ್ಟ್‌ನ ಗುರಿಯೇ ಜನರಿಗೆ ಬೇಡದ ಚರಿತ್ರೆಯ ನೆನಪಿನ ಹೊರೆಯನ್ನು ಅವರ ಮೇಲೆ ಹೊರಿಸುವುದಾದ್ದರಿಂದ ಅದನ್ನು ನಾವು ಬೇಡವೆಂದು ಹೇಳಬೇಕಿದೆ.

ಇದರಿಂದ ಕನ್ನಡ ವಿಶ್ವವಿದ್ಯಾಲಯ ತನ್ನ ನೆಲವನ್ನು ತಾನು ಉಳಿಸಿಕೊಳ್ಳಬಹುದು ಎನ್ನುವುದೇನೋ ದಿಟ. ಆದರೆ ಬರಲಿರುವ ದಿನಗಳಲ್ಲಿ ಮುಂದೆ ಇನ್ನೊಂದು ಅಪಾಯುವನ್ನು ವಿಶ್ವವಿದ್ಯಾಲಯು ಎದುರಿಸಬೇಕಾಗುತ್ತದೆ. 1991ರ ಕನ್ನಡ ವಿಶ್ವವಿದ್ಯಾಲಯುದ ಅಧಿನಿಯುಮುವನ್ನು ಜಾರಿಗೊಳಿಸಿದಾಗ ವಿಶ್ವವಿದ್ಯಾಲಯದ ಕುಲಾಧಿಪತಿಗಳು ರಾಜ್ಯದ ಮುಖ್ಯಮಂತ್ರಿಗಳಾಗಿರುತ್ತಾರೆ ಎಂದಿತ್ತಷ್ಟೆ. ಹಾಗಾಗಿ ವಿಶ್ವವಿದ್ಯಾಲಯದ ಹೆಚ್ಚಿನ ಅಧಿಕಾರಗಳನ್ನು ಕುಲಪತಿಗಳಿಗೆ ಮತ್ತು ಕುಲಾಧಿಪತಿಗಳಿಗೆ (ಅಂದರೆ ರಾಜ್ಯದ ಮುಖ್ಯಮಂತ್ರಿಗಳಿಗೆ) ನೀಡುವ ನಿಟ್ಟಿನಲ್ಲಿ ಅಧಿನಿಯಮವನ್ನು ರೂಪಿಸಲಾಗಿತ್ತು. ಆದರೆ 1998–99 ರಲ್ಲಿ ವಿಶ್ವವಿದ್ಯಾಲಯ ಧನಸಹಾಯ ಆಯೋಗದಿಂದ ಮನ್ನಣೆ ಮತ್ತು ನೆರವನ್ನು ಪಡೆಯಬೇಕಾಗಿ ಬಂದಾಗ ಆ ಸಂಸ್ಥೆಯ ನಿಯಮಾವಳಿಗಳಂತೆ ರಾಜ್ಯದ ರಾಜ್ಯಪಾಲರನ್ನು ಕುಲಾಧಿಪತಿಗಳನ್ನಾಗಿ ಮಾಡುವ ಬದಲಾವಣೆಯನ್ನು ಮಾಡಬೇಕಾಯಿತು. ಅಂತಹ ತಿದ್ದುಪಡಿಯೂ ಅಧಿನಿಯಮದಲ್ಲಿ ಆಗಿದೆ. ಅಂದರೆ ಮುಖ್ಯಮಂತ್ರಿಗಳಿಗೆ ಇದ್ದ ಅಧಿಕಾರ ತಂತಾನೆ ರಾಜ್ಯಪಾಲರಿಗೆ ರವಾನೆಯಾಯಿತು. ಈ ನಿಟ್ಟಿನಲ್ಲಿ ನೋಡಿದಾಗ ಕನ್ನಡ ವಿಶ್ವವಿದ್ಯಾಲಯಕ್ಕೆ ಈಗ ಇರುವ ಅಧಿನಿಯಮ ಆ ವಿಶ್ವವಿದ್ಯಾಲಯ ಬೇರೆಯ ವಿಶ್ವವಿದ್ಯಾಲಯಗಳಂತೆ ಅಲ್ಲ ಎನ್ನುವುದನ್ನು ತಿಳಿಸಿಕೊಡುವಂತಿದೆ.

ಆದರೆ ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ರ ವ್ಯಾಪ್ತಿಗೆ ಕನ್ನಡ ವಿಶ್ವವಿದ್ಯಾಲಯವನ್ನೂ ಸೇರಿಸಬೇಕೆಂಬ ನಡೆ ಮೊದಲಾಗಿದೆ. ಡಾ.ಎನ್.ಆರ್ ಶೆಟ್ಟಿಯವರ ಸಮಿತಿಯ ಸಲಹೆಗಳ ಮೇರೆ ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 200ಕ್ಕೆ ತಿದ್ದುಪಡಿಗಳನ್ನು ತರುವಾಗ ಅದರ ಚೌಕಟ್ಟಿಗೆ ಕನ್ನಡ ವಿಶ್ವವಿದ್ಯಾಲಯವನ್ನೂ ಸೇರಿಸಲು ಸರಕಾರ ಮುಂದಾಗುತ್ತಿದೆ. ಇದರಿಂದ ಮುಂದೆ ಕನ್ನಡ ವಿಶ್ವವಿದ್ಯಾಲಯು ತನ್ನತನವನ್ನು ಕಳೆದುಕೊಳ್ಳಲಿದೆ. ರಾಜ್ಯದ ಎಲ್ಲ ವಿಶ್ವವಿದ್ಯಾಲಯಗಳಿಗೂ ಒಂದೇ ರೂಪದ ಕಾಯದೆಗಳಿರಬೇಕು ಎನ್ನುವ ಚಿಂತನೆಯಲ್ಲೇ ತಪ್ಪಿದೆ. ತೋರವಾದ ಕೆಲವು ಚೌಕಟ್ಟುಗಳಲ್ಲಿ ಹೋಲಿಕೆಗಳಿರಬಹುದಾದರೂ ಎಲ್ಲ ವಿಶ್ವವಿದ್ಯಾಲಯಗಳಿಗೂ ಒಂದೇ ಬರೆ ಎಳೆಯುವುದು ಸರಿಯಾಗದು. ಬಿಜಾಪುರದ ಮಹಿಳಾ ವಿಶ್ವವಿದ್ಯಾಲಯುವನ್ನು ನೆಲೆಗೊಳಿಸಿದಾಗ ಅದಕ್ಕೆ ಬೇರೆಯೇ ಆದ ಅಧಿನಿಯುಮುವನ್ನು ರೂಪಿಸಲು ಅನುವುಮಾಡಿಕೊಡದೆ ಅದನ್ನೂ 2000ರ ವಿಶ್ವವಿದ್ಯಾಲಯಗಳ ಚೌಕಟ್ಟಿಗೆ ತಂದಿದ್ದರಿಂದ ಏನಾಯಿತೆಂಬುದುನ್ನು ಈಗ ನೋಡುತ್ತಿದ್ದೇವೆ. ಅದು ಹೆಣ್ಣು ಮಕ್ಕಳು ಮಾತ್ರ ಓದುವ ವಿಶ್ವವಿದ್ಯಾಲಯ ಎಂಬಷ್ಟಕ್ಕೆ ಮಾತ್ರ ತನ್ನತನವನ್ನು ಕಾಯ್ದುಕೊಳ್ಳಬೇಕಾಗಿದೆ. ಮೊದಲಲ್ಲೇ ಹೇಳಿದಂತೆ ಇನ್ನೇನು ಇಪ್ಪತ್ತು ತುಂಬಲಿರುವ ಕನ್ನಡ ವಿಶ್ವವಿದ್ಯಾಲಯ ಈಗಾಗಲೇ ತನ್ನತನವೇನೆಂಬುದನ್ನು ಬೇರೆ ಬೇರೆ ಬಗೆಯಲ್ಲಿ ಕಂಡುಕೊಳ್ಳುವ ಮತ್ತು ತೋರಿಸಿಕೊಡುವ ಹಾದಿಯಲ್ಲಿ ಸಾಗುತ್ತಿದೆ. ಹೀಗೆ ಅದರ ಚಹರೆಗಳನ್ನು ಅಳಿಸಿ ಹಾಕುವಂತೆ ಎಲ್ಲ ವಿಶ್ವವಿದ್ಯಾಲಯಗಳ ಚೌಕಟ್ಟಿಗೆ ತಂದದ್ದೇ ಆದರೆ ಆಗ ಕನ್ನಡ ವಿಶ್ವವಿದ್ಯಾಯುಕ್ಕೆ ತುಂಬಲಾಗದ ಹಾನಿಯಾಗುವುದಂತೂ ನಿಜ. ಆಡಳಿತದ ನೆಲೆಯಲ್ಲಿ ತರುವ ಬದಲಾವಣೆಗಳು

ವಿಶ್ವವಿದ್ಯಾಲಯದ ಗುರಿಗಳಿಗೆ ಹೇಗೆ ಅಡ್ಡಿಮಾಡಬಲ್ಲುದು ಎಂದು ಕೆಲವರು ಕೇಳಬಹುದು. ಕನ್ನಡ ವಿಶ್ವವಿದ್ಯಾಲಯ ಈಗ ಹೊಂದಿರುವ ಶೈಕ್ಷಣಿಕ ಸ್ವಾಯತ್ತತೆ ಮತ್ತು ಹರವುಗಳ ಮೇಲೆ ಹಿಡಿತವಿರಿಸಿಕೊಳ್ಳುವ ಮಿತಿಯಿಲ್ಲದ ಅಧಿಕಾರ ಈ ಬದಲಾವಣೆಯಿಂದ ಸರಕಾರಕ್ಕೆ ದೊರಕುತ್ತದೆ. ವಿಶ್ವವಿದ್ಯಾಲಯದ ದಿನದಿನದ ನಡವಳಿಗಳಲ್ಲೂ ಸರಕಾರದ ಇಲಾಖೆಗಳು ಅದರ ಸೂಚನೆಗಳು ತಲೆತೂರಿಸಿ ಇಡೀ ವಿಶ್ವವಿದ್ಯಾಲಯವೇ ಸರಕಾರದ ಒಂದು ಕಚೇರಿಯಾಗಿ ಬದಲಾಗುವುದಂತೂ ದಿಟ. ಈಗ 80 ಎಕರೆ ನೆಲವನ್ನು ಉಳಿಸಿಕೊಳ್ಳುವದಕ್ಕೆ ನಡೆಸಿದ ಹೋರಾಟಕ್ಕಿಂತಲೂ ದೊಡ್ಡ ಹೋರಾಟವನ್ನು ಆಗ ನಡೆಸಬೇಕಾಗಿ ಬರುವುದಂತೂ ಖಂಡಿತ.

ಅಂದರೆ ಕನ್ನಡ ವಿಶ್ವವಿದ್ಯಾಲಯದ ಈಗಿನ ಅಧಿನಿಯಮಗಳಲ್ಲಿ ಕೊರತೆಗಳು ಇಲ್ಲವೆಂದಲ್ಲ. ಅದನ್ನು ತಿದ್ದಿಕೊಳ್ಳುವುದು ಬೇರೆ. ಬದಲಿಗೆ ಈಗಿರುವ ಅಧಿನಿಯಮವನ್ನು ಕಿತ್ತು ಹಾಕಿ ಚಹರೆಯನ್ನೇ ಅಳಿಸಿ ಹಾಕಲು ಹೊರಡುವುದು ಬೇರೆ. ಹಿಂದೆ ಒಂದೆರಡು ಬಾರಿ ಹೀಗೆ ಮಾಡಲು ಸರಕಾರದ ಇಲಾಖೆಗಳು ಮುಂದಾದಾಗ ಕನ್ನಡ ವಿಶ್ವವಿದ್ಯಾಲಯಕ್ಕೆ ಒಳಿತನ್ನು ಬಯಸುವವರ ಒತ್ತಾಸೆಯಿಂದ ಆಡಳಿತದಲ್ಲಿ ಅವರಿಗಿದ್ದ ಬೆಂಬಲದಿಂದ ಅದು ನಡೆಯದಂತೆ ನೋಡಿಕೊಳ್ಳುವುದು ಸಾಧ್ಯವಾಗಿದೆ. ಈಗಲೂ ಈ ವಿಶ್ವವಿದ್ಯಾಲಯದ ಹಿತವನ್ನು ಬಯಸುವವರು ಮತ್ತು ಜನಪರವಾಗಿರುವವರು ಸಾಮ್ರಾಜ್ಯ ಪುನಶ್ಚೇತನಗೊಳಿಸುವ ಗುರಿಯನ್ನು ಮತ್ತು ಕನ್ನಡ ವಿಶ್ವವಿದ್ಯಾಲಯದ ಚಹರೆಯನ್ನು ಅಳಿಸಿಹಾಕಲು ನಡೆಯುತ್ತಿರುವ ಹುನ್ನಾರಗಳನ್ನು ಎದುರಿಸಬೇಕಿದೆ.

# ಕರ್ನಾಟಕದ ಓದು

ಅನಂತಮೂರ್ತಿಯವರು ಎಲ್ಲ ತಿಳುವಳಿಕೆಗಳು ನಮಗೆ ಕನ್ನಡದ ಮೂಲಕ ದೊರೆಯುವಂತಾಗಬೇಕೆಂದು ಹೇಳಿದ್ದಾರೆ. ಹಾಗೆ ದೊರೆಯುವಂತೆ ಮಾಡಲು ಯಾವ ಯಾವ ನಡೆಗಳನ್ನು ಮಾಡಬೇಕಿದೆ ಎನ್ನುವುದನ್ನೂ ಹೇಳಿದ್ದಾರೆ. ಆದರೆ ನಮಗೆ ಈ ನಡೆಗಳಿಂದಾಗಿ ಕನ್ನಡದ ಮೂಲಕ ಸಿಗುವ ತಿಳುವಳಿಕೆ ಯಾವುದಾಗಿರಬೇಕು? ಹೀಗೆ ಕೇಳಿದರೆ ಇದೆಂತಹ ಮಾತೆಂದು ಪಕ್ಕಕ್ಕೆ ತಳ್ಳಿ ಹಾಕುವವರೇ ಹೆಚ್ಚು. ಆದರೆ ಕನ್ನಡದ ಮೂಲಕ ನಮಗೆ ದೊರೆಯುವ ತಿಳುವಳಿಕೆ ಈಗ ಇಂಗ್ಲಿಶಿನ ಮೂಲಕ ದೊರೆಯುವ ತಿಳುವಳಿಕೆಯೇ ಆಗಿರಬೇಕೆ? ಆ ತಿಳುವಳಿಕೆಯನ್ನು ಪಡೆದುಕೊಳ್ಳುವ ಚೌಕಟ್ಟನ್ನೂ ಕೂಡ ನಾವು ಹೊರಗಿನಿಂದ ಪಡೆದುಕೊಳ್ಳಬೇಕೆ? ಹಾಗೆ ನೋಡಿದರೆ ಸುಮಾರು ಐವತ್ತು ವರುಷಗಳ ಹಿಂದಿನಿಂದಲೇ ಕನ್ನಡದ ಮೂಲಕ ತಿಳಿವನ್ನು ನೀಡುವ ನಡೆಗಳು ಹೆಚ್ಚಿನ ಕಲಿಕೆಯ ಹಂತದಲ್ಲಿ ಮೊದಲಾಗಿವೆ. ಅದಕ್ಕೆ ಬೇಕಾದ ಹೊತ್ತಗೆಗಳನ್ನು ಇಂಗ್ಲಿಶಿನಿಂದ ಕನ್ನಡಕ್ಕೆ ತರುವ ಕೆಲಸವೂ ನಡೆಯಿತು. ಕಲಿಸಲು ಕನ್ನಡವನ್ನೇ ಬಳಸುವ ನಿಟ್ಟಿನಲ್ಲಿ ಕೆಲಸಗಳೂ ನಡೆದವು. ಈಗಲೂ ನಮಗೆಲ್ಲರಿಗೂ ತಿಳಿದಿರುವಂತೆ ಹೆಚ್ಚಿನ ಕಲಿಕೆಯ ನೆಲೆಯಲ್ಲಿ ಮಾನವಿಕ ತಿಳಿವುಗಳನ್ನು ಇಂಗ್ಲಿಶಿನ ಮೂಲಕ ಕಲಿಸುವ ಮಾತಿದೆಯಾದರೂ ಕಲಿಯುವವರು, ತಾವು ಕಲಿಯಲು ಮತ್ತು ಕಲಿತದ್ದನ್ನು ಬರೆಯಲು ಕನ್ನಡವನ್ನೇ ಬಳಸುತ್ತಿದ್ದಾರೆ. ಅರಿಮೆಯ ಬರಹಗಳನ್ನು ಕನ್ನಡದಲ್ಲೇ ಬರೆಯುತ್ತಿದ್ದಾರೆ. ಹಾಗಿದ್ದರೂ ನಮಗೆ ಬೇಕಾದ ಗುರಿಯನ್ನು ನಾವು ಮುಟ್ಟಿಲ್ಲವೆಂಬ ಕೊರತೆ ನಮ್ಮೆಲ್ಲರನ್ನೂ ಕಾಡುತ್ತಿದೆ. ಏಕೆ ಹೀಗಾಯ್ತು?

ತಿಳಿವು ಯಾವ ನುಡಿಯ ಮೂಲಕ ನಮಗೆ ದೊರಕಬೇಕು ಎಂಬುದನ್ನು ಹೇಳುವಾಗಲೇ ನಮಗೆ ಯಾವ ತಿಳಿವು ಬೇಕು ಮತ್ತು ಆ ತಿಳಿವು ಯಾವ ಚೌಕಟ್ಟಿನ ಮೂಲಕ ನಮಗೆ ದೊರಕಬೇಕು ಎನ್ನುವುದನ್ನು ಗುರುತಿಸಿಕೊಳ್ಳಬೇಕಾಗುತ್ತದೆ. ಎಲ್ಲ ತಿಳುವಳಿಕೆಗಳು ನಮಗೆ ಕನ್ನಡದ ಮೂಲಕ ದೊರಕಲಿ ಎಂದು ಹೇಳಿದಾಗ ನಾವು ನಮಗೇ ಗೊತ್ತಿಲ್ಲದಂತೆ ಕನ್ನಡವನ್ನು ಪಡೆಯುವ ನುಡಿಯ ಜಾಗದಲ್ಲಿ ಅಲುಗಾಡದಂತೆ ಇರಿಸಿಬಿಟ್ಟಿರುತ್ತೇವೆ. ನಮಗೆ ದೊರೆಯುವ ತಿಳಿವು ನಮ್ಮದಾಗಿರದು. ಆದರೆ ಆ ತಿಳಿವು ನಮಗೆ ಬೇಕಾಗಿದೆ ಎಂದು ಒಪ್ಪಿಕೊಳ್ಳುವ ಮತ್ತು ಇದಲ್ಲದೆ ಬೇರೆ ಯಾವ ಹಾದಿಗಳೂ ನಮಗೆ ತೆರೆದಿಲ್ಲ ಎಂದು ನಂಬುವ ಒತ್ತಡಕ್ಕೆ ನಮ್ಮ ಕಲಿಕೆಯ ಚೌಕಟ್ಟು ಈವರೆಗೆ ನಮ್ಮನ್ನು ಗುರಿಮಾಡಿದೆ. ಇದರಿಂದ ನಮ್ಮ ನುಡಿಯೂ ಬೆಳೆಯಲಿಲ್ಲ; ನಮ್ಮ ತಿಳಿವು

ಹೆಚ್ಚಾದರೂ ಅದು ಎಂದೂ ನಮ್ಮದಾಗಲಿಲ್ಲ. ಬೇರೆ ಬೇರೆ ಮಾನವಿಕ ತಿಳಿವುಗಳಲ್ಲಿ ಹೆಚ್ಚಿನ ಓದಿನವರೂ ಕೂಡ ತಾವು ಓದಿದ್ದಕ್ಕೂ ತಾವು ಸುತ್ತಲೂ ನೋಡುತ್ತಿರುವುದಕ್ಕೆ ಯಾವ ನಂಟೂ ಇಲ್ಲದಿರುವುದನ್ನು ಕಂಡಿದ್ದಾರೆ. ಓದಿದ್ದನ್ನು ಹಾಗೆಯೇ ಮರೆತು ಬಿಟ್ಟಿದ್ದಾರೆ. ಹಾಗಿದ್ದರೆ ನಾವು ಈಗ ಏನು ಮಾಡಬೇಕು?

**ಕನ್ನಡದ ತಿಳಿವು ಕನ್ನಡದ ಮೂಲಕ ದೊರೆಯುವಂತಾಗಬೇಕು.**

ಇದಕ್ಕಾಗಿ **ಕರ್ನಾಟಕದ ಓದು** ಎಂಬ ಹೊಸ ತಿಳಿವಿನ ವಲಯವನ್ನು ನಾವು ಕಟ್ಟಬೇಕಿದೆ. ಈಗ ಬೇರೆಬೇರೆಯಾಗಿ ಒಂದಕ್ಕೊಂದು ನಂಟಿಲ್ಲದಂತೆ ಇರುವ ಹಲವು ತಿಳಿವಿನ ವಲಯಗಳನ್ನು ಒಗ್ಗೂಡಿಸಬೇಕು. ಅವುಗಳ ನಡುವೆ ಇರುವ ಗಡಿಗೆರೆಗಳನ್ನು ಅಳಿಸಲಾಗದಿದ್ದರೂ ಆ ಗೆರೆಗಳು ಗೋಡೆಗಳಾಗದಂತೆ ನೋಡಿಕೊಳ್ಳಬೇಕಾಗಿದೆ. ಚರಿತ್ರೆ, ಸಮಾಜಶಾಸ್ತ್ರ, ರಾಜ್ಯಶಾಸ್ತ್ರ, ಅರ್ಥಶಾಸ್ತ್ರ, ಸಾಹಿತ್ಯದ ಓದು, ಭಾಷಾಶಾಸ್ತ್ರ, ಕಲಾಧ್ಯಯನ, ಪುರಾತತ್ವಶಾಸ್ತ್ರ ಇವೇ ಮೊದಲಾದ ತಿಳಿವಿನ ವಲಯಗಳಲ್ಲಿ ಕರ್ನಾಟಕವನ್ನು ನೋಡಿರುವ ಬಗೆಯನ್ನು ಈ ಹೊಸ ಓದಿನ ವಲಯ ಗುರುತಿಸಿಕೊಳ್ಳುತ್ತದೆ. ಇದು ಕೇವಲ ಮಾಹಿತಿಗಳನ್ನು ಕೂಡಿಹಾಕುವ ಕೆಲಸವಲ್ಲ. ಹಿಂದೆ ಪಟ್ಟಿ ಮಾಡಿದ ತಿಳಿವಿನ ವಲಯಗಳು ಜಾಗತಿಕ ತಿಳಿವಿನ ಚೌಕಟ್ಟಿನ ನೆಲೆಯಲ್ಲಿ ಕನ್ನಡದ, ಕರ್ನಾಟಕದ ಮಾಹಿತಿಯನ್ನು ನೋಡುವ ಹಾದಿಯನ್ನು ಹಿಡಿದಿವೆ. ಇದರಿಂದ ನಮಗೆ ಹೆಚ್ಚಿನ ನೆರವು ದೊರೆಯುವುದಿಲ್ಲ. ಕರ್ನಾಟಕವನ್ನು ಒಳಗಿನವರು ನೋಡಿರುವ ಬಗೆ ಮತ್ತು ಕರ್ನಾಟಕದ ಹೊರಗಿನವರು ನೋಡಿರುವ ಬಗೆಯಲ್ಲಿ ಈಗ ಒಂದೇ ಆಗಿವೆ. ಏಕೆಂದರೆ ಒಳಗಿದ್ದೂ ಕರ್ನಾಟಕವನ್ನು ನೊಡಿರುವವರೂ ಬಳಸಿರುವ ಚೌಕಟ್ಟುಗಳು ಹೊರಗಿನವೇ ಆಗಿವೆ. ಹೆಚ್ಚೆಂದರೆ ಒಳಗಿದ್ದು ನೋಡಿದವರು ಕನ್ನಡದಲ್ಲಿ ಬರೆದಿದ್ದಾರು. ಅಂದರೆ ಕರ್ನಾಟಕದ ಓದು ಎಂಬುದು ಈಗ ಇದ್ದರೂ ಅದು ನಮ್ಮನ್ನು ತಕ್ಕ ದಾರಿಯಲ್ಲಿ ಕರೆದೊಯ್ಯುವಂತೆ ಇಲ್ಲ.

ನಾವು ಕಟ್ಟಬೇಕಾದ ಕರ್ನಾಟಕದ ಓದು ಎಂಬ ತಿಳಿವಿನ ವಲಯವು ಹಲವು ತಿಳಿವನ ವಲಯಗಳನ್ನು ಹೆಣೆಯಬೇಕಲ್ಲದೆ ತಿಳಿಯುವ ಚೌಕಟ್ಟನ್ನು ಕೂಡ ಹೊಸದಾಗಿ ಕಟ್ಟಬೇಕು. ಆಗ ಮಾತ್ರ ಕನ್ನಡದ ತಿಳಿವು ಕನ್ನಡದ ಮೂಲಕ ದೊರೆಯುವುದಕ್ಕೆ ದಾರಿಗಳು ಕಾಣತೊಡಗುತ್ತವೆ. ತಿಳಿಯುವ ಚೌಕಟ್ಟಿನಲ್ಲಿ ಒಳಗಿನವು ಹೊರಗಿನವು ಎಂದು ಬೇರೆಬೇರೆ ಮಾಡುವುದು ಸರಿಯಲ್ಲ ಎಂದು ಕೆಲವರು ಹೇಳಬಹುದು. ಹೀಗೆ ಹೇಳುವವರು ಈಗ ನಮಗೆ ದೊರೆತಿರುವ ಮತ್ತು ನಾವು ಬಳಸುತ್ತಿರುವ ತಿಳಿಯುವ ಚೌಕಟ್ಟುಗಳು ಸರಿಯಾಗಿವೆಯೆಂದೂ ಅವುಗಳನ್ನು ಬೇಡವೆಂದು ಹೇಳಬಾರದೆಂದೂ ನಂಬಿದ್ದಾರೆ. ಜೊತೆಗೆ ಈ ಚೌಕಟ್ಟುಗಳು ಎಲ್ಲ ಕಾಲಕ್ಕೂ ಸಲ್ಲುತ್ತವೆಂದು ಒಪ್ಪಿದ್ದಾರೆ. ತಿಳಿಯುವ ಬಗೆಯನ್ನು ಕಟ್ಟಿ ಹಾಕುವ ಒತ್ತಡಗಳು ಆಯಾ ಕಾಲದಲ್ಲಿ ಆಯಾ ಸಂಸ್ಕೃತಿಗಳಲ್ಲಿ ಹೇಗೆ ಕೆಲಸ ಮಾಡುತ್ತವೆ ಎನ್ನುವುದನ್ನು ಅವರು ಮರೆತಿರುತ್ತಾರೆ. ಇಲ್ಲವೇ ಅಂತಹ ಒತ್ತಡಗಳು ನಮ್ಮನ್ನು ಕಾಡಿಸಬಾರದೆಂದು ಹೇಳುತ್ತಾರೆ. ಹೀಗೆ ಒಪ್ಪಿದ್ದರಿಂದಲೇ ಈ ನಾಡು ನುಡಿಗಳು ಯಾವಾಗಲೂ ಯಾರೋ ಹೇಳಿದ್ದನ್ನು

ಮರು ನುಡಿಯುವ ನೆಲೆಗೆ ಬಂದು ನಿಂತಿವೆ. ಇದು ಬದಲಾಗಬೇಕಾದರೆ ತಿಳಿವಿನ ಮಾಹಿತಿಗಳ ಒಡಲಲ್ಲೇ ಹುಟ್ಟುವ ತಿಳಿವಿನ ಚೌಕಟ್ಟುಗಳನ್ನೂ ಕಂಡುಕೊಳ್ಳಬೇಕು.

ಇದು ಸರಾಗವಾದ ಹಾದಿಯಲ್ಲ. ಎಲ್ಲಕಿಂತ ದೊಡ್ಡ ತೊಡರೆಂದರೆ ಮೇಲೆ ಪಟ್ಟಿ ಮಾಡಿದ ಮಾನವಿಕ ತಿಳಿವಿನ ವಲಯಗಳು ಕರ್ನಾಟಕವನ್ನು ಕಾಣುವ ಬಗೆಯಲ್ಲೇ ಈಗಿರುವಂತೆ ಏರುಪೇರುಗಳಿವೆ. ಕೆಲವು ಕಡೆ ನಿನ್ನೆಗಳ ಕಡೆಗೆ ಒತ್ತು ಹೆಚ್ಚಿದ್ದರೆ ಮತ್ತೆ ಕೆಲವು ಕಡೆ ಇಂದಿಗೆ ಒತ್ತಿದೆ. ಕೆಲವು ನಾಳೆಗಳತ್ತ ಮೊಗ ತಿರುಗಿಸಿವೆ. ಕೆಲವು ವಲಯಗಳು ಕರ್ನಾಟಕವನ್ನು ಬಿರುಕುಗಳಿಲ್ಲದ ಒಂದೇ ಹಾಸು ಎಂದು ತಿಳಿದರೆ ಮತ್ತೆ ಕೆಲವು ವಲಯಗಳು ಇಲ್ಲಿ ಒಂದಕ್ಕೊಂದು ಹೊಂದಿಕೆಯಾಗದ ಹಲವು ನೆಲೆಗಳು ತಿಕ್ಕಾಟದಲ್ಲಿವೆಯೆಂದು ತಿಳಿಯುತ್ತವೆ. ಈ ಹಲವು ನೆಲೆಗಳ ನಂಟನ್ನು ನೋಡುವ ಬಗೆಯೂ ಕೂಡ ಬೇರೆಬೇರೆಯಾಗಿದೆ. ಈ ಎಲ್ಲ ಗೋಜಲುಗಳನ್ನು ಬಿಡಿಸಿಕೊಂಡು ನಾವೀಗ ಕರ್ನಾಟಕದ ಓದು ಎಂಬ ತಿಳಿವಿನ ವಲಯವನ್ನು ಕಟ್ಟಬೇಕು. ಹೆಚ್ಚಿನ ಓದಿನಲ್ಲಿ ಈ ತಿಳಿವಿನ ವಲಯ ನೆಲೆಗೊಳ್ಳುವಂತೆ ಮಾಡಬೇಕು. ಆಗ ಮಾತ್ರ ಕನ್ನಡದ ಮೂಲಕ ತಿಳಿವನ್ನು ಪಡೆಯುವ ಆಯ್ಕೆಯಿಂದಾಗಿ **ಪಡೆಯುವ ನುಡಿ**ಯಾಗಿ ಉಳಿದು ಬಿಟ್ಟಿರುವ ಕನ್ನಡ, ಬರಲಿರುವ ದಿನಗಳಲ್ಲಿ **ಕೊಡುವ ನುಡಿ**ಯಾಗಿಯೂ ಬದಲಾಗಬಲ್ಲುದು.

ಹೀಗೆ ಮಾಡುತ್ತ ಕುಳಿತರೆ ನಾವು ಬಾವಿಯ ಕಪ್ಪೆಗಳಾಗುತ್ತೇವೆ ಎಂದು ಹೇಳುವವರೂ ಇದ್ದಾರೆ. ದಿಟ. ಆದರೆ ಕಡಲನ್ನು ನೋಡುವ ಇರಾದೆ ತೋರುತ್ತ ನಮ್ಮ ಸುತ್ತಲಿನ ಕೆರೆಕುಂಟೆಗಳು ಬತ್ತಿಹೋಗುತ್ತಿರುವುದನ್ನು ಮರೆಯಬಾರದಲ್ಲವೇ? ಹಿಂದಿನ ಓಣಿಯ ಜಗಳವೇ ಇನ್ನೂ ಕೊನೆಗೊಂಡಿಲ್ಲವಾದ್ದರಿಂದ ನಾನು ಯಾವುದೋ ದೂರದ ಹೊರನಾಡಿನಲ್ಲಿ ನನ್ನ ಕವಿತೆಗಳನ್ನು ಓದಲು ಹೋಗುವ ಬಯಕೆ ಇಲ್ಲ ಎಂದು ಕವಿ ಬೇಂದ್ರೆಯವರು ಹೇಳಿದ್ದು ಕೇವಲ ನಗೆಚಾಟಿಕೆಯ ಮಾತಷ್ಟೇ ಅಲ್ಲವೆಂದು ನಾನು ನಂಬಿದ್ದೇನೆ.

# ಸಂಸ್ಕೃತ ವಿಶ್ವವಿದ್ಯಾಲಯ ಯಾಕೆ ಬೇಕು?

ಜನರಿಗೆ ಬೇಕಾದುದನ್ನು ಒದಗಿಸಲು ಮುಂದಾಗದ ಮತ್ತು ಅವರಿಗೆ ಬೇಡದುದನ್ನು ಒತ್ತಾಯದಿಂದ ಹೇರಲು ಯಾವ ಮುಜುಗರವೂ ಇರದ ಸರಕಾರಗಳು ಆಳ್ವಿಕೆ ನಡೆಸುತ್ತಿರುವಾಗ ಸಂಸ್ಕೃತ ವಿಶ್ವವಿದ್ಯಾಲಯ ಬೇಕೋ ಬೇಡವೋ ಎಂಬ ಮಾತುಕತೆಯೆಲ್ಲ ಹೊತ್ತುಹೋಗದವರ ಚಟವಾಗಿ ತೋರಿದರೆ ಅಚ್ಚರಿಯೇನಿಲ್ಲ. ಇದು ಕೈಚೆಲ್ಲಿ ಕುಳಿತು ಆಡುತ್ತಿರುವ ಮಾತಲ್ಲ. ದುಡ್ಡು ಮತ್ತು ಕೂರಲು ಜಾಗ ಕೊಟ್ಟರೆ ಏನು ಬೆಳವಣಿಗೆಯನ್ನಾದರೂ ಮಾಡಬಹುದೆಂಬ ನಂಬಿಕೆಯನ್ನು ಸರಕಾರ ಹರಡುತ್ತಿದ್ದರೆ ಅದನ್ನು ಒಪ್ಪಿಕೊಂಡು ಮುನ್ನುಗ್ಗಲು ಅರಿತವರೂ ಮುಂದಾಗುತ್ತಿರುವಾಗ ಯಾರದೇನು ಮಾತು?

ಈಗಿನ ಮಾತಿಗೆ ಬರೋಣ. ಕನ್ನಡದ ಬೆಳವಣಿಗೆಗೆ ಅಡ್ಡಿಯಾಗದಂತೆ ಸಂಸ್ಕೃತ ವಿಶ್ವವಿದ್ಯಾಲಯವನ್ನು ಕಟ್ಟಬೇಕೆಂದು ಸರಕಾರಕ್ಕೆ ಕಿವಿ ಮಾತು ಹೇಳಲಾಗಿದೆ. ಸಂಸ್ಕೃತದ ಓದು ಕನ್ನಡಕ್ಕೆ ಹೇಗೆ ನೆರವಾಗಬಲ್ಲುದೆಂದು ಗುರುತಿಸುವಾಗ ಹೇಳಿರುವುದೇನು? ಸಂಸ್ಕೃತ ತುಂಬ ಹಳೆಯ ನುಡಿಯಾಗಿದೆ; ಅದರ ನೆರಳಲ್ಲಿ ಕನ್ನಡದಂತಹ ನುಡಿಗಳು ಬಾಳಿಬದುಕುತ್ತಿವೆ ಎಂದು ತಾನೆ? ಜೊತೆಗೆ ಸಂಸ್ಕೃತದಲ್ಲಿ ಅರಿವಿನ ನೆಲೆಗಳು ಹೆಚ್ಚಾಗಿರುವುದರಿಂದ ಅವೆಲ್ಲವನ್ನು ಪಡೆದು ನಮ್ಮ ನಾಳೆಗಳನ್ನು ಕಟ್ಟಿಕೊಳ್ಳಬೇಕೆಂದು ಕೂಡ ಹೇಳಲಾಗಿದೆ. ಮೊದಲ ಮಾತನ್ನು ನೋಡೋಣ. ಸಂಸ್ಕೃತ ಮತ್ತು ಕನ್ನಡಗಳ ನಂಟನ್ನು ಕೆಲವರು ಇನ್ನೂ ತಾಯಿಬೇರು ಮತ್ತು ಕೊಂಬೆಯ ನಂಟಿಗೆ ಹೋಲಿಸುತ್ತಿದ್ದಾರೆ. ಕನ್ನಡದಲ್ಲಿ ಹೆಚ್ಚು ಸಂಸ್ಕೃತ ನುಡಿಯ ಪದಗಳು ಬಂದು ಸೇರಿಕೊಂಡಿವೆ. ಅವುಗಳನ್ನು ಬಳಸಿಕೊಂಡು ಕನ್ನಡ ಕವಿಗಳು ತಮ್ಮ ಕೃತಿಗಳನ್ನು ಕಟ್ಟಿದ್ದಾರೆ ಎಂದ ಮಾತ್ರಕ್ಕೆ ಕನ್ನಡವು ಸಂಸ್ಕೃತವನ್ನು ಬಿಟ್ಟರೆ ಬಡ ನುಡಿಯಾಗುತ್ತದೆಂದು ತಿಳಿಯುವುದು ಸರಿಯಲ್ಲ. ಅಲ್ಲದೆ ಸಂಸ್ಕೃತ ನುಡಿಯ ಕಟ್ಟೋಣವನ್ನು ಅರಿಯದಿದ್ದರೆ, ಅದರ ಕಟ್ಟುಕಟ್ಟಲೆಗಳನ್ನು ತಿಳಿದುಕೊಳ್ಳದಿದ್ದರೆ ಕನ್ನಡ ನುಡಿಯನ್ನು ಬಳಸುವುದು, ಅದರ ಕಟ್ಟೋಣವನ್ನು ತಿಳಿಯುವುದಕ್ಕೆ ಆಗುವುದಿಲ್ಲ ಎನ್ನುವ ಮಾತಿನಲ್ಲೂ ಹುರುಳಿಲ್ಲ. ಹಾಗೆ ನೋಡಿದರೆ ಸಂಸ್ಕೃತದ ಎಷ್ಟೋ ಪದಗಳನ್ನು ಕನ್ನಡ ಬಳಸುತ್ತಿದ್ದರೂ ಅವುಗಳ ತಿರುಳನ್ನು ತನಗೆ ಬೇಕೆನಿಸುವ ಹಾಗೆ ಬದಲಿಸಿಕೊಂಡಿದೆ. ಕನ್ನಡಿಗರು ಹೊಸ ರಚನೆಗಳನ್ನು ಕಟ್ಟಿದ್ದಾರೆ. ನುಡಿಗಳ ನಡುವೆ ನಡೆಯುವ ಈ ಬಗೆಯ ನಡೆಗಳನ್ನು ನೋಡಿಯೂ ಕನ್ನಡವನ್ನು

'ಸರಿಯಾಗಿ' ಬಳಸಲು ಸಂಸ್ಕೃತದ ನೆರವು ಬೇಕೇಬೇಕು ಎಂದು ಹೇಳುವುದು, ಅದನ್ನೇ ನಂಬುವುದು, ಬೇರೆಯವರು ನಂಬಬೇಕೆಂದು ಬಯಸುವುದು ನಗೆಯುಕ್ಕಿಸುತ್ತದೆ.

ಕನ್ನಡಕ್ಕೆ ಅದರದೇ ಆದ ಕಟ್ಟು ಕಟ್ಟಲೆಗಳಿವೆ; ಅದಕ್ಕೂ ಸಂಸ್ಕೃತವೆಂಬ ನುಡಿಗೂ ಈ ನೆಲೆಯಲ್ಲಿ ನಂಟು ಇಲ್ಲ ಎಂದು ಹೇಳುತ್ತಿರುವ ಶಂಕರ ಭಟ್ ಅವರ ನಿಲುವನ್ನು ಒಪ್ಪದೇ ಇರುವವರು ನುಡಿಯ ಕಟ್ಟುಕಟ್ಟಲೆಗಳಲ್ಲಿ ಎರಡು ಬಗೆಗಳಿರುತ್ತವೆ ಎನ್ನುವುದನ್ನು ಮರೆಯುತ್ತಾರೆ. ಒಂದು ಬಗೆಯವು ಹೆಚ್ಚಾಗಿ ಎಲ್ಲ ನುಡಿಗಳಿಗೂ ಸಲ್ಲುವಂತಹವು. ಇನ್ನೊಂದು ಬಗೆಯವು ಆಯಾ ನುಡಿಗೇ ಸಲ್ಲುವಂತಹವು. ಮೊದಲನೆಯ ಬಗೆಯವನ್ನು ಹಿಡಿದು ಅವೇ ಕನ್ನಡ ಮತ್ತು ಸಂಸ್ಕೃತಗಳ ಬಿಡಿಸಲಾಗದ ನಂಟನ್ನು ತೋರುತ್ತಿವೆ ಎಂದು ಹೇಳುವುದು ಎಷ್ಟು ಸರಿ? ಅಂದರೆ ಹೇಳಬೇಕಾದ್ದಿಷ್ಟೆ: ಒಂದು ನುಡಿಯಾಗಿ ಸಂಸ್ಕೃತವನ್ನು ಕಲಿಯಬೇಕೆಂದು ಹೇಳುವುದು ಒಂದು ಮಾತು. ಆದರೆ ಅದಿಲ್ಲದೆ ಕನ್ನಡಕ್ಕೆ ನೆಲೆಯೇ ಇಲ್ಲವೆಂದು ಹೇಳುವುದು ಇನ್ನೊಂದು ಮಾತು. ಎರಡನೆಯದನ್ನು ಒಪ್ಪುವುದಾಗದು. ಹಾಗೆ ನೋಡಿದರೆ ಮುಂದೆ ಕನ್ನಡವನ್ನು ಬಲವಾಗಿ ಕಟ್ಟಬೇಕೆನ್ನುವವರು ಬೇರೆ ನುಡಿಗಳ ಮೊರೆ ಹೋಗುವುದನ್ನು ತಪ್ಪಿಸದ ಹೊರತು ಬೇರೆ ದಾರಿಯೇ ಇಲ್ಲವೆಂದು ತೋರಿಸಿಕೊಡುತ್ತಿದ್ದಾರೆ. ಜನರ ನುಡಿಯಾಗಿ ಕನ್ನಡ ಉಳಿದು ಬೆಳೆಯಲು ಅದು ತನ್ನ ದಿಟ್ಟದಾರಿಯನ್ನು ತಾನೇ ಕಂಡುಕೊಳ್ಳಬೇಕಾಗಿದೆ. ಕನ್ನಡದ ಬೆಳವಣಿಗೆಗೆ ಅಡ್ಡಿಯಾಗದಂತೆ ಸಂಸ್ಕೃತವನ್ನು ಬೆಂಬಲಿಸಬೇಕೆನ್ನುವುದು ಹಾಗಾಗಿ ನೆರವೇರುವ ಗುರಿಯಾಗಿ ಕಾಣುವುದಿಲ್ಲ.

ಇನ್ನು ಸಂಸ್ಕೃತದಲ್ಲಿ ಇರುವ ತಿಳುವಳಿಕೆ ಎಲ್ಲರಿಗೂ ದೊರಕುವಂತಾಗಲು ಆ ನುಡಿಗೆ ಬೆಂಬಲ ದೊರಕಬೇಕೆನ್ನುವುದು ಇನ್ನೊಂದು ಮಾತು. ತಿಳುವಳಿಕೆ ಎನ್ನುವುದು ನುಡಿಯಲ್ಲಿ ಇರುವುದೇ ಹೊರತು ಅದು ಆ ನುಡಿಗಷ್ಟೇ ಸೇರಿದ್ದಲ್ಲ. ಆದರೆ ನುಡಿಯರಿಗರು ಆ ತಿಳುವಳಿಕೆಯೆಲ್ಲ, ಆ ನುಡಿಗೆ ಮತ್ತು ಆ ನುಡಿರುನ್ನು ಬಲ್ಲವರಿಗೆ ಮಾತ್ರ ಸಿಗುವಂತಾಗಲಿ ಎಂದು ಹುನ್ನಾರಗಳನ್ನು ಮಾಡಬಹುದು. ಅದು ನಿಡುಗಾಲ ನಿಲ್ಲವುದಿಲ್ಲ. ಅರಿವು ಎಲ್ಲರಿಗೂ ದೊರಕಬೇಕೆನ್ನುವುದು ಇಂದಿನ ನಡವಳಿಕೆ. ಸಂಸ್ಕೃತದಲ್ಲಿ ಇದೆಯೆನ್ನಲಾದ ತಿಳುವಳಿಕೆ ಹೀಗೆ ಈಗಾಗಲೇ ಜನರ ನುಡಿಯಲ್ಲಿ ದೊರಕುವಂತೆ ಮಾಡಲು ನೂರಾರು ವರುಷಗಳಿಂದ ಬಲ್ಲವರು ಕೆಲಸ ಮಾಡುತ್ತಲೇ ಇದ್ದಾರೆ. ಆ ತಿಳಿವಳಿಕೆಗೆ ದಿನದಿನದ ಬದುಕಿನೊಡನೆ ಹೆಣೆದುಕೊಳ್ಳುವ ಕಸುವಿದ್ದರೆ ಅದು ಬಳಕೆಗೆ ಬಂದಿದೆ. ಇಂತಹ ತಿಳುವಳಿಕೆ ಜನರಲ್ಲೂ ಇದೆ. ಅವರ ನುಡಿಗಳಲ್ಲೂ ಅದು ದೊರಕುತ್ತದೆ. ಬರಹಕ್ಕೆ ಇಳಿಯದ ಇಂತಹ ತಿಳುವಳಿಕೆ ಜನರ ಬದುಕಿನ ನೆಲೆಯೇ ಆಗಿದೆ. ಹಾಗಿಲ್ಲದಿದ್ದಲ್ಲಿ ನಾವು ತಿನ್ನುವ ದವಸಗಳನ್ನೆಲ್ಲ ಬೆಳೆಯುವವರು, ಬಗೆಬಗೆಯ ಹತ್ಯಾರುಗಳನ್ನು ಮಾಡುವವರು ಏನು ಮಾಡಬೇಕಿತ್ತು? ಅವರಲ್ಲೂ ಅವರದ್ದೇ ಆದ ತಿಳುವಳಿಕೆ ಇದೆ. ಅದು ಹೊತ್ತಗೆಗಳಲ್ಲಿ ನೆಲೆಯಾಗಲಿಲ್ಲ. ಹಾಗೆ ನೋಡಿದರೆ ನಡೆಯಿಲ್ಲದ ಮತ್ತು ನಡೆ ಕಳೆದುಕೊಂಡ ತಿಳುವಳಿಕೆಗಳು ಹೆಚ್ಚಾಗಿ ಹೊತ್ತಗೆ ಸೇರುತ್ತವೆಯೋ ಏನೋ. ಆದ್ದರಿಂದ ಸಂಸ್ಕೃತದಲ್ಲಿ ಇರುವ ತಿಳುವಳಿಕೆ ಮೇಲುಮಟ್ಟದ್ದು, ಜನರಲ್ಲಿ ಇರುವ ತಿಳುವಳಿಕೆ ಕೆಳಮಟ್ಟದ್ದು ಎಂದು ಹೇಳಬಹುದೇ?

ಮಾತಿಗೆ ಹೇಳುವುದಾದರೆ ಸಂಸ್ಕೃತದಲ್ಲಿ ಬರೆದಿಟ್ಟ ಹತ್ತಾರು ನಂಜು ತೆಗೆಯುವ ತಿಳುವಳಿಕೆಯ ಹೊತ್ತಗೆಗಳಿಗೆ ಜನರಲ್ಲಿದ್ದ ತಿಳುವಳಿಕೆಯೇ ಬೇರು ಅಲ್ಲವೇ?

ಹಾಗಿಲ್ಲದೆ ಇನ್ನೂ ಹಲವು ಬಗೆಯ ತಿಳುವಳಿಕೆಗಳು ಸಂಸ್ಕೃತ ನುಡಿಯಲ್ಲಿ ಇವೆ. ಆ ನುಡಿಯಲ್ಲಿ ಬರೆದಿಟ್ಟ ನೂರಾರು ಹೊತ್ತಗೆಗಳನ್ನು ಕಳೆದ ನೂರಾರು ವರುಷಗಳಿಂದ ಕನ್ನಡಕ್ಕೆ ನುಡಿಮಾರಿಸಿ ತರುವ ಕೆಲಸವನ್ನು ಮಾಡುತ್ತಲೇ ಬರಲಾಗಿದೆ. ಈ ತಿಳುವಳಿಕೆಗಳಿಗೆ ಬೆಳೆಯುವ ನೆಲೆಗಳಿಲ್ಲ. ಆ ತಿಳುವಳಿಕೆಗಳನ್ನು ಯುರೋಪಿನ ನುಡಿಗಳಲ್ಲಿ ದೊರೆಯುವ ತಿಳುವಳಿಕೆಗಳ ಎದುರಿನಲ್ಲಿ ಇರಿಸಿ ನೋಡುವ, ತೂಗಿ ನೋಡುವ ಕೆಲಸವನ್ನು ಮಾಡುತ್ತಲೇ ಬರಲಾಗಿದೆ. ಆದರೆ ಇಂದಿಗೂ ಆ ಅರಿವನ್ನು ಬೆಳೆಸುವ ನೆಲೆಗಳನ್ನು ಕಂಡುಕೊಳ್ಳಲು ಆಗಿಲ್ಲ. ಆರ್ಯಭಟ, ವರಾಹಮಿಹಿರ ಮುಂತಾದವರು ನೆಲೆಗೊಳಿಸಿದ ಆಕಾಶಕಾಯಗಳ ನಡೆ,ಗಣಿತದ ಅರಿವು ಇವೆಲ್ಲವೂ ಅಂದು ಇದ್ದುದಕ್ಕಿಂತ ಇಷ್ಟಾದರೂ ಮುಂದೆ ಹೋಗಿದೆಯೇ? ನಮ್ಮಲ್ಲಿ ಮೇರೆ ಇಲ್ಲದಷ್ಟು ತಿಳಿವು ಇತ್ತೆಂದು ಹೆಮ್ಮೆ ಪಟ್ಟರೆ ಸಾಕೆ? ಅದು ಇಂದಿಗೂ ಹೊಸ ಸವಾಲುಗಳನ್ನು ಎದುರಿಸಿ ಬೆಳೆಯಬೇಕಲ್ಲವೇ? ಹೀಗಾಗದೆ ಇದೆಲ್ಲವೂ ನಿಂತ ನೀರಾಗಿ ಏಳೆಂಟು ನೂರು ವರುಷಗಳು ಕಳೆದಿವೆ. ಏಕೆ ಹೀಗಾಯ್ತು ಎಂದು ಕೇಳಿಕೊಳ್ಳಬೇಕಿದೆ. ಅರಿವನ್ನು ನುಡಿಯ ಚೌಕಟ್ಟಿನಲ್ಲಿ ಇರಿಸಿದ್ದರಿಂದ ಹೀಗಾಗಿರಬಹುದಲ್ಲವೇ? ಈ ನಿಟ್ಟಿನಲ್ಲಿ ಏನಾಗಬೇಕಿದೆ ಎಂದು ನೋಡಿಕೊಳ್ಳಲು ಈಗ ಕಟ್ಟಲು ಮುಂದಾಗಿರುವ ಸಂಸ್ಕೃತ ವಿಶ್ವವಿದ್ಯಾಲಯಕ್ಕೆ ಆಗುವುದೇ? ದಿಟವಾಗಿಯೂ ಆಗದು. ಏಕೆಂದರೆ ಎಲ್ಲ ತಿಳಿವಿನ ವಲಯಗಳಿಂದ ಹೊರಗಿದ್ದು ನುಡಿಯ ನೆಲೆಯಿಂದಷ್ಟೇ ನೋಡಹೊರಟರೆ ಆಗ ನಮಗೆ ಸಿಗುವುದು ನೂರಾರು ನಡೆ ಕಳೆದುಕೊಂಡ ಹೊತ್ತಗೆಗಳು ಮಾತ್ರ. ಅವು ಈಗಾಗಲೇ ನಮ್ಮ ಲೈಬ್ರರಿಗಳಲ್ಲಿ ತುಂಬಿಕೊಂಡಿವೆಯಲ್ಲವೇ?

ಹಾಗಿದ್ದರೆ ಏನು ಮಾಡಬಹುದು? ಎಲ್ಲ ವಿಶ್ವವಿದ್ಯಾಲಯಗಳಲ್ಲೂ ಬೇರೆಬೇರೆ ತಿಳಿವಿನ ವಲಯಗಳು ಹಲವರು ಹೇಳುವಂತೆ ಬೆಲೆಕಟ್ಟಲಾಗಿದಿರುವ ಹಾಗೂ ಸಂಸ್ಕೃತ ನುಡಿಯಲ್ಲಷ್ಟೇ ದೊರಕುವುದೆಂದು ತಿಳಿಯಲಾಗಿರುವ ಅರಿವನ್ನು ಇಂದಿನ ಹೊಸ ತಿಳಿವಿನೊಡನೆ ಎದುರುಬದುರಾಗಿಸುವುದು ಒಂದು ದಾರಿ. ಆಗ ಮಾತ್ರ ತಲೆಮೊರೆಗಳಿಂದ ನಿಂತಿರುವ ಅರಿವಿಗೆ ಹೊಸ ನಡೆ ದೊರಕಲು ನೆರವಾಗಬಹುದು. ಹೀಗಲ್ಲದೆ ಸಂಸ್ಕೃತ ವಿಶ್ವವಿದ್ಯಾಲಯವನ್ನು (ಇಲ್ಲವೇ ಪ್ರಾಚ್ಯ ಭಾಷಾ ವಿಶ್ವವಿದ್ಯಾಲಯವನ್ನು) ಈಗ ಚಾಲ್ತಿಯಲ್ಲಿರುವ ಚೌಕಟ್ಟಿನಲ್ಲಿ ಕಟ್ಟಹೊರಟರೆ ಆಗ ಈಗ ಎಲ್ಲ ತಿಳಿವಿಗೂ ಕಟ್ಟಿಕೊಂಡಿರುವ ಕೋಟೆ ಇನ್ನಷ್ಟು ಬಲವಾಗುತ್ತದೆ. ತಿಳಿವು ಮತ್ತೆ ಇನ್ನಷ್ಟು ಕೊಳೆಯುಲು ನೆರವಾದಂತಾಗುತ್ತದೆ. ಇದು ಕಟುವಾಗಿ ತೋರುವ ಮಾತಾದರೂ ದಿಟ. ಇಲ್ಲಿ ಓದು ಬರಹಗಳಲ್ಲಿ ತೊಡಗುವ ನುಡಿಯರಿಗರು, ತಿಳಿವಿಗರು ಕನ್ನಡ ನಾಡುನುಡಿಯಾಚೆಗಿನ ಲೋಕಕ್ಕೆ ಬೇಕಾಗುವ ಮಾಹಿತಿಗಳನ್ನು ಅಗೆದು ತೆಗೆದು ಕೊಡುವವರಾಗುತ್ತಾರೆ. ಅವರಿಗೆ ಇನ್ನಿಲ್ಲದ ಮನ್ನಣೆಗಳು ದೊರಕಲೂಬಹುದು. ಆದರೆ ಕನ್ನಡ ನಾಡುನುಡಿಗಳಿಗೆ ಏನಾದರೂ ನೆರವಾದೀತೆ? ಸಂಸ್ಕೃತ ವಿಶ್ವವಿದ್ಯಾಲಯ ಕನ್ನಡ ಬೆಳವಣಿಗೆಗೆ

ಅಡ್ಡಿಯಾಗದಂತೆ ಇರಬೇಕು ಎನ್ನುವ ಮಾತಿಗೆ ಎರಡು ಬಗೆಯ ತಿರುಳಿವೆ. ಕನ್ನಡದ ಬೆಳವಣಿಗೆಗೆ ನೆರವಾಗುವಂತೆ ಸಂಸ್ಕೃತದ ತಿಳಿವನ್ನು ಬಳಸುವುದು ಎನ್ನುವುದು ಒಂದು ತಿರುಳು. ಹೀಗಲ್ಲದೆ ಕನ್ನಡದ ನಂಟನ್ನೇ ಹೊಂದದೇ ಕೋಟೆ ಕಟ್ಟಿಕೊಂಡು ಸಂಸ್ಕೃತ ಓದುಬರಹಗಳು ಮಾಹಿತಿಗಳಾಗಿ ಬದಲಾಯಿಸುವುದು ಎಂದೂ ತಿಳಿಯಬಹುದಾಗಿದೆ. ಆಗ ಕನ್ನಡದ ತಂಟೆಗೆ ಬಾರದೇ ಸಂಸ್ಕೃತದ ಓದನ್ನು ಮುಂದುವರೆಸುವುದು ಎಂದಾಗುತ್ತದೆ. . ಎರಡನೆಯ ತಿರುಳು ನಿಜವಾಗುವುದಾದರೆ ಆಗ ಕನ್ನಡ ನಾಡಿನಲ್ಲಿ ಸಂಸ್ಕೃತ ವಿಶ್ವವಿದ್ಯಾಲಯವನ್ನು ಕಟ್ಟುವುದೇಕೆ ಎಂದು ಕೇಳಬೇಕಾಗುತ್ತದೆ.

ಮೊದಲಲ್ಲಿ ಹೇಳಿದಂತೆ ಜನರಿಗೆ ಬೇಡದುದನ್ನು ಹೇರಲು ಮುಜುಗರ ಪಡದ ಸರಕಾರಗಳ ಎದುರು ಈ ಎಲ್ಲ ಮಾತುಗಳಿಗೆ ಏನೂ ಬೆಲೆಯಿಲ್ಲ. ಹಲವು ಬಿಳಿಯಾನೆಗಳನ್ನು ಸಾಕುವುದು ತನ್ನ ಹೊಣೆ ಎಂದು ತಿಳಿದಿರುವ ಸರಕಾರ ಇದನ್ನೂ ಮಾಡಲು ಮುಂದಾಗುತ್ತದೆ. ದಿನ ಕಳೆದಂತೆ ಬೇರುಬಿಟ್ಟು ಬೆಳೆದರೂ ಕಸುವು ಕಳೆದುಕೊಂಡ ಎಲ್ಲ ಅರಿವಿನ ತಾಣಗಳಂತೆ ಇದೂ ಕೂಡ ಗುಟುಕು ಉಸಿರೆಳೆಯುತ್ತ ಸಾಗುವುದನ್ನು ನೋಡುವುದು ತಪ್ಪಿದ್ದಲ್ಲ.

## ಹೀಗೊಂದು ದಾಖಲೆ: ಭವಿಷ್ಯದ ಆಲೋಚನೆ

1) ನಮ್ಮ ಸಾಹಿತ್ಯ ಸಂಸ್ಕೃತಿಗೆ ಅನುವಾಗುವ ಕೆಲಸ ಮಾಡುತ್ತಿರುವ ಸಂಸ್ಥೆಗಳ ಬಗ್ಗೆ ಟೀಕೆಗಳಿರುವುದು, ಪ್ರತಿಭಟನೆಗಳಿರುವುದು ಇಂದು ನಿನ್ನೆಯ ಮಾತಲ್ಲ. ಆ ಮಾತುಗಳನ್ನು ಮತ್ತೆ ಮತ್ತೆ ಹೇಳುವುದು ನಿರರ್ಥಕ.

2) ಈ ಸಂಸ್ಥೆಗಳನ್ನು ತಿದ್ದುವ ಹಲವು ಬಗೆಗಳನ್ನು ಚಿಂತಿಸಲಾಗಿದೆ.

**a) ಸುಧಾರಣಾ ವಿಧಾನಗಳು:**

i) ಸೂಕ್ತ ವ್ಯಕ್ತಿಗಳ ನೇತೃತ್ವ

ii) ಅಂಗರಚನೆಯಲ್ಲಿ ತಿದ್ದುಪಾಡುಗಳು

iii) ಸಹಕಾರದೊಡನೆ ಟೀಕೆ.

ಇವುಗಳು ಪರಿಪೂರ್ಣ ಉತ್ತರಗಳಾಗಿಲ್ಲ. ಈ ಸಂಸ್ಥೆಗಳ ಸ್ವರೂಪದಲ್ಲೇ ಎಲ್ಲ ಸುಧಾರಣೆಗಳ ಪರಿಣಾಮಗಳನ್ನೂ ಶೂನ್ಯಗೊಳಿಸುವ ಸಾಧ್ಯತೆಗಳಿವೆ. ಇವುಗಳಲ್ಲಿ ಮೂರನೆಯ ವಿಧಾನ ಆರೋಗ್ಯಕರವಾಗಿ ಕಂಡರೂ ಇದು ಅವಕಾಶವಾದಕ್ಕೆ, ಸಮಯಸಾಧಕತೆಗೆ ಎಡೆಮಾಡಿಕೊಡುತ್ತದೆ.

b) ಪ್ರತಿ ವೇದಿಕೆಗಳ ರಚನೆ: ಪ್ರಗತಿಶೀಲರ ಸಂಘ, ಬರೆಹಗಾರ–ಕಲಾವಿದರ ಒಕ್ಕೂಟ, ಬಂಡಾಯ ಸಂಘಟನೆ, ಪ್ರಗತಿ ಪಂಥ ಇವೆಲ್ಲ ಅಂಥ ಯತ್ನಗಳು. ನಿರ್ದಿಷ್ಟ ಸೈದ್ಧಾಂತಿಕ ಚೌಕಟ್ಟನ್ನು ಆಧರಿಸಿ ವಿಶಿಷ್ಟ ಚಾರಿತ್ರಿಕ ಸನ್ನಿವೇಶಗಳಲ್ಲಿ ರೂಪುಗೊಂಡವು. ಇತರ ಕಲೆಗಳ ವಲಯಗಳಲ್ಲೂ ಇಂಥ ಪ್ರತಿ ವೇದಿಕೆಗಳು ರೂಪುಗೊಂಡಿವೆ. ಇಂಥವು ಸಾಹಿತ್ಯ ಸೃಷ್ಟಿಗೆ ಹೊಸ ದಿಕ್ಕನ್ನು, ಆಶಯಗಳನ್ನು ಒದಗಿಸಿವೆ.

3. ಆದರೆ ನಮ್ಮ ಇಂದಿನ ಸಮಸ್ಯೆ ಬೇರೆ. ಈಗ ನಮ್ಮ ಸಾಹಿತ್ಯ ಸಂಸ್ಕೃತಿಯ ಇಕ್ಕಟ್ಟುಗಳು ಯಾವುವು ಎಂಬುದನ್ನು ಗಮನಿಸೋಣ:

ಪರಸ್ಪರ ವಿರುದ್ಧವಾದ ತಾತ್ತ್ವಿಕ ನೆಲೆಗಳಲ್ಲಿ ನಿಂತವರ ನಡುವೆ ಚರ್ಚೆ ಸಂವಾದಗಳು ಕಡಿದು ಬಿದ್ದ ಸ್ಥಿತಿ. ವಾಗ್ವಾದಗಳು ಪತ್ರಿಕೆಗಳ ಕಾಲಂಗಳಲ್ಲಿ ನಡೆಯುತ್ತವೆ. ಅಕ್ಕಪಕ್ಕದಲ್ಲಿದ್ದೂ ವಿನಿಯಮಕ್ಕೆ ಸಿದ್ಧರಿಲ್ಲದ ಸ್ಥಿತಿ ಇದೇ.

ಇಂಥ ಸ್ಥಿತಿಯನ್ನು ವೈವಿಧ್ಯಮಯ, ಬಹುಮುಖತ್ವ ಎಂಬ ಕಾರಣಗಳಿಂದ ಸ್ವಾಗತಾರ್ಹ ಎನ್ನುವಂತಿಲ್ಲ. ಏಕೆಂದರೆ ಈ ವೈವಿಧ್ಯತೆ ಭಗ್ನಸ್ಥಿತಿಯನ್ನು ಸೂಚಿಸುವಂತಿದೆಯೇ ಹೊರತು, ಮೇಳನವನ್ನಲ್ಲ. 'ನೂರು ಹೂವು ಅರಳಲಿ' ಎಂಬ ತಾತ್ತ್ವಿಕ ನೆಲೆಯ ವೈವಿಧ್ಯವಲ್ಲ ಇದು. ಏಕೆಂದರೆ ಪರಸ್ಪರ ವಿಮರ್ಶೆ-ಸ್ವವಿಮರ್ಶೆಗಳು ಇಲ್ಲವಾಗಿವೆ.

ಇಂಥ ವಾತಾವರಣದಲ್ಲಿ ಅಪನಂಬಿಕೆ ಬೆಳೆಯುತ್ತ ಒಂದು ಸಹಜವಾದ ಮಾತುಕತೆಯೂ ಅಸಾಧ್ಯವಾಗಿದೆ.

ಸೃಜನಶೀಲರಾದ ಎಳೆಯರಲ್ಲಿ ಒಂದು ಕಡೆ ಅಧೈರ್ಯ ಕಾಡುತ್ತಿದ್ದರೆ, ಇನ್ನೊಂದೆಡೆ ಕೆಟ್ಟ ಧೈರ್ಯ ತುಂಬಿದೆ. ಬರೆಹದಲ್ಲಿ ತೊಡಗುವವರಿಗೆ ಇರಬೇಕಾದ ಸಹಜವಾದ ವಿನಯ ಹಾಗೂ ಆತ್ಮಸ್ಥೈರ್ಯಗಳ ಬದಲಿಗೆ ಬಂದಿರುವ ಹಿಂಜರಿತ ಹಾಗೂ ಭಂಡತನಗಳಿಂದಾಗಿ ಉತ್ತಮವಾದುದನ್ನು ರೂಪಿಸುವ ಅವಕಾಶಗಳು ಕಡಿಮೆಯಾಗುತ್ತಿವೆ.

ಎಲ್ಲರಲ್ಲೂ ಅತೃಪ್ತಿ, ಅಲ್ಪತೃಪ್ತಿಗಳು ತುಂಬಿವೆ. ಎಂದರೆ ಮಿಡಿಯೋಕರ್ ಆದದ್ದನ್ನು ಸೃಷ್ಟಿಸಿ ತೃಪ್ತರಾಗುವ ಬಗೆ ಬೆಳೆಯುತ್ತಿದೆ. ಎಲ್ಲರೂ ಉತ್ಕೃಷ್ಟವಾದುದನ್ನು ಸೃಷ್ಟಿಸುತ್ತಾರೆಂದು, ಸೃಷ್ಟಿಸಬೇಕೆಂದು ಹೇಳುವಂತಿಲ್ಲ. ಆದರೆ ಉತ್ಕೃಷ್ಟತೆಗಾಗಿ ತೀವ್ರವಾಗಿ ತುಡಿತ, ಶೋಧನೆ, ಅಪೇಕ್ಷೆಗಳೇ ಇರದೇ ಹೋದರೆ ಅದು ಅಪಾಯಕಾರಿ.

ಇದೆಲ್ಲದರ ಜತೆಗೆ ಸಾಹಿತ್ಯ ವಿಮರ್ಶೆಯಲ್ಲಿ ಮಾನದಂಡಗಳ ತೀವ್ರ ಗೊಂದಲವಿದೆ. ಇದು ಬಹುಶ್ರುತತ್ವದಿಂದ ಬಂದುದಲ್ಲ. ಸಾಹಿತ್ಯ ಕೃತಿಯೊಂದರ ಸಮರ್ಥನೆಗಾಗಿ ಮಾನದಂಡಗಳನ್ನು ತಿರುಚುವ ಹುಸಿ ತರ್ಕಗಳನ್ನು ಸೃಷ್ಟಿಸಿ ನಂಬುವ ನಂಬಿಸುವ ಮೇಲಾಟ ನಡೆದಿದೆ.

4) ಏನು ಮಾಡಬೇಕು?

**ಒಂದು ವೇದಿಕೆಯ ರಚನೆ: ಸಂಸ್ಥೆಯಲ್ಲ**

ಇದು ಚಲನಶೀಲವಾದ, ಪರಿವರ್ತನೆಗೆ ಸಂವೇದಿಸುವ ವೇದಿಕೆಯಾಗಬೇಕು. ವಿಮರ್ಶೆ-ಸ್ವವಿಮರ್ಶೆಗಳಿಗೆ ಮುಕ್ತ ಅವಕಾಶವಿರಬೇಕು. ಅಲ್ಲದೆ ಅದು ಮೊದಲ ಕೆಲಸವಾಗಬೇಕು. ಇದರಿಂದ ಎಲ್ಲ ಚಿಂತಕರ ಜವಾಬ್ದಾರಿ ಹೆಚ್ಚುತ್ತದೆ.

ಉತ್ಕೃಷ್ಟವಾದುದನ್ನು ಗುರುತಿಸುವ ಕೆಲಸವನ್ನು ಈ ವೇದಿಕೆ ಮಾಡುವುದು ಅಪೇಕ್ಷಣೀಯ; ಆದರೆ ಅಸಾಧ್ಯ. ಆದರೆ ಉತ್ಕೃಷ್ಟವಾದದ್ದರ ಕಡೆಗೆ ತುಡಿತವಿರುವಂತೆ ಕಾಯ್ದುಕೊಳ್ಳಲು ಸಾಧ್ಯ. ಇದಕ್ಕೆ ಮೊದಲ ಮಣೆ. ಇದರಿಂದಾಗಿ ಸಾಹಿತ್ಯ ಮತ್ತು ಸಾಹಿತ್ಯವಲ್ಲದ್ದನ್ನು ಬೇರ್ಪಡಿಸಿ ನೋಡುವ ಸಾಮರ್ಥ್ಯ ಬೆಳೆಯುತ್ತದೆ. ಹುಸಿ ತರ್ಕಗಳ ಬೆಂಬಲ ಪಡೆದು ಮೆರೆಯುವ ಸಾಹಿತಿ ನಾಯಕರನ್ನು, ಚಿಂತಕರನ್ನು ಗುರುತಿಸುವ ಸಾಧ್ಯತೆ ಹೆಚ್ಚುತ್ತದೆ.

ಸಮೂಹ ಮಾಧ್ಯಮಗಳು ರೂಪಿಸಿ ಬೆಳೆಸಿ ಜಾರಿಗೆ ತರುತ್ತಿರುವ ಮಾದರಿಗಳನ್ನು ನಿರಾಕರಿಸುವ ಬಗೆಗಳನ್ನು ಈ ವೇದಿಕೆ ರೂಪಿಸಬೇಕಾಗುತ್ತದೆ.

ಇವೆಲ್ಲ ಆದರ್ಶದಂತೆ, ಗಾಳಿಗೋಪುರದಂತೆ ತೋರುತ್ತದೆ. ಇದು ಭಿನ್ನಾಭಿಪ್ರಾಯಗಳನ್ನು ಮರೆತು ಒಂದಾಗಬೇಕೆಂದು ಈಚೆಗೆ ಕರೆಕೊಟ್ಟ ಕನ್ನಡದ ಎರಡು ದಿನಪತ್ರಿಕೆಗಳ ಸಂಪಾದಕೀಯಗಳ ರೀತಿಯ ಚಿಂತನೆಯಲ್ಲ. ಈ ಸಂಪದಾಕೀಯಗಳಿಗೆ ತೋರಿಕೆಯ ತರ್ಕವಿದೆ. ಆದರೆ ಸಾಹಿತ್ಯಕ್ಷೇತ್ರದ ನಿಜವಾದ ಸಮಸ್ಯೆಗೆ ತುಡಿಯುವ ಉಮೇದುಗಳಿರುವುದಿಲ್ಲ. ನಮ್ಮ ಪ್ರಯತ್ನ ಒಳಗಿನಿಂದ ಮೊದಲಾಗಬೇಕು.

5) ನಿರ್ದಿಷ್ಟ ಕಾರ್ಯಕ್ರಮಗಳು:

***ಸಾಹಿತ್ಯ ಸಂವಾದಗಳು; ಚರ್ಚೆಗಳು,**

*ಇಂಥ ವೇದಿಕೆಗಳು ಎಲ್ಲ ಕಡೆಯೂ ಇದ್ದು ಅಂಥ ಪ್ರಜ್ಞಾವಂತ ವೇದಿಕೆಗಳ ಜಾಲವೊಂದು ರೂಪುಗೊಳ್ಳಬೇಕು. ಇವು ಸಮಾನಸ್ಕಂದತೆಯ ಆಧಾರದ ಮೇಲೆ ಕೆಲಸ ಮಾಡಬೇಕು. ಶ್ರೇಣೀಕರಣ ಸಲ್ಲದು.

ಇತರ ಕಲಾಮಾಧ್ಯಮಗಳೊಡನೆ, ಸಾಮಾಜಿಕ ಚಿಂತನೆಗಳೊಡನೆ ಸಹಯೋಗವನ್ನು ಬೆಳೆಸಬೇಕು. ಇಡಿ ಸಮಾಜದ ತುಡಿತವೇ ಪ್ರಜ್ಞಾಪೂರ್ಣ ಒಮ್ಮತ ರೂಪಿಸುವ ಕಡೆಗೆ ಇರುವಾಗ ಇದು ಅನಿವಾರ್ಯ.

ಈ ವೇದಿಕೆಗಳು ಸಮಾವೇಶಗಳನ್ನು ನಡೆಸಬೇಕು. ಈ ಸಮಾವೇಶಗಳು ಆಹ್ವಾನಿತರಿಗೆ ಗೌರವಧನ, ಭತ್ಯೆ ನೀಡುವುದಿಲ್ಲ. ತಮಗೆ ಉಪಯುಕ್ತವೆನಿಸಿದ ವಿಷಯವನ್ನು ಕುರಿತು ಪ್ರಜ್ಞಾವಂತರು ತಂತಾನೇ ಬಂದು ಚರ್ಚಿಸುವ ಸಮಾವೇಶಗಳಿವು.

ಇಂಥ ಸಮಾವೇಶಗಳಲ್ಲಿ ವರ್ಷದ ಸಾಹಿತ್ಯದ ಬೆಳವಣಿಗೆ, ಸಾಧನೆ, ಮಹತ್ವಗಳನ್ನು ಚರ್ಚಿಸಿ ಶ್ರೇಷ್ಠವಾದುದನ್ನು ಗುರುತಿಸುವ ಯತ್ನಗಳು ಮೊದಲಾಗಬೇಕು.

ಇದು ಮೊದಲ ಹೆಜ್ಜೆ.

(ಲೇಖನವನ್ನು 'ಸಾಹಿತ್ಯ ಸಮಾವೇಶ'ದ ಪೂರ್ವಭಾವಿ ಕಾರ್ಯಕ್ರಮದಲ್ಲಿ ಮಂಡಿಸಿದ್ದು. ಇದನ್ನು 'ಅನ್ಯೋನ್ಯ ಮತ್ತು ಶೂದ್ರ' ವೇದಿಕೆ ನಡೆಸಿಕೊಟ್ಟಿತು.)

ಇಂಗ್ಲಿಶ್ ಮತ್ತು ಸಂಸ್ಕೃತ ಮುಖವಾಡದ ಒಳಗೆ ಕನ್ನಡ ಹುದುಗಿಕೊಂಡಿದೆ. ಆಧುನಿಕ ಸಂಕಥನಗಳಿಗೆ ಸಜ್ಜುಗೊಳ್ಳಲು ಇಂತಹ ಅವತಾರ ಅನಿವಾರ್ಯ ಎಂದು ಎಲ್ಲರನ್ನೂ ನಂಬಿಸಲಾಗಿದೆ.ಕೆಲವರ ಕನ್ನಡವೇ ಎಲ್ಲರ ಕನ್ನಡವೆಂಬ ಈ ಸೋಗನ್ನು ಈ ಬರಹಗಳು ಕಳಚಿ ಹಾಕುತ್ತವೆ. ಏಕೆ ಹೀಗಾಯ್ತು? ಇದರಿಂದ ನಾವು ಪಡೆದುಕೊಂಡಿದ್ದೆಷ್ಟು ಕಳೆದುಕೊಂಡಿದ್ದೆಷ್ಟು ? ನಮ್ಮ ದಾರಿ ಯಾವುದು ಎಂಬುದನ್ನು ಆಳವಾದ ಶೋಧನೆಗೊಳಪಡಿಸುತ್ತವೆ.ಭಾಷಿಕ ರಾಜಕಾರಣದ ವಿವಿಧ ಆಯಾಮಗಳು ಇಲ್ಲಿ ತೆರೆದುಕೊಳ್ಳುತ್ತವೆ. ಆಡಳಿತದಲ್ಲಿ ಉತ್ತರದಾಯಿತ್ವ ಹಾಗೂ ಪಾರದರ್ಶಕತೆ ಇಲ್ಲದಿದ್ದರೆ ಜನಭಾಷೆ ಆಡಳಿತ ಭಾಷೆಯಾಗಿ ನೆಲೆಗೊಳ್ಳುವ ಅವಕಾಶಗಳು ಕಡಿಮೆ. ಆಳುವವರು ತಮ್ಮನ್ನು ತಾವು ಕೊಡುವವರು ಜನರು ಪಡೆಯುವವರು ಎಂದು ಭಾವಿಸಿರುವುದರಿಂದ ಇಲ್ಲಿ ಏರ್ಪಡುವ ಅಸಮಾನ ಸಂಬಂಧವೂ ಕೂಡ ಕನ್ನಡವನ್ನೂ ಹಾಗೂ ಕನ್ನಡಿಗರನ್ನು ದೂರ ಇಡುತ್ತದೆ.

ಸಂಸ್ಕೃತಮಯ ಕನ್ನಡವನ್ನು ಶುದ್ಧಕನ್ನಡ ಎನ್ನುವವರಿಗೇನೂ ಕಡಿಮೆ ಇಲ್ಲ. ಇದು ಗ್ರಹಿಕೆಗೆ ಒಗ್ಗಿದರೂ ಬಳಕೆಗೆ ಬರುವುದಿಲ್ಲ. ಇದು ಕಿಸೆಯಲ್ಲಿದ್ದೂ ಬಳಸಲಾರದ ನೋಟು. ಇಂತಹ ಮಾತುಗಳನ್ನು ಸಂಸ್ಕೃತ ವಿರೋಧಿ ಎನ್ನುವುದಕ್ಕಿಂತ ಅದು ವಹಿಸುತ್ತಿರುವ ಪಾತ್ರವನ್ನು ಅರ್ಥಮಾಡಿಕೊಳ್ಳಬೇಕಾಗಿದೆ. ಕನ್ನಡದ ಸ್ವಂತಿಕೆ ಮತ್ತು ಶಕ್ತಿಯ ಹುಡುಕಾಟ ಮತ್ತು ಒಗ್ಗೂಡಿಕೆಯ ಈ ಕಥನಗಳು, ಪರಂಪರೆಯ ಹೊರೆಗಳನ್ನು ಇಳಿಸುತ್ತವೆ. ಭಾಷಿಕ ಪ್ರಜಾಪ್ರಭುತ್ವದ ಅರ್ಥಪೂರ್ಣ ಮಾದರಿಗಳನ್ನು ನಮ್ಮ ಮುಂದಿಡುತ್ತವೆ. ಶಿಕ್ಷಣ, ಸಮೂಹ ಮಾಧ್ಯಮ, ವಾಣಿಜ್ಯ, ತಂತ್ರಜ್ಞಾನ ವಲಯಗಳಲ್ಲಿ ಆಗುತ್ತಿರುವ ಮಾರ್ಪಾಡುಗಳು ಕನ್ನಡಕ್ಕೆ ತಂದು ಹಾಕುತ್ತಿರುವ ಸವಾಲುಗಳನ್ನು ಎದುರಿಸಲು ಹೊಸ ಹತ್ಯಾರಗಳನ್ನು ನೀಡುತ್ತವೆ.

ನಮ್ಮ ನಾಳೆಗಳಿಗೆ ತೊಂಡುಮೇವು ಸರಿಯಾದ ದಾರಿಯನ್ನಷ್ಟೇ ತೋರುವುದಿಲ್ಲ. ಬಲವನ್ನೂ ನೀಡುತ್ತದೆ. ಅನುದಿನದ ಜತೆಗಾರನಾಗಿರುತ್ತದೆ.ಇಲ್ಲಿನ ಬರೆಹಗಳಲ್ಲಿ ಕಂಡು ಬರುವ ಪ್ರತಿಭಾಪೂರ್ಣ ವಿಶ್ಲೇಷಣೆ, ಚಕಿತಗೊಳಿಸುವ ಒಳನೋಟಗಳು, ಪಶ್ಚಿಮಬುದ್ಧಿ ಪುರೋಹಿತರತ್ತ ನುಗ್ಗಿ ಬರುವ ಬೌನ್ಸರ್‌ಗಳು, ಶ್ರೀಸಾಮಾನ್ಯರನ್ನು ಬೆಸೆದುಕೊಳ್ಳುವ ಬಗೆ ನಮ್ಮನ್ನು ವಿಸ್ಮಯಗೊಳಿಸುತ್ತದೆ; ಅರಿವನ್ನು ಚಿಗುರಿಸುತ್ತವೆ; ಆಲೋಚನೆ ಮಾದರಿಗಳನ್ನು ಉಲ್ಟಾಪಲ್ಟಾ ಮಾಡುತ್ತವೆ; ನಾವು ಹೊತ್ತುಕೊಳ್ಳಬೇಕಾದ ಹೊಣೆಯನ್ನು ಮನವರಿಕೆ ಮಾಡಿಕೊಡುತ್ತವೆ. ಕೆವಿಎನ್ ಮೇಷ್ಟ್ರು ಚಲಾವಣೆಯ ನೋಟುಗಳನ್ನು ಕೊಟ್ಟು ನಮ್ಮನ್ನು ಶ್ರೀಮಂತರನ್ನಾಗಿಸಿದ್ದಾರೆ. ಹಂಚಿದಷ್ಟೂ ಹೆಚ್ಚುವ ಶ್ರೀಮಂತಿಕೆ ಇದು.

■ ವೆಂಕಟೇಶ್






PRAGATI GRAPHICS




ರೂ.300/-